# ಹವ್ಯಕರ ಕೊಡುಗೆಗಳು



ಪ್ರೊ. ಟಿ. ಕೇಶವಭಟ್ಟ

# ಹವ್ಯಕರ ಶೋಭಾನೆಗಳು

[ಸಂಕಲನ – ಸಂಪಾದನ – ಸಂಶೋಧನ, ಗ್ರಂಥ]

ಪ್ರೊ|| ಟಿ. ಕೇಶವ ಭಟ್ಟ



ಶ್ರೀವಿದ್ಯಾನಟಿ ಕಾವ್ಯಾ
ಕ್ಷಾವಳಿ ನಿರ್ಭೀತಿ ವರದ ಕರಯುತೆ ನುತೆ ಸ
ತ್ಪ್ರಾವಹೆ ಚಿರಸಾಹಿತ್ಯಧ
ರಾ ವರರಂಗದೊಳಿರುತ್ತೆ ನರ್ತಿಸುಗೆಂದುಂ

**ಚಿರಸಾಹಿತ್ಯ ಪ್ರಕಾಶನ**
ನಂ. 754, ಹದಿನೈದನೆ ಮುಖ್ಯರಸ್ತೆ
ಬನಶಂಕರಿ ಎರಡನೆ ಹಂತ, ಬೆಂಗಳೂರು–560 070

HAVYAKARA SHOBHANEGALU—the auspicious Ritual Songs of the Havyakas, is an Edited Collection and Research Work accomplished in the Centre of Kannada Studies, Jnana Bharathi, Bangalore University, under U.G.C. Project, by Professor T. Keshava Bhat, M A., B O.L. Vidvan & Visharada, the Principal Investigator. Published by Chirasahitya Prakashana, No. 754, 15th Main Road, Banashankari 2nd Stage, Bangalore–560 070.

Size : Demy ; Pages : 736 ; Price : Rs. 12[illegible]–00

First Edition : Sept. 1986

ಗ್ರಂಥ ಸ್ವಾಮ್ಯ : ಪ್ರೊ|| ಟಿ. ಕೇಶವ ಭಟ್ಟ
754, 'ಪ್ರಿಯದರ್ಶನ', 15ನೆಯ ಮುಖ್ಯರಸ್ತೆ
ಬನಶಂಕರಿ 2ನೆಯ ಹಂತ, ಬೆಂಗಳೂರು-560 070

ಮುದ್ರಕರು : ಲಿಪಿ ಮುದ್ರಣ
1, ಬ್ಯೂಗಲ್ ರಾಕ್ ರಸ್ತೆ
ಬಸವನಗುಡಿ, ಬೆಂಗಳೂರು–560 004

[ಬೆಂಗಳೂರು ವಿಶ್ವವಿದ್ಯಾಲಯದ ಮೂಲಕ, ಯು.ಜಿ.ಸಿ. ನೆರವಿನ ಸಾಹಿತ್ಯರಚನೆಯ ಯೋಜನೆಯಂತೆ ರಚಿತವಾದ ಈ ಗ್ರಂಥದ ಪ್ರಕಟನೆಗೆ ಕರ್ನಾಟಕ ಸರಕಾರದಿಂದ ಧನಸಹಾಯ ದೊರಕಿದೆ.]

ಪ್ರಸೀದತು ಶ್ರೀರಾಮಚಂದ್ರಃ



**ಶ್ರೀ ಶ್ರೀಮದ್ ಜಗದ್ಗುರು ಶಂಕರಾಚಾರ್ಯ**
**ಶ್ರೀ ಶ್ರೀ ರಾಘವೇಂದ್ರ ಭಾರತೀ ಮಹಾಸ್ವಾಮಿಗಳು**
ಶ್ರೀಸಂಸ್ಥಾನ, ಗೋಕರ್ಣ, ಶ್ರೀರಾಮಚಂದ್ರಪುರ ಮಠ
ತೀರ್ಥಹಳ್ಳಿ–577 432, ಶಿವಮೊಗ್ಗ ಜಿಲ್ಲೆ.

# ಸಮರ್ಪಣೆ

ಶ್ರೀ ವ್ಯಾಸ ವಾಲ್ಮೀಕ್ಯಾದಿ ಮಹರ್ಷಿಪ್ರಣೀತ ಧರ್ಮ ಸಂಸ್ಕೃತಿ ಪ್ರತಿಪಾದಕರಾಗಿರುವ— ಹವ್ಯಕರಿಗೂ ಇತರರಿಗೂ ಹತ್ತಾರು ಬ್ರಾಹ್ಮಣೇತರ ಜನವರ್ಗಕ್ಕೂ ಗುರುಪೀಠದವರಾಗಿರುವ— ಸುವರ್ಣಮಂತ್ರಾಕ್ಷತೆಯಿತ್ತು ಹರಸಿ ಈ ಗ್ರಂಥಕ್ಕೆ ಕಾರಣಕರ್ತೆಯನ್ನುಂಟುಮಾಡಿರುವ—

**ಶ್ರೀ ಶ್ರೀಮದ್ ರಾಘವೇಂದ್ರ ಭಾರತೀ ಸ್ವಾಮಿಗಳವರಿಗೆ**

ಸಾಹಿತ್ಯ-ಸಂಸ್ಕೃತಿ ನಿಧಿಯೆನಿಸುವ '**ಹವ್ಯಕರ ಶೋಭಾನೆಗಳು**' ಎಂಬೀ ಗ್ರಂಥವು ಸಾಷ್ಟಾಂಗ ಪ್ರಣಾಮಪೂರ್ವಕ **ಸಮರ್ಪಿತವಾಗಿದೆ.**

# ಶ್ರೀಗಳವರ ಅನುಗ್ರಹ ವಾಣಿ

ಶ್ರೀಯುತ ವಿದ್ವಾನ್ ತಾಳ್ತಜೆ ಕೇಶವ ಭಟ್ಟರು, ಎಂ. ಎ., ಬೆಂಗಳೂರು— ಇವರಿಗೆ, ಆದಾಗಿ:—ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಕಾವ್ಯರಚನೆ, ಸಂಶೋಧನೆ, ಗ್ರಂಥ ಸಂಪಾದನೆ, ವಿಮರ್ಶೆ—ಮುಂತಾದ ರೀತಿಯಿಂದ ಪರಿಶ್ರಮಿಸಿ ಪ್ರಸಿದ್ಧರಾಗಿರುವ ನೀವು ಇದೀಗ 'ಹವ್ಯಕರ ಶೋಭಾನೆಗಳು' ಎಂಬ ಗ್ರಂಥವನ್ನು ಹೊರತಂದಿರುವುದು ಸಂತೋಷದ ವಿಷಯ.

ಈ ಶೋಭಾನೆಗಳು ಹವ್ಯಕರಲ್ಲಿ ಮೈಗೊಂಡಿರುವ ಸಂಸ್ಕೃತಿ, ಸದ್ಭಾವನೆ, ಸದಾಚಾರಗಳನ್ನು ಎತ್ತಿ ತೋರಿಸುವಂತಹ ಗೇಯಸಾಹಿತ್ಯಕ್ಕೆ ನಿದರ್ಶನವಾಗಿವೆ. ಇವು ಎಲ್ಲ ಕನ್ನಡಿಗರಿಗೂ ಅನುಸರಣೀಯವೂ ಸಂಗ್ರಾಹ್ಯವೂ ಆಗಿವೆ. ಈ ಗ್ರಂಥಸ್ಥ ವಿಷಯವು ಕನ್ನಡಿಗರ ಜನಜೀವನದಲ್ಲಿ ಸುಸಂಸ್ಕಾರಗಳನ್ನಿತ್ತು ಸಂಸ್ಕೃತಿಯನ್ನು ಇನ್ನಷ್ಟು ಸಮೃದ್ಧಗೊಳಿಸುವ ಸಾಧನವಾಗಿದೆ. ಈ ಶೋಭಾನೆಗಳಲ್ಲಿ ರಾಮಾಯಣ, ಭಾರತ, ಭಾಗವತವೇ ಮುಂತಾದ ಭಾರತೀಯ ಮಹತ್ತ್ವಪೂರ್ಣ ಗ್ರಂಥಗಳಲ್ಲಿ ಕಂಡು ಬರುವ ಸಾರ್ವಕಾಲಿಕ, ಸಾರ್ವದೇಶಿಕ, ಸರ್ವಜನಾದರಣೀಯ ವಿಷಯಗಳಿರುವುದು ಕಂಡುಬರುತ್ತದೆ. ಸಕಲ ಪ್ರಾಜ್ಞರಿಗೂ ಸಾಮಾನ್ಯರಿಗೂ ಇದು ಮೆಚ್ಚುಗೆಯಾಗುವುದರಲ್ಲಿ ಸಂದೇಹವಿಲ್ಲ. ಹಿಂದೂಸಮಾಜದಲ್ಲಿ ನಡೆದುಬಂದ ವಿವಾಹಾದಿ ಶುಭಸಂಸ್ಕಾರಗಳಲ್ಲಿ ಸುವಾಸಿನಿಯರು ಮತ್ತು ಬಾಲಿಕೆಯರು, ಕಂಠಸ್ಥ ಮಾಡಿಕೊಂಡು ಪರಂಪರೆಯಿಂದ ಹಾಡಿಕೊಂಡು ಬಂದಂತೆ, ನೀವು ಸಂಯೋಜಿಸಿರುವುದು ಎಲ್ಲರೂ ಮೆಚ್ಚುವ ಸಂಗತಿಯಾಗಿದೆ. ಇದಲ್ಲದೆ, ಹವ್ಯಕರ ಮೂಲ, ಜನಜೀವನ ಮುಂತಾದುವನ್ನೂ ಈ ಶೋಭಾನೆಗಳ ಗುಣಲಕ್ಷಣಗಳನ್ನೂ ಧಾಟಿ ಛಂದೋ ವಿಚಾರಗಳನ್ನೂ ಆಯಾ ಶುಭ ಕಾರ್ಯಗಳಲ್ಲಿ ಈ ಹಾಡುಗಳು ಬಳಕೆಯಾಗುವುದನ್ನೂ ವಿಸ್ತಾರ ವಿಮರ್ಶೆಗಳೊಂದಿಗೆ ಸಂಶೋಧಿಸಿ ನಾಲ್ಕು ಅಧ್ಯಾಯಗಳಲ್ಲಿ ಪರಾಮರ್ಶಿಸಿರುವುದು ಈ ವಿಷಯದಲ್ಲಿ ನಿಮ್ಮ ಆಳವಾದ ಅಧ್ಯಯನವನ್ನು ಎತ್ತಿ ತೋರಿಸುತ್ತದೆ.

ಇಂತಹ ಅಸಾಧಾರಣ ಗುಣಗಳಿಂದ ಕೂಡಿದ ಈ ಶೋಭಾನೆಗಳ ಬಳಕೆ ಈಗೀಗ ಲುಪ್ತಪ್ರಾಯವಾಗುತ್ತಿರುವುದು ಖೇದಕರ! ಇಂತಹ ಪರಿಸ್ಥಿತಿಯಲ್ಲಿ ಈ ಶೋಭಾನೆಗಳನ್ನು ಪ್ರಚಲಿತಗೊಳಿಸುವ ನಿಮ್ಮೀ ಪ್ರಯತ್ನವು ಸಕಾಲಿಕವೂ ಅವಶ್ಯವೂ ಪ್ರಶಂಸಾರ್ಹವೂ ಆಗಿದೆ. ಶಿಷ್ಟಜಾನಪದವೆಂದು ಪರಿಗಣಿತವಾಗುವ ಈ ಶೋಭಾನೆಗಳು ಹವ್ಯಕರಿಗೆ ಮಾತ್ರವಲ್ಲದೆ ಕನ್ನಡಿಗರೆಲ್ಲರಿಗೂ ಪ್ರಯೋಜನಕರವಾಗಿವೆ.

ಈ ಗ್ರಂಥವನ್ನು ಸಾಹಿತ್ಯಪ್ರೇಮಿಗಳೂ ಸಂಸ್ಕೃತಿಯ ಅಭಿಮಾನಿಗಳೂ ಕೊಂಡು ಕೊಂಡು ಹಾಡಿ, ಹಾಡಿಸಿ, ಇವುಗಳಲ್ಲಿ ಹುದುಗಿರುವ ಸಾರಸತ್ತ್ವವನ್ನು ತಿಳಿದು, ಸಂತೋಷಗೊಂಡು ನಿಮಗೆ ಸರ್ವವಿಧದಲ್ಲಿಯೂ ಪ್ರೋತ್ಸಾಹ ನೀಡುವಂತಾಗಲಿ! ನಿಮ್ಮಿಂದ ಇನ್ನುಳಿದ ಶೋಭಾನೆಗಳ ಸಂಪುಟಗಳು ಮತ್ತು ಬೇರೆ ಬೇರೆ ಉತ್ತಮ ಕೃತಿಗಳು ಪ್ರಕಾಶನಗೊಳ್ಳುವಂತಾಗಲಿ! ಎಂದು ಹಾರೈಸಿದೆ. ತಾ. 30-5-86.

# ಸ್ಮರಣೆ



ಸಾವಿತ್ರಿ ಯಾನೆ ಸಾಂತಮ್ಮ — ತಾಳ್ತಜೆ ಗೋವಿಂದ ಭಟ್ಟರು

1890—9-11-1972 — 1876—24-1-1967

ನಮ್ಮ ತಂದೆ ದಿ॥ ಗೋವಿಂದ ಭಟ್ಟರು ತಾಳ್ತಜೆ ಸುಬ್ಬಣ್ಣ ಭಟ್ಟರ ಐವರು ಗಂಡುಮಕ್ಕಳಲ್ಲಿ ದ್ವಿತೀಯರು, ಸದ್ಗುಣಸಮುಚ್ಚಯದಲ್ಲಿ ಅದ್ವಿತೀಯರು. ಸದಾಚಾರವಂತರು, ಏಕಪತ್ನೀವ್ರತಸ್ಥರು. ದಿನಬಿಡದೆ, ದ್ವಿಸಂಧ್ಯಾ–ವೈಶ್ವದೇವ–ದೇವಪೂಜಾನಿರತರು. ಗೀತಾಪಾರಾಯಣ–ಸ್ತೋತ್ರಪಠನ ಪರಾಯಣರು. ಪ್ರದೋಷವ್ರತ–ಸತ್ಯನಾರಾಯಣವ್ರತಾದಿಗಳನ್ನು ಆಚರಿಸಿ ಕೃತಕೃತ್ಯರಾದವರು. ಶ್ರೀರಾಮಚಂದ್ರಾಪುರಮಠ ಗುರುಪೀಠವಿನೀತರು. ಅತಿಥಿ ಬಂಧುಜನಪ್ರಿಯರು. ಅಖಂಡದೇಶಭಕ್ತಿಸಂಪನ್ನರೂ ಆಗಿದ್ದರು. ಸ್ವಾತಂತ್ರ್ಯದ ಚಳವಳಿಗೆ ಬೆಂಬಲವಾಗಿ ನಮ್ಮ ಬಾಯಾರು ಗ್ರಾಮದಲ್ಲಿ ಬಿಡದೆ ನಡೆಸುತ್ತಿದ್ದ ರಾಷ್ಟ್ರಭಕ್ತಿಪ್ರೇರಕ ಸಭೆಗಳಲ್ಲಿ ತಪ್ಪದೆ ಭಾಗವಹಿಸುತ್ತಿದ್ದು ಜನಜಾಗೃತಿತತ್ಪರರಾಗಿ, ಇತರರಿಗೆ ದೇಶಭಕ್ತಿಗೆ ಮೇಲ್ಪಂಕ್ತಿಯಾಗಿದ್ದರು. ನೂಲುವುದನ್ನು ತಮ್ಮ ಬಾಳಿನುದ್ದಕ್ಕೂ ನಡೆಸಿಕೊಂಡು ಬಂದರು.

ಒಳ್ಳೆಯ ಕವಿತಾಶಕ್ತಿ ಅವರಿಗಿತ್ತು. ವೇದಮಂತ್ರ ಜ್ಯೋತಿಷ ಗೊತ್ತಿತ್ತು. ಯಕ್ಷಗಾನ ಕಲೆಯಲ್ಲಿ ಅರ್ಥಧಾರಿಕೆ, ಪದ ಹೇಳುವುದು, ಮದ್ದಳೆ–ಚೆಂಡೆ—ಇವನ್ನೆಲ್ಲ ಬಲ್ಲವರಾಗಿದ್ದರು. ಕನ್ನಡ ತುಳು (ತಿಗಳಾರಿ) ಎಂಬ ಉಭಯಲಿಪಿಕಾರರಾಗಿ, ತಾಳೆಯೋಲೆಗಳಲ್ಲಿಯೂ ಕಾಗದಪುಸ್ತಕಗಳಲ್ಲಿಯೂ ಅವರು ಬರೆದ ಮಂತ್ರ–ಜ್ಯೋತಿಷ ಕೃತಿಗಳು, ಯಕ್ಷಗಾನ ಪ್ರಸಂಗಗಳು, ತುಂಡುಪದಗಳು ಮತ್ತು ಶೋಭಾನೆಗಳು ಅಗಣಿತ ! ಕನ್ನಡ ಜಾನಪದ ಸಾಹಿತ್ಯಕಲೆಗಳ ರಕ್ಷಣೆ ಸಂವರ್ಧನೆಗಳಿಗೆ ಅವರ ಕೊಡುಗೆ ಅಪಾರ !

ನಮ್ಮ ತಾಯಿ ಸಾಂತಮ್ಮನವರು ಪತಿಯ ಸದಾಚಾರ ವ್ರತನಿಷ್ಠ ಸದ್ಗುಣಗಳಿಗೆ ತಕ್ಕಂತೆ ದ್ವಿತೀಯೆಯಾಗಿ, ಶೋಭಾನೆ ಹಾಡುವವರಲ್ಲಿ ಅದ್ವಿತೀಯೆಯಾಗಿದ್ದರು. ಈ ಲೇಖಕನಿಗೆ ಶೋಭಾನೆಗಳ ಸೊಗಸು ತಿಳಿದುದು, ಧಾಟಿ ಹೊಳಕಾದುದು ಅವರಿಂದಲೆ. ಆದುದರಿಂದ ಈ ದಂಪತಿ ಪಿತರರು ಈ ಗ್ರಂಥದಲ್ಲಿ ಸ್ಮರಣೀಯರು. ಗ್ರಂಥವಿದು ಶ್ರೀಗುರು ಸಮರ್ಪಣೆಯಾಗುವುದು ಅವರಿಗೆ ಮನಸ್ತೃಪ್ತಿ ವಿಷಯ. ಛಂದೋಬದ್ಧ ಕವಿತೆ ಅವರಿಗೆ ಮೆಚ್ಚು ! ಅದು ಇಲ್ಲಿದೆ—

ಮತ್ತೇಭವಿಕ್ರೀಡಿತಂ ॥

ನಿರುತಂ ಶ್ರೀ ಗುರುದೈವಭಕ್ತಿಯುತರಾಚಾರಶ್ರೀಯರ್ ದಾರತೋ
ಪರತರ್ ಸುವ್ರತರುಂ ಕವಿತ್ವಚತುರರ್ ಜ್ಯೋತಿರ್ವಿದರ್ ಯಕ್ಷಗಾಹ
ನರಸಾತ್ಮರ್ ಲಿಪಿಕಾರವರ್ಯರಿವರೀ ತಾಳ್ಮೆಜ್ಞ ಗೋಪಿಂದ ಭ
ಟ್ಟರೆನುತ್ತುಂ ಜಸವೆತ್ತ ತಂದೆಯವರ್ಗೀ ಗ್ರಂಥಾರ್ಪಣಂ ತರ್ಪಣಂ

ಇನಕಾರ್ಯವ್ರತೆಯಾಗಿ ಪೆತ್ತಣುಗರಂ ಮೊಮ್ಮಕ್ಕಳಂ ಪಾಲ್ಗೆ ಜೇಂ
ಬನಿ ಸೇರ್ದಂತಿರೆಯೊಲ್ದು ಧಾಟಿಸೊಬಗಿಂ ಶೋಭಾನೆಯಂ ಪಾಡಿ ಹಾ
ಡಿನ ಚೂಡಾಮಣಿಯಾದ ನಲ್ಗರತಿಯಾ ಕಾರಿಂಜ ರಾಮಾರ್ಯ ನಂ
ದನೆ ಸಾವಿತ್ರಿಯೆ ತಾಯರ್ ಸ್ಮರಣ್ಯೆಯೊಡನಾ ಸಾಂತಮ್ಮನೆಂಬಬ್ಬೆಯುಂ

ಕಂದ ॥

ಈ ತೆರದೀ ಕೃತಿಗಂತ
ಶ್ಚೇತನರೇ ತಂದೆತಾಯ್ಗಳಂತವರ ಮನಃ
ಪ್ರೀತಿಗೆ ಶ್ರೀ ಗುರುಪದಕಂ
ಜಾತಕ್ಕರ್ಪಿಸಿದೆನಕ್ಕೆ ಲೋಕಕ್ಕೆ ಮುದಂ !

# ಗ್ರಂಥಪ್ರಕಟನೆಗೆ ಧನ ಸಹಾಯಕರು

## ಪ್ರದಾತರು



**ಶ್ರೀ ಬಿ. ಕೃಷ್ಣ ಭಟ್, ಬಿ ಎ**
ನಂ. 399, ಜೆ.ಪಿ ರಸ್ತೆ, ಗಿರಿನಗರ
ಬೆಂಗಳೂರು–560 085

ಕಾರ್ಯನಿರ್ವಾಹಕ ನಿರ್ದೇಶಕರು
ವಿಶ್ವಭಾರತಿ ಗೃಹನಿರ್ಮಾಣ ಸಹಕಾರಿ ಸಂಸ್ಥೆ
ಗಿರಿನಗರ, ಬೆಂಗಳೂರು–560 085

ಮಾಲೀಕರು :
ಶ್ರೀ ಗುರುಪ್ರಸಾದ್ ಪ್ರಿಂಟರ್ಸ್
ನಂ. 35, ರತ್ನವಿಲಾಸ ರಸ್ತೆ
ಬಸವನಗುಡಿ, ಬೆಂಗಳೂರು–560 004

ಇವರು ಸೌಮ್ಯ–ಸೌಜನ್ಯ–ವಿನಯ ಗುಣವಿಭೂಷಿತ ಸದ್ಗೃಹಸ್ಥರು. ಶ್ರೀಗುರುಸೇವಾಗ್ರಗಣ್ಯರು. ಪ್ರತಿನಿಮಿಷವೂ 'ಬಹುಜನಹಿತಾಯ ಸ್ವಾಂತಸ್ಸುಖಾಯ' ದುಡಿಯುತ್ತಿರುವ ಕರ್ಮಯೋಗಿ. ಶ್ರೀ ಗುರುದೇವತಾನುಗ್ರಹದಿಂದ ಮತ್ತು ಈ ಗ್ರಂಥಶಾರದೆಯೊಲವಿನಿಂದ ಇವರಿಗೆ ಸಕುಟುಂಬವಾಗಿ ಆಯುರಾರೋಗ್ಯ ಸುಜ್ಞಾನಾದಿ ಸಕಲ ಸೌಭಾಗ್ಯವೃದ್ಧಿಯಾಗುವಂತೆ ಹಾರೈಸಿ, ಕೃತಜ್ಞತೆ ಸಮರ್ಪಿಸಲಾಗಿದೆ.



**ಶ್ರೀ ಬಿ. ಎಸ್. ದ್ವಾರಕನಾಥ್**
ಯೋಜನಾಡಳಿತ ಅಧಿಕಾರಿಗಳು,
ಕರ್ನಾಟಕ ಸರ್ಕಾರ.

ಎಂ. ಎನ್ ಕೃಷ್ಣರಾವ್ ರಸ್ತೆ
ಬಸವನಗುಡಿ, ಬೆಂಗಳೂರು–560 004

ಇವರು ಒಳ್ಳೆಯ ಧಾರ್ಮಿಕ ಮನೋಭಾವದ, ಸಂಸ್ಕೃತಿನಿಷ್ಠ, ನೀತಿಸಂಪನ್ನ–ಸದ್ಗೃಹಸ್ಥರು. ಶ್ರೀಗುರುಸೇವಾಗ್ರಣಿ, ಸಮಾಜಹಿತ ಕಾರ್ಯಕರ್ತರು. ಇವರಿಗೆ ಶ್ರೀಗುರುದೇವತಾನುಗ್ರಹದಿಂದ ಮತ್ತು ಈ ಗ್ರಂಥಶಾರದೆಯೊಲವಿನಿಂದ ಸಕುಟುಂಬವಾಗಿ ಆಯುರಾರೋಗ್ಯ ಸುಜ್ಞಾನಾದಿ ಸಕಲ ಸೌಭಾಗ್ಯವೃದ್ಧಿಯಾಗುವಂತೆ ಪ್ರಾರ್ಥಿಸಿ, ಕೃತಜ್ಞತೆ ಸಲ್ಲಿಸಲಾಗಿದೆ.

ದಾತರು : ಪುಟ–೩೮ರಲ್ಲಿ.

# ಅರಿಕೆ

'ಹವ್ಯಕರ ಶೋಭಾನೆಗಳು' ಎಂಬುದು ಹೃದ್ಯವಾದ ಮಹಿಳಾ ಗೇಯಸಾಹಿತ್ಯ. ಇವರ ವ್ಯವಸ್ಥಿತ ಸಂಕಲನ–ಸಂಪಾದನ–ಸಂಶೋಧನ ರೂಪದಲ್ಲಿ ಪ್ರಬುದ್ಧವಾಗಿ ಈ ಕೃತಿ ಆಕೃತಿವಡೆದಿದೆ. ಇದೀಗ ಈ ಗ್ರಂಥವಧುವನ್ನು ಸಹೃದಯ ವರನಿಗೆ ಪಾಣಿಗ್ರಹಣ ಮಾಡಿಸಲು ಸಂತೋಷವೆನಿಸುತ್ತದೆ. ಓದುಗರ ದಿಬ್ಬಣಗೂಡಿ ಬಂದ ವರನನ್ನು ಆದರಿಸಿ ಕರೆದು, ಹಂದರಮಂಟಪದಲ್ಲಿ ಕುಳ್ಳಿರಿಸಿ 'ಮಂತ್ರಬಿನ್ನಹ' ಮಾಡುವಂತೆ, ಗ್ರಂಥವಿದು ಬೆಳಕಿಗೆ ಬಂದುದನ್ನು ಕುರಿತು ಬಿನ್ನವಿಸಲು ಬಯಸುತ್ತೇನೆ—

ಶೋಭಾನೆ ಹಾಡುಗಳು ಸಾಮಾಜಿಕ ಶುಭಕಾರ್ಯಗಳಲ್ಲಿ ಮುತ್ತೈದೆಯರು ಕನ್ಯಾಮಣಿಯರೂ ಸೇರಿ ಹಾಡುವಂಥವು. ಇವಕ್ಕೆ ವೈವಿಧ್ಯಮಯ ಧಾಟಿಗಳಿವೆ ; ಛಂದೋರೂಪಗಳೂ ಇವೆ. ಈ ಶೋಭಾನೆಗಳ ವರ್ಗದಲ್ಲಿ ಭಾಷೆ–ವಸ್ತು–ವಿಷಯಗಳ ದೃಷ್ಟಿಯಿಂದ ಶುದ್ಧ ಜಾನಪದವೆನಿಸುವ ಹಾಡುಗಳ ಸಂಗ್ರಹಕಾರ್ಯವನ್ನು ಕರ್ನಾಟಕದ ಎಲ್ಲ ಕಡೆ ತಕ್ಕಮಟ್ಟಿಗೆ ವಿದ್ವಾಂಸರು ಈಗಲೇ ಮಾಡಿದ್ದಾರೆ. ಅಂಥವರಲ್ಲಿ ಶ್ರೀ ಎಚ್. ಎಲ್. ನಾಗೇಗೌಡರು, ಶ್ರೀ ಕ.ರಾ.ಕೃ., ಪ್ರೊ.॥ ಡಿ. ಲಿಂಗಯ್ಯ, ಡಾ॥ ಎನ್. ಆರ್. ನಾಯಕ್, ಡಾ॥ ಎಲ್.ಆರ್. ಹೆಗಡೆ, ಡಾ॥ ಜೀ. ಶಂ. ಪ., ಶ್ರೀ ಮತಿಘಟ್ಟ ಕೃಷ್ಣಮೂರ್ತಿ ಮುಂತಾದವರು ಉಲ್ಲೇಖನೀಯರು. ಇನ್ನೊಂದೆಡೆ, ಬಲುಮಟ್ಟಿಗೆ ಭಾಷಾಶುದ್ಧಿಯುಳ್ಳದಾಗಿ ದೇಶೀಶಬ್ದಗಳ ಹೆಚ್ಚಿನ ಬಳಕೆಯುಳ್ಳ, ಪುರಾಣೇತಿಹಾಸ ಕಥಾವಸ್ತುವಿರುವ, ಶಿಷ್ಟಜಾನಪದವೆನಿಸುವ ಶೋಭಾನೆಗಳು ವಿಪುಲವಾಗಿಯೇ ಇನ್ನೂ ದೊರೆಯುತ್ತಿದ್ದರೂ ಇವು ಸಂಶೋಧಕರಿಂದ ಸರಿಯಾಗಿ ಲಕ್ಷಿತವಾಗಿಲ್ಲ. ಇವುಗಳ ಸಂಗ್ರಹಕಾರ್ಯ ಆಗಿರುವುದು ತೀರಾ ಪರಿಮಿತ. ಆಗಿರುವ ಸಂಗ್ರಹಗಳಲ್ಲಿ ಕೂಡ, ಆಯಾ ಸಂಗ್ರಹಕಾರರು ಹೆಚ್ಚಾಗಿ ಲಕ್ಷಿಸಿರುವುದು ತ್ರಿಪದಿಗಳನ್ನೇ. ಇತರ ವೈವಿಧ್ಯವೆನಿಸುವ ತ್ರಿಪದಿವಿಸ್ತರಣಗಳು, ಸರಳಾರ–ಧವಳಾರಗಳು, ವಿವಿಧ ಧಾಟಿಯವು, ಬಹುಪಾದವುಳ್ಳವು ಲಕ್ಷ್ಯಕ್ಕೆ ಸಾಕಷ್ಟು ವಸ್ತುವಾಗಿಲ್ಲ. ಅಂಥವುಗಳ ಸಂಗ್ರಹ, ಪಾಠಪರಿಷ್ಕರಣ, ಶಾಸ್ತ್ರೀಯ ಸಂಪಾದನೆ, ಧಾಟಿ–ಛಂದೋವೈವಿಧ್ಯಗಳ ಸಮೀಕ್ಷೆ, ಕಾವ್ಯಗುಣ ವಿವೇಚನೆ, ಸಂಸ್ಕೃತಿವಹೌಲ್ಯ ಪ್ರತಿಪಾದನೆ—ಮುಂತಾದ ಅಪೇಕ್ಷಿತ ಮತ್ತು ಅವಶ್ಯ ಕಾರ್ಯಕ್ಷೇತ್ರ ಹಡಿಲಾಗಿಯೇ ಉಳಿದಿದೆ !

ಎಲ್ಲಾ ಜನವರ್ಗದ ಶೋಭಾನೆಗಳನ್ನು ಸಂಗ್ರಹಿಸುವ, ಸಂಪಾದಿಸುವ, ಬೃಹತ್ ಕಾರ್ಯ ಆಗಬೇಕಾದುದು ನಿಜ ; ಅದು ಒಬ್ಬನಿಂದಾಗದು. ಅದಕ್ಕೆ ಆಸಕ್ತಿಯುಳ್ಳ ದೊಡ್ಡದೊಂದು ಸಾಹಿತ್ಯಸಂಸ್ಥೆ ಪ್ರವೃತ್ತವಾಗಬೇಕು. ಇಲ್ಲವೆ, ಆಸಕ್ತಿ ಅರ್ಹತೆ ಎರಡೂ ಉಳ್ಳ ಹತ್ತಾರು ಮಂದಿ ಉತ್ಸಾಹಿಗಳು ಕಣಕ್ಕಿಳಿದು ಕೆಲವು ವರ್ಷ ಕಾರ್ಯ

ಕೈಗೊಳ್ಳಬೇಕು. ಕ್ಷೇತ್ರ ಅಷ್ಟು ದೊಡ್ಡದಿದೆ. ಆದುದರಿಂದ ಈ ಲೇಖಕನು ಇದಕ್ಕೊಂದು ಪರಿಮಿತಿ ಹಾಕಿಕೊಂಡು, ತನಗೆ ನಿಕಟವೆನಿಸುವ ಹವ್ಯಕರ ಶೋಭಾನೆಗಳನ್ನು ಸಂಗ್ರಹಿಸುವ ಯೋಚನೆಯನ್ನು-ಯೋಜನೆಯನ್ನು ಮಾಡಿದುದಾಗಿದೆ. ಹವ್ಯಕರಿಂದ ಸಂಗೃಹೀತವಾಗಿದ್ದರೂ ಇವು ಎಲ್ಲ ಜನಜಾತಿಯ ಕನ್ನಡಿಗರಿಗೂ ಉಪಾದೇಯವಾಗಿವೆ.

ಈ ಗ್ರಂಥವನ್ನು ಸಿದ್ಧಪಡಿಸಲು ವಿಶ್ವವಿದ್ಯಾಲಯ ಧನಸಹಾಯ ಆಯೋಗವು (ಯು.ಜಿ.ಸಿ.) ಬೆಂಗಳೂರು ವಿಶ್ವವಿದ್ಯಾಲಯದ ಮೂಲಕ ಪರಿಮಿತ ಧನಸಹಾಯ ನೀಡಿದೆ. ಅದರಂತೆ, 7–9–1981 ರಿಂದ 6–1–1985ರ ವರೆಗೆ ಕೈಗೊಂಡ ಕಾರ್ಯ ನಿರ್ವಾಹವಿದು. ಪ್ರಾರಂಭದಲ್ಲಿ ಒಂದು ವರ್ಷದ ಮಟ್ಟಿಗೆ ಓರ್ವ ಕ್ಷೇತ್ರಸಹಾಯಕರನ್ನು ನೇಮಿಸಿಕೊಂಡಿದೆ. ಅಲ್ಲಲ್ಲಿ ಹಳ್ಳಿಗಳಲ್ಲಿ ಸುತ್ತಾಡಿ, ಹಾಡುಗಳನ್ನು ಸಂಗ್ರಹಿಸಲು, ಅವನ್ನು ಪ್ರತಿತೆಗೆಯಲು ಕ್ಷೇತ್ರಸಹಾಯಕರಾದವರು ಶ್ರೀ ಎಸ್. ಆರ್. ಹೆಗಡೆ, ಎಂ.ಎ. ಅವರು. ನಮ್ಮಿಂದ ಸಂಗ್ರಹವಾದ ಹಾಡುಗಳು ಒಟ್ಟು ಒಂದೂವರೆ ಸಾವಿರಕ್ಕೆ ಮಿಕ್ಕಿವೆ. ಅವುಗಳಲ್ಲಿ 280 ಮಾತ್ರ ಔಚಿತ್ಯವನ್ನು ಲಕ್ಷಿಸಿ ಈ ಗ್ರಂಥದ ಭಾಗ–ಒಂದರಲ್ಲಿ, ಐದು ಅಧ್ಯಾಯಗಳಲ್ಲಿ ಬಂದಿವೆ. ಇಲ್ಲಿ ಇವನ್ನು ಮದುವೆಯಿಂದ ಪ್ರಾರಂಭಿಸಿ ಆ ಮೇಲಿನ ಶುಭಕಾರ್ಯಗಳಿಗೆ ಅನುಕ್ರಮಗೊಳಿಸಲಾಗಿದೆ. ಹಾಡುಗಳೆಲ್ಲ ಪೂರ್ಣಪಾಠದಿಂದ ಕೂಡಿ, ಪರಿಷ್ಕಾರಗೊಂಡಿವೆ. ಉಪಲಬ್ಧ ಪಾಠಾಂತರವನ್ನು ಆಯಾ ಪುಟದಡಿ ಗುರುತಿಸಿದೆ. ಭಾಗ-ಎರಡು, ನಾಲ್ಕು ಅಧ್ಯಾಯಗಳಿಂದ ಕೂಡಿ, ಪರಾಮರ್ಶೆಗೆ ಮೀಸಲು. ಈ ಅಧ್ಯಾಯಗಳು ಭಾಗ–ಒಂದನ್ನು ಆಧರಿಸಿದ್ದು ಸಂಶೋಧಾತ್ಮಕ, ಮೌಲ್ಯಮಾಪಕ ವಿವರಗಳು. ಈ ಶೋಭಾನೆಗಳನ್ನು ಹವ್ಯಕ ಜನಬಾಹುಳ್ಯವುಳ್ಳ ದಕ್ಷಿಣ ಕನ್ನಡ (ಕಾಸರಗೋಡು ಸೇರಿ), ಉತ್ತರ ಕನ್ನಡ, ಶಿವಮೊಗ್ಗ ಜಿಲ್ಲೆಗಳಿಂದ ಸಂಗ್ರಹಿಸಿದೆ. ಹಾಡುಗಳ ಸೂಚಿಯಲ್ಲಿ (ಪುಟ ೬೧) ಅವು ದೊರೆತ ಜಿಲ್ಲೆಗಳ ಸಂಜ್ಞೆಯಿದೆ.

ಈ ಸಾಹಿತ್ಯಯೋಜನೆಗೆ ಮೊತ್ತಮೊದಲ ಸಹಾಯಕರು ಬೆಂಗಳೂರು ವಿಶ್ವವಿದ್ಯಾಲಯದ ಜ್ಞಾನಭಾರತಿಯ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾದ ಡಾ॥ ಜಿ. ಎಸ್. ಶಿವರುದ್ರಪ್ಪನವರು. ಇವರು ಈ ಕಾರ್ಯಕ್ಕೆ ಎಲ್ಲ ವೈಧಾನಿಕ ಸಹಾಯವನ್ನೂ ಒದಗಿಸಿ, ಪ್ರೋತ್ಸಾಹಿಸಿರುತ್ತಾರೆ. ಹಾಗೆಯೇ ಅನಂತರ ನಿರ್ದೇಶಕರಾದ ಡಾ॥ ಎಂ. ಚಿದಾನಂದ ಮೂರ್ತಿಯವರು ತಮಗೂ ಪ್ರಿಯವಾಗಿರುವ ಈ ಸಾಹಿತ್ಯಕಾರ್ಯಕ್ಕೆ ತುಂಬ ನೆರವನ್ನು ನೀಡಿದ್ದಾರೆ. ಇವರಿಬ್ಬರಿಗೂ ಬೆಂಗಳೂರು ವಿಶ್ವವಿದ್ಯಾಲಯಕ್ಕೂ ಯು.ಜಿ.ಸಿ.ಗೂ ಕೃತಜ್ಞನಾಗಿರುತ್ತೇನೆ. ಕ್ಷೇತ್ರಕಾರ್ಯಕ್ಕೆಂದು ಹೋದಲ್ಲೆಲ್ಲ ಪರಿಚಯವಿಲ್ಲದೆಯೂ ಅನೇಕ ಮಹನೀಯರು ನೆರವನ್ನು ನೀಡಿದ್ದಾರೆ. ನಾವು ಹೋದಲ್ಲೆಲ್ಲ ನಮ್ಮ ಉದ್ದೇಶವನ್ನು ತಿಳಿಸಿ, ಶೋಭಾನೆಗಳನ್ನು ಒದಗಿಸಲು

ಕೇಳಿಕೊಂಡಾಗ, ಹಾಡುಗಾರ್ತಿ ತಾಯಂದಿರು ಬಾಯ್ಗೆ ಬರುವ ಹಾಡುಗಳನ್ನು ಹೇಳಿಯೂ ಧ್ವನಿಮುದ್ರಿಸಲು ಸಹಕರಿಸಿಯೂ ತಮ್ಮಲ್ಲಿ ಬರೆದಿಟ್ಟಿದ್ದ ಹಾಡಿನ ಪುಸ್ತಕಗಳನ್ನು ಪ್ರತಿತೆಗೆದು ಹಿಂದಿರುಗಿಸಲು ಒಪ್ಪಿ ಒದಗಿಸಿಯೂ ಉಪಕಾರವೆಸಗಿದ್ದಾರೆ. (ಅಂತಹ ಹಾಡುಗಾರ್ತಿಯರ ವಿವರ ಅನುಬಂಧದಲ್ಲಿದೆ.)

ಪರಾಮರ್ಶೆಯ ಮೂರನೆ ಅಧ್ಯಾಯದಲ್ಲಿ ವಿವರಿಸಿರುವ ಅತೀತ (ಅತೀತಗ್ರಹ), ಮಕುಟ, ವರಣ—ಮುಂತಾದ ಸಂಗೀತಶಾಸ್ತ್ರ ವಿಷಯಕ ಅಂಶಗಳನ್ನು ಇತರ ಪರಿಣತರಲ್ಲಿಯೂ ಚರ್ಚಿಸಿ ದೃಢಪಡಿಸಿಕೊಂಡಿರುತ್ತೇನೆ. ಈ ವಿಷಯಗಳಲ್ಲಿ ನನ್ನ ಉಲ್ಲೇಖಗಳಿಗೆ ಸಮರ್ಥನೆಯ ಬಲವನ್ನು ನೀಡಿದವರು ಸಂಗೀತ ವಿದ್ವಾನ್ ಎ. ಸುಬ್ಬರಾವ್, ಗಾನಸುಧಾಕರ, ಗಾನಕಲಾಭೂಷಣ—ಅವರು. ಅವರನ್ನಿಲ್ಲಿ ಕೃತಜ್ಞತೆಯಿಂದ ನೆನಸಿಕೊಳ್ಳುತ್ತೇನೆ. ನನ್ನ ಈ ಸಾಹಿತ್ಯಕಾರ್ಯದಲ್ಲಿ ಮೊದಲಿಂದಲೇ ಕುತೂಹಲಿಯಾಗಿದ್ದ ನನ್ನಣ್ಣ ವಿದ್ವಾನ್ ತಾಳ್ತಜೆ ಕೃಷ್ಣ ಭಟ್ಟರು ವ್ಯಾಕರಣ, ಛಂದೋಲಂಕಾರಾದಿ ಕಾವ್ಯಶಾಸ್ತ್ರಜ್ಞರು ; ಕವಿಗಳು. ಅವರು ತುಳುವಿನಲ್ಲಿ ರಚಿಸಿದ ಯಕ್ಷಗಾನ ಪ್ರಸಂಗ ಈಗ ಪ್ರಯೋಗ ಪರಿಣತಿ ಪಡೆದಿದೆ. ಅವರು ಯಕ್ಷಗಾನ ಕಲಾಕುಶಲರು, ಶೋಭನ ಸಾಹಿತ್ಯಜ್ಞರು ; ಸಾಹಿತ್ಯ ವಿಮರ್ಶಪಟು. ಈ ಗ್ರಂಥ ಪೂರ್ಣವಾದಾಗ ಪೂರ್ಣ ಓದಿನೋಡಿ, ತಮ್ಮ ಒಳನುಡಿಯನ್ನು 'ಒಳ್ನುಡಿ'ಯಾಗಿ ಬರೆದು ಹರಸಿದ್ದಾರೆ. ಅವರಿಗೆ ವಿನಯ ವಿನಮಿತನಾಗಿರುತ್ತೇನೆ.

ಸಾಹಿತ್ಯಕಾರ್ಯ ಪೂರ್ಣವಾಗುವುದು ಗ್ರಂಥಪ್ರಕಟವಾದಾಗ. ಆದುದರಿಂದಲೇ, ಈ ಸಾಹಿತ್ಯಯೋಜನೆಗೆ ಯು.ಜಿ.ಸಿ.ಯಿಂದ ನೆರವನ್ನು ಕೇಳುವಾಗಲೇ ಮುದ್ರಿಸುವುದಕ್ಕೂ ಆರ್ಥಿಕಸಹಾಯ ಕೇಳಲಾಗಿತ್ತು ; ಅದು ದೊರಕಲಿಲ್ಲ. ಆದುದರಿಂದ 'ಹವ್ಯಕರ ಶೋಭಾನೆಗಳು' ಎಂಬಿದನ್ನು ಚಿರಸಾಹಿತ್ಯ ಪ್ರಕಾಶನದ ಮೂಲಕ ಹೊರತರಲು ಸಂಕಲ್ಪಿಸುವುದು ಅನಿವಾರ್ಯವಾಯಿತು.

ಈ ಗ್ರಂಥ ಒಂದು ಕಾರಣಿಕ ಕೃತಿಯೇ ಸರಿ. ಇದರಲ್ಲಿ ದೈವಪ್ರೇರಣೆ, ಅಂತರಾತ್ಮನ ಒತ್ತಾಯ, ಶ್ರೀಗುರ್ವನುಗ್ರಹ, ವಾಗ್ದೇವತಾ ಸಹಯೋಗ—ಇವೆಲ್ಲ ಏಕೀಭವಿಸಿ ಅಂತರ್ನಿಹಿತವಾಗಿವೆ. ಆದುದರಿಂದಲೇ ಇದನ್ನು ಪ್ರಕಟಿಸಲು ಕೈಗೊಂಡ ಪ್ರಯತ್ನಕ್ಕೂ ಬಲುಮಟ್ಟಿಗೆ ಫಲದೊರಕಿದೆ. ನಮ್ಮ ಕರ್ನಾಟಕ ಸರಕಾರ ಇದರ ಪ್ರಕಟನೆಗಾಗಿ ಸಮಮೌಲ್ಯದ ಇದೇ ಗ್ರಂಥದ ಪ್ರತಿಗಳನ್ನು ಕೊಂಡುಕೊಳ್ಳುವ ವಚನಬದ್ಧತೆಯಿಂದ ರೂ. ಮೂವತ್ತು ಸಾವಿರ ಕೊಡಲೊಪ್ಪಿದೆ. ಈ ಮಹೋಪಕಾರಕ್ಕಾಗಿ ಕನ್ನಡ ಮತ್ತು ಸಂಸ್ಕೃತಿ ವಿಭಾಗದ ನಿರ್ದೇಶಕರಾದ ಶ್ರೀ ಎ. ಆರ್. ಚಂದ್ರಹಾಸ ಗುಪ್ತರನ್ನೂ ಆಗ ಸಚಿವರಾಗಿದ್ದ ಡಾ॥ ಜೀವರಾಜ ಆಳ್ವರನ್ನೂ ಮುಖ್ಯಮಂತ್ರಿಗಳಾದ ಶ್ರೀ ರಾಮಕೃಷ್ಣ ಹೆಗಡೆಯವರನ್ನೂ ಕೃತಜ್ಞತೆಯಿಂದ ನೆನೆಯುತ್ತೇನೆ.

ಸರಕಾರದ ಧನಸಹಾಯ ದೊರಕುವುದು ಗ್ರಂಥಪ್ರಕಟನವಾದ ಮೇಲೆಯೆ. ಹಣ ಮೊದಲೇ ಬೇಕು. ಅದಕ್ಕಾಗಿ ಶ್ರೀಗುರ್ವನುಗ್ರಹವನ್ನೆ ಆಶ್ರಯಿಸಲಾಯಿತು. ಶ್ರೀಜಗದ್ಗುರು ಶಂಕರಾಚಾರ್ಯ ಶ್ರೀಮದ್ ರಾಘವೇಂದ್ರ ಭಾರತೀ ಮಹಾಸ್ವಾಮಿಗಳು ಈ ಕಾರ್ಯ ಯಶಸ್ವಿಯಾಗುವಂತೆ ಆಶೀರ್ವದಿಸಿ ಸುವರ್ಣಮಂತ್ರಾಕ್ಷತೆಯನ್ನು ದಯೆ ಪಾಲಿಸಿರುತ್ತಾರೆ. ಜನತೆ ಈ ಕಾರ್ಯಕ್ಕೆ ನೆರವಾಗುವಂತೆ ಮತ್ತು ಆ ನೆರವು ಅವರಿಗೆ ಅಕ್ಷಯ ಫಲನೀಡುವಂತೆ ಸಂಕಲ್ಪಿಸಿರುತ್ತಾರೆ. ಅದರಂತೆ, ಶ್ರೀಗಳವರ ಆಶೀರ್ವಾದ ಯುಕ್ತ ಪರಿಪತ್ರವನ್ನು ಪ್ರಕಟಿಸಿ, ಸಹೃದಯ ಅಭಿಮಾನಿಗಳ ಮುಂದಿಡಲಾಯಿತು. ಆ ಪರಿಪತ್ರದಲ್ಲಿ ಮೂರು ಬಗೆಯ ನೆರವನ್ನು ಕೋರಿದೆ. ರೂ. ಐದುಸಾವಿರ ಕೊಟ್ಟವರು ಪ್ರದಾತರು ; ಗ್ರಂಥದಲ್ಲಿ ಸಚಿತ್ರ ಉಲ್ಲೇಖನೀಯರು. ರೂ. ಒಂದು ಸಾವಿರ ನೀಡಿದವರು ದಾತರು ; ಗ್ರಂಥದಲ್ಲಿ ಪರಿಚಯಗೊಳ್ಳುವರು. ಇಂಥವರಲ್ಲದೆ, ಹತ್ತು ಅಥವಾ ಹೆಚ್ಚು ಪ್ರತಿಗಳಿಗೆ ಪ್ರಕಟನಪೂರ್ವದ ಬೆಲೆ ಸಲ್ಲಿಸಿದವರು ಕೂಡ ಸ್ಮರಣೀಯರು. ಹೀಗಿರುವ ನೆರವಿಗಾಗಿ ಯಾರನ್ನೆ ಹೊಂಚುಹಾಕುವ, ಜೇಡಿ ಕಾಡುವ ಪೀಡನ ಶೀಲವಾಗಲಿ, ದೈನ್ಯವಾಗಲಿ, ಈ ಲೇಖಕನ ಜಾಯಮಾನದಲ್ಲೆ ಇಲ್ಲದುದು. ಅಸಮ್ಮತಿಯ ಮುಖಭಾವ ಕಂಡವರ ಕಡೆ ಅಣಕವವನಲ್ಲ, ಅಂಜುವವನಲ್ಲ ! ಆದರೆ, ಈ ಕಾರಣಿಕ ಸಾಹಿತ್ಯದ ವಿಷಯದಲ್ಲಿ ಸಹೃದಯರಿಗೆ ವೇದ್ಯಗೊಳಿಸಲು ಹಿಂಜರಿಕೆಯೂ ಇಲ್ಲ. ಇದರ ಪರಿಣಾಮವಾಗಿ ಧನ–ಮನ ಎಂಬೆರಡೂ ಉಳ್ಳವರು ಅನೇಕರು ಹಣ ನೆರವು ನೀಡಿ ಪುಣ್ಯಭಾಜನರಾಗಿದ್ದಾರೆ. ಈ ಬಗೆಯಲ್ಲಿ ನೆರವು ನೀಡುವವರು ನಮ್ಮ ಸಮಾಜದಲ್ಲಿ ಇನ್ನೆಷ್ಟೋ ಮಂದಿ ಇದ್ದರೂ ಅವರನ್ನು ಸಂದರ್ಶಿಸಲು ಅವಕಾಶ ವಾಗಲಿಲ್ಲ.

ನನ್ನಣ್ಣನ ಹಿರಿಯ ಮಗ ಡಾ|| ಟಿ. ವಸಂತ ಕುಮಾರ, ಎಂ.ಎ., ಪಿಎಚ್.ಡಿ. ಇವನು ಈ ಗ್ರಂಥಮುದ್ರಣ ಪ್ರಾರಂಭದಲ್ಲಿಯೇ ನನ್ನ ಕೇಳಿಕೆಯಂತೆ ರೂ. ಹತ್ತುಸಾವಿರವನ್ನು ಎರವಲಾಗಿ ಕೊಟ್ಟಿರುತ್ತಾನೆ. ಅದಕ್ಕಾಗಿ ಕೃತಜ್ಞತಾಪೂರ್ವಕ ಆಶೀರ್ವದಿಸಿರುತ್ತೇನೆ. ಇದೀಗ ಮುಂಬಯಿ ವಿಶ್ವವಿದ್ಯಾನಿಲಯದಲ್ಲಿ ಆತನಿಗೆ 18–8–1986 ರಿಂದ ಕನ್ನಡ ಉಪನ್ಯಾಸಕನಾಗಿ ನೇಮಕವಾಗಿದೆ ! ಶ್ರೀಗುರ್ವನುಗ್ರಹ ದಿಂದ ಮತ್ತು ಈ ಗ್ರಂಥಶಾರದೆಯೊಲವಿನಿಂದ ಚಿ. ವಸಂತನಿಗೆ ಇನ್ನೂ ಉತ್ತರೋತ್ತರ ವಾಗಿ ಅಭಿವೃದ್ಧಿಯ ಅನುಭವವಾಗಲಿದೆ ! ಇನ್ನಿತರರಾದ ಪ್ರದಾತರು, ದಾತರು, ಪ್ರಕಟನಪೂರ್ವ ಮೌಲ್ಯವಿತ್ತವರು, ಮುಂದೆ ಗ್ರಂಥಪ್ರತಿ ಕೊಂಡುಕೊಳ್ಳುವವರು, ಆದರದಿಂದ ಓದುವವರು ಕೂಡ, ಕೃತಕೃತ್ಯರೇ ಸರಿ. 'ಕೊಟ್ಟಿದ್ದು ತನಗೆ' ಎಂಬ ಸರ್ವಜ್ಞಸೂಕ್ತಿಯಂತೆ ಇವರಿಗೆಲ್ಲ ಇಮ್ಮಡಿಯಿಂದ ನೂರ್ಮಡಿಯ ವರೆಗೆ ಪ್ರತಿಫಲವೂ ಸುಜ್ಞಾನವೂ ದೊರೆಯುವಂತಹ ಶ್ರೀಗುರು ದೇವತಾನುಗ್ರಹದ ಕಾರಣಿಕ ಗ್ರಂಥ ಇದೆನ್ನಲು ಸಂತೋಷಪಡುತ್ತೇನೆ.

ವಿದ್ವದ್ವರರಾದ ಡಾ|| ದೇ. ಜವರೇಗೌಡರು ಈ ಗ್ರಂಥವಧುವಿಗೆ ಮುನ್ನುಡಿಯ ತೊಡಿಗೆ ಒದಗಿಸಿದ್ದಾರೆ. ಅವರು ಕನ್ನಡದ ಸರ್ವತೋಮುಖ ಸಾಹಿತ್ಯಜ್ಞರು, ವಿಮರ್ಶವಿಚಕ್ಷಣರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸ್ನಾತಕೋತ್ತರ ಜಾನಪದ ವಿಭಾಗದ ಜನಕರೂ ಆಗಿದ್ದ ಅವರಿಂದಲೇ ಈ ಕೃತಿ ಸಮೀಕ್ಷಿತವಾಗಿ ಮೌಲ್ಯನಿರ್ಣಯಕ್ಕೆ ಬರಬೇಕೆಂಬುದು ನನ್ನಾಸೆಯಾಗಿತ್ತು, ಅದಿಲ್ಲಿ ಈಡೇರಿದೆ. ಅವರು ತಮ್ಮ ಬಿಡುವಿಲ್ಲದ ಬಹುಕಾರ್ಯಗಳ ನಡುವೆ ಎಡೆಮಾಡಿ, ಅನುಭವದ ಎಡೆಯೆನಿಸುವ ಮುನ್ನುಡಿ ಬರೆದು ಶುಭವನ್ನು ಕೋರಿದ್ದಾರೆ. ಅವಕ್ಕಾಗಿ ಕೃತಜ್ಞನಾಗಿದ್ದೇನೆ.

'ಬಹುಭಿರ್ಬಹುಧೋಲ್ಲೇಖಾದೇಕಸ್ಯೋಲ್ಲೇಖ ಇಷ್ಯತೇ' ಎಂಬ ಅಲಂಕಾರ ಸೂತ್ರದಂತೆ, ಬಹುಜನ ಸಹೃದಯ ವಿದ್ವಾಂಸರು ಈ ಗ್ರಂಥದ ಗುಣಭೂಷಣವನ್ನು ಬಣ್ಣಿಸಿ ಉಲ್ಲೇಖಾಲಂಕಾರವನ್ನು ನಮೆದಿದ್ದಾರೆ : ಶ್ರೀಜಿತಬಿಂದು ಮಹರ್ಷಿಗಳು ಈ ಗ್ರಂಥವನ್ನು ಮೆಚ್ಚಿದ್ದಾರೆ ; ಗ್ರಂಥಕರ್ತನನ್ನು ಹರಸಿದ್ದಾರೆ. ಅವರಿಗೆ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ವಿದ್ಯಾಲಂಕಾರ ಪ್ರೊ|| ಎಸ್.ಕೆ. ರಾಮಚಂದ್ರ ರಾವ್, ವಿದ್ವಾನ್ ಎನ್. ರಂಗನಾಥ ಶರ್ಮಾ, ಡಾ|| ಜಿ. ಎಸ್. ಶಿವರುದ್ರಪ್ಪನವರು, ಡಾ|| ಸೂರ್ಯನಾಥ ಕಾಮತರು, ಶ್ರೀ ನಿಟ್ಟೂರು ಶ್ರೀನಿವಾಸ ರಾವ್, ಡಾ|| ಗೊರೂರು ರಾಮಸ್ವಾಮಿ ಅಯ್ಯಂಗಾರ್—ಇವರೆಲ್ಲರೂ ತಂತಮ್ಮ ಅಭಿಪ್ರಾಯಗಳ ಉಲ್ಲೇಖಾಲಂಕಾರದ ರತ್ನಮಾಲಿಕೆಯನ್ನು ಈ ಗ್ರಂಥವಧುವಿಗೆ ಒಸಗೆಯಾಗಿ ಕೊಟ್ಟಿರುತ್ತಾರೆ. ಇವರಿಗೆಲ್ಲ ಆಭಾರಮನ್ನಣೆಯ ಉಪಚಾರದ ಹರಿವಾಣವೊಡ್ಡುತ್ತೇನೆ.

ಉತ್ತಮ ಮುದ್ರಣಕ್ಕೆ ಹೆಸರಾದ ಲಿಪಿಮುದ್ರಣದಲ್ಲಿ ಈ ಗ್ರಂಥ ಅಚ್ಚಾಗಿದೆ. ಅಚ್ಚುಕೂಟದ ಒಡೆಯರಾದ ಶ್ರೀ ಬಾಲಕೃಷ್ಣ ಕೆ. ಎನ್. (ಬಾ.ಕಿ.ನ.) ಅವರಿಗೂ ಅವರ ಸಹಕಾರಿಗಳಿಗೂ ಕೃತಜ್ಞತೆಗಳು ಮುಡಿಪಾಗಿವೆ. ಮುಖಪುಟದ ಚಿತ್ರ ರಚಿಸಿದ ಶ್ರೀ ಉಮಾಪತಿ ಅವರಿಗೂ ಕೃತಜ್ಞತೆಗಳು.

ಈ ಕೃತಿ ಧರ್ಮ, ಸಂಸ್ಕೃತಿ, ಜೀವನಚಿತ್ರಣ, ಗೇಯತೆ, ಕಾವ್ಯಗುಣಗಳಿಂದ ಪಂಚಾಮೃತ ಪ್ರಾಯವಾಗಿದೆ. ಇದು ಎಲ್ಲರ ಮೆಚ್ಚು. ಈ ಗಾನಸರಸ್ವತಿ ಕನ್ನಡ ಕನ್ನೆಯರ, ಮಹಿಳೆಯರ ಮತ್ತು ಎಲ್ಲ ಸಾಹಿತ್ಯಾಭಿಮಾನಿಗಳ ನಾಲಗೆಯಲ್ಲಿ ನರ್ತಿಸಲಿ. ಅವರ ಮನವನ್ನೂ ಮನೆಯನ್ನೂ ಸಂಪದ್ಭರಿತಗೊಳಿಸಲಿ, ಕನ್ನಡ ಪಠ್ಯಪುಸ್ತಕಗಳಲ್ಲಿ ಗಾನಸ್ಪರ್ಧೆಗಳಲ್ಲಿ ತಲೆಗಾಣಿಸತೊಡಗಲಿ !—ಎಂದು ಆಶಿಸುತ್ತೇನೆ. ಈ ಗ್ರಂಥವನ್ನು ಓದಿದವರು ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ಕೃತಾರ್ಥನಾಗುವೆನು.

ಬೆಂಗಳೂರು
ಶ್ರೀ ವಿನಾಯಕನ ಚೌತಿ (7–9–86)

ಸಜ್ಜನವಿನೀತ
**ಟಿ. ಕೇಶವ ಭಟ್ಟ**

# About this book

'Havyakara Shobhanegalu' (The Ritual Songs of the Havyakas) is a monumental work in Kannada, the fruit of three years of research work undertaken by Prof. T. Keshava Bhat on a UGC Research Project in Bangalore University. The work is in two parts, including the prefatory material and the appendices. Part-I comprises five chapters in which selected songs have been edited and arranged. The arrangement follows the sequence of the rituals to which they relate, beginning with marriage rituals. Various readings are given in progressive footnotes.

P-artII presents research and elucidatory material, of great value in the work of fresh exposition and interpretation, based on the material in Part-I.

The Appendices include a glossary, information about other published collections of ritual songs, an introduction to the singers, and a bibliography of reference works. The prefatory material comprises the author's appeal, a Foreword by Prof. D. Javare Gowda, retired Vice-Chancellor of Mysore University, opinions of scholars and an exaustive Introduction.

The U.G.C. Project required the collection of the current oral versions of the songs in vogue among the women of the Havyaka community. This arduous task was accomplished by field work, both intensive and extensive, undertaken by the Researcher, with an assistant, in the rural areas of Karnataka, mainly in Dakshina Kannada, Kasargod region, Uttara Kannada and Shimoga Districts. This work took a whole year. About 1500 songs were collected along with different readings wherever in vogue. The present work presents 280 of these songs chosen both for their intrinsic value and to represent the three districts. It is hoped that it will be possible to offer other songs of equal interest in subsequent publications.

The Havyakas are a Brahmin community of Smartha cult, owing allegiance to the Gurupeetha of the lineage of Sri Shankaracharya. They use a dialect of Kannada ; a large number of native words which have disappeared elsewhere have remained here in their ancient forms. Auspicious rituals are characterized by the recital of songs of the variety of 'shobhane' or 'shobhana geetha' ; these songs suit the occasion and are rendered in distinctive style by the women. Who composed these songs we do not know. They have been orally transmitted from generation to generation. The distinctive. melodious, rhythmic rendering of the songs makes them particularly effective. These songs show some aspects of folklore ; references to the epics are woven into them ; and the metrical patterns are distinctive. They offer valuable material to the researcher. Several aspects of these songs have been studied in the four chapters of Part–II.

Chapter–I presents the research on the history of the Havyakas who trace their descent from Sage Parashurama of the Epics, their movement from Ahikshetra (i.e. Rohilkhand in North India) to Karnataka, along with King Mayurasharma of the Kadamba Dynasty, is studied. This chapter also describes some of their exemplary customs and manners, and their dialect. Chapter–II is devoted to an investigation of the origin, form and category of the songs. References to the songs of the shobhana geetha variety in several Kannada poems beginning with Pampa's Adipurana in the tenth century are noted. Chapter–III studies the structural and recitational aspects of the songs contained in Part-I. The prosody of these songs displays delightful variety, and in order to designate all the forms, a few new expressions like Tripadi Vistarana, Tripadi Makuta, Pada Makuta, Athitha and Varana have been coined. Chapter–IV considers the connection between the Shobhana songs and the relevant rituals. The meanings of several rituals and of the customs associated with them are elucidated. The derivations of many ritualistic

words which had so far not been determined are also indicated in this chapter.

These songs are a veritable literary treasure belonging exclusively to women. They form a 'Vanita Veda'—the Veda of Women. This mine is yet to be fully explored and, therefore, the songs are yet to find a place in the archives of Kannada Literature. Just as Sharana Sahitya, Dasa Sahitya and Yakshagana Sahitya have been accorded their legitimate places, 'Shobhana Sahitya', it has been urged, with its refinement and individuality, should be accorded its legitimate place and recognised as 'Shista Janapada', i.e. Refined Folklore. Chapter–II also discusses the possibility that the shobhana variety is identical with the Chattana form, refered to in 'Kavirajamarga' of the ninth century.

This category of songs is valuable not only as a treasure-house of poetry and cultural values but also for their link with the traditions of music and recitation in Karnataka. As rituals are losing their hold on people these songs also are on the way to oblivion. But they are too precious to be given up in this way, and every attempt must be made to preserve them.

o— O—o

## ಒಪ್ಪೋಲೆ

| ಪುಟ | ಸೊಲ್ಲು | ಸಾಲು | ತಪ್ಪು | ಸರಿ |
|---|---|---|---|---|
| ೫೦ | | 28 | ಬೆ.ಕು. | ಬೇಕು |
| 7 | 3 | 1 | ಅಂದ | ಅಂದು |
| 372 | 2 | 7 | ಬೆಗಗಿರೆ | ಬೆಳಗಿರೆ |
| 502 | | 30 | ಹಂಗುಸರ | ಹೆಂಗುಸರ |
| 516 | | 5 | ವಿಧ್ವಾಂಸರು | ವಿದ್ವಾಂಸರು |
| 604 | | 19 | ಸಂಸಾರ | ಸಂಸ್ಕಾರ |
| 605 | | 26 | ಅಢಕ | ಅಡಕ |

## ಪರಿವಿಡಿ

ವಿಷಯ ಪುಟ

**ಪ್ರೊ|| ದೇ. ಜವರೇಗೌಡ,** ಎಂ.ಎ., ಡಿ.ಲಿಟ್.
ನಿವೃತ್ತ ಕನ್ನಡ ಪ್ರಾಧ್ಯಾಪಕರು-ಉಪಕುಲಪತಿಗಳು,
ಮೈಸೂರು ವಿಶ್ವವಿದ್ಯಾನಿಲಯ. ಮೈಸೂರು–12.

# ಮುನ್ನುಡಿ

ಪ್ರೊ. ತಾಳ್ತಜೆ ಕೇಶವ ಭಟ್ಟರು ಮೊತ್ತಮೊದಲು ನನಗೆ ಪರಿಚಯವಾದದ್ದು ಅವರ 'ಸತ್ತ್ವಾವಲೋಕನ ಕಾವ್ಯಂ' ಮೂಲಕ. ಕಂದಪದ್ಯಾತ್ಮಕವಾದ ಅವರ 'ಹವ್ಯಕ ಪದಸಂಚಯ'ದಿಂದಾಗಿ ಅವರ ಬಗ್ಗೆ ನನ್ನ ವಿಶ್ವಾಸ ಮೂಡಿತು. ಅವರ 'ಹಾಡಿನ ಚೂಡಾಮಣಿ' ಜಾನಪದಲೋಕಕ್ಕೆ ನೀಡಿದ ಉತ್ತಮ ಕಾಣಿಕೆಯೆಂಬುದನ್ನು ನಾನು ಕಂಡುಕೊಂಡಿದ್ದೆ. ಈ ನಡುವೆ ಅವರು ಹಲವು ಸಂಶೋಧನಾತ್ಮಕವೂ ಸೃಜನಾತ್ಮಕವೂ ಆದ ಕೃತಿಗಳನ್ನು ರಚಿಸಿದ್ದುಂಟು ; ಅನೇಕ ಕೃತಿಗಳನ್ನು ಸಂಪಾದಿಸಿದ್ದುಂಟು. ಅವರು ಶ್ರೇಷ್ಠ ವಿದ್ವಾಂಸರಲ್ಲೊಬ್ಬರೆಂದು, ಉತ್ತಮ ಅಧ್ಯಾಪಕರೆಂದು ಹೆಸರು ಗಳಿಸಿದ್ದು, ಸರ್ಕಾರಿ ನಿಯಮಗಳ ಪ್ರಕಾರ ನಿವೃತ್ತರಾದರೂ, ಸಾಹಿತ್ಯಕ್ಷೇತ್ರದಿಂದ ನಿವೃತ್ತರಾಗಿಲ್ಲ. ಜೀವನಶ್ರದ್ಧೆ ಸಮೃದ್ಧವಾಗಿರುವ, ಬುದ್ಧಿ ಪ್ರಖರವಾಗಿರುವ, ಪ್ರತಿಭೆ ಜಾಗರವಾಗಿರುವ, ಅಂತಸ್ಸತ್ತ್ವ ಪಟುವಾಗಿರುವ ವ್ಯಕ್ತಿಗೆ ನಿವೃತ್ತಿಯೇ ಇಲ್ಲ. ಸೃಜನಶೀಲನಾದ ಸಾಹಿತಿಗಂತೂ ವಿಶ್ರಾಂತಿಯೇ ಇರಲಾರದು. ಜ್ಞಾನಪಿಪಾಸೆ ಮತ್ತು ಕರ್ಮಾಸಕ್ತಿಗಳು ಜೀವಂತವ್ಯಕ್ತಿಯ ಲಕ್ಷಣಗಳು. ಅವು ವಿರಮಿಸಿದಂದು ಮನುಷ್ಯ ಮುಪ್ಪಿಗೆ ದಾಸನಾಗಿ, ಮೃತ್ಯುವಿಗೆ ಅತಿಥಿಯಾಗುತ್ತಾನೆಂದೇ ಲೆಕ್ಕ. ನಿರಂತರಾಧ್ಯಯನ ಮತ್ತು ಚಿಂತನೆ ವಿದ್ವಾಂಸನ ಸಲ್ಲಕ್ಷಣಗಳು. ಅವು ಅಧ್ಯಾಪನದೊಡನೆ ಸ್ಥಗಿತಗೊಳ್ಳುವುದಿಲ್ಲ. ಅವು ಸ್ಥಗಿತಗೊಂಡದ್ದಾದರೆ ಅವನು ವಿದ್ವಾಂಸನೆಂಬ ಹೆಸರಿಗೆ ಅನರ್ಹನಾಗುತ್ತಾನೆ.

ವಿದ್ವತ್ಸಹಜವೂ ಸಂತೋಷದಾಯಕವೂ ಆದ ಅವರ ಕರ್ಮೇಚ್ಛೆ ಹಲವಾರು ಯೋಜನೆಗಳ ಮೂಲಕ ಅಭಿವ್ಯಕ್ತಗೊಂಡು, ಹವ್ಯಕರ ಶೋಭಾನೆಗಳ ಸಂಗ್ರಹದಲ್ಲಿ ಮೊದಲು ಕಾರ್ಯಪ್ರವೃತ್ತವಾಗಿರುವುದು ಜಾನಪದಕ್ಷೇತ್ರದ ಭಾಗ್ಯವೆಂದೇ ಹೇಳಬೇಕು. ಕ್ಷೇತ್ರಕಾರ್ಯ, ಸಂಪಾದನೆ ಮತ್ತು ಸಂಶೋಧನೆಗಳನ್ನೊಳಗೊಂಡಿರುವ ಈ ಯೋಜನೆಯನ್ನು ಭಟ್ಟರು ಅತ್ಯಂತ ವ್ಯವಸ್ಥಿತವಾಗಿ ವೈಜ್ಞಾನಿಕವಾಗಿ ಹಾಗೂ ಅಚ್ಚುಕಟ್ಟಾಗಿ ಪೂರೈಸಿ, ವಿದ್ವಜ್ಜನರ ಅಭಿನಂದನೆಗೆ ಭಾಜನರಾಗಿದ್ದಾರೆ. ಶಿಲಾಶಾಸನ ಅಥವಾ ಪುರಾತತ್ತ್ವ ಸಂಶೋಧನೆಯಂತೆ ಹಾಡುಗಳ ಸಂಶೋಧನೆಯೂ ಸಮಸ್ಯಾತ್ಮಕವೂ ಶ್ರಮದಾಯಕವೂ ಆದ ಸಾಧನೆ. ಸಂಗ್ರಹಕಾರ ಕ್ಷೇತ್ರಕಾರ್ಯಕ್ಕಾಗಿ ಊರೂರು ಅಲೆಯಬೇಕಾಗುತ್ತದೆ. ಗೀತಗಳು ಲಬ್ಧವಾಗುವ ಮನೆಗಳನ್ನೂ ಜನರನ್ನೂ ಗುರುತಿಸಿ, ಅವರಿಗೆ ಬಿಡುವಿದ್ದ ಸಮಯದಲ್ಲಿ, ಸರಿಹಗಲೋ ಸರಿಇರುಳೋ, ಅವರ ಬಳಿ ಕುಳಿತುಕೊಂಡು, ಅವರ ಮನೋಧರ್ಮವನ್ನರಿತುಕೊಂಡು, ಅವರು ಹೇಳಿದಂತೆ ಕೇಳಿಕೊಂಡು,

ಅವರ ಹಾಡುಗಳನ್ನು ಧ್ವನಿಮುದ್ರಿಸಿಕೊಳ್ಳಬೇಕಾಗುತ್ತದೆ ; ಅವರ ಹಾಡುಗಳ ಧಾಟಿಯನ್ನು ಗ್ರಹಿಸಬೇಕಾಗುತ್ತದೆ. ಭಾಷೆಯನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ. ತರುವಾಯ ಪಾಠಾಂತರಗಳನ್ನು ನಿಷ್ಕರ್ಷಿಸಿ, ಆಶಯ-ವಸ್ತುರೂಪ-ಸ್ವರೂಪಗಳಿಗನುಗುಣವಾಗಿ ವಿಶ್ಲೇಷಿಸಿ, ವಿಂಗಡಿಸಿ ವಿವಿಧ ಪ್ರಾದೇಶಿಕ ಗೀತಗಳೊಡನೆ ಹೋಲಿಸಿ—ಸಾಂಸ್ಕೃತಿಕ, ಐತಿಹಾಸಿಕ, ಸಾಮಾಜಿಕ ಹಾಗೂ ಮನಶ್ಶಾಸ್ತ್ರೀಯಾದಿ ದೃಷ್ಟಿಗಳಿಂದ ಹಾಡುಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ಭಟ್ಟರು ಈ ಎಲ್ಲ ದೃಷ್ಟಿಕೋನಗಳಿಂದ ತಾವು ಸಂಗ್ರಹಿಸಿರುವ ಶೋಭಾನೆಗಳನ್ನು ವ್ಯಾಸಂಗ ಮಾಡಿದ್ದಾರೆ. ಕ್ಷೇತ್ರ ಕಾರ್ಯದಲ್ಲಿ ಅವರು ಅನುಸರಿಸಿರುವ ವಿಧಾನ ಮುಂದಿನವರಿಗೆ ಮಾರ್ಗದರ್ಶಕವಾಗುತ್ತದೆ.

ಸಾಮಾನ್ಯವಾಗಿ ಜಾನಪದ ಸಾಹಿತ್ಯವನ್ನು ಗೀತ, ಶಿಶುಗೀತ, ಕಥೆ, ಕಥನಕಾವ್ಯ, ಖಂಡಕಾವ್ಯ, ಮಹಾಕಾವ್ಯಗಳೆಂದು ವಿಂಗಡಿಸುವುದುಂಟಷ್ಟೆ ? ವಸ್ತು, ರಚನೆ, ಸಂದರ್ಭ ಮತ್ತು ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡಾಗ ಶೋಭಾನೆಗಳನ್ನು ಪ್ರತ್ಯೇಕ ಗುಚ್ಛವಾಗಿಯೇ ವಿಂಗಡಿಸಬೇಕಾಗುತ್ತದೆ. ಅವು ಸಾಮಾನ್ಯವಾಗಿ ಹೆಂಗಸರೇ ಹಾಡುವ ಪದಗಳಷ್ಟೆ ? ಮತ್ತೆ ಅವುಗಳನ್ನು ಬ್ರಾಹ್ಮಣ ಸ್ತ್ರೀಯರ ಶೋಭಾನೆಗಳೆಂದೂ ಬ್ರಾಹ್ಮಣೇತರ ಸ್ತ್ರೀಯರ ಶೋಭಾನೆಗಳೆಂದೂ ಸ್ಥೂಲವಾಗಿ ವಿಭಜಿಸುವ ಸಾಧ್ಯತೆಯೂ ಉಂಟು. ಶಿಷ್ಟಭಾಷೆಯಿಂದ ಕೂಡಿದ ಪೌರಾಣಿಕ ಕಥೆಗಳು ಬ್ರಾಹ್ಮಣ ಸ್ತ್ರೀಯರ ಹಾಡುಗಳಲ್ಲಿಯೂ ಗ್ರಾಮ್ಯಭಾಷೆಯಿಂದ ಕೂಡಿದ ವಾಸ್ತವ ಜೀವನಚಿತ್ರಗಳು ಬ್ರಾಹ್ಮಣೇತರ ಮಹಿಳೆಯರ ಹಾಡುಗಳಲ್ಲಿಯೂ ವಿಶೇಷವಾಗಿ ಲಭ್ಯವಾಗುತ್ತವೆಂಬುದನ್ನು ಈ ಸಂದರ್ಭದಲ್ಲಿ ಗಣನೆಗೆ ತಂದುಕೊಳ್ಳಬಹುದಾಗಿದೆ. ಈ ಹಾಡುಗಳೆಲ್ಲ ಹೆಂಗಸರಿಂದಲೇ ರಚನೆಗೊಂಡು ಪರಂಪರಾಗತವಾಗಿ ಕಿವಿಯಿಂದ ಕಿವಿಗೆ ಹರಿದು ಬಂದಿವೆಯೆನ್ನುವುದರಲ್ಲಿ ಸಂಶಯವಿಲ್ಲ. ಹಿಂದಿನ ಕಾಲದಲ್ಲಿ ಬ್ರಾಹ್ಮಣ ಸ್ತ್ರೀಯರು ಸಹ ಬ್ರಾಹ್ಮಣೇತರ ಸ್ತ್ರೀಯರಂತೆ ಓದು ಕಲಿತವರಲ್ಲ. ಬೇರೆ ವಿಷಯಗಳಲ್ಲಿ ಇಲ್ಲವಾದರೂ ವಿವಾಹಾದಿ ಶುಭಕಾರ್ಯಗಳಲ್ಲಿ ಗಂಡಸರಿಗೆಂತೊ ಹೆಂಗಸರಿಗೂ ಸಮಾನ ಸ್ಥಾನವಿದ್ದಿರಬೇಕೆಂದು ಈ ಹಾಡುಗಳಿಂದ ವ್ಯಕ್ತವಾಗುತ್ತದೆ.

ನಾಗರಿಕ ಮಾನವನ ಗೃಹಸ್ಥಜೀವನದಲ್ಲಿ ವಿವಾಹವೊಂದು ಅತ್ಯಂತ ಪ್ರಾಮುಖ್ಯವಾದ ಘಟನೆಯೂ ಅಹುದು. ಅವನ ಜೀವನದ ಗತಿ, ಗುರಿ, ಸುಖ ಸಮೃದ್ಧಿ, ಏರು ಪೇರು, ಪುರುಷಾರ್ಥಸಾಧನೆ ಸಿದ್ಧಿ, ಸೋಲು ಗೆಲುವು, ಶಾಂತಿ ಸಮಾಧಾನಗಳೆಲ್ಲ ಅವನ ವೈವಾಹಿಕ ಜೀವನದ ಜಯಾಪಜಯಗಳನ್ನವಲಂಬಿಸಿದೆ. ಆ ವೈವಾಹಿಕ ಜೀವನದ ಛಾಯೆ ಮುಂದಿನ ಪೀಳಿಗೆಗಳ ಮೇಲೂ ಚಾಚಿಕೊಂಡಿರುತ್ತದೆ ಎಂಬುದನ್ನು ಮರೆಯುವಂತಿಲ್ಲ. ಆದ್ದರಿಂದ ವಿವಾಹಕ್ಕೆ ಅನಾದಿಕಾಲದಿಂದ ವಿಶಿಷ್ಟ ಸ್ಥಾನ ದೊರಕಿದೆ ; ಅದರ ಸುತ್ತ ಪವಿತ್ರ ಪ್ರಭಾವಳಿಯನ್ನು ಕಲ್ಪಿಸಲಾಗಿದೆ.

ಅದು ಹೆಣ್ಣುಗಂಡುಗಳಿಗೆ ಮಾತ್ರವೇ ಸೀಮಿತವಾದದ್ದಲ್ಲ ; ಇಡೀ ಬಂಧುಮಿತ್ರ ಸಮುದಾಯಕ್ಕೆ ಸಂಬಂಧಿಸಿದ್ದು. ಅದು ಮಂಗಲ ಕಾರ್ಯವೂ ಅಹುದು, ಸಾಮಾಜಿಕ ಸಂಸ್ಕಾರವೂ ಅಹುದು, ಮನೋರಂಜನೆಯ ಉತ್ಸವವೂ ಅಹುದು. ಹೆಣ್ಣುಗಂಡುಗಳಲ್ಲಿ ಏಕಾತ್ಮತೆ ಬೆಳೆಯಬೇಕು, ಬಂಧುಮಿತ್ರರಲ್ಲಿ ಸ್ನೇಹ ಬಾಂಧವ್ಯ ಮಧುರತಮವಾಗಿ ಸುಭದ್ರವಾಗಬೇಕು, ಅದೇ ಸಂದರ್ಭದಲ್ಲಿ ನೆರೆದವರ ಹೃನ್ಮನಗಳನ್ನು ತಣಿಸುವಂತಾಗಬೇಕೆಂಬುದೇ ಮದುವೆಯ ಗುರಿ. ಅದೊಂದು ಭಗವದಾರಾಧನೆಯೂ ಅಹುದು, ಕಲೆಗಳ ಪ್ರದರ್ಶನದ ಸಮಾರಂಭವೂ ಅಹುದು. ಅಗಿನ ವಧೂವರರು ಬರಿಯ ಮಾನವ ವ್ಯಕ್ತಿಗಳಲ್ಲ, ಪಾರ್ವತೀಪರಮೇಶ್ವರರ ಪ್ರತೀಕಗಳು ; ಸೀತಾರಾಮರು, ಕೃಷ್ಣ ರುಕ್ಮಿಣಿಯರೆಂದರೂ ಒಪ್ಪುತ್ತದೆ. ವಾಸ್ತವವಾಗಿ ಅದು ಶಿವಶಿವಾಣಿಯರ ಅಥವಾ ರಾಮಸೀತೆಯರ ಮದುವೆ. ಸಂಗೀತ, ನೃತ್ಯ, ವಾದ್ಯ, ಪುಷ್ಪಾಲಂಕಾರ, ಗೃಹಾಲಂಕಾರ ಮೊದಲಾದ ಕಲೆಗಳ ಮೆರೆವಣಿಗೆಯ ಸಂಭ್ರಮಕ್ಕೆ ಅಲ್ಲಿ ಅವಕಾಶವುಂಟು. ಇವೆಲ್ಲಕ್ಕಿಂತ ಮಿಗಿಲಾಗಿ ಅವುಗಳಿಗೆ ಕಿರೀಟಪ್ರಾಯವಾಗಿ ಶೋಭಾನೆಗಳಿಗೆ ವಿಶೇಷ ಪ್ರಾಶಸ್ತ್ಯವುಂಟು.

ಮದುವೆಯೊಂದು ನಾನಾ ಉತ್ಸವಗಳ ಉತ್ಸವವಾದ್ದರಿಂದ ಆ ಸಮಯದಲ್ಲಿ ವಿವಿಧಾಚರಣೆ ಸಂಪ್ರದಾಯ ಉಪಾಸನೆಗಳನ್ನೊಳಗೊಂಡ ಶಾಸ್ತ್ರಪರಂಪರೆಯ ಪ್ರಯೋಗ ಅನಿವಾರ್ಯವಾದ್ದರಿಂದ ಅದು ಹಿಂದಿನ ಕಾಲದಲ್ಲಿ ನಾಲ್ಕೈದು ದಿನಗಳಷ್ಟು ದೂರ ಎಳೆಯುತ್ತಿತ್ತು. ವಿವಾಹಪೂರ್ವದ ವೀಳೆಯ ಶಾಸ್ತ್ರ, ಅನಂತರದ ನೆರವಿ ತಿರುಗಾಟ, ತಿಂಗಳ ಶಾಸ್ತ್ರಗಳನ್ನು ಲೆಕ್ಕ ಹಾಕಿದರೆ, ಎಲ್ಲ ಮುಗಿಯುವ ಹೊತ್ತಿಗೆ ಸುಮಾರು ಒಂದು ತಿಂಗಳೇ ಆಗುತ್ತಿತ್ತು. ಕಾಲ ಕಳೆದಂತೆಲ್ಲ ಅದು ಅನುಕರಣೆ ನೂತನ ಕಲ್ಪನೆಗಳ ಮೂಲಕ ಸಂಕೀರ್ಣಗೊಂಡದ್ದುಂಟು. ಹಾಗೆ ಸಂಕೀರ್ಣಗೊಳ್ಳಲು ಮಾನವಸಹಜವಾದ ಪ್ರತಿಷ್ಠಾಹಂಕಾರಗಳೂ ಕಾರಣ. ಮಂತ್ರ ಮತ್ತು ಆಚರಣೆಗಳಿಗೆ ಮದುವೆಗಳಲ್ಲಿ ಅಗ್ರಸ್ಥಾನವಷ್ಟೆ ? ಸಂಸ್ಕೃತ ಭಾಷೆಯ ಮಂತ್ರಪಠನ ಪುರೋಹಿತರಿಗೆ ಮಾತ್ರ ಮೀಸಲಾದದ್ದು. ಸ್ತ್ರೀಯರು ಮಂತ್ರಗಳನ್ನು ಉಚ್ಚರಿಸುವಂತಿಲ್ಲ. ತಮ್ಮ ಬಸುರಲ್ಲಿ ಜನಿಸಿದ ಮಕ್ಕಳ ಮದುವೆಯ ಸಂಭ್ರಮದಲ್ಲಿ ಅವರು ಸಮಭಾಗಿಗಳಾಗಬೇಕಾದ್ದು ಉಚಿತ ತಾನೆ ? ಆದ್ದರಿಂದ ಅವರು ಮಂತ್ರಪಠನಕ್ಕೆ ಸಮಾನಾಂತರವಾದ ಉಪಾಯವನ್ನು ಕಂಡುಕೊಳ್ಳುತ್ತಾರೆ. ಅದು ಸೋಬಾನೆಯ ರೂಪದಲ್ಲಿ ಪ್ರಕಟಗೊಳ್ಳುತ್ತದೆ. ದೇಸಿ ಛಂದಸ್ಸಿನ ಕನ್ನಡದ ಸೋಬಾನೆಗಳೆಲ್ಲವೂ ಹಾಡುಗಬ್ಬಗಳು. ಮಂತ್ರಗರ್ಭಿತವಾದ ವಿಷಯ ಹಾಗೂ ಅಂತಸ್ಸತ್ವಗಳು ಈ ಹಾಡುಗಬ್ಬಗಳಲ್ಲಿಯೂ ಅಡಕಗೊಂಡಿರುತ್ತವೆ. ಸಂಸ್ಕೃತದ ಮಂತ್ರಗಳಿಂದ ದೊರಕುವಷ್ಟೂ ಲಾಭ ಈ ಕನ್ನಡದ ಹಾಡುಗಬ್ಬಗಳಿಂದ ಸಿಗುತ್ತದೆಂಬ ನಂಬಿಕೆಯೂ ಉಂಟು. ಆದ್ದರಿಂದಲೇ

ಕೇಶವ ಭಟ್ಟರು ಅವುಗಳನ್ನು 'ವನಿತಾ ವೇದ'ವೆಂದೇ ಕರೆದಿದ್ದಾರೆ. ಅವರ ಕರೆಹ ಸರಿಯೆಂದೇ ತೋರುತ್ತದೆ.

ವೇದ ವೇದಾಂತಗಳ ತಿರುಳೇ ಈ ಸೋಬಾನೆಗಳಲ್ಲಿ ಸಮಾಹಿತಗೊಂಡಿದೆಯೆಂದು ಹೇಳಲಾಗಿದೆ. ವಧೂವರರಿಗೆ ಮತ್ತು ನೆರೆದವರಿಗೆ ಮಂತ್ರಗಳ ಅರ್ಥ ಹೊಳೆಯದಿದ್ದಾಗ ಸೋಬಾನೆಗಳು ಅವರಿಗೆ ನೆರವಾಗುತ್ತವೆ. 'ಅರ್ಥ ಕಠಿನವಾಗಿರುವ ವೇದೋಪನಿಷತ್ತುಗಳ ಸಾರ ಹೇಗೆ ಶರಣರ ವಚನಗಳಲ್ಲಿ ಮೂಡಿ ಬಂದಿದೆಯೋ ಹಾಗೆಯೇ ಕ್ರಿಯಾಕಾಂಡದ ವೇದಮಂತ್ರಗಳ ಅರ್ಥವೇ ಈ ಶೋಭಾನೆಗಳಲ್ಲಿ ಕಾಣಿಸಿಕೊಂಡಿದೆ. ಎಷ್ಟೋ ವೇಳೆ ಪುರೋಹಿತರು ಶುಭಕಾರ್ಯಗಳನ್ನು ಮಾಡಿಸುವಾಗ, ಮಂತ್ರಸಂದರ್ಭವನ್ನು ಮರೆತಾಗ, ಶೋಭಾನೆಗಳಿಂದಲೇ ಕ್ರಿಯಾತಂತ್ರದ ದಿಗ್ದರ್ಶನ ಪಡೆಯುತ್ತಿದ್ದುದುಂಟು' ಎಂಬ ಸಂಶೋಧಕರ ಮಾತು ಈ ಸಂದರ್ಭದಲ್ಲಿ ಗ್ರಾಹ್ಯ. ಐತಿಹಾಸಿಕ ಮತ್ತು ಪೌರಾಣಿಕ ಕಥೆಗಳ ಸಾರಸರ್ವಸ್ವವನ್ನು ಸೂತ್ರರೂಪದ ಈ ಶೋಭಾನೆಗಳಲ್ಲಿ ಹಿಡಿದಿಡಲಾಗಿದೆ. ಇದು ಈ ಶೋಭಾನೆಗಳ ಮತ್ತೊಂದು ವೈಶಿಷ್ಟ್ಯ. ಪುರಾಣಗಳ ಬೆಳವಣಿಗೆಗೆ, ಸಂಸ್ಕೃತಿಯ ರಕ್ಷಣೆ–ವಿಕಾಸ–ಪ್ರಚಾರಗಳಿಗೆ ಸೋಬಾನೆಗಳಿಂದ ಸಂದಿರುವ ಕಾಣಿಕೆ ಅಮೋಘವಾದದ್ದು. ನಿರಕ್ಷರಿಗಳಾದ ಸ್ತ್ರೀಯರಿಗಂತು ಇವೇ ಶಿಕ್ಷಣಸಾಧನ ಹಾಗೂ ಮಾಧ್ಯಮಗಳು. ಗುರುಕುಲ, ಶಾಲಾ ಮತ್ತು ಕಾಲೇಜುಗಳಿಂದ ಕಲಿಯಬಹುದಾದ್ದನ್ನೆಲ್ಲ ಅವರು ಸೋಬಾನೆಗಳಿಂದ ಕಲಿಯುತ್ತಿದ್ದ ಕಾಲವೂ ಇತ್ತು. 'ಇತ್ತೀಚೆಯ ವರೆಗೂ ವಿವಾಹಯೋಗ್ಯ ಕನ್ಯೆಗೆ ಶೋಭಾನೆ ಹಾಡಲು ಬರುವುದೆಂದರೆ, ಯೋಗ್ಯ ವರನನ್ನು ಪಡೆಯಲು ಆಕೆಗೆ ಅದೊಂದು ಹೆಚ್ಚಿನ ಅರ್ಹತೆ ಎನಿಸುತ್ತಿತ್ತು' ಎಂಬ ಭಟ್ಟರ ಮಾತಿನಿಂದ ಅವುಗಳ ಮಹತ್ತ್ವ ವ್ಯಕ್ತವಾಗುತ್ತದೆ. ರಾಮಾಯಣ–ಭಾರತ–ಭಾಗವತಾದಿ ಗ್ರಂಥಗಳ ಕಥೆ–ತತ್ತ್ವ–ನೀತಿಗಳೆಲ್ಲವೂ ಸೋಬಾನೆಗಳ ಮೂಲಕ ಸ್ತ್ರೀಯರಿಗೆ ಹೃದ್ಗತವಾಗುತ್ತಿದ್ದವು.

'ರುಕ್ಮಿಣಿ ಓಲೆ ಬರೆದದ್ದು' ಎಂಬ ಹಾಡಿನಲ್ಲಿ ಭಾಗವತಪುರಾಣದ ಒಂದು ಕಥೆಯ ಸಾರಸಂಗ್ರಹವಿದೆ. 'ಗಿರಿಜಾ ಕಲ್ಯಾಣ'ದಲ್ಲಿ ಹೆಸರೇ ಸೂಚಿಸುವಂತೆ ಶಿವನ ಲೀಲೆಗಳು ಹಾಗೂ ಶಿವಶಿವಾಣಿಯರ ವಿವಾಹದ ವರ್ಣನೆಯಿದೆ. 'ಉದಯಕಾಲದ ಶೋಭಾನ'ದಲ್ಲಿ ದಶಾವತಾರದ ಕಥಾನಕಗಳಿವೆ. ಸೀತೆ ರಾಮರು ಬೇರೆಯಲ್ಲ, ವಧೂವರರು ಬೇರೆಯಲ್ಲ, ಅವರ ಮದುವೆ ಶೋಭನಗಳೇ ಇವರ ಮದುವೆಶೋಭನಗಳೆಂಬ ಸಂಗತಿ 'ಸೀತಾದೇವಿಯ ಕೋಣೆಗೆ ಕಳುಹಿಸಿದ್ದು' ಎಂಬ ಹಾಡಿನಲ್ಲಿ ಪಡಿಮೂಡಿದೆ. ಶ್ರೀಕೃಷ್ಣನ ಬಾಲ್ಯದ ಆಟಪಾಟಗಳ ಸೊಗಸು 'ಶ್ರೀಕೃಷ್ಣ ಬಾಲಲೀಲೆ'ಯಲ್ಲಿ ಮಗಮಗಿಸುತ್ತದೆ. ಇಂತೆಯೇ ದಮಯಂತೀ ಕಲ್ಯಾಣ, ಧ್ರುವಚರಿತೆ ಮೊದಲಾದ ಪೌರಾಣಿಕ ಕಥೆಗಳನ್ನೊಳಗೊಂಡ ಹಾಡುಗಳು ಹಲವಾರಿವೆ. 'ಕೃಷ್ಣ ಸತ್ಯಭಾಮೆ

ಸಂವಾದ'ವಂತು ಕನ್ನಡದ ಸಂಪಾದಸಾಹಿತ್ಯಕ್ಕೊಂದು ಅನುಪಮದ ಕೊಡುಗೆಯಾಗಿದೆ. ತವರಿನವರು ಮಗಳನ್ನು ಪತಿಯ ಮನೆಗೆ ಕಳುಹಿಸಿಕೊಡುವ ಸಂಗತಿಯೂ ಸೇರಿಕೊಂಡು, ಕಿವಿಚುಚ್ಚುಹ ಅನ್ನಪ್ರಾಶನಗಳ ತನಕ, ಸೋಭಾನೆಗಳ ಸಾಮ್ರಾಜ್ಯ ಪ್ರಸರಿಸುತ್ತದೆ. ಸ್ತ್ರೀಮಹಾಪುರಾಣವೆಂದೋ ಗೃಹಪುರಾಣವೆಂದೋ ಕರೆಯಬಹುದಾದ ಈ ಹಾಡುಗಳು ಸ್ತ್ರೀಕುಲದ ಕಲ್ಪನಾಪ್ರತಿಭೆಗೆ, ಕಾವ್ಯಸಾಮರ್ಥ್ಯಕ್ಕೆ ಹಾಗೂ ಪೌರಾಣಿಕ ಪ್ರಜ್ಞೆಗೆ ಸಾಕ್ಷಿಯಾಗಿವೆ. ಕಾವ್ಯ, ಪುರಾಣ, ತತ್ತ್ವ, ನೀತಿ, ಉಪಾಸನೆ, ಸಂಗೀತಗಳನ್ನೊಳಗೊಂಡ ಈ ಹಾಡುಗಳ ಅಧ್ಯಯನದಿಂದ ಸಾಮಾಜಿಕ ಮನಶ್ಶಾಸ್ತ್ರೀಯ ಕ್ಷೇತ್ರಗಳ ವಿಕಾಸಕ್ಕೆ ಮಹೋಪಕಾರವಾಗುವುದರಲ್ಲಿ ಸಂದೇಹವಿಲ್ಲ.

ಸಾಹಸಪೂರ್ಣವಾದ ಈ ಅಧ್ಯಯನಕ್ಕೆ, ಸಂಗ್ರಹ-ಸಂಪಾದನೆಗಳಿಗೆ, ಕ್ಷೇತ್ರಕಾರ್ಯಕ್ಕೆ ಬೇಕಾದ ಸಕಲ ಅರ್ಹತೆಗಳು ಪ್ರೊ. ಕೇಶವ ಭಟ್ಟರಲ್ಲಿ ಸಮೃದ್ಧವಾಗಿರುವ ಸಂಗತಿ ಅವರನ್ನು ಬಲ್ಲವರಿಗೆಲ್ಲ ಗೊತ್ತು. ಈಗಾಗಲೇ ಈ ಕ್ಷೇತ್ರದಲ್ಲಿ ಸಂಗ್ರಹಕಾರ್ಯ ಬಹುಮಟ್ಟಿಗೆ ನಡದಿದೆಯೆಂದೇ ಹೇಳಬಹುದು. ಭಟ್ಟರು ಹೆಸರಿಸಿರುವ ಪ್ರತಿಯೊಬ್ಬ ಮಹಿಳೆಯೂ ಮೊದಲ ಸಂಗ್ರಹಕಾತಿಯೆನ್ನಲಡ್ಡಿಯಿಲ್ಲ. ದೇವುಡು ನರಸಿಂಹ ಶಾಸ್ತ್ರಿಗಳು ಈ ಹಾಡುಗಳ ಪ್ರಾಮುಖ್ಯವನ್ನು ಬಹು ಹಿಂದೆಯೇ ಗುರುತಿಸಿದ್ದುಂಟು. ಮತಿಘಟ್ಟ ಕೃಷ್ಣಮೂರ್ತಿಯವರು ದೊಡ್ಡ ಪ್ರಮಾಣದಲ್ಲಿ ಸೋಬಾನೆಪದಗಳನ್ನು ಸಂಗ್ರಹಿಸಿದ್ದಾರೆ. ಈ ಸಂದರ್ಭದಲ್ಲಿ ಕ. ರಾ. ಕೃ, ಜೀ. ಶಂ ಪ. ಅವರ ಹೆಸರುಗಳನ್ನು ಮರೆಯುವಂತಿಲ್ಲ. ನಾಗೇಗೌಡರ ಸೋಬಾನೆ ಚಿಕ್ಕಮ್ಮನಂತು ಸಂಗ್ರಹಕಾತಿಯರಲ್ಲಿ ಅಗ್ರವೀಳ್ಯಗೆ ಅರ್ಹಳಾದವಳು. ಭಟ್ಟರ ಹಾಡುಕಾತಿಯರು ಬ್ರಾಹ್ಮಣರ ಮನೆತನದಿಂದ ಬಂದವರು ; ಅವರಿಗೊಂದು ಪರಂಪರೆಯಿದೆ ; ಅವರಲ್ಲಿ ಕೆಲವರಾದರೂ ಅಕ್ಕರಬಲ್ಲವರು. ಚಿಕ್ಕಮ್ಮ ಹಳ್ಳಿಯ ನಿರಕ್ಷರಕುಕ್ಷಿ ; ಅವಳಿಗೆ ಪರಂಪರೆಯೆಂಬುದಿಲ್ಲ. ಆಕಸ್ಮಿಕವಾಗಿ ಈ ಕಡೆಗೆ ಎಡಹಿ ಬಂದವಳು. ಅವಳ ಸಂಗ್ರಹದ ಪ್ರಮಾಣವನ್ನೂ ಅವೆಲ್ಲ ಕಂಠಸ್ಥವಾಗಿ ಇವೆಯೆಂಬುದನ್ನೂ ನೆನೆದಾಗ ಪಂಡಿತರೂ ತತ್ತರಿಸಬೇಕಾಗುತ್ತದೆ. ಇಂಥ ಅಪೂರ್ವ ಮಹಿಳೆಯನ್ನು ಲೋಕದ ದೃಷ್ಟಿಗೆ ಬೀಳಿಸಿದ ನಾಗೇಗೌಡರು ಅಭಿನಂದನಾರ್ಹರು. ಶೋಭಾನೆ ಸಾಹಿತ್ಯದಲ್ಲಿ 'ಸೋಬಾನೆ ಚಿಕ್ಕಮ್ಮನ ಪದಗಳು' ಕೃತಿಗೆ ವಿಶಿಷ್ಟ ಸ್ಥಾನವಿದೆಯೆಂದೇ ಹೇಳಬಹುದು. ಸಂಗ್ರಹಕಾರರ ಅಧ್ಯಯನ, ಹಾಗೂ ಸಂಪಾದನಾಕೌಶಲಗಳು ಮೆಚ್ಚುವಂಥವಾಗಿವೆ.

ಈ ತೆರನ ಸಾಹಿತ್ಯಸಂಗ್ರಹ, ಸಂಪಾದನೆ ಹಾಗೂ ಅಧ್ಯಯನಗಳಲ್ಲಿ ಕೇಶವ ಭಟ್ಟರು ನೂತನ ಮಾರ್ಗವನ್ನು ಸಮೆದಿದ್ದಾರೆಂದೇ ಹೇಳಬಹುದು ಪಾಠಾಂತರಗಳನ್ನು ಗುರುತಿಸುವಲ್ಲಿ ಹೆಗ್ಗಳಿಕೆ ತೋರಿಸಿದ್ದಾರೆ. ಪಾಠಾಂತರಗಳ ಉದ್ದೇಶ ಮೂಲಪಾಠವನ್ನು ನಿರ್ಣಯಿಸುವುದಲ್ಲ ; ಪ್ರಾದೇಶಿಕ ಭಿನ್ನತೆಗಳನ್ನು ಎತ್ತಿ ತೋರಿಸು

ವುದು ಅವರೇ ಸ್ವತಃ ಚೆನ್ನಾಗಿ ಹಾಡುವವರಾದ್ದರಿಂದ, ಹಾಡುಗಳಲ್ಲಿ ಖಚಿತತೆಯನ್ನು ನಿರೀಕ್ಷಿಸಬಹುದು. ಅವರು ಧಾಟಿ ಮತ್ತು ಛಂದಸ್ಸುಗಳನ್ನು ಶಾಸ್ತ್ರೀಯವಾಗಿ ವಿಚಾರಿಸಬಲ್ಲರು. ಇವು ಹವ್ಯಕರ ಹಾಡುಗಳಾದರೂ ನಡುನಡುವೆ ನುಸುಳುವ ಕೆಲವು ಹವ್ಯಕಪದಗಳನ್ನು ಬಿಟ್ಟರೆ, ಇವುಗಳಲ್ಲಿ ಬಳಕೆಗೊಂಡಿರುವ ಭಾಷೆ ಆಧುನಿಕ ಕನ್ನಡದ ಶಿಷ್ಟಶೈಲಿಯಾಗಿದೆಯೆಂಬುದನ್ನು ಗಮನಿಸಬಹುದು. ಹವ್ಯಕರ ಮೂಲದ ಹಾಗೂ ಭಾಷೆಯ ಅಧ್ಯಯನ, ಈ ಗ್ರಂಥದ ಉಪಯುಕ್ತತೆಯನ್ನು ಅಧಿಕಗೊಳಿಸುತ್ತದೆ. ಇವುಗಳಿಗೂ ಚತ್ತಾಣಕ್ಕೂ ಗಂಟುಹಾಕಿರುವ ನಂಟು ವಿಚಾರಣೀಯ. ಇಲ್ಲಿಯ ಛಂದೋಬಂಧಗಳ ಅಧ್ಯಯನದಿಂದ ಕನ್ನಡ ಛಂದಶ್ಶಾಸ್ತ್ರಕ್ಕೆ ಪುಷ್ಟಿ ದೊರೆಯುತ್ತದೆ , ಅದರ ಇತಿಹಾಸಕ್ಕೆ ಹೊಸ ಸಾಮಗ್ರಿ ಲಭಿಸುತ್ತದೆ. ಹತ್ತನೆಯ ಶತಮಾನಕ್ಕಿಂತ ಹಿಂದಿನಿಂದ ಹೆಂಗಸರ ಹಾಡುಗಳೆಂದು ಪ್ರಸಿದ್ಧವಾಗಿರುವ ಧವಳ ಸ್ವರೂಪ ಲಕ್ಷಣಗಳನ್ನು ಸುಸಂಗತವಾಗಿ ಚರ್ಚಿಸಿ, ಅಂತ್ಯದಲ್ಲಿ ಹವ್ಯಕರ ವಿವಾಹಗಳಿಗೆ ಸಂಬಂಧಿಸಿದ ಸಂಸ್ಕಾರಗಳನ್ನು ವಿವರಿಸಿ, ಅವುಗಳಿಗೂ ಹಾಡುಗಳಿಗೂ ಹೊಕ್ಕುಳ ಬಳ್ಳಿಸಂಬಂಧವನ್ನು ನಿರ್ಣಯಿಸುವಲ್ಲಿ ಅವರ ವಿದ್ವತ್ಕೌಶಲ ಎದ್ದು ಕಾಣುತ್ತದೆ. ತಾವು ಸಂಗ್ರಹಿಸಿರುವ ಹಾಡುಗಳಲ್ಲಿ ಕಾಲುಭಾಗವನ್ನು ಮಾತ್ರ ಈಗ ಅವರು ಪ್ರಕಟಿಸುತ್ತಿದ್ದಾರೆ. ಅಂದ ಮೇಲೆ, ಅವರ ಜಾನಪದ ಯಾತ್ರೆಯ ಸಾಹಸದ ಮಹತ್ತ್ವ ಈ ಪ್ರಕಟನೆಯಿಂದ ಅಭಿವ್ಯಕ್ತವಾಗುತ್ತದೆ. ಅವರ ಈ ಸಾಹಸಕಾರ್ಯವನ್ನು ಸಂಬಂಧಪಟ್ಟವರು ಮೆಚ್ಚಿ ಪ್ರೋತ್ಸಾಹಿಸುತ್ತಾರೆಂದು ನಂಬಿದ್ದೇನೆ. ಭಟ್ಟರ ಸಾಹಿತ್ಯಸೇವೆ ಇಂತೆಯೇ ಅವಿರಾಮವಾಗಿ, ಉಜ್ವಲವಾಗಿ ಮುಂದುವರಿಯಲೆಂದು ಹಾರೈಸುತ್ತೇನೆ.

o—O—o



ತಾಳ್ತಜೆ ಕೃಷ್ಣ ಭಟ್ಟ
ವಿದ್ವಾನ್, ವಿಶಾರದ, ಗೀತಾಲಂಕಾರ.
ಪಂಜಳಮನೆ, ಉಪ್ಪಿನಂಗಡಿ-574 241

# ಒಳ್ನುಡಿ

ಹವ್ಯಕರ ಧಾರ್ಮಿಕ ಕ್ರಿಯೆಗಳ ನಿಜನಿಕಷವಾಗಿ, ಸುಂದರ ಸುಲಲಿತ ಪದ ಪಾದಯುಕ್ತವಾಗಿ ರೂಪಗೊಂಡ ಹಾಡುಗಳೇ ಹವ್ಯಕರ ಶೋಭಾನೆ ಹಾಡುಗಳು. ಇವು ಬಲು ಹಿಂದಿನಿಂದಲೇ ಬಳಕೆಯಾಗಿ ಬಂದಿವೆ. ವಿವಾಹ ಗರ್ಭಾಧಾನಾದಿ ಪೂರ್ವ ಷೋಡಶ ಶುಭಕರ್ಮಗಳಲ್ಲಿಯೂ ಪೂಜೆ ಹೋಮಾದಿಗಳಲ್ಲಿಯೂ ಆ ಆ ವೈದಿಕ ಕ್ರಿಯೆಗಳನ್ನು ಈ ಹಾಡುಗಳು ವರ್ಣಿಸಿವೆ. ಇನ್ನು ಉಪನಯನದಲ್ಲಿ, ಮದುವೆಯ ಧಾರೆ ಎರೆಯುವ ಸಂದರ್ಭಗಳಲ್ಲಿ ಹಾಡುವ ಚರಿತೆಗಳು ಹಾಗೂ ಕಲ್ಯಾಣಗಳು ಚೊಕ್ಕವಾದ ಚಿಕ್ಕ ಚಿಕ್ಕ ಕಾವ್ಯಗಳೇ ಎನ್ನಲಡ್ಡಿಯಿಲ್ಲ. ಇವುಗಳನ್ನೆಲ್ಲಾ ರಚಿಸಿದವರು ತಮ್ಮ ಹೆಸರು, ಬಿರುದುಗಳನ್ನು ಹೇಳಿಕೊಂಡದ್ದು ತೀರಾ ಕಡಮೆ. ಪುರಾಣಪುರುಷನೊಬ್ಬನನ್ನು ಹೆಸರಿಸಿ, ಅವನಿಗೆ ಉಪನಯನ, ಮದುವೆ ಹಾಗೂ ಅದಕ್ಕೆ ಮೊದಲಿನ, ಮತ್ತಿನ ವಿವಿಧ ಸಂಸ್ಕಾರಕ್ರಿಯೆ ನಡೆಸಿದುದನ್ನು ಅವರು ತಮ್ಮದೇ ಆದ ಛಂದಸ್ಸಿನಲ್ಲಿ ಹಾಡಿದರು ; ಸಮಾಜಕ್ಕೆ ಅವನ್ನು ಒದಗಿಸಿಕೊಟ್ಟರು.

ಅಂದಿನ ಮಹಿಳೆಯರು ಹಿರಿಯರಿಂದ ಕಲಿತು, ಕಿರಿಯರಿಗೆ ಕಲಿಸಿ, ಬಾಯಿಂದ ಬಾಯಿಗೆ ಅಭ್ಯಸಿಸಿಕೊಂಡು ಬಂದರು. ಹೀಗೆ, ಅದೊಂದು ಶ್ರುತಿ ಸಾಹಿತ್ಯವಾಗಿಯೇ ಮುಂಬರಿಯಿತು. ಇಂದು ವೈದಿಕ ಕ್ರಿಯೆಗಳಲ್ಲಿ ಶ್ರದ್ಧೆ ಕಡಮೆಯಾಗತೊಡಗಿದೆ. ನವನಾಗರಿಕತೆಯ ಗುಂಗಿನಿಂದಾಗಿ, ಬಾಲಿಕೆಯರು ಯುವತಿಯರು ಈ 'ಅಜ್ಜಿಯ ಹಾಡ'ನ್ನು ಅಲಕ್ಷಿಸಿ, ಕಲಿಯದೆ ಬಿಟ್ಟಿದ್ದಾರೆ. ಆದುದರಿಂದ ಶುಭ ಶೋಭನಗಳಲ್ಲಿ ಶೋಭಾನೆ ನಿಂತುಹೋಗಿದೆ. ನಶಿಸಿಹೋಗುತ್ತಿರುವ ಈ ಹಾಡುಗಳನ್ನು ಉಳಿಸಲೆಂದು, ನಾಡಿನುದ್ದಗಲ ಸಂಚರಿಸಿ, ಹೆಂಗುಸರ ಬಾಯಿಂದ ಕೇಳಿ, ಸಂಗ್ರಹಿಸುವುದು ಹಾಗೂ ಒಂದೊಂದಕ್ಕೂ ಇರುವ ಬೇರೆ ಬೇರೆ ಧಾಟಿಗಳನ್ನು ನೆನಪಿಡುವುದು ಒಂದು ತಪಸ್ಸೇ ಸರಿ ! ಈ ಹಾಡುಗಳನ್ನು ವಿಶ್ಲೇಷಿಸಿ ಕ್ರಮಬದ್ಧವಾಗಿ ಸಂಯೋಜಿಸುವುದು ಸುಲಭವೇನೂ ಅಲ್ಲ. ವ್ಯಾಕರಣ, ಛಂದಸ್ಸು, ಗಮಕಕಲೆ, ಸಂಗೀತ, ತಾಳ, ಯಕ್ಷಗಾನದ ಮತ್ತು ಶೋಭಾನೆಗಳ ಧಾಟಿ, ಇತಿಹಾಸ ಪುರಾಣಗಳು ಮತ್ತು ವಿವಿಧ ಸಾಹಿತ್ಯಗಳಲ್ಲಿ

ಬಹಳಷ್ಟು ಅನುಭವ—ಇವೆಲ್ಲ ಇದ್ದು ವೇದಶಾಸ್ತ್ರಗಳಲ್ಲಿಯೂ ತಕ್ಕಷ್ಟು ಪರಿಜ್ಞಾನವಿರುವವರಿಗೆ ಮಾತ್ರ ಈ ಹಾಡುಗಳ ಸರ್ವಾಂಗೀಣ ವಿವರಣೆ ಸಾಧ್ಯ. ಇವಿಲ್ಲದೆ, ಈ ಹಾಡುಗಳ ಸಂಕಲನ–ಸಂಶೋಧನೆಗಳಿಗೆ ಇಳಿದವರೆಲ್ಲ ಅಷ್ಟಷ್ಟೇ ಬಗೆಯಲ್ಲಿ ಕುಂಟಿರುವುದು ಸರ್ವವಿದಿತ.

ಈ ಹಾಡುಗಳು ಕೆಲವೇ ಹಸ್ತಪ್ರತಿಗಳಲ್ಲಿಯೂ ಹಳಬರ ಬಾಯಲ್ಲಿಯೂ ಸಿಗುವವುಗಳಾದ್ದರಿಂದ ವಿನಾಶದ ಅಂಚನ್ನೇ ಸೇರಿವೆ ಎನ್ನಬಹುದು. ಸಕಾಲದಲ್ಲಿ ಇವುಗಳನ್ನು ಸಂಗ್ರಹಿಸಿ ಪ್ರಕಟಿಸುವುದು ಕನ್ನಡ ಸಾಹಿತ್ಯದ ಪರಿಪುಷ್ಟತೆಗೆ ತೀರಾ ಅವಶ್ಯಕವಾದುದೇ. ಆದರೆ ಈ ಕಾರ್ಯವೇನೂ ಸುಲಭವಲ್ಲ. ಕನ್ನಡ ನೆಲದ ಎಲ್ಲಾ ಕಡೆಯಲ್ಲಿಯೂ ಕೊಂಚ ಕೊಂಚ ದೊರೆಯುವ ಈ ಕರ್ಮಣಿ ಚೆಂಬವಳಗಳನ್ನು ಸಂಗ್ರಹಿಸಿ, ಕ್ರಮದಿಂದ ಪೋಣಿಸಿ ಮಾಲೆ ಮಾಡಿದ ಮಾಲೆಗಾರ ಕೇಶವನ ಕಾರ್ಯವು ಹೊಗಳಿಕೆಗೆ ತಕ್ಕುದು.

ನಾನೂ ಚಿ॥ ಕೇಶವನೂ ನೇರ ಅಣ್ಣ ತಮ್ಮಂದಿರು. ನಮ್ಮಮ್ಮನು ತಮಗೆ ಬಾಯಿಗೆ ಬರುತ್ತಿದ್ದ ಚರಿತೆ, ಕಲ್ಯಾಣ ಹಾಗೂ ಇತರ ಹಾಡುಗಳಿಂದ ಅನೇಕ ಸೊಲ್ಲುಗಳನ್ನು ಹಾಡಿ, ನಮಗೆ ಚಿಕ್ಕಂದಿನಲ್ಲಿ ಅವುಗಳ ಕಥೆಯನ್ನು ವಿವರಿಸುತ್ತಿದ್ದರು. ಅವರಿಗೆ ವಾಮನಚರಿತೆ, ಧ್ರುವಚರಿತೆ, ಲಕ್ಷ್ಮೀಕಲ್ಯಾಣ (ಸಮುದ್ರಮಥನ), ಗಿರಿಜಾ ಕಲ್ಯಾಣ, ಪಾರ್ವತೀ ಕಲ್ಯಾಣ, ದಮಯಂತೀ ಕಲ್ಯಾಣ—ಹೀಗೆ ಅನೇಕ ಹಾಡು ಗೊತ್ತಿತ್ತು. ನಮ್ಮ ತಾಯಿ ಧ್ರುವಚರಿತೆ ಹಾಡಿ ವಿವರಿಸುವ ಸಂದರ್ಭದಲ್ಲಿ ನಾನೂ ಕೇಶವನೂ ಕಣ್ಣೀರಿಡದೆ ಇರುತ್ತಿರಲಿಲ್ಲ. ನಮ್ಮಮ್ಮ ಬರೆಹ ಕಲ್ತವರಲ್ಲ. ಅವರ ಅಜ್ಜಿ, ಅಮ್ಮ, ಅತ್ತೆಯರಿಂದ ಹಾಡುಗಳನ್ನು ಬಾಯಿಪಾಠ ಮಾಡಿಕೊಂಡವರು. ರಾಮಾಯಣ, ಭಾರತಾದಿಗಳ ಹಾಡುಗಳೂ ಅವರಿಗೆ ಗೊತ್ತಿದ್ದಿತು. ದ್ರೌಪದೀ ವಸ್ತ್ರಾಪಹರಣದ ಹಾಡು, 'ಇನ್ನೆಷ್ಟೋ ಸಂವಾದಗಳೂ ಬರುತ್ತಿದ್ದುವು. ಅವಕ್ಕೆಲ್ಲ ಬೇರೆ ಬೇರೆ ಧಾಟಿಗಳು ! ಅವರು ತೀರಿಕೊಂಡಾಗ, ಆ ಹಾಡುಗಳು ಇಲ್ಲವಾದವು. ಕನ್ನಡ ಸಾಹಿತ್ಯದ ಅವಿಭಾಜ್ಯ ಅಂಗವಾದ ಈ ಸಂಪನ್ನ ಹಾಡುಗಳು ನಾಡಿನಲ್ಲೆಲ್ಲ ಹೀಗೆಯೇ ನಶಿಸುತ್ತಿವೆ. ಧಾಟಿಗಳೂ ಮರೆಯಾಗುತ್ತಿವೆ. ಆ ಧಾಟಿಗಳನ್ನು ನನ್ನ ತಮ್ಮನು ತಕ್ಕಮಟ್ಟಿಗೆ ಬಲ್ಲವನಾಗಿದ್ದಾನೆ. ಇದುವರೆಗೆ ಯಾರೂ ಉಕ್ತಿಸದ ಎಷ್ಟೋ ಛಂದಸ್ಸುಗಳು ಈ ಹಾಡುಗಳಲ್ಲಿವೆ. ವೈವಿಧ್ಯಮಯ, ಹೃದ್ಯ, ಸುಂದರ ಧಾಟಿಗಳುಳ್ಳ ಈ ಹಾಡುಗಳನ್ನು ಸಂಗ್ರಹಿಸಿ ಈ ಗ್ರಂಥದಲ್ಲಿ ವಿವರಿಸುತ್ತ—ವರಣ, ಪಾದಮಕುಟ, ತ್ರಿಪದಿ ಮಕುಟ, ತ್ರಿಪದಿ ವಿಸ್ತರಣ, ಆವರ್ತ, ಪಲ್ಲವಿ, ಗೀತ–ಗೀತೆ—ಮುಂತಾದವುಗಳನ್ನು ಲಕ್ಷಿಸಿ, ಸ್ಪಷ್ಟೀಕರಿಸಿದುದು ಬೇರಾರೂ ಈತನಕ ಮಾಡದೆ ಇರುವ ಸಾಹಸವೇ ಸರಿ !

"ತಪ್ಪೊಂದುಂ ತಲೆದೋರದಂತೆ ಪಲರೆಲ್ಲರ್ ತಿರ್ದುವುದು" ಏಕೆ ? ಸ್ವತಃ ಹಲವು ನಲ ಸೂಕ್ಷ್ಮವಾಗಿ ನಿರೀಕ್ಷಿಸಿ ನಮ್ಮ ತಪ್ಪನ್ನು ನಾವೇ ತಿದ್ದಿಕೊಳ್ಳಬೇಕು— ಎನ್ನುವ ಅಣ್ಣ ತಮ್ಮಂದಿರು ನಾವು. ಬರೆದುದನ್ನು ನಾವು ನಮ್ಮೊಳಗೆ ಒದಿ ವಿಮರ್ಶಿಸುವುದು, ತಿದ್ದುಪಡಿ ಮಾಡಿಕೊಳ್ಳುವುದು ಮೊದಲಿಂದ ಬಂದ ಕ್ರಮ ಅನಂತರ, ಪರಿಣತರು ತೋರಿಸಿಕೊಟ್ಟ ತಿದ್ದುಪಡಿಯನ್ನು ಸ್ವೀಕರಿಸದಿರುವವರು ನಾವಲ್ಲ ನನ್ನ ತಮ್ಮನದೇ ಆದರೂ ತಪ್ಪನ್ನು ಹುಡುಕಿ ಹುಡುಕಿ ಓಡಿಯುವ ನನಗೆ ಈ ವಿಸ್ತಾರವಾದ ವಿವರಣೆಯಲ್ಲಿ ದೂಷ್ಯವಾದ ತಪ್ಪು ಕಾಣಿಸಲಿಲ್ಲ !

ಧವಳಾರದ ಪದ (ಹಾಡು) ಗಳನ್ನು ಯಕ್ಷಗಾನ ಪ್ರಸಂಗಗಳಲ್ಲಿ ಹೆಚ್ಚಿನವರು ಓದಿರಬಹುದು , ಕೇಳಿರಬಹುದು. ಅದರ ಲಕ್ಷಣವೇನೆಂದು ಸರಿಯಾಗಿ ಆರೂ ಹೇಳಿದಂತೆ ತೋರುವುದಿಲ್ಲ. ಧವಳಾರ ಆರತಿ ಮಾಡುವ ಹಾಡಾದರೂ ಆರತಿ ಮಾಡುವ ಹಾಡೆಲ್ಲ ಧವಳಾರಗಳಾಗವು. ತ್ರಿಪದಿಮಕುಟವಿರುವ 'ಬೆಳಗಿರೇ' ಎಂಬ ಪಾದಮಕುಟವಿರುವ ಆರತಿ ಎತ್ತುವ ಹಾಡುಗಳು ಮತ್ತು ಅದೇ ಮಾದರಿಯವು ಧವಳಾರವೆಂಬುದನ್ನು ಈ ಗ್ರಂಥದಲ್ಲಿ ನಿರೂಪಿಸಿರುವುದು ಒಂದು ಹೊಸ ಸಂಶೋಧನೆಯೇ ಸರಿ.

ಶುದ್ಧ ಭಾಷೆ, ತೂಕವುಳ್ಳ ಶಬ್ದಗಳು, ಸುಸ್ಪಷ್ಟ ವಿಮರ್ಶೆ, ಚಿಕ್ಕ ಚೊಕ್ಕ ವಾಕ್ಯಗಳು ಈ ಗ್ರಂಥಕ್ಕೆ ಚೆಲುವನ್ನು ತುಂಬಿವೆ ಶೋಭಾನೆಗಳು, ಅವುಗಳ ಪರಾಮರ್ಶೆ, ಹವ್ಯಕ ವಿಚಾರ, ಶೋಭಾನೆಯ ಲಕ್ಷಣ, ಧಾಟಿ-ಛಂದಸ್ಸು, ವಿವಿಧ ಶುಭ ಸಂಸ್ಕಾರವಿಧಿ ನಿರೂಪಣೆ—ಮುಂತಾದ ವಿಷಯಗಳು ಈ ಗ್ರಂಥದಲ್ಲಿ ಲೇಖಕನ ವಿಶೇಷಾನುಭವದ ಫಲಗಳಾಗಿವೆ. ಸಹೃದಯರಾದ ಕನ್ನಡಿಗರು ಇದರಿಂದ ಪ್ರಯೋಜನವನ್ನು ಹಾಗೂ ಹೊಸ ಸ್ಫೂರ್ತಿಯನ್ನು ಪಡೆಯಲಿ ! ಓದುವ ನಿಮಗೆಲ್ಲ ಒಳಿತಾಗಲಿ ! ಕೇಶವನಿಗೆ ಶುಭವಾಗಲಿ !



**ಶ್ರೀ ಜಿತಬಿಂದು ಮಹರ್ಷಿ**
ಬಿಂದು ಟವರ್, ಬೆಂಗಳೂರು–11.

ಶ್ರೀ ಜಿತಬಿಂದು ಮಹರ್ಷಿಗಳು ಪರಮಾಣು ವೇದವಿಜ್ಞಾನದ ದ್ರಷ್ಟಾರರು ಮತ್ತು ಸೂತ್ರಕಾರರು. ಆಯುರ್ವೇದ, ಯೋಗ, ಅರ್ಥಶಾಸ್ತ್ರ, ರಾಜತಂತ್ರಗಳಲ್ಲಿ ಪರಿಣತರು; ಸೌರ ಮತ್ತು ಪಾರದ ಶಾಸ್ತ್ರಪ್ರವೀಣರು. ಅನೇಕ ಶಾಸ್ತ್ರಗಳ ಗೂಢ ಜ್ಞಾನ ವಿಜ್ಞಾನ ಗಳೆಲ್ಲ ಇವರಿಗೆ ತಮ್ಮ ಪರಮ ತಪಸ್ಸಿನಿಂದ ಲಭ್ಯವಾಗಿವೆ. "ಇವರ ಅಪಾರ ಜ್ಞಾನ ವಿಜ್ಞಾನಗಳ ನಿಧಿಯನ್ನು ದೇಶಕ್ಕಾಗಿ ಹಾಗೂ ಮಾನವಕುಲಕ್ಕಾಗಿ ಬಳಸಿಕೊಂಡರೆ, ಪ್ರಗತಿಗೆ ಮಹಾಮಾರ್ಗವಾಗುವುದು" ಎಂಬುದು ಅಂತಾರಾಷ್ಟ್ರೀಯ ವಿಜ್ಞಾನಿಗಳ, ಮಹಾ ಮೇಧಾವಿಗಳ ಮತ್ತು ಪತ್ರಿಕಾವರದಿಕಾರರ ಅಭಿಪ್ರಾಯ.

# ಶುಭಾಶಯ

'ಹವ್ಯಕರ ಶೋಭಾನೆಗಳು' ಎಂಬೀ ಗ್ರಂಥವು ಎಲ್ಲ ಶುಭಕಾರ್ಯಗಳಿಗೂ ವಿವಿಧ ಪೂಜೆ-ವ್ರತ-ಹಬ್ಬ-ಹೋಮಗಳ ಆಚರಣೆಗೂ ಹಿಡಿದ ಕನ್ನಡಿಯಂತಿದ್ದು, ಅಂತಹ ವೇಳೆಯಲ್ಲಿ ಮುತ್ತೈದೆಯರು ಹಾಡುವ ಗೀತಗಳ ಒಂದು ಭಂಡಾರದಂತಿದೆ. ಈ ಬಗೆಯ ಹಾಡುಗಳನ್ನು ಲೇಖಕರು 'ವನಿತಾ ವೇದ' ಎಂದು ಕರೆದಿರುವುದು ಔಚಿತ್ಯ ಪೂರ್ಣವಾಗಿದೆ. ಬ್ರಾಹ್ಮ ವಿಧಿಯ ಶುಭಸಮಾರಂಭಗಳಲ್ಲಿ ವೇದಮಂತ್ರಗಳಿಗಿರುವಷ್ಟೇ ಪ್ರಾಶಸ್ತ್ಯ ಹಾಗೂ ಅರ್ಥಪುಷ್ಟಿ ಈ ಶೋಭಾನೆಗಳಿಗಿರುವುದರಿಂದ ಆ ಹೆಸರು ಸಾರ್ಥಕವೇ ಆಗಿದೆ. ಆದರೆ ವೇದಗಳ ಸತ್ತ್ವ-ತತ್ತ್ವ ಇನ್ನೂ ದೊಡ್ಡದು. ಅದರಲ್ಲಿ ಜ್ಞಾನ-ವಿಜ್ಞಾನಗಳೆರಡೂ ಆಳವಾಗಿ ಮನೆಮಾಡಿಕೊಂಡಿವೆ. ಪಾಂಚಭೌತಿಕ ಜಗತ್ತಿನ ಪ್ರಕೃತಿಯ ಗೂಡುಗಳಲ್ಲಿ ಅಡಗಿರುವ ನೈಜಸತ್ತ್ವವುಳ್ಳ ವೇದವಿಜ್ಞಾನದ ಉಪಯೋಗವನ್ನು ಜನರು ಇನ್ನು ಪಡೆಯಬೇಕಾಗಿದೆ. ಈ ದಿಶೆಯಲ್ಲಿ ಕಾರ್ಯಸಾಧನೆಯಾದರೆ ವಿಶ್ವಕಲ್ಯಾಣ ಸಾಧ್ಯ.

ವೇದಪ್ರತಿಪಾದಿತವಾದ ಸತ್ಯ-ಧರ್ಮ-ನೀತಿಗಳನ್ನು ವ್ಯಕ್ತಿಯಲ್ಲಿ ಉಂಟುಮಾಡುವ ಸಲುವಾಗಿ ಅನೇಕ ರೀತಿಯ ಸಂಸ್ಕಾರಗಳನ್ನು ಸ್ಮೃತಿಕಾರರು ವಿಧಿಸಿರುತ್ತಾರೆ. ನಮ್ಮ ಪೂರ್ವಿಕರು ಅವನ್ನು ಮಾನ್ಯಮಾಡಿ ಅನುಸರಿಸಿಕೊಂಡು ಬಂದಿರುತ್ತಾರೆ. ಈ ಸಂಸ್ಕಾರಗಳು ಅರ್ಥಹೀನವಲ್ಲ. ಇವು ಮಾನವನ ಮನಸ್ಸು-ಬುದ್ಧಿ-ಕಾರ್ಯಶಕ್ತಿಗಳನ್ನು ತಿದ್ದಿ ಉದಾತ್ತಗೊಳಿಸಿ, ಮಾನವೀಯ ಗುಣಗಳನ್ನು ರೂಪಿಸಿ, ಸನ್ಮಾರ್ಗದಲ್ಲಿ ಮುನ್ನಡೆಸಲು ಸಹಾಯಕವಾಗಿವೆ. ಅವುಗಳಂತೆ ವ್ರತ, ಪೂಜೆ, ಹವನಾದಿಗಳೂ

ಮನುಷ್ಯನಲ್ಲಿ ಸದ್ಭಾವ ಜಾಗೃತಿಯನ್ನುಂಟುಮಾಡಿ, ಸನ್ಮಾರ್ಗದೆಡೆಗೆ ಒಯ್ಯತಕ್ಕವಾಗಿವೆ. ಪ್ರಕೃತ, ಈ ಶೋಭಾನೆ ಹಾಡುಗಳು ಧರ್ಮಾಚರಣೆಗೆ ಮಾರ್ಗದರ್ಶಕವಾಗಿವೆ. ಆಯಾ ಶುಭಸಂದರ್ಭದಲ್ಲಿ ಹಾಡತಕ್ಕವಾಗಿ ಸತ್ತ್ವಭಾವ ಬೀರುವಂಥವಾಗಿವೆ. ಹೀಗಿದ್ದರೂ ಈಗಿನ ಪರಿಸ್ಥಿತಿಯಲ್ಲಿ ಜನರು ವೇದದಿಂದ ದೂರವಾಗಿ, ಅದನ್ನು ಅಲಕ್ಷ್ಯ ಮಾಡುವವರಾಗಿ, ಧರ್ಮ ವಿಮುಖರಾಗಿ, ನೀತಿಬಾಹಿರರಾಗುತ್ತಿದ್ದಾರೆ. ಇದರಿಂದ ಎಲ್ಲೆಲ್ಲೂ ಅಧರ್ಮ, ಅನ್ಯಾಯ, ಅತೃಪ್ತಿ, ಅಶಾಂತಿಗಳು ತಾಂಡವವಾಡುತ್ತಿವೆ. ಹೊರಗಿನ ಅಸಂಸ್ಕೃತಿಗಳೆಲ್ಲಾ ಭಾರತದಲ್ಲಿ ಒಂದುಗೂಡಿ, ಹುಲುಸಾಗಿ ಬೆಳೆದು, ನಮ್ಮ ಪ್ರಾಚೀನ ತತ್ತ್ವರತ್ನಗಳು ಹೂತುಹೋಗಿರುವುದು ಕಾಣುತ್ತಿದೆ.

ಇಂತಹ ಸಂದರ್ಭದಲ್ಲಿ ಈ ಗ್ರಂಥಕರ್ತರಾದ ವಿದ್ವಾನ್ ಟಿ. ಕೇಶವ ಭಟ್ಟರು ನಮ್ಮ ಆರ್ಷ ಧರ್ಮ-ಸಂಸ್ಕೃತಿಯನ್ನು ಉಳಿಸಲು, ಈ ಮಹಿಳಾಸಾಹಿತ್ಯವನ್ನು ಉಳಿಸುವುದೂ ಒಂದು ಮುಖ್ಯ ಸಾಧನವೆಂದು ಮನಗಂಡಿದ್ದಾರೆ. ಈ ಸಾಹಿತ್ಯದ ರಸಮಾಧುರ್ಯವನ್ನು ಓದುಗರಿಗೆ ಉಣಿಸಲೆಂದು, ಕಲಿತು ಹಾಡುವವರಿಗೆ ಸಹಾಯವಾಗಲೆಂದು ಈ ಗ್ರಂಥವನ್ನು ರಚಿಸಿರುವುದು ಕಂಡುಬರುತ್ತದೆ. ಇದಕ್ಕಾಗಿ ಕರ್ಣಾಟಕದ ಆದ್ಯಂತ ಸುತ್ತಾಡಿ, ಈ ಶೋಭಾನೆಗಳೆಂಬ ವೇದದ ನುಡಿಗಳನ್ನು ಸಂಗ್ರಹಿಸಿದ್ದಾರೆ. ಇದಕ್ಕೆ ಗ್ರಂಥರೂಪದಲ್ಲಿ ಶಾಶ್ವತವಾದ ಆಯುರ್ದಾಯ ಕಲ್ಪಿಸುವ ಸಾಧನೆಯನ್ನು ಯಶಸ್ವಿಯಾಗಿ ಮಾಡಿದ್ದಾರೆ. ಇದೇನೂ ಸುಲಭದ ಕೆಲಸವಲ್ಲ. ಈ ಕೆಲಸಕ್ಕೆ ಕೆಲವು ವಿಶೇಷಾರ್ಹತೆ ಬೇಕು—ಭಾಷಾಪರಿಜ್ಞಾನ, ಶಾಸ್ತ್ರಪರಿಚಯ, ಪಾಂಡಿತ್ಯ, ಸಂಶೋಧನ ಸಾಮರ್ಥ್ಯ, ಹಳಗನ್ನಡ ಹೊಸಗನ್ನಡಗಳ ವಾಕ್ಶುದ್ಧಿ—ಇವೆಲ್ಲವೂ ಇರುವಂಥವರಿಗೆ ಮಾತ್ರ ಈ ಮಹತ್ಕಾರ್ಯ ಮಾಡಲು ಸಾಧ್ಯ. ಈ ಗುಣಗಳೆಲ್ಲವೂ ಈ ಲೇಖಕರಲ್ಲಿವೆ. ಈ ಹಾಡುಗಳಲ್ಲಿರುವ ಭಾಷಾದೋಷಗಳನ್ನು ತಿದ್ದಿ, ಸದರ್ಥ ಸತ್ಯಾರ್ಥಗಳನ್ನು ಪ್ರಕಾಶಗೊಳಿಸಿ, ಸ್ವಚ್ಛಸಾಹಿತ್ಯವನ್ನು ಇಲ್ಲಿ ನಿರೂಪಿಸಿರುತ್ತಾರೆ. ಇದು ಸಾಹಸದ ಕಾರ್ಯವೂ ಹೌದು, ಭಾಷಾಭಿಮಾನ, ಸಾಹಿತ್ಯಾಭಿಮಾನವೂ ಹೌದು. ಎಲ್ಲಕ್ಕಿಂತ ಹೆಚ್ಚಾಗಿ, ದೇಶಭಕ್ತಿಯ ಗುಣ ಮತ್ತು ಸಂಸ್ಕೃತಿಯ ಸೇವೆಯೂ ಹೌದು. ಈ ಶೋಭಾನೆ ಸಾಹಿತ್ಯವನ್ನು 'ವೇದ ತತ್ತ್ವದ ದರ್ಪಣ'ವೆಂದು ಹೇಳಬಹುದು. ವೇದಾರ್ಥವನ್ನು, ವೇದೋಕ್ತ ಸಂಸ್ಕೃತಿ ಸಂಪ್ರದಾಯಗಳನ್ನು ಆಯಾ ಪ್ರಾಂತ ಭಾಷೆಗಳಲ್ಲಿ ತಿಳಿದುಕೊಂಡು ಜನರು ತಮ್ಮ ನಿತ್ಯಜೀವನದಲ್ಲಿ ಹಾಡಿ, ಪಾಡಿ, ಮೆಲುಕುಹಾಕಲು, ನಮ್ಮ ಸಂಸ್ಕೃತಿ ನಾಡವರಲ್ಲಿ ಬೆಳೆದುಬರಲು ಈ ಶೋಭನಗೀತ ಸಾಹಿತ್ಯವು ಹೆದ್ದಾರಿಯಾಗಿ ಪರಿಣಮಿಸಿದೆ ಮತ್ತು ಹೆದ್ದಾರಿಯ ದಾರಿದೀಪವೂ ಹೌದು.

ವಿದ್ಯಾವಂತರ ಲಕ್ಷಣ ವಿನಯ. ವಿನಯವಿಲ್ಲದವರಿಗೆ ಪ್ರೌಢವೂ ಗೂಢವೂ

ಆದ ವಿಮರ್ಶೆ ಸಾಧ್ಯವಿಲ್ಲ. ಅಂಥವರಿಗೆ ಪರಿಶೀಲನ ಸಾಮರ್ಥ್ಯವೇ ಬರುವುದಿಲ್ಲ. ಅಂತಹ ವಿನಯ ಶ್ರೀ ಕೇಶವ ಭಟ್ಟರಲ್ಲಿ ಉನ್ನತ ಮಟ್ಟದಲ್ಲಿದೆ. ಇವರು ಇಪ್ಪತ್ತೆರಡು ಪುಸ್ತಕಗಳನ್ನು ಬರೆದು ಬೆಳಕಿಗೆ ತಂದಿರುವರು. ನೂರಾರು ಲೇಖನಗಳನ್ನು ಬರೆದಿರುವರು. ಇವು ಅನೇಕ ಪತ್ರಿಕೆ ಮತ್ತು ವಿಶೇಷ ಸಂಚಿಕೆಗಳಲ್ಲಿ ಪ್ರಕಟವಾಗಿವೆ. ಸಾವಿರಾರು ಪುಸ್ತಕ ವಿಮರ್ಶೆಗಳನ್ನೂ ಬರೆದಿದ್ದಾರೆ ಬಹುಜನರು ಅವನ್ನು ಪತ್ರಿಕೆಗಳಲ್ಲಿ ಓದಿರುವುದರಿಂದ, ನಾನು ಆ ವಿಚಾರದಲ್ಲಿ ಹೆಚ್ಚು ಹೇಳಬೇಕಾದ್ದು ಅನುಚಿತ. ಡಾ. ಜ. ಚ. ನಿ. ಯವರು ಇವರಿಗೆ 'ನುಡಿರೂಹ ರೂವಾರಿ' ಎಂಬ ಪ್ರಶಸ್ತಿಯನ್ನು ಕೊಟ್ಟು ಸನ್ಮಾನಿಸಿರುವುದು ಪ್ರಶಂಸನೀಯ ವಿಚಾರ. ಕರ್ಣಾಟಕ ಸರಕಾರವು ರಾಜ್ಯಪ್ರಶಸ್ತಿಯನ್ನೂ ಮೈಸೂರು ವಿಶ್ವವಿದ್ಯಾಲಯವು ತನ್ನ ಸುವರ್ಣ ಮಹೋತ್ಸವ ಬಹುಮಾನ-ಸನ್ಮಾನ ಪ್ರಶಸ್ತಿಯನ್ನೂ ಈ ಗ್ರಂಥಕರ್ತರಿಗೆ ಈ ಮೊದಲೇ ನೀಡಿ ಗೌರವಿಸಿರುವುವನ್ನು ಓದುಗರ ಮುಂದಿಡುವುದು ಕರ್ತವ್ಯವೆಂದು ತಿಳಿದಿದ್ದೇನೆ ಇಲ್ಲಿ ಯಾವುದೂ ಅತಿಶಯೋಕ್ತಿ ಇಲ್ಲ.

ಇಂತಹ ವಿದ್ವಾಂಸರಾದ ಈ ಗ್ರಂಥಕರ್ತರಿಗೆ ಈ ಗ್ರಂಥಮುದ್ರಣಕ್ಕಾಗಿ ಸರಕಾರದಿಂದ ದೊರೆಯಲಿರುವ ಆರ್ಥಿಕ ಸಹಾಯ ಏನೂ ಸಾಲದು. ಅಂತಹ ನ್ಯೂನತೆಯನ್ನು ಕನ್ನಡಿಗರು ತುಂಬಲೆಂದೂ ಹಾಗೆ ತುಂಬುವುದು ಅವರಿಗೊಂದು ವರಪ್ರಸಾದವೆಂದೂ ಭಾವಿಸುತ್ತೇನೆ. ಇಷ್ಟೊಂದು ಪರಿಷ್ಕಾರವಾಗಿ ಶಾಸ್ತ್ರೀಯವಾಗಿ, ಸಂಪಾದಿಸಿ ಸಂಶೋಧಾತ್ಮಕ ಅಂಶಗಳಿಂದ ಸಿಬಿಡಗೊಳಿಸಿರುವ ಈ ಗ್ರಂಥವು ರಾಜ್ಯ ಪ್ರಶಸ್ತಿಗೆ ಮಾತ್ರವಲ್ಲ, ರಾಷ್ಟ್ರಪ್ರಶಸ್ತಿಗೂ ಅರ್ಹವಾಗಿದೆ ಎನ್ನುವುದು ಅತಿಶಯೋಕ್ತಿ ಏನೂ ಅಲ್ಲ ಕೇಶವ ಭಟ್ಟರಿಗೆ ಕನ್ನಡ ಜನತೆಯ ಸಹಾನುಭೂತಿಯೊಂದಿಗೆ ಅವು ಪ್ರಾಪ್ತವಾಗಲಿ—ಎಂದು ಆಶಿಸುತ್ತೇನೆ.

ಇತಿ ಸತ್ಯಂ

**ಜಿತಬಿಂದು ಮಹರ್ಷಿ**

o—O—o

ವಿದ್ಯಾಲಂಕಾರ
ಪ್ರೊ. ಎಸ್. ಕೆ. ರಾಮಚಂದ್ರ ರಾವ್, ಎಂ.ಎ.

305, 6ನೆಯ ಅಡ್ಡರಸ್ತೆ
ಜಯನಗರ, ಬೆಂಗಳೂರು–11

# ಉಳಿಸಿಕೊಳ್ಳಬೇಕಾದ ಸಾಹಿತ್ಯ

ಬಾಯ ಪರಂಪರೆಯಿಂದ ಸಾಗಿಬಂದ ಸಾಹಿತ್ಯ ಉಳಿಯುವುದು ಅದು ಸಿದ್ಧವಾದ ಸಂದರ್ಭ ಉಳಿದು ಬಂದಾಗಲೇ. ಇತಿಹಾಸದ ಗಾಲಿ ಉರುಳುತ್ತಿರುವಾಗ ಹಳೆಯ ಸಂದರ್ಭಗಳು ಹಾಗೆಯೇ ಉಳಿಯುವ ಸಂಭವ ಕಡಮೆ. ಸಂದರ್ಭಗಳು ಮಾರ್ಪಟ್ಟಾಗ ಅಥವಾ ಮರೆಯಾದಾಗ ಅವಕ್ಕೆ ಹೊಂದಿಕೊಂಡು ಬಂದ ಆಚಾರಗಳೂ ಪ್ರಕ್ರಿಯೆಗಳೂ ಹಾಡುಗಬ್ಬಗಳೂ ಮರೆಯಾಗುವುದು ಸಹಜವೇ. ಆದರೆ ಅಂಥ ಸಂದರ್ಭಗಳಿಗೆಂದು ಸಿದ್ಧವಾದ ಸಾಹಿತ್ಯವಲ್ಲ ಮುಂದೆ ಗುಣವಿಲ್ಲವೆಂದಾಗಲಿ ಬೆಲೆಯಿಲ್ಲವೆಂದಾಗಲಿ ಬಗೆಯಲಾಗದು. ಅವರಲ್ಲಿ ಸ್ವಾರಸ್ಯವಿರುತ್ತದೆ, ಸೌಂದರ್ಯವಿರುತ್ತದೆ, ಜನಜೀವನದ ಪ್ರಜ್ಞೆಯಿರುತ್ತದೆ. ಅದರಲ್ಲಿ ತೋರಿಕೊಂಡು ಬಂದ ಮೌಲ್ಯಗಳು ಯಾವ ಕಾಲಕ್ಕಾದರೂ ಮಾನ್ಯವೇ. ಈ ಕಾರಣದಿಂದ ಅಂಥ ಸಾಹಿತ್ಯವನ್ನು ಮರೆಯಾಗದಂತೆ ಉಳಿಸಿಕೊಳ್ಳುವುದು ಬುದ್ಧಿವಂತರ ಕರ್ತವ್ಯ.

ಶೋಭಾನೆಯಂಥ ಹಾಡುಗಳು ಇಂಥ ಸಾಹಿತ್ಯಕ್ಕೆ ಸೇರಿದವು. ಮದುವೆ ಮುಂಜಿಯಂಥ ಶುಭ ಶೋಭನ ಸಂದರ್ಭಗಳಲ್ಲಿ ಜಾಣೆಯರಾದ ಹೆಂಗಳೆಯರು ಹಾಡಿ ರಸಿಕರನ್ನು ಸಂತೋಷಪಡಿಸುವ ಒಂದು ಜಾನಪದ ಸಂಗೀತಪ್ರಕಾರ ಇದು. ಇದರಲ್ಲಿ ಸಾಹಿತ್ಯದ ಅಂಶವೂ ಇದೆ, ಸಂಗೀತದ ಅಂಶವೂ ಇದೆ ; ಸಂಸ್ಕೃತಿಯ ಅಂಶವಂತೂ ಇದ್ದೇ ಇದೆ. ಜನರ ಸ್ಥಿತಿಗತಿ, ಆಚಾರವಿಚಾರ, ಉಡುಗೆ ತೊಡುಗೆ, ಊಟ ಉಪಚಾರ, ಪೂಜೆ ಪುರಸ್ಕಾರ ಮೊದಲಾದ ಹಲವು ವಿಚಾರಗಳು ಈ ಸಾಹಿತ್ಯದಲ್ಲಿ ಹಾಸುಹೊಕ್ಕಾಗಿ ಸೇರಿಬರುತ್ತವೆ ; ಹಾಸ್ಯ, ಕುಚೋದ್ಯ, ಒಗಟು, ನಂಬಿಕೆ ಇವೂ ಸೇರದೆ ಇಲ್ಲ. ಪೂರ್ವಸಿದ್ಧವಾದ ಸಾಹಿತ್ಯದ ವಿನಿಕೆ ಮಾತ್ರವಲ್ಲದೆ, ಸಮಯ ಸ್ಫೂರ್ತಿಯಿಂದ ಹಾಡುವವರ ಸೇರ್ಪಡೆಯೂ ಇರುತ್ತದೆ. ಬೇರೆ ಬೇರೆ ಜನಾಂಗಗಳಲ್ಲಿ ಬೇರೆ ಬೇರೆಯಾಗಿ ಇದು ತೋರಿಕೊಳ್ಳುವುದು ಸಹಜವೇ.

ಹವ್ಯಕ ಜನರಲ್ಲಿ ಶೋಭಾನೆ ಹಾಡುಗಳಿಗೆ ವಿಶೇಷವಾದ ಆದರವಿದೆ. ವಸ್ತು ವೈವಿಧ್ಯ, ಛಂದಸ್ಸಿನ ಬಳಕೆ, ಉಕ್ತಿಯ ಸ್ವಾರಸ್ಯ ಇವುಗಳಲ್ಲೆಲ್ಲ ಪ್ರಯೋಗ ನಡೆಸಿರುವುದು ಕಾಣುತ್ತದೆ. ಈ ಕ್ಷೇತ್ರದಲ್ಲಿ ಆಸಕ್ತಿಯನ್ನು ತಳೆದು ಅಧ್ಯಯನ ನಡೆಸಿರುವ ಪ್ರಾಧ್ಯಾಪಕ ತಾಳ್ತಜೆ ಕೇಶವ ಭಟ್ಟರು ಸಂಗೀತದಲ್ಲಿ ಪರಿಶ್ರಮವುಳ್ಳವರೂ ಹೌದು ; ಜಾನಪದ ನೆಲೆಯ ಗುಟ್ಟನ್ನು ಬಲ್ಲವರೂ ಆಗಿದ್ದಾರೆ. ಶೋಭಾನೆ ಹಾಡಿಕೆಯನ್ನು ಕುರಿತಂತೆ ಒಲವನ್ನೂ ಉಳ್ಳವರು. ಶೋಭಾನೆ ಹಾಡುಗಳನ್ನು ಸಂಗ್ರಹಿಸುವಲ್ಲಿ

ತುಂಬ ಶ್ರಮ ವಹಿಸಿದ್ದಾರೆ , ಸಂಗ್ರಹಿಸಿದ ಮೇಲೆ ಶುದ್ಧಪಾಠವನ್ನು ಗೊತ್ತುಪಡಿಸಿ ಸಂಪಾದನೆ ಮಾಡುವ ಕೆಲಸವನ್ನೂ ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಅಭ್ಯಾಸಿಗಳಿಗೂ ವಿದ್ಯಾರ್ಥಿಗಳಿಗೂ ಅನುಕೂಲವಾಗುವಂತೆ ಪರಾಮರ್ಶ ಭಾಗವನ್ನೂ ಪರಿಶಿಷ್ಟಗಳನ್ನೂ ಸೇರಿಸಿದ್ದಾರೆ. ಧವಳಾರವೆಂಬ ಪ್ರಕಾರವನ್ನು ಕುರಿತ ಇವರ ವಿವರಣೆ ಆದರಣೀಯವಾಗಿದೆ

ಕನ್ನಡ ಸಾಹಿತ್ಯದಲ್ಲಿ ಪರಿಣತರೂ ಯಕ್ಷಗಾನಕಲೆಯಲ್ಲಿ ನುರಿತವರೂ ಆದ ಲೇಖಕರು ಉತ್ತಮ ಬರಹಗಾರರೂ ಆಗಿರುವುದು ಈ ಗ್ರಂಥದ ಸಾರ್ಥಕತೆಯನ್ನು ಹೆಚ್ಚಿಸಿದೆ. ಮರೆಯಾಗುತ್ತಿರುವ ಸಾಂಸ್ಕೃತಿಕ ಪ್ರವೃತ್ತಿಯೊಂದನ್ನು ಕುರಿತು ನಡೆಸಿರುವ ಈ ಸಂಗ್ರಹ, ಸಂಪಾದನೆ, ಅಭ್ಯಾಸಗಳ ಕೆಲಸ ಈ ಕ್ಷೇತ್ರದಲ್ಲಿ ದಾರಿದೀಪವಾಗಿ ನಿಲ್ಲಬಲ್ಲುದು ಸಮಗ್ರ ಸಾಮಾಜಿಕ ಚೌಕಟ್ಟಿನಲ್ಲಿ ಮತ್ತು ವಿಶಿಷ್ಟ ಸಾಹಿತ್ಯದ ಹಂದರದಲ್ಲಿ ಸಾಗಿರುವ ಈ ಕೆಲಸ ಸಂಶೋಧನ ದೃಷ್ಟಿಯಿಂದ ಬೆಲೆಯುಳ್ಳದ್ದು, ನಿರೂಪಣೆಯ ದೃಷ್ಟಿಯಿಂದ ಮಾರ್ಗದರ್ಶಕವಾದುದು. ಈ ಗ್ರಂಥವು ಬೇಗನೆ ಪ್ರಕಟಗೊಂಡು ಗ್ರಂಥಕರ್ತರ ಆಶಯ ಪೂರೈಸಲೆಂದು ಹಾರೈಸುತ್ತೇನೆ.

1985, ಡಿಸೆಂಬರ್, 28.

o—O—o

ವಿದ್ವಾನ್ ಎಸ್. ರಂಗನಾಥ ಶರ್ಮಾ
ನಿವೃತ್ತ ಸಂಸ್ಕೃತ ವ್ಯಾಖ್ಯಾಪಕರು.

831, 4ನೆಯ ಮುಖ್ಯರಸ್ತೆ,
ವಿಜಯನಗರ, ಬೆಂಗಳೂರು-40.

# ಅಭಿಪ್ರಾಯ

ಹವ್ಯಕರು ಅಚ್ಚ ಕನ್ನಡಿಗರು. ಎಲ್ಲಿದ್ದರೂ ಇವರ ಮನೆಯ ಮಾತು ಕನ್ನಡ. ವೈದಿಕ ವಿದ್ಯೆಯಲ್ಲಿ, ಆಗಮೇತಿಹಾಸಪುರಾಣಗಳಲ್ಲಿ ಪಳಗಿದ ಈ ಜನರು ತಮ್ಮದೇ ಆದ ಸಂಸ್ಕೃತಿಯನ್ನು ಬೆಳೆಸಿ ಉಳಿಸಿ ಕಾಪಾಡಿಕೊಂಡು ಬಂದಿದ್ದಾರೆ. ಹವ್ಯಕ ಸ್ತ್ರೀಯರು ವಿಶೇಷವಾಗಿ ಗೃಹಕೃತ್ಯಗಳಲ್ಲಿ ನಿರತರಾಗಿದ್ದರೂ ಪುರಾಣಶ್ರವಣ, ಧಾರ್ಮಿಕ ವಿಧಿಗಳಲ್ಲಿ ಸಹಭಾಗಿತೆ, ಯಕ್ಷಗಾನಗಳ ಆಲೋಕನ-ಆಕರ್ಣನ—ಮುಂತಾದವುಗಳಿಂದ ಪ್ರಭಾವಿತರಾಗಿ ಅಧ್ಯಾತ್ಮಸಂಪತ್ತನ್ನೂ ಕಾವ್ಯರಸಿಕತೆಯನ್ನೂ ಗಳಿಸಿಕೊಂಡಿದ್ದಾರೆ. ಈ ಸ್ತ್ರೀಯರು ಅನಕ್ಷರಸ್ಥರಾದರೂ ಜ್ಞಾನಸಂಪನ್ನರು. ಗ್ರಾಮೀಣರಾದರೂ ಸುಸಂಸ್ಕೃತರು. ಕಾವ್ಯಗಳನ್ನು ಓದಲಾರದವರಾದರೂ ರಸವತ್ತಾದ ಕವಿತೆಯನ್ನು ರಚಿಸಬಲ್ಲವರು. ಸಭೆಗಳಲ್ಲಿ ಭಾಷಣ ಮಾಡದವರಾದರೂ ಸಂಭಾಷಣಚತುರೆಯರು. ಇದೇನೂ ಅತಿಶಯೋಕ್ತಿಯಲ್ಲ ; ಸಹಜೋಕ್ತಿ.

'ಶೋಭಾನೆ' ಎಂಬುದು 'ಶೋಭನ' ಶಬ್ದದಿಂದ ಬಂದದ್ದು. ಮಂಗಳಕಾರ್ಯದಲ್ಲಿ ಹೇಳುವ ಹಾಡುಗಳಿವು. ರಾಮಾಯಣ, ಮಹಾಭಾರತ ಮತ್ತು ಪುರಾಣಕಥೆಗಳನ್ನು ಬಲ್ಲ ಸ್ತ್ರೀಯರು ರಚಿಸಿದ ಕವಿತೆಗಳಿವು. ಈ ಕವಯಿತ್ರಿಗಳಲ್ಲಿ ಬಹು ಮಂದಿಗೆ ಕನ್ನಡ ಲಿಪಿಯೂ ಬರುತ್ತಿರಲಿಲ್ಲ. ಮನಸ್ಸಿನಲ್ಲಿಯೇ ಗುಣಿಸಿ ರಚಿಸಿ ಹಾಡುತ್ತ ಬಂದ 'ಶ್ರುತಿ'ಗಳಿವು. 'ಹಾಡು ಕಟ್ಟುವುದು' ಎಂಬುದು ಅವರ ವ್ಯಾವಹಾರಿಕ ಶಬ್ದ. ಬರೆದು ಅಳಿಸಿದ ಕಾಗುಣಿತ ಇದರಲ್ಲಿಲ್ಲ. ಲಿಪಿ 'ತಿರುಗಿನೋಡದ ಬಿರುದು' ಇವರದೇ ; ಇವು ಲಿಪಿರೂಪವನ್ನು ಕಂಡದ್ದು ಈಗಲೇ. ಈ ಪದ್ಯಗಳಲ್ಲಿ ಗೇಯತೆಯನ್ನೂ ಮುಗ್ಧಮನೋಹರ ಪದಗಳ ಜೋಡಣೆಯನ್ನೂ ಅಷ್ಟೇ ಕಾವ್ಯರಸಿಕತೆಯನ್ನೂ ಕಾಣಬಹುದು. ಸ್ಫೂರ್ತಿಯಿಂದ ಹೊಮ್ಮಿರುವ ಈ ಹಾಡುಗಳಲ್ಲಿ ಆಲಂಕಾರಿಕರಿಗೆ ಸಮ್ಮತವಾದ ರಸ, ಭಾವ, ಅಲಂಕಾರಗಳಿಗೆ ಕೊರತೆ ಇಲ್ಲ. ಬಹಳಷ್ಟು ಹಾಡುಗಳಲ್ಲಿ ಪ್ರಾಸಬದ್ಧತೆ ಇದೆ. ಪದಮಾಧುರ್ಯ ಎದ್ದು ಕಾಣುವಂತಹದು. ವಿವಾಹಾದಿ ಸಂಸ್ಕಾರಗಳಲ್ಲಿಯೂ ಹಬ್ಬದ ದಿನಗಳಲ್ಲಿಯೂ ಹಾಡುತ್ತಿದ್ದ ಈ ಕವನಗಳಲ್ಲಿ ಶಾಸ್ತ್ರೀಯ ಧಾರ್ಮಿಕ ವಿಧಿಗಳ ಛಾಯೆ ಅನುಸ್ಯೂತವಾಗಿ ಹರಿಯುತ್ತಿದೆಯೆಂಬುದು ಗಮನಾರ್ಹವಾದದ್ದು. ಈ ಶೋಭಾನೆಗಳ ಸಂಗ್ರಹ ಹವ್ಯಕರಲ್ಲಿ ಮನೆದುಂಬಿದ ಕನ್ನಡ ಸಂಸ್ಕೃತಿಯ ಪ್ರತಿನಿಧಿ.

ನನ್ನ ಮಾನ್ಯಮಿತ್ರರಾದ ವಿದ್ವಾನ್ ಟಿ. ಕೇಶವ ಭಟ್ಟ, ಎಂ.ಎ. ಅವರು ಈ ಶೋಭಾನೆಗಳನ್ನು ಸಂಗ್ರಹಿಸಿ ಪ್ರಕಟಿಸುತ್ತಿರುವುದು ಹವ್ಯಕರಿಗೆ ಮಾತ್ರವಲ್ಲ, ಎಲ್ಲ

ಕನ್ನಡಿಗರಿಗೂ ಹೆಮ್ಮೆಯ ಸಂಗತಿ. ಹಳ್ಳಿ ಹಳ್ಳಿಗಳಲ್ಲಿ ಸುತ್ತಾಡಿ, ಕಿವಿಯಾರೆ ಕೇಳಿ, ಈ ಹಾಡುಗಳನ್ನು ಸಂಗ್ರಹಿಸಿದ್ದಾರೆ. ಇವನ್ನು ಸ್ಮೃತಿಶಕ್ತಿಯಿಂದಲೇ ಹೇಳಬಲ್ಲ ಹವ್ಯಕಸ್ತ್ರೀಯರು ಈಗಲೂ ಕಾಣಸಿಗುತ್ತಿರುವುದು ಸಂತೋಷದ ವಿಷಯ. ಆಧುನಿಕ ನಾಗರಿಕತೆಯ ಪ್ರವಾಹ ಇಂದು ಹಳ್ಳಿಗೆ ನುಗ್ಗುತ್ತಿರುವುದರಿಂದ ಈ ಮನೋಹರವಾದ ಸಾಹಿತ್ಯ ಹಳ್ಳಿಗಳಿಂದ ಕೊಚ್ಚಿಹೋದರೆ ಅಚ್ಚರಿಯಿಲ್ಲ. ಸಂಪಾದಕರ ಅಸಾಧಾರಣ ಪರಿಶ್ರಮದಿಂದ ಇಷ್ಟಾದರೂ ನಮಗೆ ದಕ್ಕಿದಂತಾಗಿದೆ. ಸಂಪಾದಕರಾದ ವಿದ್ವಾನ್ ಟಿ. ಕೇಶವ ಭಟ್ಟರಿಗೆ ಹೃದಯಪೂರ್ವಕವಾದ ಕೃತಜ್ಞತೆಯೂ ಅಭಿನಂದನೆಗಳೂ ಸಲ್ಲುತ್ತವೆ.

o—O—o

**ಡಾ|| ಜಿ. ಎಸ್. ಶಿವರುದ್ರಪ್ಪ,** ಎಂ.ಎ., ಪಿ.ಎಚ್.ಡಿ.
ನಿವೃತ್ತ ಕನ್ನಡ ಪ್ರಾಧ್ಯಾಪಕರು-ನಿರ್ದೇಶಕರು,
ಕನ್ನಡ ಅಧ್ಯಯನ ಕೇಂದ್ರ, ಜ್ಞಾನ ಭಾರತಿ,
ಬೆಂಗಳೂರು ವಿಶ್ವವಿದ್ಯಾಲಯ.

ಪ್ರೊ. ಟಿ. ಕೇಶವ ಭಟ್ಟರು ಸಂಪಾದಿಸಿ ಪ್ರಕಟಿಸಿರುವ 'ಹವ್ಯಕರ ಶೋಭಾನೆಗಳು' ಎಂಬ ಈ ದೊಡ್ಡ ಸಂಪುಟವು, ಶ್ರೀ ಕೇಶವ ಭಟ್ಟರ ಶ್ರದ್ಧೆ, ಉತ್ಸಾಹ, ಶ್ರಮ ಹಾಗೂ ವಿದ್ವತ್ತುಗಳ ಒಂದು ಪ್ರತೀಕವಾಗಿದೆ. ಕರ್ನಾಟಕದಲ್ಲಿ ನೆಲಸಿರುವ ಹವ್ಯಕ ಜನಾಂಗದ ಮದುವೆಯಂಥ ಶುಭಕಾರ್ಯಗಳ ಸುತ್ತಮುತ್ತಣ ವಿಧಿ ಹಾಗೂ ಆಚರಣೆಗಳ ಸಂದರ್ಭದಲ್ಲಿ, ಬಹುಕಾಲದಿಂದಲೂ ಪ್ರಚಲಿತವಾಗಿರುವ ಈ ಹಾಡುಗಳನ್ನು ಕೇಶವ ಭಟ್ಟರು ಹಲವು ವರ್ಷಗಳ ಅವಧಿಯಲ್ಲಿ ಸಂಪಾದಿಸಿ, ವಿದ್ವತ್‌ಪೂರ್ಣವಾದ ಪರಾಮರ್ಶೆಯೊಂದಿಗೆ ಪ್ರಕಟಿಸಿ, ಹವ್ಯಕ ಜನಾಂಗದ ಸಾಂಸ್ಕೃತಿಕ ಅಧ್ಯಯನಕ್ಕೆ ಮೌಲಿಕವಾದ ಪೂರಕಸಾಮಗ್ರಿಯನ್ನು ಒದಗಿಸಿದ್ದಾರೆ.

ಈ ಹಾಡುಗಳಲ್ಲಿ ಅಭಿವ್ಯಕ್ತವಾಗಿರುವ ದಾಂಪತ್ಯದ ಕಲ್ಪನೆ, ರಾಮ-ಸೀತೆ, ಶಿವ-ಪಾರ್ವತಿ, ಕೃಷ್ಣ-ರುಕ್ಮಿಣಿ, ರತಿ-ಮನ್ಮಥ ಇತ್ಯಾದಿ ದಿವ್ಯದಂಪತಿಗಳ ನೆನಕೆಯಿಂದ ಹಾಗೂ ಕಥನದಿಂದ ಏಕಕಾಲಕ್ಕೆ ದೈವಿಕವೂ ಮಾನುಷಿಕವೂ ಆದ ನೆಲೆಯೊಂದನ್ನು ನಿರ್ಮಿಸುತ್ತದೆ. ಈ ಹಾಡುಗಳ ಜಗತ್ತು, ಇಂದಿನ ನಾಗರಿಕತೆಯ ರುಚಿ-ಅಭಿರುಚಿ ಮತ್ತಿತರ ಕಾರಣಗಳಿಂದಾಗಿ, ಕೊಚ್ಚಿಕೊಂಡು ಹೋಗುತ್ತಿರುವ ಸಂದರ್ಭದಲ್ಲಿ, ಶ್ರೀ ಕೇಶವ ಭಟ್ಟರು ಲಿಖಿತರೂಪದಲ್ಲಿ ಹೀಗೆ ಅದನ್ನು ಹಿಡಿದಿರಿಸಿರುವ ಈ ಪ್ರಯತ್ನ ಖಂಡಿತವಾಗಿಯೂ ಅಭಿನಂದನೀಯ.

o—O—o

ಡಾ|| ಸೂರ್ಯನಾಥ ಕಾಮತ್, ಎಂ.ಎ., ಪಿ.ಎಚ್.ಡಿ.
ಇತಿಹಾಸ ಪ್ರಾಧ್ಯಾಪಕರು, ಖ್ಯಾತ ಸಂಶೋಧಕರು.
ಪ್ರಧಾನ ಸಂಪಾದಕರು : ಕರ್ನಾಟಕ ಗಜೆಟಿಯರ್.
ಗೌರವ ಸಂಪಾದಕರು : ಮಿಥಿಕ್ ಸೊಸೈಟಿ ಜರ್ನಲ್.

# ಧಾರ್ಮಿಕ ವಿಧಿಗಳಿಗೆ ಸಾರ್ಥಕತೆ ನೀಡಿದ ಸಂಗ್ರಹ

ಗೆಳೆಯರಾದ ಶ್ರೀ ಟಿ. ಕೇಶವ ಭಟ್ಟರು ಸದಾ ಅಧ್ಯಯನ ಪ್ರವೃತ್ತರು. ಅವರು ಕಾಲೇಜು ಅಧ್ಯಾಪಕರಾಗಿದ್ದಾಗ ಕೆಲಕಾಲ ನಾನು ಅವರ ಸಹೋದ್ಯೋಗಿಯಾಗಿದ್ದೆ. ಆಗಲೂ ಅವರು ಅಧ್ಯಾಪನದ ಜೊತೆ ಅಧ್ಯಯನವನ್ನು ನಡೆಸಿಕೊಂಡು ಬಂದವರು. ಶುಭಕಾರ್ಯಗಳ ಗಾನಗಳಾದ ಶೋಭಾನೆಗಳ ಅವರ ಈ ಸಂಗ್ರಹ ಹವ್ಯಕರಿಗೆ ಸಂಬಂಧಿಸಿ ಆದುದಾದರೂ ಕನ್ನಡ ಬಲ್ಲವರಿಗೆ ಪ್ರಿಯವಾಗಬಲ್ಲುದು. ಇವುಗಳಲ್ಲಿ ಕೆಲವಾದರೂ ಹಾಡುಗಳು ಹವ್ಯಕೇತರರಲ್ಲೂ ಜನಪ್ರಿಯವಾಗಿದ್ದು, ಬಹುಶಃ ಹವ್ಯಕ ಮೂಲದ್ದಲ್ಲದವುಗಳೂ ಇರಬಹುದು. ಆದರೆ, ಕೆಲವೊಂದು ಹಾಡುಗಳು ಹಿಂದೆ ಮುದ್ರಿತವಾಗಿ ಇತರರಿಂದಲೂ ಹಾಡಲ್ಪಡುವುದು ಸಾಧ್ಯವಾಗಿ ಅಂಥ ಭಾವನೆ ಬರಲು ಅವಕಾಶವಿದೆಯೆಂಬ ವಿವರಣೆಯನ್ನು ಈ ಬಗ್ಗೆ ನೀಡಲು ಸಾಧ್ಯವಿದೆ. ಇಲ್ಲಿನ ಬಹುಪಾಲು ಹಾಡುಗಳು ಹವ್ಯಕಮೂಲದವುಗಳೇ. ಅವುಗಳ ಸಂಗ್ರಹಕ್ಕಾಗಿ ಅವರು ವ್ಯಾಪಕ ಕ್ಷೇತ್ರಕಾರ್ಯ, ವೈಜ್ಞಾನಿಕ ವಿಧಾನದಿಂದ ಅವನ್ನು ಸಂಪಾದಿಸುವ ಪರಿಶ್ರಮದ ಕೆಲಸ ಕೈಕೊಂಡು ನಮ್ಮ ಅಭಿನಂದನೆಗೆ ಪಾತ್ರರಾಗಿದ್ದಾರೆ.

ಬಾಯಿಂದ ಹಾಡುವ ಜಾನಪದ ಹಾಡುಗಳನ್ನು ಬರೆದಿಡುವುದು ರೂಢಿಯಲ್ಲಿಲ್ಲದಿರುವಾಗ ಮೂಲ ಪಾಠಗಳು ಬದಲಾಗಿ ಅನೇಕ ವೇಳೆ ಅಪಾರ್ಥದ ಇಲ್ಲವೇ ಅರ್ಥವೇ ಇಲ್ಲದ ಸಾಲುಗಳು ಅಥವಾ ಶಬ್ದಪುಂಜಗಳು ಅವುಗಳಲ್ಲಿ ನುಸುಳುವುದುಂಟು. ಸಾಮಾನ್ಯವಾಗಿ, ಬಹುಮಟ್ಟಿಗೆ ವಿದ್ಯಾವಂತರಾದ ಹವ್ಯಕರಲ್ಲಿ ಇಂಥ ಸಂಗತಿ ಆಗಿರಲಿಕ್ಕಿಲ್ಲವೆಂದು ನನ್ನ ಊಹೆಯಾಗಿತ್ತು. ಆದರೆ ಶ್ರೀ ಕೇಶವ ಭಟ್ಟರ ಅನುಭವವೇ ಬೇರೆ ! ಪಾಠನಿರ್ಣಯ ಅವರು ತಿಳಿದಷ್ಟು ಸುಲಭವಾಗಲಿಲ್ಲ. 'ಹಸ್ತಿವದನ' 'ಸ್ವಸ್ತಿವದನ' ಆದುದು, 'ಹಸ್ತಿಗಮನೆ' 'ಹೊಸ್ತಿವದನೆ' ಆದುದು, ಅದಕ್ಕೂ ಹೆಚ್ಚಾಗಿ 'ಅತ್ತಿ ಇತ್ತಿ ಶಮಿ ಕುಶ ಉತ್ತರಣೆ ಪಾಲಾಶ' ಎಂಬ ಧಾರ್ಮಿಕ ಕಾರ್ಯಗಳಿಗೆ ಬೇಕಾದ ವನಸ್ಪತಿಗಳ ಹೆಸರು ಮರೆಯಾಗಿ 'ಅತಿಥಿ ಶ್ರೀ ಕಾಶ್ಯಪ ಉತ್ತಮ ಫಲ ಸಹ' ಎಂಬ ವಿಕೃತ ಪಾಠ ಬಂದುದು ಅವರು ಎದುರಿಸಬೇಕಾಗಿ ಬಂದ ಸವಾಲಿನ ಕೆಲಸ ಹಾಗೂ ಆ ಸವಾಲನ್ನು ಅವರು ಯಶಸ್ವಿಯಾಗಿ ಎದುರಿಸಿದ್ದಕ್ಕೆ ಉದಾಹರಣೆಗಳು.

'ಹವ್ಯಕ' ಎಂಬ ಪದಮೂಲದ ಬಗ್ಗೆ ಅವರು ದೀರ್ಘ ಚರ್ಚೆ ಮಾಡಿದ್ದಾರೆ. 'ಹೈವೆ' 'ಹೈಗ' ಎಂಬುದು ಒಂದು ಪ್ರದೇಶವಾಚಕ ಶಬ್ದ. 'ಕೋಟ' ಎಂಬ ಊರ ಮೂಲದ ಕೋಟ ಬ್ರಾಹ್ಮಣರು, ಶಿವಳ್ಳಿ ಮೂಲದ ಶಿವಳ್ಳಿ ಬ್ರಾಹ್ಮಣರು ಇದ್ದಂತೆ,

'ಹೈಗ' ಪ್ರದೇಶಕ್ಕೆ ಸೇರಿದ ಬ್ರಾಹ್ಮಣರು ಹೈಗರು ಅಥವಾ ಹವ್ಯಕರು. ಕೋಟ, ಶಿವಳ್ಳಿಗಳು ಸ್ಥಳಗಳಾದರೆ, ಹೈಗ ಎಂಬುದೂ ಒಂದು ಪ್ರದೇಶ. ಕರಾಡೆ ಬ್ರಾಹ್ಮಣರು, ಕೊಂಕಣಸ್ಥ ಬ್ರಾಹ್ಮಣರು (ಚಿತ್ಪಾವನರು), ಕೊಂಕಣ (ಸಾರಸ್ವತ) ಬ್ರಾಹ್ಮಣರು ಎಂಬಲ್ಲಿ ಕೂಡ ಸ್ಥಳ ಅಥವಾ ಪ್ರದೇಶ ವಾಚಕ ಪೂರ್ವಪದಗಳಿವೆ. ಉತ್ತರ ಕನ್ನಡ ಹಾಗೂ ಶಿವಮೊಗ್ಗ ಜಿಲ್ಲೆಯ ಕೆಲ ಭಾಗಗಳಿಗೆ 'ಹೈವೆ' ಎನ್ನುತ್ತಿದ್ದರು. ಹೈವೆ, ಹೈಗ ಎಂಬ ಹೆಸರು 'ಹೈಗ' (ಕಲ್‌ಬೋವು ಅಥವಾ ಹಿರೇಬೋಗಿ ; **Hopea Wightiana**) ಎಂಬ ಮರದಿಂದ ಬಂದಿರಬಹುದು. 'ಹೈಗುಂದ' ಎಂಬ ಊರ ಹೆಸರು ಈ ಮರಗಳಿದ್ದ ಗುಡ್ಡ ಎಂಬ ಅರ್ಥದಿಂದ ಬಂದುದು. ಅದಕ್ಕೂ ಹೆಚ್ಚು ಅರ್ಥ ಜಾತಿಯ ಹೆಸರಿನ ಬಗ್ಗೆ ಹೊರಡಿಸಲು ಯುಕ್ತಿ ಸಬೇಕಾಗಿಲ್ಲವೆಂದು ನನ್ನ ಭಾವನೆ. ದಕ್ಷಿಣ ಕನ್ನಡದ ಕೋಟ ಬ್ರಾಹ್ಮಣರ ಮತ್ತು ಹವ್ಯಕರ ಕನ್ನಡ ಭಾಷೆಯಲ್ಲಿ ಸಾಕಷ್ಟು ಸಾಮ್ಯವಿದೆ. ಆದರೆ ಅವುಗಳು ಒಂದೇ ಅಲ್ಲ.

ಹಿಂದೂ ವಿವಾಹಕ್ಕೆ ಸಂಬಂಧಿಸಿದ ವಿವಿಧ ವಿಧಾನಗಳ ಹಿಂದಿರುವ ಮಾನವೀಯ ಕೋಮಲ ಭಾವನೆಗಳ ಹಾಗೂ ಅರ್ಥಗಳ ಮೇಲೆ ವ್ಯಾಪಕವಾಗಿ ಬೆಳಕು ಚೆಲ್ಲುವ ಶೋಭಾನೆಗಳ ಸಂಗ್ರಹ ಇಲ್ಲಿ ಆಗಿದೆ. ವಿವಾಹವೇ ಏಕೆ ? ಇತರ ಷೋಡಶ ಕರ್ಮಗಳ ವಿವರಣೆಯೂ ಇಲ್ಲಿ ಆಗುತ್ತಿದೆ. ವಿವಿಧ ವಿಧಿಗಳೂ ಆಚಾರಗಳೂ ಇಂದಿನ ಯಾಂತ್ರಿಕ ಯುಗದಲ್ಲಿ ಅರ್ಥ ಕಳೆದುಕೊಳ್ಳುವಂತೆ, ಕೆಲವೊಮ್ಮೆ ಹಾಸ್ಯಾಸ್ಪದವೆನಿಸುವಂತೆ ನಡೆಸಲ್ಪಡುತ್ತಿರಲಾಗಿ, ಪುರೋಹಿತರು ಯಾಂತ್ರಿಕವಾಗಿ ಪಠಿಸುವ ಮಂತ್ರಗಳ ಜೊತೆ ಅವು ಯಾಂತ್ರಿಕವಾಗಿ ಸಾಗುತ್ತಿರಲಾಗಿ, ಶೋಭಾನೆ ಹಾಡುಗಳು ಅವುಗಳ ಸಾರ್ಥಕತೆಯನ್ನು ತಿಳಿಸುವಂಥವು. ಇವುಗಳ ಸಂಗ್ರಹ, ಸಂಪಾದನೆ, ಪ್ರಕಟಣೆಗಳ ಕಾರ್ಯವನ್ನು ಹಮ್ಮಿಕೊಂಡು ನಮ್ಮ ಧಾರ್ಮಿಕ ವಿಧಿಗಳಿಗೆ ಆಧುನಿಕ ಯುಗದಲ್ಲಿ ನಿಜವಾದ ಅರ್ಥ ವಿವರಿಸುವ ಮಹತ್ಕಾರ್ಯವನ್ನು ಶ್ರೀ ಕೇಶವ ಭಟ್ಟರು ಮಾಡಿದ್ದಾರೆ. ಮರೆಯಾಗುತ್ತಿದ್ದ ಸಾಹಿತ್ಯನಿಧಿಗೆ ಜೀವದಾನ ನೀಡಿದ್ದಾರೆ. ಹವ್ಯಕರಿಗಷ್ಟೇ ಅಲ್ಲ, ಸಮಗ್ರ ಕನ್ನಡ ಜನತೆಗೆ ಇದರಿಂದ ಮಹದುಪಕಾರವಾಗಿದೆ. ವಿವಾಹದಲ್ಲಿ ಪಾಲ್ಗೊಳ್ಳುವ ವರನು ರಾಮನೋ, ಕೃಷ್ಣನೋ, ಶಿವನೋ ಆಗಿ, ವಧುವು ಸೀತೆಯೋ, ರುಕ್ಮಿಣಿಯೋ, ಪಾರ್ವತಿಯೋ ಆಗಿ ವರ್ಣಿತವಾದಾಗ ವಿಧಿಗೆ ಹೊಸ ಅರ್ಥ, ಜೀವನಕ್ಕೆ ಹೊಸ ದಾರಿ ಸಿಗುವ ಸನ್ನಿವೇಶ ಸೃಷ್ಟಿಯಾಗುತ್ತಿತ್ತು. ಈ ವಿಧಿಗಳು ವಿಧಿಸುವ ಸಂಬಂಧ, ಸಂಸ್ಕಾರ ದೃಢವಾಗುತ್ತಿತ್ತು, ಜೀವನಕ್ಕೆ ಹೆಚ್ಚಿನ ಘನತೆ ಅರ್ಥವಂತಿಕೆ ಬರುವಂತಿತ್ತು. ಈ ಸಂಗ್ರಹ ಓದಿದಾಗ ಓದುಗರ ಮನದಲ್ಲಿ ಈ ಭಾವನೆಗಳು ಮರುಕಳಿಸದೆ ಇರಲಾರವು.

o—O—o

**ಶ್ರೀ ನಿಟ್ಟೂರು ಶ್ರೀನಿವಾಸ ರಾವ್**
ನಿವೃತ್ತ ಮುಖ್ಯ ನ್ಯಾಯಾಧೀಶರು, ಕರ್ನಾಟಕ.
ಗೌ॥ ಕಾರ್ಯದರ್ಶಿ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ,
ಎನ್. ಆರ್ ಕಾಲೊನಿ, ಬೆಂಗಳೂರು-19.

# ಕಾರ್ಯನಿರ್ವಹಣೆಗೆ ಮಾದರಿ

ನಮ್ಮ ನಾಡಿನ ಸಂಸ್ಕೃತಿಯ ಕ್ಷೇತ್ರದಲ್ಲಿ ಜನಪದ ಸಾಹಿತ್ಯಕ್ಕೆ ಬಹು ಪ್ರಮುಖ ವಾದ ಸ್ಥಾನವಿದೆ ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು ಇತ್ತೀಚಿನ ವರ್ಷಗಳಲ್ಲಿ ಈ ಪ್ರಕಾರದ ಹಲವಾರು ಸಂಕಲನಗಳು ಪ್ರಕಟವಾಗಿವೆ. ಇವುಗಳಲ್ಲಿ ನಾಡಿನ ಬೇರೆಬೇರೆ ಭಾಗಗಳು, ಬೇರಬೇರೆ ಪಂಗಡಗಳು ಇತ್ಯಾದಿ ಅಂಶಗಳಿಗನುಸಾರವಾಗಿ ವೈವಿಧ್ಯವಿದೆ. ಹವ್ಯಕ ಸಮಾಜದಲ್ಲಿ ಬೆಳೆದುಬಂದಿರುವ ಶೋಭಾನೆ ಪದಗಳು ಇಂಥ ಸಾಹಿತ್ಯದಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ಪಡೆದಿವೆ. ಅವು ಆ ಸಮಾಜದಲ್ಲಿನ ಧಾರ್ಮಿಕ ಕ್ರಿಯೆಗಳ ಪದ್ಧತಿಯನ್ನು 'ಸುಂದರ ಸುಲಲಿತ ಪದವಾದಯುಕ್ತವಾಗಿ' ಹಾಡುಗಳ ರೂಪದಲ್ಲಿ ಅತ್ಯಂತ ಹೃದಯಂಗಮವಾಗಿ ವರ್ಣಿಸುತ್ತವೆ. ಇವುಗಳನ್ನು ಅತ್ಯಂತ ಶ್ರಮಪಟ್ಟು ಸಂಗ್ರಹಿಸಿ ಕೆಲವನ್ನು ಆರಿಸಿ ವಿಂಗಡಿಸಿ ವಿಶ್ಲೇಷಿಸಿ, ಕ್ರಮಬದ್ಧವಾಗಿ ಸಂಯೋಜಿಸಿ, ಪ್ರೊ. ಟಿ. ಕೇಶವ ಭಟ್ಟರು ಈ ಗ್ರಂಥವನ್ನು ಹೊರತಂದಿದ್ದಾರ. ಈ ಸಂಕಲನದ ಪೂರ್ಣ ಪ್ರಯೋಜನವನ್ನು ದೊರಕಿಸಿಕೊಡಲು ಅತ್ಯಂತ ವಿಚಾರ ಪೂರ್ಣವಾದ ಪ್ರಸ್ತಾವನೆಯನ್ನು ಪ್ರಾರಂಭದಲ್ಲಿಯೂ ಪರಾಮರ್ಶೆಯನ್ನು ಕಡೆ ಯಲ್ಲಿಯೂ ಅನುಬಂಧಸಮೇತ ಒದಗಿಸಿದ್ದಾರ. ಇಂಥ ಗಹನವಾದ ಕಾರ್ಯ ಛಂದಸ್ಸು, ಗಮಕಕಲೆ, ಸಂಗೀತ, ತಾಳ, ಯಕ್ಷಗಾನದ ಧಾಟಿ, ಇತಿಹಾಸ ಪುರಾಣಗಳು, ವೇದ, ಶಾಸ್ತ್ರ, ಸಾಹಿತ್ಯ, ಧಾರ್ಮಿಕ ಕ್ರಿಯೆಗಳು ಹಾಗೂ ಆ ಸಮಾಜದ ರೀತಿ ನೀತಿಗಳು— ಇವುಗಳ ಆಳವಾದ ಅರಿವು ಇದ್ದವರಿಂದಲೇ ಸಾಧ್ಯ. ಇದನ್ನು ಶ್ರೀ ಕೇಶವ ಭಟ್ಟರು ಸಂಪೂರ್ಣ ಯಶಸ್ಸಿನಿಂದ ಸಾಧಿಸಿದ್ದಾರೆ ಒಟ್ಟಾರ, ಈ ಗ್ರಂಥವು ಇಂಥ ಕಾರ್ಯ ನಿರ್ವಹಣೆಗೆ ಮಾದರಿಯಾಗಿದೆ , ಈ ಸಾಹಿತ್ಯ ಪ್ರಕಾರಕ್ಕೆ ಅಮೂಲ್ಯ ಕೊಡುಗೆಯಾಗಿದೆ.

o—O—o

ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್
400, 1ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10.

# ಮೆಚ್ಚಿಕೆಯ ಮಾತು

ಶ್ರೀಮಾನ್ ಟಿ. ಕೇಶವ ಭಟ್ಟರು "ಹವ್ಯಕರ ಸಂಭಾಷಣೆಗಳು" ಎಂಬ ಈ ಬೃಹತ್ ಮತ್ತು ಮಹತ್ ಗ್ರಂಥವನ್ನು ಪ್ರಕಟಿಸಿ, ಈ ಮಾರ್ಗದ ಸಾಹಿತ್ಯ ಪ್ರಕಾರದಲ್ಲಿ ಒಂದು ವಿಕ್ರಮವನ್ನೇ ಸಾಧಿಸಿದ್ದಾರೆ. ಇದು ದೀರ್ಘಕಾಲದ ಇವರ ಪ್ರಾಸಂಗ, ಸಾಹಿತ್ಯಸಂಗ್ರಹಣೆ, ಸಂಶೋಧನೆ, ತೌಲನಿಕ ಅಧ್ಯಯನ, ವಿಮರ್ಶಾವಿಚಕ್ಷಣತೆ, ನಮ್ಮ ಜನರ ಆಚಾರ-ವಿಚಾರ-ಯೋಚನೆಗಳ ದೀರ್ಘಕಾಲದ ಅನುಭವ, ಇವರು ಪಡೆದುಕೊಂಡಿರುವ ಸಂಸ್ಕೃತಿಯ ಫಲ. ಈ ಬಗೆಯ ಗ್ರಂಥಗಳನ್ನು ಹೇಗೆ ಸಂಪಾದನೆ ಮಾಡಬೇಕು—ಎಂಬುದಕ್ಕೆ ಇದು ಒಂದು ಉದಾಹರಣೆ; ಮೇಲ್ಪಂಕ್ತಿಯೂ ಆಗಬಹುದು. ಈಗ ಭಟ್ಟರು ಇಲ್ಲಿ ಪ್ರಕಟಿಸಿರುವುದು ಅವರು ಸಂಗ್ರಹಿಸಿರುವ ಹಾಡುಗಳಲ್ಲಿ ಕಾಲುಭಾಗ ಮಾತ್ರವೆನ್ನುತ್ತಾರೆ. ಈ ಕಾಲುಭಾಗವೇ ಇಷ್ಟು ದೊಡ್ಡ ಗ್ರಂಥವಾಗಿದೆ! ಇನ್ನು ಇವರ ಬಳಿ ಪ್ರಕಟವಾಗದೆ ಮುಕ್ಕಾಲು ಭಾಗ, ಇನ್ನೂ ಸಂಗ್ರಹವಾಗದೆ ಜಾನಪದೀಯರಲ್ಲಿ ಉಳಿದಿರುವ ಬಹುಪಾಲು, ಸಂಗ್ರಹವನ್ನೇ ಕಾಣದೆ ಜಾನಪದರಲ್ಲಿಯೇ ಲುಪ್ತವಾಗಿ ಹೋಗಿರುವ ಹಾಡುಗಳು—ಇವುಗಳನ್ನೆಲ್ಲ ಅಂದಾಜು ಮಾಡಿದರೆ, ಈ ಸಾಹಿತ್ಯದ ಆಳ, ವೈಶಾಲ್ಯ, ಇದನ್ನು ಸೃಷ್ಟಿಸಿದ ಜಾನಪದರ ಜೀವೋತ್ಸಾಹ, ನಮ್ಮ ಜನರಲ್ಲಿ ಅವರಿಗಿರುವ ಪ್ರೇಮ, ಹಾಡುಗಳನ್ನು ಇಲ್ಲಿಯ ವರೆಗೆ ತಂದುಕೊಟ್ಟಿರುವುದು—ಇವೆಲ್ಲ ಪವಾಡವಾಗಿ ಕಾಣುತ್ತದೆ.

ಶ್ರೀಮಾನ್ ಕೇಶವ ಭಟ್ಟರು ಈ ಸಾಹಿತ್ಯವನ್ನು 'ಶಿಷ್ಟಜಾನಪದ'ವೆಂದು ಕರೆಯುತ್ತಾರೆ. ಒಂದು ದೃಷ್ಟಿಯಿಂದ ಇದು ಸರಿ. ಇವುಗಳಲ್ಲಿ ದೇವತಾಸ್ತುತಿ, ಮದುವೆ, ಷೋಡಶ ಕರ್ಮಗಳು, ವ್ರತಗಳು, ಪುರಾಣ ಕಥೆಗಳು, ದಶಾವತಾರದ ಕಥೆಗಳು, ರಾಮಾಯಣ, ಭಾರತ—ಇವುಗಳೆಲ್ಲ ತುಂಬಿವೆ. ಇವುಗಳನ್ನು ರಚಿಸಿದವರು ಹೆಚ್ಚಾಗಿ ಮಹಿಳೆಯರು; ಪುರುಷರ ರಚನೆಗಳೂ ಇವೆ. ಈ ಹಾಡುಗಳಲ್ಲಿರುವ ಸಂಗತಿಗಳೆಲ್ಲ ಹೆಚ್ಚಾಗಿ ಸಂಸ್ಕೃತದಲ್ಲಿರುವುದರಿಂದ ಶಿಷ್ಟ ಮಹಿಳೆಯರು ಅವುಗಳನ್ನೆಲ್ಲ ತಿಳಿಗನ್ನಡದಲ್ಲಿ ಜನಪ್ರಿಯವಾದ ಛಂದಸ್ಸಿನಲ್ಲಿ, ಧಾಟಿಯಲ್ಲಿ ಹೇಳಿ, ಸರ್ವರಿಗೂ ಅರ್ಥವಾಗುವಂತೆ ಮಾಡಿದರು. ಹಾಗೆ ನೋಡಿದರೆ, ಅವರು ಸಂಸ್ಕೃತದಲ್ಲಿರುವ ಎಲ್ಲ ಕಥೆಗಳನ್ನೂ ಮಾಹಾತ್ಮ್ಯಗಳನ್ನೂ ವ್ರತಗಳನ್ನೂ ಕನ್ನಡದಲ್ಲಿ ಹೇಳಿದರು. ಇದರಿಂದ

ಕನ್ನಡ ಮಾತ್ರವೇ ತಿಳಿದಿದ್ದವರಿಗೂ ಸಂಸ್ಕೃತ ಸಾಹಿತ್ಯದ ಎಲ್ಲ ವಿಷಯಗಳು ತಿಳಿಯುವಂತೆ ಆದವು. ಈ ದೃಷ್ಟಿಯಿಂದ ಶಿಷ್ಟಜಾನಪದವೂ ಶುದ್ಧಜಾನಪದರಿಗೆ ಜ್ಞಾನಬೋಧೆ ಮಾಡಿದೆ. ಇದನ್ನು ರಚಿಸಿದವರಾರೂ ಸಂಸ್ಕೃತಜ್ಞರಲ್ಲ. ಆದರೂ ಈ ಸಾಹಿತ್ಯದಲ್ಲಿ ರಸಾನುಭವವಿದೆ. ಕಣ್ಣಿಗೆ ಕಟ್ಟಿದಂತಿರುವ ವರ್ಣನೆ, ಆಕರ್ಷಕವಾದ ಕಥಾನಿರೂಪಣೆ, ಅಪೂರ್ವವಾದ ರೂಪಕಗಳು, ಪ್ರತಿಮೆಗಳು, ಆಳವಾದ ಜೀವನಾನುಭವಗಳಿವೆ. ಇವನ್ನು ಓದುವುದರಿಂದ, ಕೇಳುವುದರಿಂದ ಒಳ್ಳೆಯ ಸಾಹಿತ್ಯಾನುಭವ ಉಂಟಾಗುತ್ತದೆ. ಶಿಷ್ಟರೆನಿಸಿಕೊಳ್ಳುವವರಲ್ಲಿ ಶೇಕಡ ತೊಂಬತ್ತು ಮಹಿಳೆಯರು ಅನಕ್ಷರಸ್ಥರು. ಈಗ ಐವತ್ತು ವರುಷಗಳ ಕೆಳಗೆ ಮೈಸೂರು ಜಿಲ್ಲೆಯ ಮೂವತ್ತು ಮನೆಗಳ ಒಂದು ಹಳ್ಳಿಯಲ್ಲಿ ಒಬ್ಬ ಶಿಷ್ಟಮಹಿಳೆಗೂ ಕನ್ನಡ ಅಕ್ಷರ ಸಹ ತಿಳಿದಿರಲಿಲ್ಲ. ಅವರೆಲ್ಲ ನಿರಕ್ಷರಕುಕ್ಷಿಗಳಾಗಿದ್ದರು. ಆದುದರಿಂದ ಶಿಷ್ಟರು ಎನಿಸಿಕೊಳ್ಳುವವರೆಲ್ಲ ವಿದ್ಯಾವತಿಯರಾಗಿದ್ದರೆಂದು ಹೇಳಲು ಸಾಧ್ಯವಿಲ್ಲ. ಆ ಮಹಿಳೆಯರಿಗೂ ಇತರ ಮಹಿಳೆಯರಿಗೂ ಅಕ್ಷರಜ್ಞಾನ ತಿಳಿವುಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಆದರೆ, ಇವರು ಶಿಷ್ಟಸಾಹಿತ್ಯದಿಂದ ಸಂಗ್ರಹಿಸಿದಷ್ಟನ್ನು ಜಾನಪದ ಭಾಷೆಯಲ್ಲಿಯೇ ಬರೆದಿದ್ದಾರೆ. ಈ ಹಾಡುಗಳು ಪ್ರಾರಂಭದಶೆಯಲ್ಲಿ ಬಾಯಿಂದ ಬಾಯಿಗೆ ಬಂದು ಅನಂತರ ಯಾರೋ ಕರಡು ಕಾಗದದಲ್ಲಿ ಇವನ್ನು ಬರೆದು ಇಟ್ಟುದರಿಂದ ಇಲ್ಲಿಯವರೆಗೆ ಬಂದಿವೆ. ಇಂದಿಗೂ ಗ್ರಾಮಾಂತರದ ಶಿಷ್ಟ ಮಹಿಳೆಯರಲ್ಲಿ ಇವು ಇನ್ನೂ ಕಂಠಸ್ಥವಾಗಿಯೇ ಇವೆ.

ಈ ಹಾಡುಗಳ ಸಂಗ್ರಹಕ್ಕೆ ಕ್ರಮಬದ್ಧವಾಗಿ ವಿಭಾಗೀಕರಣವಿದೆ. ವ್ಯಾಕರಣ ಮತ್ತು ಭಾಷಾ ಮರ್ಯಾದೆಯನ್ನು ಲಕ್ಷಿಸಿ ಭಾಷೆಯ ಅಶುದ್ಧ ಉಚ್ಚಾರಣೆಯಲ್ಲಿ ಬಂದು ಸೇರಿರುವ ತಪ್ಪುಗಳನ್ನು ಭಟ್ಟರು ಸಕಾರಣವಾಗಿ ತಿದ್ದಿ ಸಾಧ್ಯವಾದಷ್ಟು ನೈಜ ಮತ್ತು ಪರಿಶುದ್ಧರೂಪದಲ್ಲಿ ಇವನ್ನು ಪ್ರಕಟಿಸಿದ್ದಾರೆ. ಬಾಯಿಂದಲೇ ಹೇಳಿದುದನ್ನು ಗ್ರಹಿಸಿ ಹಾಗೆಯೇ ಮುದ್ರಣದಲ್ಲಿ ಇಳಿಸುವುದು ಕಷ್ಟ. ಈ ಕಾರ್ಯವನ್ನು ಭಟ್ಟರು ಸಾಧ್ಯವಾದಷ್ಟೂ ಅಚ್ಚುಕಟ್ಟಾಗಿ ಮಾಡಿದ್ದಾರೆ.

ಸಂಪಾದನ ಕಾರ್ಯದಲ್ಲಿ ಎದುರಾಗುವ ತೊಂದರೆಗಳು, ಸಮಸ್ಯೆಗಳು ಅವೆಷ್ಟೋ ! ವಿವಿಧ ಪದಪ್ರಯೋಗಗಳಲ್ಲಿ ಸೂಕ್ತವಾದುದನ್ನು ಆರಿಸುವುದು, ಸಂದೇಹ ಬಂದ ಕಡೆ ಅದನ್ನು ನಿವಾರಿಸುವುದು, ಸೂಕ್ತವಾದ ವಿವರಣೆ—ಇವನ್ನಿಲ್ಲಿ ಮಾಡಲಾಗಿದೆ. ಅತ್ಯವಶ್ಯವೆನಿಸುವ ಕಡೆ ಕೊಟ್ಟಿರುವ ವಿವರಣೆಗಳು ಪ್ರಯೋಜನಕರವಾಗಿವೆ. ಈ ಎಲ್ಲ ಅಂಶಗಳಿಂದ ಈ ಬಗೆಯ ಕಾರ್ಯ ಮಾಡುವವರಿಗೆ ಇದೊಂದು ಆದರ್ಶಗ್ರಂಥವಾಗಿದೆ. ಪರಾಮರ್ಶೆಯ ಭಾಗವಂತೂ ಮೇಲು ಮಟ್ಟದ ಸಂಶೋಧನೆಗಳಿಂದ ಕೂಡಿ, ಬೇರೆ ಬೇರೆ ಹೊಸ ಹೊಸ ಬೆಳಕನ್ನು ಕಾಣಿಸುತ್ತಿದೆ. 'ಕೆಲವು ಅನುಕ್ತ

ವಿವರಣೆಗಳು' ಎಂಬಲ್ಲಿ ಮತ್ತು 'ಪರಾಮರ್ಶೆ'ಗಳಲ್ಲಿ ತಿಳಿದವರೆನಿಸಿದವರು ಕೂಡ, ತಿಳಿಯಕೊಳ್ಳಬೇಕಾದ ಹಲವು ಅಂಶಗಳಿವೆ. ಅನುಬಂಧಗಳೂ ಅಷ್ಟೇ ಉಪಯುಕ್ತವಾಗಿವೆ. ಇಂಥ ಬೃಹತ್ಕಾರ್ಯವನ್ನು ಕನ್ನಡಿಗರಿಗಾಗಿ ಮಾಡಿಕೊಟ್ಟದ್ದಕ್ಕೆ ನಾನು ಇವರನ್ನು ಅಭಿನಂದಿಸುತ್ತೇನೆ. ಇವರ ಶ್ರಮವು ಸಾರ್ಥಕವಾಗುವಂತೆ, ಇವರಿಗೆ ಜನತೆಯಿಂದಲೂ ಸರ್ಕಾರದಿಂದಲೂ ಪ್ರೋತ್ಸಾಹವೂ ಸಹಕಾರವೂ ದೊರಕಲಿ! ಎಂದು ಹಾರೈಸುತ್ತೇನೆ.

o—O—o

## ಗ್ರಂಥಪ್ರಕಟನೆಗೆ ಧನ ಸಹಾಯಕರು

### ದಾತರು

1 ಶ್ರೀ ವೀರೇಂದ್ರ ಹೆಗ್ಗಡೆಯವರು
ಧರ್ಮಾಧಿಕಾರಿಗಳು, ಧರ್ಮಸ್ಥಳ, ದಕ್ಷಿಣ ಕನ್ನಡ ಜಿಲ್ಲೆ.

2 ಶ್ರೀ ಕೂಡೂರು ಕೃಷ್ಣಭಟ್ಟರು
'ಶ್ರೀವರ ನಿಲಯ' ಕೂಡೂರು.
ಅಂಚೆ : ವಿಟ್ಲ, ದಕ್ಷಿಣ ಕನ್ನಡ ಜಿಲ್ಲೆ.

3 ಶ್ರೀ ನೂಜಿಬೈಲು ಕೃಷ್ಣ ಭಟ್ಟರು
1689, 15ನೆಯ ಮುಖ್ಯರಸ್ತೆ
ಬನಶಂಕರಿ ಎರಡನೆಯ ಹಂತ, ಬೆಂಗಳೂರು–560 070.

### 20 ಪ್ರತಿಗಳಿಗೆ ಪ್ರಕಟನಪೂರ್ವದ ಬೆಲೆ ಸಲ್ಲಿಸಿದವರು

ಶ್ರೀ ಅಖಿಲ ಹವ್ಯಕ ಮಹಾಸಭಾ (ರಿ.) ಬೆಂಗಳೂರು.
101/ಎ, 11ನೆಯ ಅಡ್ಡರಸ್ತೆ, 8ನೇ ಮುಖ್ಯರಸ್ತೆ,
ಮಲ್ಲೇಶ್ವರಂ, ಬೆಂಗಳೂರು–560 003.

# ಪ್ರಸ್ತಾವನೆ

## ಕಾರ್ಯಪ್ರೇರಣೆ

ಅಧ್ಯಯನ, ಅಧ್ಯಾಪನ, ಸಾಹಿತ್ಯ ರಚನೆ—ಎಂಬಿವು ಈ ಲೇಖಕನ ಜೀವನಾನುಬಂಧಿಯಾದ ಪುರುಷಾರ್ಥ ತ್ರಿವರ್ಗ. ಇವುಗಳಲ್ಲಿ ಅಧ್ಯಯನವೆಂಬುದು ಯಾರಿಗೇ ಆದರೂ ಅರಿವಿನ ಮೇರೆಯನ್ನು ವಿಸ್ತರಿಸುವುದು, ಮನೋಬುದ್ಧಿಗಳನ್ನು ಪಕ್ವಗೊಳಿಸುವುದು, ಆತ್ಮೋದ್ಧಾರಕವಾಗುವುದು. ಆದುದರಿಂದಲೇ 'ಸ್ವಾಧ್ಯಾಯದಿಂದ ವಿಮುಖನಾಗಬಾರದು' ಎಂಬುದು ಸ್ನಾತಕನಿಗೆ ಕೊನೆಯ ಗುರೂಪದೇಶವಾಗಿ ಪ್ರಸಿದ್ಧವಾಗಿದೆ. ಅಧ್ಯಯನವೇ ಧರ್ಮ. ಧಾರಣೆಯೆ ಧರ್ಮಗುಣವಷ್ಟೆ? ಅದು ಎಂದಿಗೂ ಬಿಡಬಾರದು, ಉಪಾದೇಯವಾದುದು. ಅಧ್ಯಾಪನವೆಂಬುದು ಜೀವನ ನಿರ್ವಹಣೆಗೂ ಆತ್ಮಸಂತೋಷಕ್ಕೂ ಸಾಧನವಾದ ಜೀವನ ವೃತ್ತಿ; ಪುರುಷಾರ್ಥ ತ್ರಿವರ್ಗದಲ್ಲಿ ಎರಡನೆಯದಾದ ಅರ್ಥಸಾಧನೆಗೆ ಇದೇ ಆಧಾರ. ಈ ಅಧ್ಯಯನ, ಅಧ್ಯಾಪನ (ಧರ್ಮ, ಅರ್ಥ) ಎಂಬೆರಡನ್ನು ದೃಢವಾಗಿಟ್ಟುಕೊಂಡೇ ಮೂರನೆಯದಾದ ಸಾಹಿತ್ಯ ರಚನೆ ಈ ಲೇಖಕನಿಂದ ನಡೆದುಬಂದಿದೆ. ಪುರುಷಾರ್ಥಗಳಲ್ಲಿ ಮೂರನೆಯದು 'ಕಾಮ'. 'ಕಾಮ' ಎಂದರೆ, ಕೇವಲ ಐಂದ್ರಿಯಕ ವಿಷಯಲೋಲುಪ್ತಿ ಎಂದರಿಯುವುದು ಅದರ ವಿಕೃತಾರ್ಥ. ಒಳ್ಳಿತನ್ನು ಸಾಧಿಸುವ ಉತ್ಕಟೇಚ್ಛೆಯೇ ಕಾಮವೆಂದರಿಯಬೇಕು. ಈ ಲೇಖಕನಲ್ಲಿ ಅದು ನಾನಾಮುಖವಾಗಿದ್ದರೂ ಸಾಹಿತ್ಯಸೇವೆ ಅವುಗಳಲ್ಲಿ ಮುಖ್ಯವಾಗಿದ್ದಿತು. ಆದರೆ, ಈ ಅಧ್ಯಯನ, ಅಧ್ಯಾಪನ, ಸಾಹಿತ್ಯ ರಚನೆ—ಎಂಬ ತ್ರಿವರ್ಗ ಎಷ್ಟುಕಾಲ ಒಟ್ಟಿಗೆ ಕೂಡಿಬಂದಾವು? ಯಾರಿಗಾದರೂ ಉದ್ಯೋಗದಿಂದ ನಿವೃತ್ತಿ ಇದೆಯಲ್ಲವೆ?

ಎಷ್ಟೋ ಮಂದಿಯ ಜೀವನದಲ್ಲಿ ಎರಡನೆಯ ಪುರುಷಾರ್ಥ—ಅಂದರೆ, ಅರ್ಥಸಾಧನೆಯ ಉದ್ಯೋಗ ದೊರೆತೊಡನೆ, 'ಅಧ್ಯಯನ' ಎಂಬ ಧರ್ಮನಿಷ್ಠೆಯ ಪುರುಷಾರ್ಥ ವಿರಾಮಗೊಳ್ಳುತ್ತದೆ. ಹಿಂದೆ ಹೇಳಿದ ವಿಕೃತಾರ್ಥದ ಕಾಮವೇ ಪ್ರಭಾವಗೊಳ್ಳುತ್ತದೆ. ಸಾಹಿತ್ಯಸೇವೆ, ಲೋಕಸೇವೆ ಮುಂತಾದ ಯಾವುದೂ ತಲೆದೋರಿಸುವುದಿಲ್ಲ. ಪ್ರಸ್ತುತ ಲೇಖಕನ ಜೀವನ ಹಾಗೆ ಆಗದಿದ್ದುದೊಂದು ಪೂರ್ವಪುಣ್ಯ ವಿಶೇಷ! ಹೀಗಿದ್ದರೂ ಇಂತಹ ಲೇಖಕನೊಬ್ಬನು ಅಧ್ಯಾಪಕವೃತ್ತಿಯಿಂದ ನಿವೃತ್ತನಾದಾಗ ಮಾಡತಕ್ಕುದೇನು? ಅಧ್ಯಯನವೆಂಬ ಜೀವನಧರ್ಮವನ್ನು ದೃಢವಿಡಿದು, ಸಾಹಿತ್ಯರಚನೆಯನ್ನು ಮುಂದುವರಿಸುವುದು ತಾನೆ? ಇದೇ ಪ್ರಕೃತ

ಲೇಖಕನ ಗತಿವಿಧಿಯಾಯಿತು. ಇಂತಹ ಸಾಹಿತ್ಯಪಥ ಈ ದಿಶೆಯಲ್ಲಿಯೇ ಮುಂಬರಿಯಲು ನಿಶ್ಚಿತವಾದುದಕ್ಕೆ ಹಿನ್ನೆಲೆಯೂ ಇದೆ.

ಅಧ್ಯಾಪನದೊಂದಿಗೆ ಜ್ಞಾನಪಿಪಾಸೆ ಹೆಚ್ಚಿದಂತೆಲ್ಲ ಈ ಲೇಖಕನು ಅಧ್ಯಯನವನ್ನು ಮುಂದುವರಿಸಿ, 1956ರಲ್ಲಿ ಮದ್ರಾಸ್ ವಿಶ್ವವಿದ್ಯಾಲಯದ ಬಿ.ಓ.ಎಲ್. ಪದವೀಧರನಾದ. ಮುಂದಿನ ಅಧ್ಯಯನ ರೂಪವಾಗಿ ಕರ್ನಾಟಕ ವಿಶ್ವವಿದ್ಯಾನಿಲಯದ ಪಿಎಚ್.ಡಿ. ಪದವಿಯನ್ನು ಗುರಿಯಿಟ್ಟು ಒಂದು ಮಹಾಪ್ರಬಂಧವನ್ನು ಬರೆಯಲು ಯೋಚಿಸಿದ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರಚುರವಿದ್ದ ನಿಬಂಧನೆಯಂತೆ ಪಿಎಚ್.ಡಿ. ಮಾಡಿಕೊಳ್ಳಲು ಪದವೀಧರ ಅಭ್ಯರ್ಥಿಗೆ ಆಗ ಅವಕಾಶವಿದ್ದಿತು; ಸ್ನಾತಕೋತ್ತರ ಪದವಿ ಆಗಿರಲೇಬೇಕೆಂಬ ಕಡ್ಡಾಯವಿರಲಿಲ್ಲ. ಆದುದರಿಂದ ಪಿಎಚ್.ಡಿ. ವಿದ್ಯಾರ್ಥಿಯಾಗುವ ವಿಷಯದಲ್ಲಿ ಈ ಲೇಖಕನು ವಿಶ್ವವಿದ್ಯಾಲಯದೊಡನೆ ಪತ್ರವ್ಯವಹಾರ ನಡೆಸುತ್ತಿದ್ದ. ಆದರೆ, ಅನುಭವಿಗಳು ತಿಳಿಸಿದಂತೆ, ತಾನು ಎಂ.ಎ. ಪದವಿ ಪಡೆದ ಮೇಲೆಯೆ ಪಿಎಚ್.ಡಿ.ಯ ಕಾರ್ಯಕ್ರಮ ಕೈಗೊಳ್ಳಲು ನಿರ್ಧರಿಸಿದ. 1958ರಲ್ಲಿ ಎಂ.ಎ. ಪದವಿ ಪ್ರಾಪ್ತವಾಯಿತು. ಅನಂತರ ಪರಿಣತ ಪ್ರಾಧ್ಯಾಪಕರ ಮಾರ್ಗದರ್ಶನದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪಿಎಚ್.ಡಿ.ಗೆ ಪ್ರಬಂಧ ಬರೆಯಲು ಉದ್ಯುಕ್ತನಾದ. 'ದಕ್ಷಿಣ ಕನ್ನಡ ಜಿಲ್ಲೆಯ ಜನಪದಗೀತಗಳು' ಎಂಬ ವಿಷಯದಲ್ಲಿ ಸಾಕಷ್ಟು ಕ್ಷೇತ್ರಕಾರ್ಯ ನಡೆಸಿ, ಹಾಡುಗಳನ್ನು ಕಲೆಹಾಕಿ, ಐದಾರು ವರ್ಷಗಳ ಶ್ರಮದಿಂದ ಮಹಾಪ್ರಬಂಧವನ್ನು ಸಿದ್ಧಪಡಿಸಲಾಯಿತು. ಅದರ ಕೊನೆಯ ಮಟ್ಟದಲ್ಲಿ ವಿಘ್ನಪ್ರಾಬಲ್ಯದಿಂದ, ಆ ಪ್ರಬಂಧವು ಪಿಎಚ್.ಡಿ. ಪ್ರಾಪ್ತಿಗೆ ತಲಪದಾಯಿತು. ಅಂತಹದೊಂದು ವಿಘ್ನವನ್ನು ಪರಿಹರಿಸಿ ಪ್ರಬಂಧ ಮಂಡನೆ ಮಾಡುವ ಸಾಮರ್ಥ್ಯ ಈ ಲೇಖಕನಲ್ಲಿ ಆಗ ಇದ್ದಿತಾದರೂ ಆ ಪಿಎಚ್.ಡಿ. ಪ್ರಾಪ್ತಿ ವಿಷಯದಲ್ಲಿ ಅನಾಸಕ್ತಿ ಉಂಟಾದುದರಿಂದ ಆ ಗ್ರಂಥವನ್ನು ಮತ್ತೆ ಆ ಪದವಿ ಪ್ರಾಪ್ತಿಗಾಗಿ ಮಂಡಿಸಲಿಲ್ಲ. ಆದರೆ, 'ಸೋಲವೇ ಗೆಲುವಿನ ಮೆಟ್ಟಿಲು' ಎಂಬಂತೆ ಆ ಜಾನಪದ ಗ್ರಂಥಕ್ಕಾಗಿ ಮಾಡಿದ್ದ ವಿಸ್ತೃತ ಕ್ಷೇತ್ರಕಾರ್ಯದಿಂದ ಹಾಗೂ ಲೇಖನಾಭ್ಯಾಸದಿಂದ ಈ ದಿಶೆಯಲ್ಲಿ ಇನ್ನಷ್ಟು ಅನುಭವ ಕುದುರಿತೆನ್ನಲು ಅಡ್ಡಿಯಿಲ್ಲ. ಆ ಅನುಭವದ ಮುಂದುವರಿಕೆಯ ಪರಿಣಾಮವೇ 'ಹವ್ಯಕರ ಶೋಭಾನೆಗಳು' ಎಂಬೀ ಗ್ರಂಥರಚನೆಯ ಬೃಹತ್ ಕಾರ್ಯ.

1980ರಲ್ಲಿ ಈ ಲೇಖಕನು ಕಾಲೇಜಿನ ಉಪನ್ಯಾಸಕತ್ವದಿಂದ ನಿವೃತ್ತನಾದ. ಉದ್ಯೋಗ ನಿವೃತ್ತಿಯೆಂಬುದು ಈ ಲೇಖಕನಂತಹರಿಗೆ ಸಾಹಿತ್ಯ ರಚನೆಯ ನಿವೃತ್ತಿಯಾಗಲಾರದು. ಇನ್ನೀಗ ಹೊಸತಾಗಿ ಛಂದೋಬದ್ಧವಾಗಿ ಮಹಾಕಾವ್ಯ ರಚನೆ ಮಾಡಬೇಕು, ಹೊಸಗನ್ನಡಕ್ಕೊಂದು ಸಮರ್ಪಕವಾದ ವ್ಯಾಕರಣ ಗ್ರಂಥ ಬರೆಯ

ಬೇಕು–ಎಂದು ಹಂಬಿಕೆ ಮಾಡಿರುವ ಈ ಲೇಖಕನು ಅವುಗಳ ರಚನೆಯನ್ನು ತತ್ಕಾಲಕ್ಕೆ ಮುಂದೆ ಹಾಕಿದ. ಬಾಲ್ಯದಿಂದಲೆ ತನ್ನ ಆಸಕ್ತಿಯನ್ನು ಸೆಳೆದ, ಜೀವನದೊಡಪೆರೆದ, ಶೋಭಾನೆಗಳನ್ನು ಕುರಿತಾಗಿ ಗ್ರಂಥ ರಚಿಸುವ ನಿರ್ಧಾರಕ್ಕೆ ಬಂದ. ಹಿಂದೆಯೇ ಸಿದ್ಧಪಡಿಸಿದ್ದ ಜಾನಪದ ಪ್ರಬಂಧಕ್ಕಾಗಿ ಸಂಗ್ರಹಿಸಿದ ಹಾಡುಗಳಲ್ಲಿ ಹಲವಾರು ಶೋಭಾನೆಗಳೂ ಇದ್ದವಲ್ಲದೆ, ಅದೇ ಗ್ರಂಥದಲ್ಲಿ ಒಂದು ಅಧ್ಯಾಯವು 'ಹೆಂಗುಸರ ಹಾಡುಗಳು' ಎಂಬುದಾಗಿದ್ದು ಅದು ಶೋಭಾನೆಗಳನ್ನು ಕುರಿತ ಪರಾಮರ್ಶೆಯೇ ಆಗಿದ್ದಿತು. ಈ ಲೇಖಕನ ಊರಿನಲ್ಲಿ (ಕಾಸರಗೋಡು ತಾಲೂಕಿನ ಬಾಯಾರು ಗ್ರಾಮದ ಪರಿಸರದಲ್ಲಿ) ನಂಟರಿಷ್ಟರ ಮನೆಗಳಲ್ಲಿ ನಡೆಯುತ್ತಿದ್ದ ಮದುವೆ, ಉಪನಯನ, ಪೂಜೆ, ಹೋಮಾದಿಗಳಲ್ಲಿ ಸುವಾಸಿನಿಯರು ಹಾಡುತ್ತಿದ್ದ ಶೋಭಾನೆಗಳ ಪರಿಚಯವೂ ತಕ್ಕ ತಕ್ಕಮಟ್ಟಿಗೆ ಇದ್ದಿತು. ಅವೆಲ್ಲವುಗಳ ಧಾಟಿ–ಛಂದಸ್ಸುಗಳ ಅಭ್ಯಾಸವೂ ಆಗಿತ್ತು. ಅಂತಹ ಕೆಲವು ಹಾಡುಗಳನ್ನು ಸ್ವತಃ ರಚಿಸಿದುದೂ ಉಂಟು. ಲೇಖಕನ ತಾಯಿ ಸಾಂತಮ್ಮನವರು ನೂರಾರು ಶೋಭಾನೆಗಳ ಕಂಠಪಾಠವುಳ್ಳ 'ಹಾಡಿನ ಚೂಡಾಮಣಿ' ಯಾಗಿದ್ದುದೂ ಲೇಖಕನಲ್ಲಿ ಪ್ರಭಾವಮುದ್ರೆಯನ್ನು ಬೀರಿದ್ದಿತು. ಸುಮಾರು ಐವತ್ತು ವರ್ಷಗಳಿಗೂ ಹಿಂದೆ, ಈ ಲೇಖಕನ ಉಪನಯನದಲ್ಲಿ ಈತನ ಅಕ್ಕ ಶ್ರೀಮತಿ ಶಂಕರಿಯಮ್ಮನ ಶೋಭಾನೆಗಳ ಸುರಿಮಳೆಯಾದುದು ಮರೆತಿದ್ದಿಲ್ಲ! ಉಪನೀತ ವಟುವಾಗಿದ್ದ ಈ ಲೇಖಕನು ಅಂದು ಎರಡು ಕೈಗಳಲ್ಲಿ ತಟ್ಟೆ ಹಿಡಿದು 'ಭವತಿ ಭಿಕ್ಷಾಂ ದೇಹಿ' ಎಂದಾಗ, ಹಿರಿಯರು ಒಬ್ಬೊಬ್ಬರಾಗಿ ಭಿಕ್ಷೆ ನೀಡಿದ್ದು ಮತ್ತು ಅದೇ ವೇಳೆಗೆ ತನ್ನ ಅಕ್ಕ ಭಿಕ್ಷೆ ಹಾಕುವ ಹಾಡನ್ನು ಹೇಳಿದ್ದು ಇಂದೂ ಮರೆತಿಲ್ಲ.

ಮುದ್ದು ಗೋಪಾಲಕೃಷ್ಣ ಬಂದ ಕಾಣೆ । ನೀ
ಎದ್ದು ಭಿಕ್ಷವ ನೀಡು ಬೇಗ ಜಾಣೆ ಪ
ದೇವಕಿಯುದರದಿ ಬಂದ ಕಾಣೆ । ವಸು
ದೇವನ ಮೋಹದ ಕಂದ ಕಾಣೆ
ಗೋವುಗಳೊಡನೈತಂದ ಕಾಣೆ । ದುಷ್ಟ
ಭಾವೆ ಪೂತನಿಯನು ಕೊಂದ ಕಾಣೆ ॥ ಮುದ್ದು.... ೧

ಹೀಗೆ ಪಲ್ಲವಿಯಿಂದಲೂ ಚೌಪದದ ಹನ್ನೊಂದು ಸೊಲ್ಲುಗಳಿಂದಲೂ ಕೂಡಿದ ಈ ಹಾಡನ್ನು ಆಕೆ ಧಾಟಿ–ಗಮಕಗಳಿಂದ ಹಾಡಿದಾಗ, ತಾನು ಆ ದ್ವಾಪರಯುಗದ ಶ್ರೀಕೃಷ್ಣನೇ ಆದ ಅನುಭವ ನೆನಪಿನ ನೆಲದಲ್ಲಿ ಇನ್ನೂ ಹಸುರಾಗಿಯೇ ಇದೆ. ಇಂತಹುದೆಲ್ಲವೂ ಪ್ರಸ್ತುತ ಈ ಗ್ರಂಥ ರಚನೆಗೆ ಪ್ರೇರಕಗಳಾಗಿವೆ.

ಈ ಲೇಖಕನ ಬಾಲ್ಯಕಾಲದಲ್ಲಿ ಹವ್ಯಕರ ಸಮಾರಂಭಗಳಲ್ಲಿ ಶೋಭಾನೆಗಳನ್ನು ಹಾಡುವುದು ವಿಶೇಷ ಪ್ರಚಲಿತವಿದ್ದಿತು. ಆದರೆ ಬರುಬರುತ್ತಾ ದಕ್ಷಿಣ ಕನ್ನಡ

ಜಿಲ್ಲೆಯಲ್ಲಿ ಈ ಪ್ರಥೆ ಚಲಾವಣೆ ಕಳೆದುಕೊಳ್ಳತೊಡಗಿತು. ಈ ಲೇಖಕನ ವಿವಾಹ ಮಂಗಲವು ವಿಧಿಪ್ರಕಾರ ನಡೆದಿದ್ದರೂ ಅಲ್ಲಿ ಶೋಭಾನೆಗಳ ಗಾನರಸವಿರಲಿಲ್ಲ. ಮಂಗಲವಾದ್ಯರವ, ವೇದಮಂತ್ರಘೋಷ—ಎಲ್ಲ ಇದ್ದವು. ಶೋಭಾನೆ ಹಾಡುವುದು ಹೇಗೆ ಚಾಲನೆ ಕಳೆದುಕೊಳ್ಳತೊಡಗಿತ್ತು—ಎಂಬುದಕ್ಕಿದು ಉದಾಹರಣೆ. ಈ ಗ್ರಂಥ ರಚನೆಯ ವೇಳೆಗೆ, (ಅಂದರೆ 1984) ಈಗ—"ಶೋಭಾನೆಗಳು ಎಂಬೊಂದು ಗೀತ ಸಾಹಿತ್ಯವಿದೆ, ಅದನ್ನು ಶುಭಸಮಾರಂಭದಲ್ಲಿ ಮುತ್ತೈದೆಯರು ಹಾಡುತ್ತಿದ್ದರು"—ಎಂಬ ಸಂಗತಿ ಕೂಡ, ನಮ್ಮ ದಕ್ಷಿಣ ಕನ್ನಡ ಜಿಲ್ಲೆಯಲ್ಲಂತೂ ಹಳಬರ ಮಾತಾಗಿ ಹೋಗಿದೆ! ಸುಮಾರು ಹತ್ತು ವರ್ಷಗಳ ಹಿಂದಿನ ವರೆಗೆ ಸತ್ಯನಾರಾಯಣ ಪೂಜೆಯಲ್ಲಿ ಶಿವ, ಗಣಪತಿ, ದುರ್ಗೆ, ಸರಸ್ವತಿ ಮುಂತಾದ ದೇವತಾ ವಿಶೇಷ ಪೂಜೆಗಳಲ್ಲಿ—ಆರತಿ, ಮಂತ್ರಪುಷ್ಪ, ಪ್ರಸಾದ ವೇಳೆಯಲ್ಲಾದರೂ ಶೋಭನಗೀತಗಳನ್ನು ಹಾಡುತ್ತಿದ್ದರು. ಈಗ ಅದೂ ನಿಂತುಹೋಗಿದೆ! ಶೋಭಾನೆ ಹಾಡು ಹಾಡುವವರನ್ನು ಆಧುನಿಕರು ಅವಹೇಳನ ಮಾಡುತ್ತ ಬಂದುದೂ ಉಂಟು. ಹಾಡುತ್ತ ಹೆಂಗುಸರು ಆಯಾ ಸೊಲ್ಲಿನ ಪಾದಮಕುಟವಾಗಿ 'ಶೋಭಾನೆ' ಎಂದಾಗ, ಈಚೆಯಿಂದ 'ಸೊಂಟ ಬೇನೆ' ಎಂದು ಅಣಕಿಸುತ್ತಿದ್ದ ಕಿಡಿಗೇಡಿಗಳೂ ಇದ್ದರೂ. ಆದುದರಿಂದಲೇ ಅನೇಕ ಹಾಡುಗಾರ್ತಿಯರು ಹಾಡಲು ಬಾಯ್ದೆರೆಯದಿದ್ದ ಸಂದರ್ಭಗಳೂ ಉಂಟು. ಹೀಗೆ ಉಪೇಕ್ಷಿತವಾಗಿ, ವಿಸ್ಮೃತ ಸ್ಥಿತಿಗೆ ಬರುತ್ತಿರುವ, ಅಮೂಲ್ಯ ಸಂಸ್ಕೃತಿ–ಸಾಹಿತ್ಯಗಳ ನಿಧಿ 'ಶೋಭಾನೆ ಹಾಡುಗಳು'. ಇವನ್ನು ಈಗಲಾದರೂ ಸಂಗ್ರಹಿಸಿ, ಸಂಪಾದಿಸಿ, ಮೌಲ್ಯಪ್ರತಿಪಾದನೆ ಮಾಡಿ, ಗ್ರಂಥರೂಪದಲ್ಲಿ ಹೊರತರುವುದು ಉಪಾದೇಯವಾದುದೇ ಸರಿ.

ನಮ್ಮ ಸಮಾಜದ ಪರಂಪರಾಗತ ಪದ್ಧತಿಗಳು, ವಿವಿಧ ಸಂಸ್ಕಾರಗಳು, ಅವನ್ನು ನಡೆಸುವ ವಿಧಿ ವಿಧಾನಗಳು—ಇವು ಗೊಡ್ಡು ನಡೆವಳಿಕೆಗಳಲ್ಲ, ಪರಿಶೀಲಿಸಿದರೆ, ಇವು ಉತ್ತಮ ಸಂಸ್ಕೃತಿ ಪ್ರತಿಪಾದಕಗಳಾಗಿ ಕಾಣುತ್ತವೆ. ಇವು ಅತಿ ಪ್ರಾಚೀನ ಕಾಲದಲ್ಲಿಯೇ ಬಳಕೆಗೊಂಡು ಒಂದು ಖಚಿತ, ಅನಿವಾರ್ಯ ಹಾಗೂ ನಿರ್ದಿಷ್ಟ ರೂಪಕ್ಕೆ ಬಂದಿರುವುದು ಕಾಣುತ್ತದೆ. ಹೀಗಾಗಬೇಕಾದರೆ ಅದಕ್ಕೆ ಎಷ್ಟೋ ಸಾವಿರ ವರ್ಷಗಳ ಹಿನ್ನೆಲೆ ಇದ್ದಿರಬೇಕೆನಿಸುತ್ತದೆ. ಯಾವುದೋ ಕಾಡು ನಡೆವಳಿಕೆ ನಾಡ ನಡೆವಳಿಕೆಯಾಗಬೇಕಾದರೆ, ಸಭ್ಯ ಸಂಸ್ಕೃತಿಯ ಸ್ಥಾನ ಪಡೆಯಬೇಕಾದರೆ, ಅದೆಷ್ಟು ಕಾಲ ಹಿಡಿದಿರಬೇಕೋ! ಆ ಕಾಲಗಳಲ್ಲಿ ಆ ವಿಷಯಗಳಲ್ಲಿ ಅದೆಷ್ಟು ಚಿಂತನೆಗಳು ಕಾರ್ಯ ಮಾಡಿರಬೇಕೋ! ಪ್ರಯತ್ನಗಳು ಸಾಗಿರಬೇಕೋ! ಮಾನವ ಹಿತಚಿಂತಕರೂ ನಿಃಸ್ವಾರ್ಥಿಗಳೂ ತ್ರಿಕಾಲವೇದಿಗಳೂ ಪರಮ ವೈರಾಗ್ಯ ಸಂಪನ್ನರೂ ಆದ ಪ್ರಾಚೀನ ಮಹರ್ಷಿಗಳು ಎಷ್ಟೋ ಪೂರ್ವಕಾಲದಲ್ಲಿಯೇ ಆದರ್ಶ ಮಾನವ ಸಮಾಜವನ್ನು ಕಲ್ಪಿಸಿದ್ದಾರೆಂಬುದು ಪರಿಶೀಲಿಸಿದ ವಿವೇಕಿಗಳಿಗೆ ಗೊತ್ತಾಗುತ್ತದೆ. ಹಾಗೆ ಕಂಡು

ಕೊಂಡ ಆದರ್ಶದಲ್ಲಿ ಜನರು ನಡೆಯುವಂತೆ ಶ್ರುತಿ–ಸ್ಮೃತಿ ಆಧಾರಿತ ಮಂತ್ರ–ತಂತ್ರ ವಿಧಿ–ವಿಧಾನಗಳನ್ನು ಅವರು ರೂಪಿಸಿರುತ್ತಾರೆ. ಅವನ್ನು ಮಾನವ ಸಮಾಜ ಅನುಸರಿಸುತ್ತ ಬಂದಿದೆ. ಶ್ರುತಿ–ಸ್ಮೃತಿ ವೈಧಾನಿಕ ಸಂಸ್ಕಾರ ಕ್ರಮವನ್ನು ಯಾವುದೋ ಪರಿಸ್ಥಿತಿಯಿಂದ ಬಿಟ್ಟವರು ಕೂಡ, ಮಂತ್ರೋಚ್ಚಾರಣೆಯನ್ನು ಮಾತ್ರ ಬಿಟ್ಟಿರಬಹುದಲ್ಲದೆ, ಶಾಸ್ತ್ರಕ್ರಮವನ್ನು ಬಿಟ್ಟಿಲ್ಲ. ಅಂಥವರ ಆಚಾರ ಕ್ರಮವನ್ನು 'ಜಾನಪದ' ಎಂದು ಹೆಸರಿಸಲಾಗಿದೆ. ಶೋಭಾನೆಗಳನ್ನು ಹಾಡುವ ಪದ್ಧತಿ ಈ ಎರಡು ವರ್ಗದವರಲ್ಲಿಯೂ (ಮಂತ್ರಸಹಿತರಲ್ಲಿ ಮತ್ತು ಮಂತ್ರರಹಿತರಲ್ಲಿ) ಉಂಟು. ಹವ್ಯಕರಲ್ಲಿ ಹಾಗೂ ಇನ್ನೂ ಕೆಲವು ವೈದಿಕವರ್ಗದವರಲ್ಲಿ ಶುಭಕಾರ್ಯಗಳು ವೇದ ಮಂತ್ರೋಕ್ತವಾಗಿ, ಶಾಸ್ತ್ರವಿಹಿತವಾಗಿ ನಡೆಯುತ್ತಿರುವಾಗ ಮುತ್ತೈದೆಯರು ಶೋಭಾನೆಗಳನ್ನು ಹಾಡುವುದು ಸಂಪ್ರದಾಯ. ಈ ಹಾಡುಗಳು ಆ ಸಂಸ್ಕೃತದ ಮಂತ್ರಾರ್ಥವನ್ನೆ ಒಳಗೊಂಡಿರುತ್ತವೆ. ಕನ್ನಡದಲ್ಲಿ ಸರಳ–ಸುಲಭ ಭಾಷೆಯಲ್ಲಿರುತ್ತವೆ. ಅರ್ಥ ಕಠಿನವಾಗಿರುವ ವೇದೋಪನಿಷತ್ತುಗಳ ನೀತಿಸಾರ ಹೇಗೆ ಶರಣರ ವಚನಗಳಲ್ಲಿ ಮೂಡಿ ಬಂದಿದೆಯೋ ದಾಸರ ಪದಗಳಲ್ಲಿ ವ್ಯಕ್ತವಾಗಿದೆಯೋ, ಹಾಗೆಯೇ ಕ್ರಿಯಾಕಾಂಡದ ವೇದಮಂತ್ರಗಳ ಅರ್ಥವೇ ಈ ಶೋಭಾನೆಗಳಲ್ಲಿ ಕಾಣಿಸಿಕೊಂಡಿದೆ. ಎಷ್ಟೋ ವೇಳೆ, ಪುರೋಹಿತರು ಶುಭಕಾರ್ಯಗಳನ್ನು ಮಾಡಿಸುವಾಗ, ಮಂತ್ರಸಂದರ್ಭವನ್ನು ಮರೆತಾಗ, ಶೋಭಾನೆಗಳಿಂದಲೇ ಕ್ರಿಯಾತಂತ್ರದ ದಿಗ್ದರ್ಶನ ಪಡೆಯುತ್ತಿದ್ದುದುಂಟು.

ಇಂತಹ ಸಾಮಾಜಿಕ ಶುಭ ಸಂಸ್ಕಾರಗಳನ್ನು ವಿಧಿಬದ್ಧವಾಗಿ ಆಚರಿಸುವ ಅರ್ಥ ಹನ್ನರಿಯದವರು, ಅರ್ಥಮಾಡುವಷ್ಟು ಬುದ್ಧಿ ವಿಕಸನವಿಲ್ಲದವರು, ಸ್ವತಃ ವಿಶೇಷ ಪರಿಣತರೆಂದೂ ಮುಂದುವರಿದವರೆಂದೂ ಭಾವಿಸುವ ಪಂಡಿತಂಮನ್ಯರು ಸಂಖ್ಯೆಯಲ್ಲಿ ಇಂದೇನೂ ಕಡಮೆಯಿಲ್ಲ. ಅಂಥವರು ಈ ಸಂಸ್ಕಾರಗಳ ವಿಧಿ ವಿಧಾನಗಳನ್ನು ಹಳೆಯ ಗೊಡ್ಡುವಾಡಿಕೆಗಳೆಂದು ತುಚ್ಛೀಕರಿಸುವಷ್ಟು ಮುಂದುವರಿಯುತ್ತಾರೆ. ಇದು ಸಂಸ್ಕೃತಿಗೆ ಕೇಡು ; ವಿಚಾರಬುದ್ಧಿಗೆ ದೌರ್ಭಾಗ್ಯ. ಸಮಾಜವು ಅಧೋಗತಿ ಹಿಡಿದುದರ ಸಂಕೇತ ! ಇಂತಹ ಸ್ಥಿತಿಗೆ ಇಳಿದ ಅಶ್ರದ್ಧಧಾನರು ಸ್ವಲ್ಪ ಕಣ್ದೆರೆವಂತಾಗ ಬೇಕೆಂಬುದೂ ಈ ಗ್ರಂಥರಚನೆಯ ಇನ್ನೊಂದು ಪವಿತ್ರೋದ್ದೇಶ. ಶೋಭಾನೆಗಳನ್ನು ಆಯಾ ಸಂದರ್ಭದಲ್ಲಿ ಹಾಡುವುದೂ ಸಮಾಜದ ಸಂಸ್ಕಾರದ ವಿಧಿಗಳ ಅನುಸರಣೆಯೂ ಉಪಾದೇಯಗಳೇ ಹೊರತು ಹೇಯವಲ್ಲವೆಂದು ತಿಳಿಯಬೇಕು. ಇವನ್ನು ಪ್ರಚಲಿತ ಗೊಳಿಸಬೇಕು. ಈ ವಿಷಯದಲ್ಲಿ ನೈಚ್ಯಭಾವ ಸಲ್ಲದೆಂದರಿಯಬೇಕು. ಗೌರವಭಾವ ತಾಳುವಂತಾಗಬೇಕು. ತನ್ಮೂಲಕ ಸಂಸ್ಕೃತಿ ಅಭಿವೃದ್ಧಿಗೊಳ್ಳಬೇಕು. ಹವ್ಯಕರದೆನ್ನ ಲಾದ ಈ ಹಾಡು ಸಂಗೃಹೀತವಾದುದು ಹವ್ಯಕರಿಂದ ಎಂದಿಷ್ಟೇ ಇಲ್ಲಿ ಅರ್ಥ. ಬಗೆಬಗೆಯ ಹೂಗಳ ಸಮೃದ್ಧಿಯುಳ್ಳ ಉದ್ಯಾನದಿಂದ ಜೇನುನೊಣ ಹನಿಸಂಗ್ರಹಿಸಿ ಹುಟ್ಟಿಕಟ್ಟಿರಬಹುದು. ಈ ಹುಟ್ಟಿಯ ಜೇನು ಯಾರಿಗೆ ಬೇಕೆಂದರೆ ಅವರಿಗೆ !

ಬೇರೆತನ ಎಲ್ಲಿ ಬಂತು ? ಹಾಗೆಯೇ, ಇವನ್ನು ಎಲ್ಲ ಜನವರ್ಗದವರೂ ಅಳುಕದೆ ತಮ್ಮದಾಗಿ ತಿಳಿದು ಪ್ರಚಾಲನೆಗೆ ತರಬಹುದು. ಈ ಹಾಡುಗಳ ಗುಣವೈಶಿಷ್ಟ್ಯವನ್ನು ಎಲ್ಲರೂ ತಿಳಿಯಬಹುದು, ತಿಳಿಯಬೇಕು–ಎಂಬುದು ಈ ಗ್ರಂಥರಚನೋದ್ದೇಶದಲ್ಲಿ ಸೇರಿದೆ.

ಕಿವಿಗಿಂಪಾದ ಹಾಡನ್ನು ಕೇಳಿ ಆಕರ್ಷಿತರಾಗದವರು ಯಾರು ? ತೊಟ್ಟಿಲ ಶಿಶು ಏನೂ ಅರಿಯದ ಮುಗ್ಧಜೀವಿಯಷ್ಟೆ ? ಆದರೆ ಅದು ಜೋಗುಳದ ಗೀತಾಮೃತ ವನ್ನು ಪಾನಮಾಡಿ ಉಂಟಾದ ಸಂತೋಷದಲ್ಲಿ ಮೆಯ್ಮರೆಯುವುದು, ಅಳುವನ್ನು ನಿಲ್ಲಿಸಿ ಸುಖನಿದ್ರೆ ಮಾಡುವುದು. ಪುಂಗಿಯ ನಾದದಿಂದ ಹಾವು, ಕೊಳಲ ದನಿಯಿಂದ ಹಸು, ಆಕರ್ಷಿತವಾಗುವುದಲ್ಲವೆ ? ಗಾನದ ಸುಖಕ್ಕೆ ಪಶುಪಕ್ಷಿಗಳೂ ಸೋಲುವು ವೆಂದರೆ, ಮಾನವರನ್ನು ಹಾಡುಗಳು ಮನ ಸೆಳೆಯುವುದರಲ್ಲಿ ಏನು ಆಶ್ಚರ್ಯ ?

ಈ ಲೇಖಕನನ್ನು ಬಾಲ್ಯದಿಂದಲೇ ಪ್ರಭಾವಿತಗೊಳಿಸಿದ ಹಾಡುಗಳ ವರ್ಗ ಐದು ಬಗೆಯದು. ಅವು : ಜಾನಪದ ಗೀತಗಳು, ಶಾಲೆಯ ಪದಗಳು, ಭಜನೆ ಪದಗಳು, ಯಕ್ಷಗಾನ ಪದಗಳು ಮತ್ತು ಶೋಭಾನೆಗಳು. ಅವನ್ನು ವಿವಿಧ ಮುಖ ಗಳಿಂದ ಅಧ್ಯಯನ ಮಾಡಿದಂತೆಲ್ಲ ಸಾಹಿತ್ಯದ ಸೊಬಗು ಕಾಣುತ್ತದೆ. ಸಾಹಿತ್ಯಕ್ಕೆ ಪೋಷಕವಾಗಿ ಗೇಯತೆ ಗಮಕಗಳಿಂದೊಡವೆರೆದ ಧಾಟಿ ಮನಂಬುಗುತ್ತದೆ. ಪ್ರಕೃತ, ಇತರ ನಾಲ್ಕು ಬಗೆಯ ಗೀತಗಳು ಇಲ್ಲಿ ಪ್ರತಿಪಾದ್ಯ ವಿಷಯವಲ್ಲ. ಅವು ಬೇರೆ ಕಡೆ ವಿವರಣೆಯ ವಸ್ತುಗಳು. ಈ ಗ್ರಂಥಕ್ಕೆ ವಿಷಯವಾಗಿರುವ 'ಶೋಭಾನೆ ಹಾಡುಗಳು' ವಿಶಿಷ್ಟ ರೀತಿಯ ಧಾಟಿಯಿಂದ, ವಿಳಂಬ-ಮಧ್ಯಮ-ದ್ರುತಗತಿಗಳಿಂದ, ಪ್ರಾಸ-ಪಾದ-ಗಣವಿನ್ಯಾಸ ಕ್ರಮದಿಂದ, ನಿಲುಗಡೆ (ಯತಿ) ಎತ್ತುಗಡೆ (ಗತಿ) ಗಳಿಂದ, ವರಣದಿಂದ, ಪಲ್ಲವಿಗಳಿಂದ, ಅತೀತವುಳ್ಳ ಪಾದ ವಿನ್ಯಾಸಗಳಿಂದ ಸೊಗಸಾಗಿರುವ ರಚನೆಗಳು. ಅವುಗಳ ಪ್ರತಿಪಾದನೆಯೇ ಇಲ್ಲಿ ಪ್ರಸ್ತುತವಾಗಿದೆ.

## ಶೋಭಾನೆಗಳ ಹಿರಿಮೆ ಮತ್ತು ರಚನೆ

ಕನ್ನಡದಲ್ಲಿರುವ ಇತರ ಜಾನಪದ ಗೀತಗಳ ಹಾಗೆಯೇ 'ಶೋಭಾನೆಗಳು' ಹೆಚ್ಚಾಗಿ ಕಿವಿಯಿಂದ ಕಿವಿಗೆ ದಾಟಿ, ಧಾಟಿ ಸೊಬಗನ್ನುಳಿಸಿಕೊಂಡು ಬಂದುವು. ಇವು ಹೆಂಗುಸರು ಹಾಡುವ ಹಾಡುಗಳಾದ್ದರಿಂದ ಇವನ್ನು ಹೆಣ್ಣು ಮಕ್ಕಳು ಚಿಕ್ಕಂದಿನಲ್ಲಿ ತಮ್ಮ ತಾಯಂದಿರಿಂದ ಕಲಿಯುತ್ತಿದ್ದರು. ತಾಯಂದಿರು ಕಲಿಸಿಕೊಡುತ್ತಿದ್ದರು. ಕಲಿಸಿ ಕೊಡುವಾಗ ಇವುಗಳ ಧಾಟಿಗೆ (ಅಂದಕ್ಕೆ) ಲಕ್ಷ್ಯವಿಡುತ್ತಿದ್ದರು. ಹೀಗೆ ಕಲಿತ ಬಾಲಿಕೆ ಯರು ಸಂದರ್ಭ ಬಂದಾಗ, ಸಾಮಾಜಿಕ ಶುಭಕಾರ್ಯಗಳಲ್ಲಿ ಹಾಗೂ ಪೂಜೆ-ಹೋಮಗಳ

ಸಮಾರಂಭಗಳಲ್ಲಿ ಹಿರಿಯ ಮುತ್ತೈದೆಯರ ಜೊತೆಗೂಡಿ ಹಾಡುತ್ತಿದ್ದರು. ಪೂಜೆಗಳಲ್ಲಿ-ಆರತಿ, ಮಂತ್ರಪುಷ್ಪ, ಪ್ರಾರ್ಥನೆ, ಪ್ರಸಾದ, ಹೂಕೊಡುವುದು-ಮುಂತಾದ ಸಂದರ್ಭಗಳಲ್ಲಿ ಕನ್ಯಾಮಣಿಯರಿಂದ ಶೋಭಾನೆಗಳನ್ನು ಹಾಡಿಸಲಾಗುತ್ತಿತ್ತು. ಇತ್ತೀಚೆಯ ವರೆಗೂ ವಿವಾಹಯೋಗ್ಯ ಕನ್ಯೆಗೆ ಶೋಭಾನೆ ಹಾಡಲು ಬರುವುದೆಂದರೆ, ಯೋಗ್ಯ ವರನನ್ನು ಪಡೆಯಲು ಆಕೆಗೆ ಅದೊಂದು ಹೆಚ್ಚಿನ ಅರ್ಹತೆ ಎನಿಸುತ್ತಿತ್ತು. ಕನ್ಯೆಯನ್ನು ನೋಡಲು ಬಂದ ವರನ ಕಡೆಯವರು ಆಕೆಗೆ ಶೋಭಾನೆ ಹಾಡಲು ಬರುತ್ತಿದೆಯೇ ? ಎಂದು ಕೇಳುತ್ತಿದ್ದರು. ಆಕೆಯಿಂದ ಒಂದೆರಡು ಹಾಡುಗಳನ್ನು ಹಾಡಿಸಿ ನೋಡುತ್ತಿದ್ದರು. ಮದುವೆಯಾದ ಹುಡುಗಿ ಗಂಡನ ಮನೆಯಲ್ಲಿ ಇನ್ನೂ ಹೆಚ್ಚಿನ ಹಾಡು ಕಲಿತು ಹೇಳುವುದನ್ನು ಮುಂದುವರಿಸುತ್ತಿದ್ದಳು. ಅಲ್ಲಿ ತನ್ನ ಅತ್ತೆಯವರಿಂದ ಅಥವಾ ಇತರ ಕುಲವೃದ್ಧೆಯರಿಂದ ಕಲಿತುಕೊಳ್ಳುತ್ತಿದ್ದಳು. ಈ ಶೋಭಾನೆಗಳಲ್ಲಿ ರಾಮಾಯಣ, ಮಹಾಭಾರತಗಳ ಹಾಗೂ ಬೇರೆ ಬೇರೆ ಪುರಾಣಗಳ ಕಥೆಗಳು ಹಾಡಿನ ರೂಪದಲ್ಲಿದ್ದು, ಭಗವಂತನ ಅವತಾರ ಲೀಲೆಗಳು, ಭಕ್ತರ ಆದರ್ಶ ಜೀವನದ ಘಟನೆಗಳು, ಉದಾತ್ತ ಸಾಹಸಮಯ ರಮ್ಯ ಜೀವನಚಿತ್ರಗಳು ಇದ್ದು ನೀತಿ ಪ್ರತಿಪಾದನೆ ಇದ್ದುದರಿಂದ ನಮ್ಮ ಉಜ್ಜ್ವಲ ಸಂಸ್ಕೃತಿಯ ಪರಿಜ್ಞಾನ, ಅನುಸರಣೆ, ರಕ್ಷಣೆ, ಪೋಷಣೆಗಳಿಗೆ ಇವು ಸಹಕಾರಿಗಳಾಗುತ್ತಿದ್ದವು. ಇವುಗಳ ಅಭ್ಯಾಸಕ್ಕೆ ಎಲ್ಲರೂ ಪ್ರೋತ್ಸಾಹ ಕೊಡುತ್ತಿದ್ದರು.

ಸಂಸ್ಕೃತಿನಿಷ್ಠರ ಮನೆಯಲ್ಲಿ ವಿವಾಹ, ಉಪನಯನ—ಮುಂತಾದವು ನೆರವೇರಲಿವೆ ಎಂದಾದರೆ ಸಾಕು. ಒಂದೆರಡು ತಿಂಗಳುಗಳಿಂದಲೇ ಸಿದ್ಧತೆ ಪ್ರಾರಂಭಗೊಳ್ಳುವುದು. ಇತರ ಸಿದ್ಧತೆಗಳು ಆಗುತ್ತಿದ್ದಂತೆಯೇ ಶೋಭಾನೆಗಳ ಸಿದ್ಧತೆಯೂ ಆಗುವುದು. ಹೆಣ್ಣುಮಕ್ಕಳು ಶೋಭಾನೆ ಹಾಡುಗಳನ್ನು ಸಂಗ್ರಹಿಸತೊಡಗುವರು. ಎಲ್ಲೆಲ್ಲಿಂದಲೋ ಕೈಬರೆಹದ ಪುಸ್ತಕಗಳಿಂದ ಪ್ರತಿ ತೆಗೆಯತೊಡಗುವರು. ಈ ಕಾರ್ಯದಲ್ಲಿ ಅವರಿಗೆ ಗಂಡುಸರು ನೆರವಾಗುವರು. ಹಾಡುಗಳನ್ನು ಪ್ರತಿ ತೆಗೆದುಕೊಂಡ ಮೇಲೆ ಕಂಠಪಾಠ ಮಾಡುವರು. ಧಾಟಿ ತಿದ್ದಿಕೊಳ್ಳುವರು. ನಡೆಯುವ ಪ್ರಸ್ತಗಳು ಶ್ರೀಮಂತರ ಮನೆಯಲ್ಲಾಗಿದ್ದರೆ, ಇನ್ನಷ್ಟು ವಿಶೇಷ ! ತಮ್ಮಲ್ಲಿಯ ಪ್ರಸ್ತವು ಶೋಭಾನೆಗಳಲ್ಲಿ ಹಿಂದೆ ಬೀಳಕೂಡದು, ಸಂದರ್ಭಗಳಲ್ಲಿ ಹೊಸ ಹೊಸ ಶೋಭಾನೆಗಳನ್ನು ತಮ್ಮ ಕಡೆಯವರು ಹಾಡಬೇಕು—ಎಂಬ ಉದ್ದೇಶವನ್ನಿಟ್ಟುಕೊಂಡು ಮನೆಯ ಯಜಮಾನನು ಒಳ್ಳೆಯ ಜಾನಪದ ಕವಿಗಳನ್ನು ಮನೆಗೆ ಕರೆಯಿಸಿಕೊಳ್ಳುತ್ತಿದ್ದನು. ಅವರಿಂದ ಬೇರೆ ಬೇರೆ ಹಾಡುಗಳನ್ನು ಹೊಸತಾಗಿ ಬರೆಯಿಸುತ್ತಿದ್ದನು. ಆ ಕವಿಗಳು ಉತ್ಸಾಹಿತರಾಗಿ ಹೊಸ ಛಂದೋಲಯವುಳ್ಳ ಹೊಸ ಧಾಟಿಯ ಸೊಗಸಾದ ಹಾಡುಗಳನ್ನು ಕಟ್ಟಿಕೊಡುತ್ತಿದ್ದರು. ಹಾಡುಗಾರ್ತಿಯರು ಶುಭ ಸಮಾರಂಭಗಳಲ್ಲಿ ಹಾಡುಗಳನ್ನು ಹಾಡುವುದು

ತಮಗೆ ಗೌರವವೆಂದು, ಮರ್ಯಾದೆಯೆಂದು ಭಾವಿಸಿ ಕಲಿತುಕೊಳ್ಳುತ್ತಿದ್ದರು.*. ಅಂತಹ ನವೀನ ರಚನೆಗಳಲ್ಲಿ ನವೀನ ವಿಚಾರಗಳೂ ಬರುತ್ತಿದ್ದವು. ಉದಾಹರಣೆಗೆ 'ಪಾರ್ವತೀ ಕಲ್ಯಾಣ' ಎಂಬ ಹಾಡು. ಇದರಲ್ಲಿ ಇಪ್ಪತ್ತಾರು ಸೊಲ್ಲುಗಳಿವೆ. ಅದರ ಪ್ರಾರಂಭ ಹೀಗೆ—

ಕಲ್ಯಾಣಂ ಪಾರ್ವತಿಗೇ । ಹರನಿಗೆ
ಮೂಲೋಕದೀಶನಿಗೇ ಪ

ಗುರುವರ ಕರಿವರ ಹಿರಿಯರ ಸ್ಮರಿಪರ
ಸುರವರ ಶರಣರ ಸರುವರ ನೆರಹುತ್ತ ಅ ಪ

ಮುಂದೆ ಇದರ ಇಪ್ಪತ್ತೈದನೆಯ ಸೊಲ್ಲು ಹೀಗಿದೆ—

ಭರ್ಮಿನ ಕುರ್ಚಿಮೇಜಿ । ಅಲ್ಲಲ್ಲಿರೆ
ಬೊಮ್ಮಂಗೆ ಗೌಜಿ ಗೌಜಿ
ಭರ್ಮ ವಿಧ್ಯುಕ್ತದಂತೆ ನಿರ್ಮಲದಿಂದ ಮತ್ತೆ
ಚರ್ಮಾಂಬರನು ಪಾರ್ವತಿ ಸಹ ಮೆರೆಯಲು ॥

ಇಲ್ಲಿ ಶಿವ ಪಾರ್ವತಿಯರ ಮದುವೆಯಲ್ಲಿ ಕುರ್ಚಿಮೇಜುಗಳಿದ್ದುದು ವರ್ಣಿತವಾಗಿದೆ. ವಿದ್ಯುದ್ದೀಪವಿದ್ದುದೂ ಈ ಹಾಡಿನ ಬೇರೊಂದು ಸೊಲ್ಲಿನಲ್ಲಿ ಬಂದಿದೆ. ಕಾರಿನಲ್ಲಿ ದಿಬ್ಬಣ ಬಂದುದಾಗಿ ನಿರೂಪಿತವಾದುದೂ ಇದರಲ್ಲಿದೆ. ಹೊಸ ಶೋಭಾನೆಗಳು ರಚಿತವಾಗುವಾಗ ಈ ಕಾಲಕ್ರಮದ ಬಗೆಗಳ ಉಲ್ಲೇಖ ಬರುವುದು ಸಹಜ. ಸ್ವತಃ ಜಾನಪದ ಕವಯಿತ್ರಿಯರಾದ ಹಾಡುಗಾರ್ತಿಯರು ವಿವಾಹ ಸಮಾರಂಭಗಳಲ್ಲಿ ವರನ ಹಾಗೂ ವಧುವಿನ ಕಡೆಗಳಲ್ಲಿದ್ದುಕೊಂಡು ಸ್ಪರ್ಧೆಯಿಂದ ಹಾಡು ಹೇಳುತ್ತಿದ್ದರಲ್ಲದೆ, ಯಾವುದೋ ಒಂದು ಹಾಡಿಗೆ ಪ್ರತಿಯಾಗಿ ಪೂರ್ವಸಿದ್ಧವಾದ ಹಾಡಿಲ್ಲದಾಗ, ಅಲ್ಲಲ್ಲಿ ತಾವೇ ಹಾಡುಕಟ್ಟಿ ಹೇಳುತ್ತಿದ್ದುದು ಯಥೇಷ್ಟವಾಗಿ ಉಂಟು. ಅವರಲ್ಲಿಯೂ

---

* ಶೋಭಾನೆ ಹಾಡುವ ಮರ್ಯಾದೆಗೆ ಮದುಮಗನ ಹಾಗೂ ಮದುಮಗಳ ಅಕ್ಕತಂಗಿಯರು ಹಾಗೂ ಸೋದರತ್ತೆ ಮಾತ್ರ ಅರ್ಹರು. ಅವರಲ್ಲಿ ಸಾಕಷ್ಟು ಹಾಡುಗಳ ಸಂಗ್ರಹವಿಲ್ಲದಿದ್ದರೆ ಅಥವಾ ಅವರು ಪ್ರಸ್ತುಗಳಲ್ಲಿ ಹಾಡಬಲ್ಲವರಲ್ಲದಿದ್ದರೆ, ಅಭ್ಯಾಗತ ಮಹಿಳೆಯರಲ್ಲಿ ಹಾಡಲು ಸಮರ್ಥರಾದ ಹಾಡುಗಾರ್ತಿಯರಿಗೆ ಅಡಕೆ ವೀಳೆಯವಿತ್ತು ವಿನಂತಿಸುತ್ತಿದ್ದರು. ಅಂತೂ ಕ್ರಿಯೆಗಳಲ್ಲಿ ಮಂತ್ರತಂತ್ರಗಳಿಗೆ ಹೇಗೆ ಲೋಪವಾಗಕೂಡದೋ ಹಾಗೆಯೇ ಹಾಡುಗಳಿಗೂ ಕೊರತೆಯಿರಕೂಡದು—ಎಂಬುದು ನಿಯಮ. ಈ ನಿಯಮದಂತೆ, ಈ ಲೇಖಕನ ತಾಯಿ (ಸಾಂತಮ್ಮ) ಮತ್ತು ಚಿಕ್ಕತಾಯಿ (ಚಿಕ್ಕಪ್ಪ ಶಂಕರ ಭಟ್ಟರ ಹೆಂಡತಿ ಲಕ್ಷ್ಮಿಯಮ್ಮ) ಎಷ್ಟೋ ಕಡೆ ಶುಭ ಸಮಾರಂಭಗಳಲ್ಲಿ—ಸುಮಾರು 50 ವರ್ಷಗಳ ಹಿಂದೆ, ವೀಳ್ಯ ಪಡೆದು ಹಾಡಿದ್ದುಂಟು.

ದೂರುವ ಹಾಡುಗಳು (ಹಳಿದಾಡುವ ಹಾಡುಗಳು) ಅಲ್ಲಲ್ಲಿಯೇ ರಚಿತವಾಗಿ ದನಿಗೊಡುತ್ತಿದ್ದುವು. ಇದರಿಂದಾಗಿ, ಹವ್ಯಕ ಸಮಾಜವು ಶೋಭನ ಗೀತಗಳಿಗೆ ನಿಧಿಯಾಗಿ ವಿಜೃಂಭಿಸುತ್ತಿದ್ದಿತು. ಈ ಸಮಾಜವನ್ನು ಇತರರು ಅನುಕರಣೆ ಮಾಡುತ್ತಿದ್ದರು. ಆದರೆ ಈಗ ಹಾಗಿಲ್ಲ. ಈಗಿನ ಶುಭಕಾರ್ಯ್ಯಗಳಲ್ಲಿ ಮಂಗಳವಾದ್ಯಗಳಿರಬಹುದು, ಸಂಗೀತ ಕಾರ್ಯಕ್ರಮವಿರಬಹುದು, ಧ್ವನಿಮುದ್ರಿಕೆಗಳ ಹಾಡುಗಳೂ ಇರಬಹುದು. ಶೋಭನಗೀತಗಳನ್ನು ಹಾಡುವುದೆಂಬುದು ಕಟ್ಟುಕಥೆಯೇನೋ ಎಂಬಂತಹ ಪರಿಸ್ಥಿತಿಯಾಗಿದೆ. ಆದರೆ, ಇದು ಕಟ್ಟುಕಥೆಯಲ್ಲವೆಂಬುದು ಈ ಲೇಖಕನು ಕೈಗೊಂಡ ವಿಸ್ತೃತ ಕ್ಷೇತ್ರಕಾರ್ಯದಿಂದ, ಸಂಗ್ರಹಿಸಿದ ಹಾಡುಗಳಿಂದ ಹಾಗೂ ಮಾಡಿದ ವಿವರಣೆಯಿಂದ ವೇದ್ಯವಾದೀತು. ಪರಿಮಿತ ಸಮಯ ಹಾಗೂ ಪರಿಮಿತ ಸಹಾಯ ಸಂಪತ್ತಿಯಿಂದ ಸಂಗ್ರಹಿಸಿರುವ ಈ ಹಾಡುಗಳ ಸಂಖ್ಯೆಯೇ ಸುಮಾರು ಸಾವಿರದ ಐನೂರಕ್ಕಿಂತ ಹೆಚ್ಚಿನ ಶೀರ್ಷಿಕೆಗಳವು—ಎಂದರೆ ಅಚ್ಚರಿಯಾಗಬಹುದಾದರೂ ಸಂಗತಿ ನಿಜವಾದುದು.

## ಇತರರ ಕಾರ್ಯ

ಈ ಬಗೆಯ ಶೋಭಾನೆಗಳ ಸಂಗ್ರಹಣೆ, ಸಂಪಾದನೆ, ಪ್ರಕಟನೆಗಳನ್ನು ಇತರರು ಮಾಡಿಲ್ಲವೆ? ಮಾಡಿದ್ದರ ಎಷ್ಟರ ಮಟ್ಟಿಗೆ? ಅವುಗಳ ನಡುವೆ ಈ ಗ್ರಂಥದ ಸ್ಥಾನವೇನು? ಎಂಬುದನ್ನು ಓದುಗರು ತಾವೇ ನಿರ್ಣಯಿಸಬಹುದು. ಅಂಥವರಿಗೆ ಪೂರ್ವಭಾವಿಯಾಗಿ ಕೆಲವು ಅಂಶಗಳನ್ನಿಲ್ಲಿ ತಿಳಿಸಲಾಗುವುದು.

ಇಪ್ಪತ್ತನೆ ಶತಮಾನದ ಪ್ರಾರಂಭಕ್ಕೆ ಮೊದಲು ಇದ್ದ ಶೋಭಾನೆ ಪುಸ್ತಕಗಳೆಲ್ಲ ಕೈಬರೆಹದವು; ಹಾಡುಗಳನ್ನು ತಾಳೆಗರಿಯಲ್ಲಿ ಬರೆದಿಡುತ್ತಿದ್ದುದೂ ಉಂಟು. ಅಂತಹ ತಾಳೆಗರಿ ಗ್ರಂಥಗಳು ಈ ಲೇಖಕನಿಗೆ ನಾಲ್ಕೈದು ಸಿಕ್ಕಿವೆ. ಮುದ್ರಣಕಲೆ ಬಂದು, ಅಚ್ಚುಕೂಟಗಳು ಕಾಣಿಸಿಕೊಂಡ ಮೇಲೆ, ಈ ಹಾಡುಗಳ ಚಿಕ್ಕ ಪುಸ್ತಕಗಳು ಅಚ್ಚಾಗತೊಡಗಿದವು. ಅದರಂತೆ, ಇದುವರೆಗೆ ಅಚ್ಚಾಗಿರುವ ಶೋಭಾನೆ ಪುಸ್ತಕಗಳು ಹಾಗೂ ಶೋಭಾನೆಗಳನ್ನೊಳಗೊಂಡ ಜಾನಪದ ಗೀತಗಳ ಪುಸ್ತಕಗಳು ಸುಮಾರು ಒಂದು ನೂರಕ್ಕೆ ಹತ್ತಿರ ಇವೆ. ಅವುಗಳ ಪಟ್ಟಿಯನ್ನು ಈ ಗ್ರಂಥದ ಅನುಬಂಧದಲ್ಲಿ ಕಾಣಬಹುದು. ಅವುಗಳಲ್ಲಿ ಹವ್ಯಕರ (ಅಂದರೆ, ಹವ್ಯಕರಲ್ಲಿ ಪ್ರಚಲಿತವಿರುವ) ಶೋಭಾನೆ ಪುಸ್ತಕಗಳೇ ಹೆಚ್ಚು. ಇನ್ನುಳಿದವುಗಳಲ್ಲಿ ಶೋಭಾನೆಗಳು ಆಯಾ ಪುಸ್ತಕದ ಜಾನಪದ ಗೀತಗಳಲ್ಲಿ ಒಂದು ಭಾಗ ಮಾತ್ರ. ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿಯ ಮಧ್ವಸಿದ್ಧಾಂತ ಗ್ರಂಥಮಾಲೆಯ ಮೂಲಕ ಹಾಗೂ ಮಂಗಳೂರಿನ ನಿತ್ಯಾನಂದ ಗ್ರಂಥಮಾಲೆಯ ಮೂಲಕ ಚಿಕ್ಕ ಚಿಕ್ಕ ಪುಸ್ತಕ ರೂಪದಲ್ಲಿ ಶೋಭಾನೆಗಳ ಸಂಗ್ರಹಗಳು ವಿಪುಲವಾಗಿ ಬಂದಿವೆ. ಅವುಗಳಲ್ಲಿ ಕೆಲವು ಹತ್ತಾರು ಪುನರ್ಮುದ್ರಣ

ಗಳನ್ನು ಕಂಡಿವೆ. ಈ ಹಾಡಿನ ಪುಸ್ತಕಗಳಲ್ಲಿ ಹಾಡುಗಳ ವೈವಿಧ್ಯವಿದೆ ; ಛಂದೋವೈವಿಧ್ಯವೂ ಇದೆ. ಹಾಡುಗಳನ್ನು ಪಾದಾನುಗುಣವಾಗಿ ಕಾಣಿಸಿಲ್ಲ. ಉತ್ತರ ಕನ್ನಡ ಜಿಲ್ಲೆಯಲ್ಲಿಯೂ ಹವ್ಯಕರ ಶೋಭಾನೆ ಪುಸ್ತಕಗಳು ಹಲವಾರು ಅಚ್ಚಾಗಿವೆ. ಆ ಕಡೆ ಇವನ್ನು ಸ್ವತಃ ರಚಿಸಿ ಅಚ್ಚು ಹಾಕಿಸಿದವರೂ ಉಂಟು. ಕೆಲವರು ಸಂಗ್ರಾಹಕರು ತಮ್ಮನ್ನು ಆ ಪುಸ್ತಕದ ಹಾಡುಗಳ ಲೇಖಕರೆಂದೇ ಹೇಳಿಕೊಂಡುದೂ ಉಂಟು. ವಾಸ್ತವಿಕವಾಗಿ ಆ ಸಂಕಲನಗಳಲ್ಲಿ ಅವರದೇ ಆದ ಕೆಲವು ರಚನೆಗಳು ಮಾತ್ರ ಇರಬಹುದು. ಆ ಪುಸ್ತಕಗಳಲ್ಲಿ ಹಾಡಿನ ಸೊಲ್ಲುಗಳನ್ನು ಉದ್ದಕ್ಕೂ ಅಚ್ಚು ಮಾಡಿದೆ; ಪಾದ ವಿಭಜನೆಯಿಲ್ಲ. ಸೊಲ್ಲುಗಳ ಕೊನೆಗೆ ಆಯಾ ಸೊಲ್ಲಿನ ಸಂಖ್ಯೆಯಿರುತ್ತದೆ. ಅಂತೂ ಈ ಆವೃತ್ತಿಗಳು ಕೈಬರಹದ ಪ್ರತಿಗಳ ಮಾದರಿಯಲ್ಲೇ ಇವೆ. ಈ ಪುಸ್ತಕಗಳಲ್ಲಿರುವ ಶೋಭಾನೆಗಳಲ್ಲಿ ಹಾಡುಗಳ ಛಂದೋವೈವಿಧ್ಯ ಸ್ವಲ್ಪಮಟ್ಟಿಗಿದೆ. ಉತ್ತರ ಕನ್ನಡ ಜಿಲ್ಲೆಯ ಹವ್ಯಕರ ಶೋಭಾನೆಗಳಲ್ಲಿ—ಈಚೆಗೆ ಅಚ್ಚಾಗಿರುವ ಒಂದೆರಡು ಪುಸ್ತಕಗಳಲ್ಲಿ, ಹಾಡುಗಳನ್ನು ಪಾದಾನುಗುಣವಾಗಿ ಕಾಣಿಸಿದೆ. ಅಲ್ಲದೆ, ಹಾಡಿನ ಧಾಟಿ ವೇದ್ಯವಾಗುವಂತೆ, ಎಲ್ಲೆಲ್ಲಿ ದನಿಯೆಳೆದು ಹಾಡಬೇಕು—ಎಂಬುದನ್ನು ಸೂಚಿಸುವ ಚಿಹ್ನೆಗಳನ್ನೂ ಇಡಲಾಗಿದೆ. ಆದರೆ, ಆ ಪುಸ್ತಕಗಳಲ್ಲಿರುವುದು ತ್ರಿಪದಿಗಳು ಮಾತ್ರ ; ಬೇರೆ ಬಗೆಯವು ತೀರಾ ಕಡಮೆ. ಪ್ರಕೃತ, ಈ ಗ್ರಂಥದಲ್ಲಿರುವಂತಹ ಸರಳಾರ, ಧವಳಾರಗಳಾಗಲಿ, ಹವ್ಯಕರ ಶೋಭಾನೆಗಳಲ್ಲಿ ಕಾಣಿಸುವ ದ್ವಿಪದಿ ತ್ರಿಪದಿಗಳಿಂದ ಪ್ರಾರಂಭಿಸಿ ಪಂಚದಶಪದಿ ವರೆಗಿನ ಛಂದೋಚಮತ್ಕೃತಿಯ ಶೋಭಾನೆಗಳು ಅವುಗಳಲ್ಲಿ ಬೆಳಕು ಕಂಡಿಲ್ಲ. ತ್ರಿಪದಿಗಳೇ ಗಿಡ್ಡವಾಗಿ ಪಳೆಗಳಾದುದು, ವಿಸ್ತರಿಸಿ ಚೌಪದಿ, ಪಂಚಪದಿಯಾದುದು ಉಂಟು. ಇನ್ನೊಂದೆರಡು ಬೇರೆ ಮಾದರಿಯವು ಇರಬಹುದು. ಅಂತೂ ಈ ವಿಶಿಷ್ಟ ಗೀತಗಳ ಛಂದೋವೈವಿಧ್ಯವನ್ನು ಅಲ್ಲಿ ಕಾಣುವಂತಿಲ್ಲ. ಹವ್ಯಕೇತರರ ಜಾನಪದ ಗೀತಗಳ ಸಂಕಲನದಲ್ಲಿ ಬಂದಿರುವ 'ಸೋಬಾನೆ ಪದಗಳು' ಕೂಡ ಹೆಚ್ಚಾಗಿ ತ್ರಿಪದಿಗಳೇ. ಮತಿಘಟ್ಟ ಕೃಷ್ಣಮೂರ್ತಿಯವರು ಸಂಪಾದಿಸಿರುವ ಗೀತೆಗಳು ಮತ್ತು ಗೃಹಿಣೀ ಗೀತೆಗಳು—ಎಂಬೆರಡು ಬೃಹತ್ಸಂಪುಟಗಳಲ್ಲಿ ಸೋಬಾನೆ ಪದಗಳಿವೆ. 'ಗೀತೆಗಳು' ಎಂಬ ಗ್ರಂಥದಲ್ಲಿ 'ಭಾಗ—ಒಂದು' ಬ್ರಾಹ್ಮಣೇತರರ 31 ಸೋಬಾನೆಗಳಿಂದ ಕೂಡಿದೆ, ಭಾಗ ಎರಡರಲ್ಲಿ ಹವ್ಯಕರ 24 ಶೋಭಾನೆಗಳಿವೆ. ಇವುಗಳಲ್ಲಿ ಕೂಡ ತ್ರಿಪದಿಗಳೇ ಅಧಿಕ. 'ಗೃಹಿಣೀ ಗೀತೆಗಳು' 515 ಹಾಡುಗಳಿಂದ ಕೂಡಿದೆ. ಇವು ಹಳೆ ಮೈಸೂರು ಪ್ರದೇಶದ ಸಂಪ್ರದಾಯದ ಹಾಡುಗಳು. ಈ ಎರಡು ಸಂಕಲನಗಳಲ್ಲಿ ಹಾಡುಗಳನ್ನು ಪಾದಾನುಗುಣವಾಗಿ ಕೊಟ್ಟಿರುವುದೊಂದು ಆವಶ್ಯಕ ವೈಶಿಷ್ಟ್ಯ. ಹಾಡುಗಳ ವೈವಿಧ್ಯ ಕೆಲಮಟ್ಟಿಗೆ ಇದ್ದರೂ, ಸ್ಥಳ ಕಾಣದೆ ಉಳಿದವು ಅನೇಕವೆಂಬುದು ಈ 'ಹವ್ಯಕರ ಶೋಭಾನೆಗಳು' ಎಂಬ ಗ್ರಂಥವನ್ನು ಅವಲೋಕಿಸಿದವರಿಗೆ ಹೊಳೆಯದಿರದು.

ಇದುವರೆಗೆ ಪ್ರಕಟವಾಗಿರುವ ಹವ್ಯಕರ ಶೋಭಾನೆಗಳು ಪ್ರದೇಶಗಳಿಗೆ ಸೀಮಿತ ವಾದುವು. ಹವ್ಯಕರು ದಕ್ಷಿಣ ಕನ್ನಡ ಜಿಲ್ಲೆ (ಕಾಸರಗೋಡು ಸೇರಿ), ಶಿವಮೊಗ್ಗ ಜಿಲ್ಲೆ, ಉತ್ತರ ಕನ್ನಡ ಜಿಲ್ಲೆಗಳಲ್ಲಿ ಮೂಲದ ನೆಲೆಯುವರಾಗಿ ಭಾಷೆ–ನಡವಳಿಕೆಗಳ ವೈಶಿಷ್ಟ್ಯದಿಂದ ಕಾಣಸುತ್ತಾರೆ. ಇತರ ಕಡೆಗಳಲ್ಲಿ ಪಸಿದ್ದರೂ ಇವರು ಆಗಾಗ ಮತ್ತೆ ಹೋಗಿ ನೆಲಸಿದವರು. ಈ ಮೂರು ಜಿಲ್ಲೆಗಳ ಹವ್ಯಕರ ಶೋಭಾನೆಗಳ ಸಂಗ್ರಹ ಕಾರ್ಯವೇ ಸಮಗ್ರ ಸಂಗ್ರಹಕಾರ್ಯ. ಮೇಲೆ ಪ್ರಸ್ತಾವಿಸಿದ ಪುಸ್ತಕಗಳಲ್ಲಿರುವ ಶೋಭಾನೆಗಳಲ್ಲಿ ಯಾವುದೊಂದೂ ಈ ಸಮಗ್ರತೆಯನ್ನು ಹೊಂದಿಲ್ಲ. ಆದುದರಿಂದ ಇದೊಂದು ಮಹತ್ ಸಂಗ್ರಹದ ಕಾರ್ಯವು ತೆರವಾಗಿ ಅನಾಕ್ರಾಂತವಾಗಿ ಇದುವರೆಗೂ ಉಳಿಯಿತು! ಆ ಕಾರ್ಯವನ್ನಿಲ್ಲಿ ಯಥಾಸಾಧ್ಯ ಕೈಗೊಂಡುದಾಗಿರುತ್ತದೆ.

ಪ್ರದೇಶ ವಿಸ್ತಾರ, ಧಾಟಿ, ವೈಶಿಷ್ಟ್ಯ, ಛಂದೋವೈವಿಧ್ಯಗಳುಳ್ಳ ಹವ್ಯಕರ ಶೋಭಾನೆಗಳ ಸಂಗ್ರಹಣೆ, ಸಂಪಾದನೆಗಳನ್ನು ತೃಪ್ತಿಕರವಾಗಿ ಮಾಡಬೇಕಾದರೆ, ಅಂಥವನಲ್ಲಿ ಕೆಲವು ಅರ್ಹತೆಗಳು ಬೇಕು : ತಾದಾತ್ಮ್ಯ ಹಾಗೂ ಅಧ್ಯಯನ ಸಾಹಸದ ಹಿನ್ನೆಲೆ ಮೊತ್ತಮೊದಲ ಆವಶ್ಯಕತೆ. ಛಂದಸ್ಸಿನ ಪರಿಜ್ಞಾನ ಬೇಕು ; ಅದು ಮಾತ್ರ ಸಾಲದು. ಶೋಭಾನೆಗಳ ಎಲ್ಲ ಬಗೆಯ ಹಾಡುಗಳ ಧಾಟಿ ಗೊತ್ತಿರಬೇಕು. ಹಾಡುಗಳ ಲಯಜ್ಞಾನವಿರಬೇಕು ; ತಾಳಬದ್ಧತೆಯೂ ತಿಳಿದಿರಬೇಕು. ಗ್ರಂಥ ಸಂಪಾದನ ಶಾಸ್ತ್ರಾನುಭವವೂ ಸಾಕಷ್ಟಿರಬೇಕು. ಇವೆಲ್ಲ ಕೂಡಿ ಬಂದಿರುವ ವಿರಳ ವ್ಯಕ್ತಿಗಳು ಕ್ಷೇತ್ರಕಾರ್ಯ ನಡೆಸಿ, ಸಂಗ್ರಹಕಾರ್ಯ ಮಾಡಿದರೆ ಅಂಥವರಿಗೆ ಈ ಶೋಭಾನೆಗಳ ಸಂಪಾದನಕ್ಷೇತ್ರದಲ್ಲಿ ಕಾರ್ಯ ಸುಗಮವಾಗುವುದು.

## ಕ್ಷೇತ್ರಕಾರ್ಯ

ಹವ್ಯಕರ ಶೋಭಾನೆಗಳನ್ನು ಸಂಗ್ರಹಿಸುವ ಕಾರ್ಯವೇ ಮೊತ್ತಮೊದಲ ಕ್ಷೇತ್ರಕಾರ್ಯ. ಲೇಖಕನು ತನ್ನ ಪ್ರೀತಿ ಅಭಿರುಚಿಗಳಿಂದ ಉಂಟಾದ ಉತ್ಸಾಹದಿಂದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈ ಕಾರ್ಯವನ್ನು ಮೊದಲೇ ಸ್ವಲ್ಪಮಟ್ಟಿಗೆ ಮಾಡಿದ್ದನು. ಆದರೆ ಪ್ರಸ್ತುತ ಯೋಜನೆಯ ಗ್ರಂಥರಚನೆಗೆ ಈ ಪರಿಮಿತ ಕ್ಷೇತ್ರದ ಸಂಗ್ರಹಣೆ ಸಾಲದು. ಆದುದರಿಂದ ಶೋಭಾನೆಗಳನ್ನು ಬಿರುಸಾಗಿ ಎಲ್ಲ ಕಡೆಯಿಂದಲೂ ಸಂಗ್ರಹಿಸುವ ಕಾರ್ಯವನ್ನು 1981 ಸಪ್ಟಂಬರಿನಿಂದ ಕೈಗೊಳ್ಳಲಾಯಿತು. ಮೊದಲು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ (ಕಾಸರಗೋಡು ಪ್ರದೇಶವೂ ಸೇರಿ), ಅನಂತರ ಶಿವಮೊಗ್ಗ ಜಿಲ್ಲೆಯಲ್ಲಿ, ಆ ಮೇಲೆ ಉತ್ತರ ಕನ್ನಡ ಜಿಲ್ಲೆಯಲ್ಲಿ ಬೇರೆ ಬೇರೆ ಹಳ್ಳಿಗಳಲ್ಲಿ ಸುತ್ತಾಡಿ ಹಾಡುಗಳನ್ನು ಸಂಗ್ರಹಿಸಲಾಯಿತು. ನಡುನಡುವೆ ಒಂದೋ ಎರಡೋ ತಿಂಗಳು ಬಿಟ್ಟು ಕೊಂಡು ಸುಮಾರು ಎಂಟು ತಿಂಗಳ ಕಾಲವನ್ನು ಹಾಡುಗಳ ಸಂಗ್ರಹಕ್ಕೇ

ವಿನಿಯೋಗಿಸಲಾಗಿದೆ. ಸಂಗ್ರಹಿಸಿದ ಹಾಡುಗಳನ್ನು ಬರೆದಿಡಲು ಈ ನಡುವಣ ಬಿಡುಗಾಲವನ್ನು ಉಪಯೋಗಿಸಲಾಯಿತು. ಹವ್ಯಕ ಸಮಾಜ ಆತಿಥ್ಯ ನೀಡುವಲ್ಲಿ ಹೆಸರಾದುದು. 'ಅತಿಥಿದೇವೋ ಭವ' ಎಂಬುದು ಅವರಲ್ಲಿ ಬರಿಯ ಬಾಯಿನುಡಿಯಲ್ಲ, ಆಚರಣೆಯ ತತ್ತ್ವ. ಕ್ಷೇತ್ರಕಾರ್ಯಕ್ಕೆ ಹೋದಲ್ಲೆಲ್ಲ ಹವ್ಯಕರಿಂದ ತೆರೆದ ಹೃದಯದ ಆದರದ ಸಹಕಾರಗಳು ಒದಗಿವೆ. ಹೀಗೆ ಹಾಡುಗಳ ಸಂಗ್ರಹ ಕಾರ್ಯವನ್ನು ಐದು ವಿಧದಲ್ಲಿ ಮಾಡಲಾಗಿದೆ—

1 ಶೋಭಾನೆ ಹಾಡುಗಳ ತಾಳೆಗರಿ ಗ್ರಂಥಗಳ ಸಂಗ್ರಹ
2 ಹಾಡುಕಾರ್ತಿಯರಿಂದ ಹೇಳಿಸಿ, ಬರೆದುಕೊಳ್ಳುವುದು
3 ಧ್ವನಿಮುದ್ರಣ ಮಾಡಿಕೊಳ್ಳುವುದು
4 ಕೈಬರೆಹದ ಶೋಭಾನೆ ಪುಸ್ತಕಗಳನ್ನು ಪ್ರತಿ ತೆಗೆದು ಹಿಂದಿರುಗಿಸುವ ವಾಗ್ದಾನದಿಂದ ಪಡೆದುಕೊಳ್ಳುವುದು
5 ಇವೆಲ್ಲವನ್ನೂ ಪಡೆದು ತಂದ ಹಾಗೆಲ್ಲ ಕ್ರಮಬದ್ಧವಾಗಿ ಪುಸ್ತಕಗಳಲ್ಲಿ ಬರೆದಿಡುವುದು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದೊರಕಿರುವ ಓಲೆಗರಿಯ ಶೋಭಾನೆ ಹಾಡುಗಳ ಗ್ರಂಥಗಳಿವು—

1 ಸರಸಮ್ಮನ ಹಾಡಿನ ಪುಸ್ತಕ. ಬರೆದ ತಾರೀಕು 28–2–1897 ಕೊಟ್ಟವರು ಶ್ರೀ ಎಚ್. ಗೋಪಾಲ್, ಎಂ.ಎ., ಬಿ.ಎಲ್. ಇದರಲ್ಲಿ ಇರುವ ಶೋಭಾನೆಗಳು 92. ಕಡಂಬಿಲ ಶಂಭಟ್ಟನ ಭಾರ್ಯ ಸರಸಮ್ಮನ ಶೋಭನ ಪುಸ್ತಕ—ಎಂದು ಇದರಲ್ಲಿ ಬರೆದಿದೆ.
2 ಶೋಭಾನೆಗಳ ಪುಸ್ತಕ. ಬರೆದ ಕಾಲ : ವಿಕ್ರಮ ಸಂವತ್ಸರ (1880ನೇ ಇಸವಿ). ಕೊಟ್ಟವರು : ಸೇರಜೆ ನಾರಾಯಣ ಭಟ್ಟರು. ಇದರಲ್ಲಿ ಇರುವ ಶೋಭಾನೆಗಳು 112.
3 ತಾಳೆಗರಿಯ ಗ್ರಂಥ. ಇದರಲ್ಲಿ ಕನಕಾಂಗಿ ಕಲ್ಯಾಣ ಶೋಭಾನೆ (ಸೊಲ್ಲುಗಳು 90) ಮತ್ತು ಐರಾವತ ಯಕ್ಷಗಾನಗಳಿವೆ.
4 ಓಲೆಗರಿಯ ಹಾಡಿನ ಪುಸ್ತಕ. ಇದರಲ್ಲಿ ಮೀನಾಕ್ಷಿ ಕಲ್ಯಾಣ ಶೋಭಾನೆ ಇದೆ. ಸೊಲ್ಲುಗಳು 115.

ಹಾಡುಗಳನ್ನು ಬಾಯಲ್ಲಿ ಹೇಳಿಸಿ, ಬರೆದುಕೊಳ್ಳುವುದು ಕಷ್ಟದ ಕೆಲಸ. ಇದಕ್ಕೆ ಸಮಯವೂ ಹೆಚ್ಚು ಬೇಕು. ಸಂಗ್ರಾಹಕನೇ ಸ್ವತಃ ಹಾಡಿನ ಧಾಟಿಗಳನ್ನು

ಅಭ್ಯಾಸ ಮಾಡಿದವನಾಗಿದ್ದರೆ, ಪ್ರಾರಂಭದಲ್ಲಿ ಒಂದೆರಡು ಮಾದರಿಗಳನ್ನು ಹಾಡಿ ತೋರಿಸಿದರೆ, ಹಾಡುಗಾರ್ತಿಯರಿಗೆ ಒಳ್ಳೆಯ ಪ್ರಚೋದನೆಯಾಗಿ ಅವರು ತಮ್ಮ ಹಾಡಿನ ಸಂಗ್ರಹವನ್ನೆಲ್ಲ ಬಿಚ್ಚುವರು. ಇದು ಈ ಸಂಗ್ರಾಹಕನ ಅನುಭವ. ಹೇಳಿಸಿ ಬರೆಯುವಾಗ ಹಾಡುಗಾರ್ತಿಯರಿಗೆ ಅಲ್ಲಲ್ಲಿ ಸೊಲ್ಲುಗಳು ಮರೆತುಹೋಗುವುದೂ ಉಂಟು ; ಮತ್ತೆ ನೆನಪಾದಾಗ ಸೇರಿಸುವ ಸ್ಥಿತಿಯೂ ಉಂಟು. ಈ ರೀತಿಯ ಸಂಗ್ರಹಣೆಯ ಕಾರ್ಯವೂ ನಡೆದಿದೆ.

ಹಾಡುಗಳನ್ನು ಹಾಡಿದಂತೆಯೇ ಧ್ವನಿಮುದ್ರಣ ಮಾಡಿಕೊಳ್ಳುವುದರಿಂದ ಹೆಚ್ಚಿನ ಪ್ರಯೋಜನ ಉಂಟು. ಆಗ ನಿಲ್ಲಿಸದೆ ಹಾಡುವುದರಿಂದ, ನಡುನಡುವೆ ಮರೆತು ಹೋಗುವ ಅವಕಾಶ ಕಡಮೆ. ಒಂದು ವೇಳೆ ಮರೆತಿದ್ದರೆ, ಅದು ನೆನಪಿಗೆ ಬಾರದುದೇ ಆಗಿರುತ್ತದೆ. ಹಾಡಿದಂತೆ ಧ್ವನಿಮುದ್ರಣ ಮಾಡುವುದರಿಂದ ಹಾಡುಗಳ ಧಾಟಿ ಸಂರಕ್ಷಿತವಾಗುತ್ತದೆ. ಹಾಡುಗಳ ಧಾಟಿಯ ಸಂರಕ್ಷಣೆ ಹಾಡುಗಳ ಸಂಗ್ರಹದಲ್ಲಿ ಪ್ರಮುಖವಾದುದು. ಪ್ರಕೃತ ಮಾಡಲಾದ ಧ್ವನಿಮುದ್ರಿಕೆಗಳಲ್ಲಿ ಹಾಡಿನ ಸಮಗ್ರತೆ ಗಿಂತಲೂ ಧಾಟಿ ಸಂರಕ್ಷಣೆಗೆ ಹೆಚ್ಚಿನ ಬಲವನ್ನೂ ಒಲವನ್ನೂ ಇರಿಸಲಾಗಿದೆ. ಛಂದೋ ರೂಪನಿರ್ಣಯದ ಮೂಲಕ ಪಾಠಪರಿಷ್ಕರಣೆಗೆ ಇದು ಹೆಚ್ಚು ಸಹಾಯಕವಾಗಿದೆ.

ಹವ್ಯಕ ಹಾಡುಗಾರ್ತಿಯರಲ್ಲಿ ಸ್ವಲ್ಪಮಟ್ಟಿಗೆ ಅಕ್ಷರಜ್ಞಾನವುಳ್ಳವರೇ ಹೆಚ್ಚು. ಅಂಥವರಲ್ಲಿ ಹಾಡಿನ ಕೈಬರೆಹದ ಪುಸ್ತಕಗಳಿರುತ್ತವೆ. ಆದರೆ ಅವನ್ನು ಯಾರಿಗೂ ಕೊಡರು. ಕೊಟ್ಟರೆ ಹಿಂದಕ್ಕೆ ಬರುವುದಿಲ್ಲವೆಂದೇ ಅವರ ಅನುಭವ. ಹೀಗಿದ್ದರೂ ವ್ಯಕ್ತಿ, ಸಮಯ, ಸಂದರ್ಭಗಳನ್ನರಿತು ವರ್ತಿಸದಿರುವವರಲ್ಲ. ಆದುದರಿಂದಲೇ ನೂರಾರು ಮಂದಿ ಹವ್ಯಕ ಮಹಿಳಾಮಣಿಯರು—ಹಾಡುಗಳನ್ನು ಬಲ್ಲವರು, ಹಾಗೂ ಕೈಬರೆಹದ ಪುಸ್ತಕಗಳುಳ್ಳವರು ತಮ್ಮ ಹಾಡಿನ ಪುಸ್ತಕಗಳನ್ನು ಈ ಸಂಗ್ರಾಹಕನಿಗೆ ದಯೆಪಾಲಿಸಿರುತ್ತಾರೆ. ಈ ಪುಸ್ತಕಗಳಿಂದ ಹಾಡುಗಳನ್ನು ಪ್ರತಿತೆಗೆದು ಪ್ರಾಮಾಣಿಕ ವಾಗಿ ಅಂಚೆಮೂಲಕ ರಿಜಿಸ್ಟ್ರಿ ಮಾಡಿಯೇ ಹಿಂದಿರುಗಿಸಲಾಗಿದೆ.

ಹೀಗೆ ಹೇಳಿಸಿ, ಪಡೆದುಕೊಂಡ ಹಾಡುಗಳಲ್ಲಿ ಮತ್ತು ಹಾಡಿನ ಪುಸ್ತಕಗಳಿಂದ ಪ್ರತಿ ತೆಗೆದುಕೊಂಡವುಗಳಲ್ಲಿ ತಪ್ಪುಗಳು ಎಷ್ಟೋ ; ಅಲ್ಲಲ್ಲಿ ಹಾಡುಗಳ ಧಾಟಿ ಕೆಡುವ, ಓಟ ತಡೆವ, ಅಧಿಕಾಕ್ಷರ ನ್ಯೂನಾಕ್ಷರಗಳು ಅವೆಷ್ಟೋ ! ಅವನ್ನು ಸರಿಗೊಳಿಸದೆ ತಪ್ಪುತಪ್ಪಾಗಿಯೇ ಪಾಠ ಸ್ವೀಕಾರ ಮಾಡುವುದು, ಜಾನಪದ ಎಂದುಕೊಂಡು ಅಸಂಬದ್ಧವನ್ನು ಪರಿಷ್ಕರಿಸದೆ ಇಟ್ಟುಕೊಳ್ಳುವುದು ಸಮಂಜಸವಲ್ಲವೆಂಬುದನ್ನು ಈ ಗ್ರಂಥದಲ್ಲಿ ಲಕ್ಷಿಸಲಾಗಿದೆ. ಏನೂ ಅರ್ಥಬೋಧೆಯಾಗದ ಕೆಲವು ಹಾಡುಗಳನ್ನು ಕೈಬಿಡಲಾಗಿದೆ. ಅರ್ಥವಾಹಿಯಲ್ಲದ ಹಾಡುಗಳ ರಚನೆ ಯಾವ ಕಾಲಕ್ಕೂ ಆಗಿರ ಲಾರದು—ಎಂಬುದನ್ನು ಗಮನದಲ್ಲಿ ಇರಿಸಿಕೊಳ್ಳಲಾಗಿದೆ. ಸಂಗ್ರಹಿಸಿದ

ಹಾಡುಗಳನ್ನೆಲ್ಲ ತುಂಬ ಶ್ರಮವಹಿಸಿ ಪುಸ್ತಕಗಳಲ್ಲಿ ಬರೆದಿಟ್ಟುಕೊಳ್ಳಲಾಗಿದೆ. ಬರೆದಿಡುವಾಗ ಪ್ರತಿಯೊಂದು ಹಾಡಿನ ಸೊಲ್ಲುಗಳು ಬೇರೆ ಬೇರೆಯಾಗಿ ಕಾಣಿಸುವಂತೆ ನಡುನಡುವೆ ಒಂದು ಗೆರೆಯಷ್ಟು ಸ್ಥಳ ಬಿಡಲಾಗಿದೆಯಲ್ಲದೆ, ಸೊಲ್ಲುಗಳನ್ನು ಪಾದ ಬದ್ಧಗೊಳಿಸಲಾಗಿದೆ. ಗ್ರಂಥಸಿದ್ಧತೆಗೆ ಈ ಬಗೆಯ ಪೂರ್ವನಿಯೋಜನೆ ಅವಶ್ಯಕ ವೆಂದು ಬಗೆಯಲಾಗಿದೆ. ಹೀಗೆ ಬರೆಯಲಾದ ಶೋಭಾನೆ ಹಾಡುಗಳು ಸುಮಾರು ಇನ್ನೂರು ಪುಟಗಳುಳ್ಳ ಮೂವತ್ತೈದು ಅಭ್ಯಾಸಪುಸ್ತಕಗಳಲ್ಲಿ ಎರಡೂ ಪುಟಗಳಲ್ಲಿ ತುಂಬುವಷ್ಟಾಗಿವೆ !

ಹಾಡುಗಳನ್ನು ಪುಸ್ತಕಗಳಲ್ಲಿ ಬರೆದಿಡುವಾಗ ಒಂದೇ ಹಾಡಿಗೆ ಹಲವು ಕಡೆ ದೊರೆತ ಪಾಠಗಳಿದ್ದಲ್ಲಿ ಪಾಠಾಂತರವನ್ನು ಗುರುತಿಸಿಕೊಳ್ಳಲಾಗಿದೆ ; ಹೆಚ್ಚಿನ ಸೊಲ್ಲು ಗಳು ಮತ್ತೆ ಸಿಕ್ಕಿದವನ್ನು ಸೇರಿಸಿಕೊಳ್ಳಲಾಗಿದೆ. ಇಂತಿಷ್ಟು ಕ್ಷೇತ್ರಕಾರ್ಯ ಪೂರ್ಣವಾದ ಮೇಲೆಯೇ ಈ ಅಂತಿಮದ ಗ್ರಂಥ ಸ್ವರೂಪಕರಣ ಮಾಡಲು ಉಪಕ್ರಮಿಸಲಾಗಿದೆ. ನಾಲ್ಕು ವರ್ಷಗಳ ಕಾರ್ಯವನ್ನು ಹಗಲಿರುಳ ಪ್ರಯತ್ನದಿಂದ ಮೂರು ವರ್ಷಗಳಲ್ಲಿ ಮುಗಿಸಲು ಒಪ್ಪಿಕೊಂಡು, ಮತ್ತೆ ನಾಲ್ಕು ತಿಂಗಳಲ್ಲಿ ಪೂರ್ಣಗೊಳಿಸಲಾಗಿದೆ.

## ಭಾಷೆ ಮತ್ತು ರಚನಾವೈಶಿಷ್ಟ್ಯ

'ಹವ್ಯಕರ ಶೋಭಾನೆಗಳು' ಎನ್ನುವಾಗ ಹವ್ಯಕರ ಭಾಷಾ ವಿಚಾರವೂ ಲಕ್ಷ್ಯಾರ್ಹ. ಹವ್ಯಕರ ಮನೆಮಾತು ಕನ್ನಡ, ಈ ಕನ್ನಡ ಪ್ರಚಲಿತವಾಗಿರುವ ಗ್ರಾಂಥಿಕ ಕನ್ನಡವಲ್ಲ. ಹಳಗನ್ನಡದ ರೂಪಗಳನ್ನು ಹೆಚ್ಚಿನ ಮಟ್ಟಿಗೆ ಉಳಿಸಿಕೊಂಡು ಬಂದಿರುವ ಒಂದು ಉಪಭಾಷೆಯಂತಿದೆ. ಆಡುಮಾತಾಗಿರುವುದರಿಂದ ಇದರಲ್ಲಿ ಪ್ರಾದೇಶಿಕ ವ್ಯತ್ಯಾಸಗಳಿವೆ. ದಕ್ಷಿಣ ಕನ್ನಡ ಜಿಲ್ಲೆಯ ಹವ್ಯಕರಲ್ಲಿಯೆ ಕುಂಬಳೆ (ಕಾಸರಗೋಡಿನ ಭಾಗ), ವಿಟ್ಲ, ಪುತ್ತೂರು, ಸುಳ್ಯ ಸೀಮೆಗಳೊಳಗೆ ಭಾಷಾ ಪ್ರಯೋಗದಲ್ಲಿ ಅಲ್ಲಲ್ಲಿ ವ್ಯತ್ಯಾಸಗಳು ಕಾಣುತ್ತವೆ. ಶಿವಮೊಗ್ಗ ಜಿಲ್ಲೆ, ಉತ್ತರ ಕನ್ನಡ ಜಿಲ್ಲೆಗಳಲ್ಲಿಯೂ ಹೀಗೆ ಸೀಮೆ ಸೀಮೆಗೂ ಕೆಲವು ರೂಪ ವ್ಯತ್ಯಾಸಗಳಿರುವುದು ಸಹಜ. ಈ ವ್ಯತ್ಯಾಸದ ಪ್ರಭಾವವನ್ನು ಅಲ್ಲಲ್ಲಿಯ ಜಾನಪದ ಗೀತಗಳಲ್ಲಿ ವಿಶೇಷಾವ ಲೋಕನದಿಂದ ಗುರುತಿಸಲು ಸಾಧ್ಯವಿದೆ. ಶೋಭಾನೆಗಳ ಮಟ್ಟಿಗೆ ತೆಗೆದುಕೊಂಡರೆ, ದಕ್ಷಿಣ ಕನ್ನಡ ಜಿಲ್ಲೆಯ ಹವ್ಯಕರ ಶೋಭಾನೆಗಳಲ್ಲಿ ಹೆಚ್ಚಿನವು ಶಿಷ್ಟ ಭಾಷೆಯಲ್ಲಿ ಇವೆ. ಆದರೆ ಹವ್ಯಕರ ದೇಶಿ ಶಬ್ದಗಳು ಆ ಹಾಡುಗಳಲ್ಲಿ ಅಲ್ಲಲ್ಲಿ ತಲೆಯೆತ್ತಿಕೊಂಡು ಬಂದಿವೆ. ಹಾಡುಗಳ ರಚನೆ ಕೂಡ, ದಕ್ಷಿಣ ಕನ್ನಡದವು ಹೆಚ್ಚು ಪ್ರೌಢ ; ಪದ್ಯ ರಚನಾ ಚಾತುರ್ಯ ಲಕ್ಷಕವಾದುವು ಅವುಗಳಲ್ಲಿ ಕೆಲವು. ಪ್ರಾಸಾನುಪ್ರಾಸಬದ್ಧವಾದವು ಬಹಳವಾಗಿವೆ. ಉತ್ತರ ಕನ್ನಡ ಶಿವಮೊಗ್ಗ ಜಿಲ್ಲೆಗಳ ಹವ್ಯಕರ ಶೋಭಾನೆಗಳಲ್ಲಿ

ಅಲ್ಲಿಯವರ ಆಡುಮಾತಿನ ಛಾಯೆಯಿದೆ. ನಡುನಡುವೆ ಕೆಲವೆಡೆ ಗ್ರಾಮ್ಯರೂಪ ಹೆಚ್ಚು. ಉದಾಹರಣೆಗೆ—ದ್ಯಾವರು (ದೇವರು), ತ್ವಾಟ (ತೋಟ), ಯದುರು (ಎದುರು), ಪಸ್ತಿಲು (ಹೊಸ್ತಿಲು), ಉದಿಕ (ಉದಕ)—ಇತ್ಯಾದಿ. ದಕ್ಷಿಣ ಕನ್ನಡ ಜಿಲ್ಲೆಯ ಹವಿಕರ ಹಾಡುಗಳು ಶುದ್ಧವಾದ ಭಾಷೆಯಲ್ಲಿವೆ. ಆದರೆ ಕೆಲವಾರು ತ್ರಿಪದಿಗಳಲ್ಲಿ ಹವಿಕರ ವಿಶಿಷ್ಟ ಭಾಷಾ ಪ್ರಯೋಗ ಅಲ್ಲಲ್ಲಿ ಕಂಡುಬರುತ್ತದೆ. ಉದಾಹರಣೆ—

ಅಬ್ಬೆಯ ಮಗ ಬಂದ ಅಬ್ಬಿಲಿ ನೀರಿಲ್ಲೆ
ಕಬ್ಬಿನ ಕೋಲ ಎಸರ್ಹಿಂಡಿ—
ಎಸರ್ಹಿಂಡಿ ಪಾಯಸ ಮಡಗಿ
ಅಬ್ಬೆಯ ಮಗನ—ಉಂಬ್ಲೇ (ಉಣಲ್ಹೇಳಿ)

(ಬಂದ—ಎಂಬಲ್ಲಿಯ ದಕಾರ, ಮಗನ—ಎಂಬಲ್ಲಿ ಗಕಾರ ಅನುನಾಸಿಕಗಳು).

ಇಲ್ಲಿಲ್ಲೆ ಮಕ್ಳೋಗೆ ಹಲ್ಲೆಲ್ಲ ಬಂದಾವು
ಇಲ್ಲೆಲ್ಲೊ ಕಾಣೆ ಎಳೆಬೊಂಡ—ಇವನಜ್ಜ
ಕಲ್ಲೊಡಸಿ ತೆಂಗು—ನೆಡುಸುಗು

(ಅಬ್ಬೆ—ತಾಯಿ. ಅಬ್ಬಿ—ನೀರ ಬೀಳು. ಎಸರು—ರಸ. ಉಂಬಲೆ ಹೇಳಿ—ಊಟ ಮಾಡಲು ಹೇಳಿ. ಮಕ್ಳೋಗೆ—ಮಕ್ಕಳಿಗೆ. ಎಳೆಬೊಂಡ—ಎಳನೀರು. ಕಲ್ಲೊಡೆಸಿ—ಕಲ್ಲನ್ನು ಒಡೆಯಿಸಿ. 'ಅಜ್ಜ' ಎಂಬಲ್ಲಿ ಅಂತ್ಯಾಕ್ಷರ ಅನುನಾಸಿಕ.)

ಉತ್ತರ ಕನ್ನಡ, ಶಿವಮೊಗ್ಗ ಜಿಲ್ಲೆಗಳ ಹವ್ಯಕರ ತ್ರಿಪದಿಗಳಲ್ಲಿ ಪ್ರಾಸವಿಲ್ಲದವು ಹೆಚ್ಚು; ಜಾನಪದ ಲಕ್ಷಣ ಅಧಿಕವೆಂಬುದು ಈ ಸಂಗ್ರಹದ ಅವಲೋಕನದಿಂದ ಓದುಗರಿಗೆ ಗೊತ್ತಾದೀತು. ಛಂದೋವೈಶಿಷ್ಟ್ಯ, ರಚನಾ ಚಾತುರ್ಯಗಳಲ್ಲಿ ದಕ್ಷಿಣ ಕನ್ನಡದ ಶೋಭಾನೆಗಳು ಪ್ರೌಢವಾಗಿ ಬೇರೆಯವಕ್ಕಿಂತ ಮೇಲುಮಟ್ಟದವಾಗಿವೆ. ಅಲ್ಲಿಲ್ಲದ ಧಾಟಿಗಳು ಇಲ್ಲಿ, ಇಲ್ಲಿಲ್ಲದ ಧಾಟಿಗಳು ಅಲ್ಲಿ ಕಂಡುಬರುವುದರಿಂದ ಈ ಎರಡೂ ಕಡೆಯವನ್ನು ಸಂಗ್ರಹಿಸಿ ಮಾಡಲಾಗಿರುವ ಪರಿಶೀಲನೆ ಅನನ್ಯವೆನಿಸುವುದರಲ್ಲಿ ಸಂಶಯವಿಲ್ಲ.

## ಸಂಪಾದನ ಕಾರ್ಯ

ಗ್ರಂಥ ಸಂಪಾದನೆ ಎಂಬುದು ಒಂದು ಶಾಸ್ತ್ರವೆ ಆಗಿ ಈಗ ಬೆಳೆದಿದೆ. ಹಳೆಯ ಕಾವ್ಯಗಳು ಬೇರೆ ಬೇರೆ ಕಡೆ ಹಲವು ಪ್ರತಿಗಳಲ್ಲಿ ದೊರೆತಾಗ, ಅವುಗಳ ನೈಜರೂಪ

ವನ್ನು ಕಂಡುಹಿಡಿದು, ಅದನ್ನು ಬೆಳಕಿಗೆ ತರುವ ಕೆಲಸಕ್ಕೆ ಈ ಶಾಸ್ತ್ರ ನೆರವಾಗುತ್ತದೆ. ಪಾಠ ಪರಿಷ್ಕರಣ ಇದರಲ್ಲಿ ಮುಖ್ಯವಾದ ಅಂಶ. ಪ್ರಕೃತ ಶೋಭಾನೆಗಳ ಸಂಗ್ರಹ ಕಾರ್ಯವಾದ ಮೇಲಿನ ಕಾರ್ಯ ಸಂಪಾದನೆ. ಸಂಗ್ರಹಿಸಿದ್ದನ್ನು ಹಾಗೆಯೇ ಅಚ್ಚು ಹಾಕಿಸುವುದು ಸಂಪಾದನೆಯೆನಿಸದು. ಜಾನಪದ ಗೀತಗಳ ಸಂಗ್ರಾಹಕರು, ಸಂಪಾದನ ಕಾರ್ಯಕ್ಕೆ ಮಹತ್ತ್ವ ಕೊಟ್ಟವರು ವಿರಳ. ಸಂಪಾದನೆಯ ಶಾಸ್ತ್ರ ಜಾನಪದ ಗೀತ ಗಳಿಗಲ್ಲ ಎಂಬ ಅಭಿಪ್ರಾಯದವರೇ ಹೆಚ್ಚು. ಇದರಿಂದಾಗಿ ಇಂದಿನ ಅನೇಕ ಮುದ್ರಿತ ವಾದ ಹಾಡುಗಳು ಕೆಲವೆಡೆ ಅರ್ಥವಾಗದಷ್ಟು ತಪ್ಪಿಹೋಗಿವೆ ; ಕೆಲವು ಧಾಟಿಗೆ ಕೂಡಿಬರುವುದಿಲ್ಲ ; ಸ್ಖಾಲಿತ್ಯಗಳು, ಅತ್ಯಕ್ಷರಗಳು ಅತಿರೇಕ. ಪಾಠಾಂತರಗಳನ್ನು ಕೊಟ್ಟಿರುವುದೂ ಇಲ್ಲ. ಜಾನಪದ ಗೀತಗಳನ್ನು ಹೇಗೆ ಪಾಠಪರಿಷ್ಕಾರ ಮಾಡಬೇಕು, ಸಂಪಾದನೆ ಮಾಡಬೇಕು ಎಂಬುದಕ್ಕೆ ದಿಗ್ದರ್ಶನವನ್ನು ಕೊಟ್ಟವರಿದ್ದಾರೆ.* ಶೋಭಾನೆ ಹಾಡುಗಳ ಸಂಪಾದನೆಗೂ ಇದು ಅನುಸರಣೀಯ.

'ಸಂಪಾದನ'ವೆಂದರೆ ಗಳಿಸುವುದು, ಪಡೆಯುವುದು. ಹಣ ಸಂಪಾದನೆ, ಗುಣ ಸಂಪಾದನೆ ಎಂಬಲ್ಲೆಲ್ಲ ಈ ಅರ್ಥ ಸರಿ. 'ಗ್ರಂಥ ಸಂಪಾದನೆ' ಎಂಬಲ್ಲಿ ಆ ಗ್ರಂಥ ವನ್ನು (ಗ್ರಂಥ ಪ್ರತಿಯನ್ನು) ಪಡೆದಲ್ಲಿಗೆ ಕಾರ್ಯ ಮುಗಿಯುವುದಿಲ್ಲ. ಆ ಪ್ರತಿಯಲ್ಲಿ ಪ್ರತಿಕಾರರಿಂದಾದ ತಪ್ಪುಗಳಿರಬಹುದು. ಆದುದರಿಂದ ಶುದ್ಧ ಪಾಠವನ್ನು ಕಂಡು ಹಿಡಿದು ಪಾಠ ಪರಿಷ್ಕರಣ ಮಾಡುವುದು ಸಂಪಾದನೆಯ ಪ್ರಮುಖ ಭಾಗ. ಕವಿಕೃತ ಮೂಲ ಪಾಠವನ್ನು ಪಡೆಯುವುದು ಸಂಪಾದನೆ. ಈ ಅರ್ಥದಲ್ಲಿ 'ಪಡೆಯುವುದು' ಎಂಬುದು ಸಮುಚಿತವಾಗಬಹುದು. 'ಸಂಪಾದನ' ಎಂಬುದಕ್ಕೆ 'ಶುದ್ಧಪಡಿಸುವುದು' ಎಂಬರ್ಥವೂ ಇದೆ. ಗ್ರಂಥ ಸಂಪಾದನೆಯಲ್ಲಿ ಇದೇ ಅರ್ಥ ಹೆಚ್ಚು ಮಾನ್ಯ. ಶೋಭಾನೆಗಳ ಸಂಪಾದನೆಯಲ್ಲಿಯೂ ಇದೇ ಅರ್ಥವನ್ನಿಟ್ಟುಕೊಳ್ಳಬೇಕು.

ಈ ಶೋಭಾನೆಗಳ ಸಂಪಾದನೆಯಲ್ಲಿ ಇಂತಹದೊಂದು ಗ್ರಂಥದ ಉಪಯುಕ್ತತೆ ಯನ್ನು ಮೊದಲಾಗಿ ಲಕ್ಷ್ಯವಿಡಲಾಗಿದೆ. "ಪ್ರಯೋಜನಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ" (ಪ್ರಯೋಜನದ ಉದ್ದೇಶವಿಲ್ಲದೆ ಯಾವ ಮೂಢನೂ ಕೆಲಸ ಮಾಡುವು ದಿಲ್ಲ) ಎಂದು ಸುಭಾಷಿತ ಸಾರುತ್ತದೆ. ಈ ಗ್ರಂಥಕ್ಕೆ ಸಂಬಂಧಿಸಿದಂತೆ, ಅಂತಹ ಉಪಯೋಗಗಳಲ್ಲಿ ಮುಖ್ಯವಾದುದು—ಇಂದಿಗೂ ನಮ್ಮ ಸಾಮಾಜಿಕ ಶುಭಕಾರ್ಯ ಗಳನ್ನು ಶಾಸ್ತ್ರವಿಧಿಯಂತೆ ಆಚರಿಸುವುದಿದ್ದರೆ, ಅಂತಹ ಸಂದರ್ಭಗಳಲ್ಲಿ ವಾಡಿಕೆಯಂತೆ ಶೋಭಾನೆಗಳನ್ನು ಹಾಡುವುದಿದ್ದರೆ, ಈಗ ಹಾಡುಗಳೇ ಇಲ್ಲ ಎಂಬ ಸ್ಥಿತಿ ಬರಬಾರದು ಎಂಬುದು. ಈ ಹಾಡುಗಳ ಮೂಲಕ ಅದೊಂದು ವಿಶಿಷ್ಟ ಸಮಾಜದ ಜನಜೀವನ, ಸಂಸ್ಕೃತಿ, ಗೀತಸಾಹಿತ್ಯಗಳನ್ನು ಅಧ್ಯಯನ ಮಾಡಲು ಆಸಕ್ತರಾಗುವವರಿಗೆ ಸಮೃದ್ಧ

---

* ಕೆ. ಶಿವರಾಮ ಐತಾಳ—ದಕ್ಷಿಣ ಕನ್ನಡದ ಜನಪದ ಸಾಹಿತ್ಯ, 1971, ಪೀಠಿಕೆ

ವಾದ ಸೊತ್ತನ್ನು ಒದಗಿಸುವುದು ಇನ್ನೊಂದು ಉದ್ದೇಶ. ಅವನ್ನೆಲ್ಲ ಬಿಟ್ಟರೂ ಈ ಬಗೆಯ ಸಾಹಿತ್ಯ ಸಂಪತ್ತನ್ನೂ ಅದರ ಮೌಲ್ಯವನ್ನೂ ಗುರುತಿಸಿ, ಸಂರಕ್ಷಿಸುವುದೇ ಮುಖ್ಯೋದ್ದೇಶವೆನ್ನಬಹುದು.

ಇದರ ಸಂಕಲನದಲ್ಲಿ ಒಂದು ಬಗೆಯ ಕ್ರಮಬದ್ಧತೆಯನ್ನು ಅನುಸರಿಸಲಾಗಿದೆ. ಶೋಭಾನೆಗಳ ಕೈಬರೆಹದ ಪುಸ್ತಕಗಳಲ್ಲಿ ಹಾಡುಗಳ ಅನುಕ್ರಮ ಸರಿಯಿರುವುದಿಲ್ಲ. ಒಂದೆಡೆ ವರನ ದಿಬ್ಬಣ ಬಂದ ಹಾಡಿದ್ದರೆ, ಅನಂತರದ ಹಾಡು ಬ್ರಹ್ಮಚಾರಿಗೆ ಉಡುಗೊರೆ ಎಂಬುದು ಇರುವುದುಂಟು. ಆ ಮೇಲಿನದು 'ಸತ್ಯನಾರಾಯಣ ದೇವರಿಂದ ಹೂ ಬೇಡುವುದು' ಬಂದಿರುವುದಿದೆ. ಇತ್ತೀಚೆ ಬಂದ ಅನೇಕ ಮುದ್ರಿತ ಪುಸ್ತಕಗಳಲ್ಲಿ ಕೂಡ, ಹಾಡುಗಳ ಅನುಕ್ರಮ ಸೂಕ್ತವಾಗಿಲ್ಲ. ಶುದ್ಧಪಾಠದ ಕಡೆಗೆ ಲಕ್ಷ್ಯಹರಿಸದೆ, ಒಟ್ಟಿನಲ್ಲಿ ಹಾಡುಗಳನ್ನು ಒಂದೆಡೆ ಕೂಡಿ ಹಾಕಿಡುವುದೇ ಅವುಗಳ ಮುಖ್ಯೋದ್ದೇಶ. ಅವುಗಳಿಂದ ಸಂದರ್ಭೋಚಿತವಾಗಿ ಆಯ್ದುಕೊಳ್ಳುವುದು ಹಾಡುವವರಿಗೆ, ಓದುಗರಿಗೆ ಬಿಟ್ಟಿದ್ದು. ಆ ರೀತಿಯಲ್ಲಿ ಬೆರಕೆಯ ಸಂಕಲನ ಸೂಕ್ತವಲ್ಲವೆಂದು ಪರಿಗಣಿಸಿ, ಇದರಲ್ಲಿ ಶುಭ ಸಂಸ್ಕಾರಾನುಕ್ರಮದಿಂದ ಹಾಡಗಳನ್ನು ಜೋಡಿಸಲಾಗಿದೆ.

ಶುಭಸಂಸ್ಕಾರಗಳಿಗೆ ಪ್ರಾರಂಭ ಯಾವುದು ? ಧರ್ಮಶಾಸ್ತ್ರಗಳನ್ನು ನೋಡಿದರೆ ಮನು, ಯಾಜ್ಞವಲ್ಕ್ಯ ಮುಂತಾದ ಸ್ಮೃತಿಗಳ ಪ್ರಕಾರ ಶುಭ ಸಂಸ್ಕಾರಗಳು ಗರ್ಭಾಧಾನ (ನಿಷೇಕ) ದಿಂದ ಪ್ರಾರಂಭವಾಗಿ ವಿವಾಹದಲ್ಲಿ ಕೊನೆಗೊಳ್ಳುತ್ತವೆ. ಇದು ಒಂದು ವಿಧದ ಅನುಕ್ರಮ. ಗರ್ಭಾಧಾನವಾಗಬೇಕಾದರೆ ವಿವಾಹವಾಗಿರಬೇಕಷ್ಟೆ ? ಆದುದರಿಂದ ಇಲ್ಲಿ ವಿವಾಹವನ್ನು — ಅಂದರೆ ಗೃಹಸ್ಥಾಶ್ರಮದ ಪ್ರಾರಂಭವನ್ನು ಮೊದಲನೆಯ ಶುಭಸಂಸ್ಕಾರವನ್ನಾಗಿ ತೆಗೆದುಕೊಳ್ಳಲಾಗಿದೆ. ಇದಕ್ಕೆ ಇತರ ಕಾರಣಗಳೂ ಇವೆ, ವಿವಾಹಸಂಸ್ಕಾರವೆಂಬುದು ಸಂನ್ಯಾಸಿಗಳಿಗೆ ಹೊರತಾಗಿ, ಸಮಗ್ರ ಮಾನವ ಜಾತಿಗೇ ಅನ್ವಯಿಸುವ ರಸಾತ್ಮಕ ಸಂಸ್ಕಾರ. ಆದುದರಿಂದ ಈ ಪ್ರಾರಂಭವು ಜಾತ್ಯತೀತ ಹಾಗೂ ಸಾರ್ವಲೌಕಿಕ ಮಹತ್ತ್ವವುಳ್ಳುದಾಗಬೇಕೆಂಬ ದೃಷ್ಟಿಯನ್ನಿಲ್ಲಿ ಇಟ್ಟುಕೊಳ್ಳಲಾಗಿದೆ. ಇನ್ನೊಂದು ಕಾರಣವೆಂದರೆ, ಈ ಭಾಗವಂತೂ ಹೆಚ್ಚು ಆಕರ್ಷಕವಾದುದು, ರಮಣೀಯವಾದುದು ಮತ್ತು ವಿಸ್ತಾರವಾದುದು. ರಸಶಾಸ್ತ್ರಗಳು ನವರಸಗಳನ್ನು ಹೇಳುವಾಗ ಶೃಂಗಾರ ರಸವನ್ನೇ ಮೊದಲು ವಿವರಣೆಗೆತ್ತಿಕೊಂಡಿರುವುದು ಲಕ್ಷ್ಯಾರ್ಹ. ಈ ಗ್ರಂಥದ ರೂಪರಚನೆಯಲ್ಲಿ ಅದನ್ನೆ ಅನುಸರಿಸಲಾಗಿದೆ ಎನ್ನಬಹುದು. ಇನ್ನೊಂದು ಅತಿ ಮುಖ್ಯ ಕಾರಣವೂ ಇದೆ—ಹವ್ಯಕರು ಬೌಧಾಯನ ಗೃಹ್ಯಸೂತ್ರವನ್ನು ಅವಲಂಬಿಸುವವರೆಂಬುದು ಮರೆಯತಕ್ಕುದಲ್ಲ. ಬೌಧಾಯನ ಸೂತ್ರದ ಪ್ರಕಾರ, ವಿವಾಹವೇ ಮೊದಲನೆಯ ಸಂಸ್ಕಾರವಾಗಿದ್ದು ಬೋಧಾಯನರು ಅದನ್ನೇ ಮೊದಲು ಹೇಳಿದ್ದಾರೆ.

ಷೋಡಶ (ಹದಿನಾರು) ಶುಭಸಂಸ್ಕಾರಗಳಲ್ಲಿ (ವಿವರವನ್ನು ಪರಾಮರ್ಶನ ಭಾಗದ 'ಶೋಭಾನೆ-ಶುಭಕಾರ್ಯ' ಎಂಬ ಅಧ್ಯಾಯದಲ್ಲಿ ಕಾಣಬಹುದು) ವಿವಾಹ, ಉಪನಯನಗಳನ್ನು ಅವಶ್ಯವಾಗಿ ಹವಿಕರು ಆಚರಿಸುತ್ತಾರೆ. ಇನ್ನುಳಿದವುಗಳಲ್ಲಿ ಕೆಲವನ್ನು ಸಕಾಲದಲ್ಲಿ ಆಚರಿಸುವುದೂ ಉಂಟು. ಮುಂದೊಮ್ಮೆ ಪ್ರಧಾನವಾದ ಸಂಸ್ಕಾರವನ್ನು ಆಚರಿಸುವಾಗ, ಹಿಂದಿನ ಸಂಸ್ಕಾರಗಳನ್ನು ಸಕಾಲದಲ್ಲಿ ಆಚರಿಸದುದಕ್ಕಾಗಿ ಪ್ರಾಯಶ್ಚಿತ್ತ ಮಾಡಿ, ಅವನ್ನೆಲ್ಲ ಒಟ್ಟಿಗೆ ಆಚರಿಸಿದ ಶಾಸ್ತ್ರ ಮಾಡಿಕೊಳ್ಳುವುದೂ ಉಂಟು. ಉಪಲಬ್ಧವಿರುವ ಶೋಭಾನೆ ಹಾಡುಗಳ ಸಂಖ್ಯೆಯನ್ನು ಅನುಲಕ್ಷಿಸಿ ಈ ಗ್ರಂಥದಲ್ಲಿ ಸಂಸ್ಕಾರ ವಿಷಯಕವಾದ ಅಧ್ಯಾಯಗಳಾಗಿ ಮದುವೆ, ಜನ್ಮೋತ್ಸವ, ಉಪನಯನ—ಎಂಬೀ ಮೂರನ್ನು ಮಾತ್ರ ಶೀರ್ಷಿಕೆಗಳಿಗೆ ಬಳಸಲಾಗಿದೆ. ನಾಲ್ಕನೆ ಅಧ್ಯಾಯ 'ಐಚ್ಛಿಕ'—ಎಂದರೆ, ಇಷ್ಟಸಿದ್ಧಿಗಾಗಿ, ಅನಿಷ್ಟ ಪರಿಹಾರಕ್ಕಾಗಿ ಹಾಗೂ ಪುಣ್ಯಪ್ರಾಪ್ತಿಗಾಗಿ ಮಾಡುವ ಪೂಜೆ, ವ್ರತ, ಹಬ್ಬ, ಹೋಮಗಳಿಗೆ ಸಂಬಂಧಿಸಿದ ಶೋಭಾನೆಗಳು ಈ ಅಧ್ಯಾಯದಲ್ಲಿ ಬರುತ್ತವೆ. ಐದನೆಯ ಅಧ್ಯಾಯ ಪುಣ್ಯಕಥಾತ್ಮಕವಾದ ಶೋಭಾನೆಗಳದು; ಕತೆಹಾಡುಗಳದು. ಇವು ಬೇಕಾದಾಗ ಹೇಳಿ (ಹಾಡಿ) ಕೊಳ್ಳುವಂಥವು. ಹಾಡುಗಳಿಗೆ ಶೀರ್ಷಿಕೆಯಾಗಿ ಆಯಾ ಹಾಡಿನ ತಿರುಳ್ನುಡಿಯನ್ನು ಉದ್ಧರಿಸಿ ಬಳಸಿಕೊಳ್ಳುವುದು ಅನೇಕ ಸಂಗ್ರಾಹಕರು ರೂಢಿಸಿಕೊಂಡ ಹೊಸ ಕ್ರಮ. ಅದನ್ನಿಲ್ಲಿ ಅನುಸರಿಸಿಲ್ಲ. ಹಳೆಯ ಪದ್ಧತಿಯಂತೆ, ಹಾಡುಗಳ ಸಂದರ್ಭ—ಕಾರ್ಯಸೂಚಕವಾಗಿಯೇ ಶೀರ್ಷಿಕೆಗಳನ್ನು ಕೊಡಲಾಗಿದೆ.

ಕ್ಷೇತ್ರಕಾರ್ಯ ನಡೆಸಿ, ಸಂಗ್ರಹಿಸಿರುವ ಹಾಡುಗಳ ಸಂಖ್ಯೆ ಸಾವಿರಾರು. ಅವುಗಳಲ್ಲಿ ಒಂದೇ ವಿಷಯಕ್ಕೆ ಸಂಬಂಧಿಸುವ ಹಾಡುಗಳು ಹತ್ತಾರು. ಆದರೆ ಒಂದೊಂದು ವಿಷಯಕ್ಕೆ ಒಂದೊಂದೆ ಸಾಕು. ಹೀಗಿದ್ದರೂ ಆಯಾ ಹಾಡಿಗಿರುವ ಮಹತ್ತ್ವದ ಮತ್ತು ವೈಶಿಷ್ಟ್ಯದ ದೃಷ್ಟಿಯಿಂದ ಕೆಲವೆಡೆ ಒಂದೇ ವಿಷಯಕ್ಕೆ ಒಂದಕ್ಕಿಂತ ಹೆಚ್ಚು ಹಾಡುಗಳನ್ನು ಆಯ್ದುಕೊಂಡುದೂ ಇದೆ. ಹೀಗೆ ಈ ಗ್ರಂಥಕ್ಕಾಗಿ ಆಯ್ಕೆಯಾದ ಮೇಲೆ ಉಳಿದಿರುವವನ್ನು ಬೇರೊಂದು ಬೃಹತ್ಸಂಕಲನವಾಗಿ ಹೊರತರುವ ಯೋಚನೆಯೂ ಇದೆ; ಅದು ಅವಶ್ಯವೂ ಹೌದು. ಪ್ರಕೃತ, ಇದೊಂದು ಎಲ್ಲ ಶೋಭಾನೆಗಳ ಸಂಗ್ರಹವಾಗದೆ, ಎಲ್ಲ ಪ್ರಸ್ತಗಳ ಪ್ರಾತಿನಿಧಿಕ ಶೋಭಾನೆಗಳ ಸಂಗ್ರಹವೆನಿಸುವಂತೆ ಆಯ್ಕೆಯನ್ನು ಮಾಡಿಕೊಳ್ಳಲಾಗಿದೆ. ಹಾಡುಗಳನ್ನು ಪಾದಬದ್ಧವಾಗಿ ಕೊಡಲಾಗಿದೆ. ಇದರಿಂದ ಆಯಾ ಹಾಡಿನ ಛಂದೋರೂಪ ವಿದಿತವಾಗುವುದಲ್ಲದೆ, ಕೆಲವು ಹಾಡುಗಳಿಗೆ ಸೀಮಿತವಾಗಿರುವ ವಿಳಂಬ-ಮಧ್ಯಮ-ದ್ರುತಗತಿಗಳುಳ್ಳ ನಿರಸ್ತ-ಧ್ಮಾತ ಉಚ್ಚಾರಣ ಗುಣಗಳುಳ್ಳ, ವರಣ-ಪಲ್ಲವಿಗಳಿರುವ, ಧಾಟಿಯಿಂದ ಹಾಡುವುದಕ್ಕೂ ಸುಕರವಾಗುವುದು ನಿಶ್ಚಯ.

ಜಾನಪದ ಗೀತಗ್ರಂಥಗಳ ಬೇರೆ ಬೇರೆ ಸಂಪಾದಕರು ಆಯಾ ಜಾನಪದ ಗೀತಗಳನ್ನು ಮಹಿಳೆಯರು ಹೇಗೆ ಹಾಡುವರೋ ಹೇಗೆ ಉಚ್ಚರಿಸುವರೋ ಹಾಗೆಯೇ ಸ್ವೀಕರಿಕೊಂಡು ತಪ್ಪುತಪ್ಪಾದ ಪಾಠವನ್ನು ಕೊಡುತ್ತ ಬಂದಿದ್ದಾರೆ. ಇದರಿಂದ ಅವುಗಳಲ್ಲಿ ಭಾಷಾದೋಷಗಳು–ಅರ್ಥದೋಷಗಳು ಕೂಡ ಉಳಿದುಕೊಂಡುದು ವಿಪುಲ. ವಿವಿಧ ಜನವರ್ಗದ ಶೋಭಾನೆಗಳ ಸಂಗ್ರಹಗಳಲ್ಲಿ ಅವರಲ್ಲಿಯೂ ಹವ್ಯಕರ ಶೋಭಾನೆಗಳ ಸಂಗ್ರಹಗಳಲ್ಲಿಯೂ ಇದೇ ಅವಸ್ಥೆ ಆಗಿದೆ. ಉದಾಹರಣೆ—

ಸ್ವಸ್ತೀವದನನ ಭಜಿಸಿ ವಿಸ್ತರದಲ್ ಅವದರುಸಿ
ಸತ್ಯಾಮೂರುತಿಗೆ ಅಭಿನಮಿಸಿ—ಪೇಳುವೆ
ವಿಸ್ತರದ ಪುಣ್ಯಾ–ಕತೆಗಳಾ (ಹೆಂಗಸರ ಗೀತಗಳು—ಹಾಡು 8)

ಇಲ್ಲಿ 'ಸ್ವಸ್ತೀವದನ' ಅಪಪಾಠವೆಂಬುದು ಸ್ಪಷ್ಟ. 'ಹಸ್ತಿವದನ' ಎಂದು ತಿದ್ದಬಹುದಿತ್ತು. ಇಷ್ಟೇ ಅಲ್ಲ ಅವಧರಿಸಿ, ಸತ್ಯಮೂರುತಿಗೆ (ಸತ್ಯಾಮೂರುತಿಗೆ—ಅಶುದ್ಧ), ಪುಣ್ಯಕತೆಗಳ—ಇಂತಹ ತಿದ್ದುಪಡಿಗಳಿಂದ ಹಾಡನ್ನು ಸರಿಪಡಿಸಬಹುದಿತ್ತು. ಧಾಟಿಯಂತೆಯೇ ಅಕ್ಷರಗಳಿಗೆ ಹ್ರಸ್ವ ದೀರ್ಘರೂಪ ಕೊಡುವುದು ಸರಿಯಲ್ಲ. ಉದಾ : ತ್ರಿಪದಿಮಕುಟವಾಗಿರುವ 'ವಿಸ್ತರದ ಪುಣ್ಯಕತೆಗಳ' ಎಂಬುದನ್ನು ಹಾಡುವಾಗ 'ವಿಸ್ತರದಾ ಪುಣ್ಯಾಕಾತೇಗಾಳಾ' ಎನ್ನುತ್ತಾರೆ. ಈ ಸಾಹಿತ್ಯವನ್ನು ಮುದ್ರಿಸುವಾಗ ಈ ಬಗೆಯ ದೀರ್ಘೀಕರಣವನ್ನು (ಧ್ಮಾತವನ್ನು) ಮಾಡಬಾರದು. ಧ್ಮಾತವು ಧಾಟಿಗೆ ಸಂಬಂಧಿಸಿದುದು, ಸಾಹಿತ್ಯಕ್ಕಲ್ಲ. ಹಸ್ತಿಲು, ನೋಮವಾರ್ತನೆ, ಶೀಗ್ರ, ಕ್ರಿಷ್ಣ—ಇಂತಹ ಶಬ್ದರೂಪಗಳು, ಹೀಗೆ ಅಕ್ಷರ ದೋಷಯುಕ್ತವಾಗಿ ಇತರರ ಸಂಕಲನದ ಅನೇಕ ಹಾಡುಗಳಲ್ಲಿ ಕಾಣಿಸುತ್ತವೆ. ಹಾಡುಗಾರ್ತಿಯರ ಬಾಯಿಯಲ್ಲಿ ಅವು ಹಾಗೆ ತಪ್ಪಾಗಿ ಬಂದಿರಬಹುದಾದರೂ ಮುದ್ರಿತ ಪುಸ್ತಕದಲ್ಲಿ ಹೊಸ್ತಿಲು, ಸಮಾವರ್ತನೆ, ಶೀಘ್ರ, ಕೃಷ್ಣ—ಎಂದೇ ಇರಬೇಕಾದುದು ಉಚಿತವೆಂಬುದನ್ನು ಪ್ರಕೃತದ ಗ್ರಂಥ ಸಂಪಾದನೆಯಲ್ಲಿ ಲಕ್ಷಿಸಲಾಗಿದೆ.

ಬಿನ್ನಮುಶೀದ, ಶಂಖುಚಕ್ರ—ಇಂತಹ ರೂಪಗಳು 'ಗೃಹಿಣೀಗೀತೆಗಳು' ಎಂಬ ಇನ್ನೊಂದು ಶೋಭಾನೆ ಸಂಕಲನದಲ್ಲಿ ಕಂಡುಬರುತ್ತವೆ. ಪ್ರಕೃತದ 'ಹವ್ಯಕರ ಶೋಭಾನೆಗಳು' ಇಂತಹ ಶಬ್ದ ದೋಷಗಳಿಂದ ಹೆಚ್ಚಿನ ಮಟ್ಟಿಗೆ ಮುಕ್ತಗೊಂಡಿದೆ. ಎಲ್ಲಿಯಾದರೂ ಅಂತಹ ದೋಷವಿದ್ದರೆ, ಅದು ಕಣ್ತಪ್ಪಿಸಿ, ಉಳಿದುದೆಂದು ಭಾವಿಸಬೇಕು.

'ಸಂಪಾದನ'ದಲ್ಲಿ ಸಾಹಿತ್ಯವನ್ನು ಶುದ್ಧಪಡಿಸುವುದು ಮುಖ್ಯವಾಗಿರುವಾಗ, ಹಾಡಿದವರ ತಪ್ಪುಗಳನ್ನೂ ಕೈಬರೆಹದ ಪ್ರತಿಕಾರರು ಮಾಡಿರುವ ತಪ್ಪುಗಳನ್ನೂ

ಹಸಿಹಸಿಯಾಗಿ ಸ್ವೀಕರಿಸಿ, ಅವಕ್ಕೆ ಸಂಗ್ರಹಕಾರರ ಹಾಗೂ ಸಂಪಾದಕರ ಕೈತಪ್ಪನ್ನೂ ಸೇರಿಸಿ, ಅಚ್ಚಾಗಲು ಬಿಟ್ಟರೆ ಸರಿಯೆನಿಸದೆಂಬುದನ್ನು ಈ ಗ್ರಂಥದ ಸಂಪಾದನದಲ್ಲಿ ಲಕ್ಷ್ಯವಿಡಲಾಗಿದೆ.

ಪ್ರಸ್ತುತ ಗ್ರಂಥದಲ್ಲಿ ಮಾಡಿರುವ ಕೆಲವು ತಿದ್ದುಪಡಿಗಳಿಗೆ ಉದಾಹರಣೆಗಳಿವು— (ಮೊದಲನೆಯದು ಅಶುದ್ಧ ರೂಪ, ಎರಡನೆಯದು ಅದರ ತಿದ್ದುಪಡಿ.)

1 ಒಂದು ಪೂಜೆಯ ಹಾಡಿನಲ್ಲಿರುವ ಉದಾಹರಣೆ—

ಅ) ಆಸಮಾಸ ಹಸುಳೆ ನಿನ್ನ । ನಂಬಿದೆ ನಾನು
ಆ) ಅಸಮ ಸಾಹಸಳೆ ನಿನ್ನ । ನಂಬಿದೆ ನಾನು

2 ಹೋಮದ ಹಾಡಿನಲ್ಲಿ ಒಂದು ಸೊಲ್ಲಿನ ಪಾದ— (170–4)
ಅ) ಅತಿಥಿ ಶ್ರೀಕಾಶ್ಯಪ । ಉತ್ತಮ ಫಲಸಹ
ಆ) ಅತ್ತಿತ್ತಿ ಶಮಿ ಕುಶ ಉತ್ತರಣೆ ಪಾಲಾಶ
(ಇತ್ತಿ ಎಂಬುದೊಂದು ಬಗೆಯ ಹಾಲುಮರ. 'ಪಾಲಾಶ' ಎಂದರೆ ಪಲಾಶ ಎಂಬ ಮರದ ದಂಟು, ಕುಡಿ, ಎಲೆ–ಮುಂತಾದುದು.)

3 ಅ) ಹೊಸ್ತಿವದನೆ ನೀ ಬಾರೇ
ಆ) ಹಸ್ತಿಗಮನೆ ನೀ ಬಾರೇ

4 ಅ) ಗೀರಬ ಶನಿ ಮುದ್ದು ನೀರೆ ನೀ ಬಾರೇ
ಆ) ಕೀರಭಾಷಿಣಿ ಮುದ್ದುನೀರೆ ನೀ ಬಾರೇ

5 ಅ) ತಂದೆಯ ನುಡಿಯ ಸೋಲಿಸಲೆಂದು ಶ್ರೀರಾಮ
ಆ) ತಂದೆಯ ನುಡಿಯ ಸಲ್ಲಿಸಲೆಂದು ಶ್ರೀರಾಮ

6 ಅ) ಒಸಗೆಯ ಬಾಲಕಿಯೊಳುಸುರಿದ (ಹಾಡು 185, ಸೊಲ್ಲು 14)
ಆ) ಒಸಗೆಯ ಬಲಕಿವಿಯೊಳುಸುರಿದ

ಹೀಗೆಯೇ ಅಂಬುಜರಾಯ, ವಾರಿಜರಾಯ—ಎಂಬಿವನ್ನು ಅಂಬುಜನಾಭ, ವಾರಿಜನಾಭ ಎಂದು ತಿದ್ದಿದೆ. 'ಸ್ನಾನ ಮಾಡಿ' ಎಂಬರ್ಥದಲ್ಲಿ 'ಮಧ್ಯಾನ ಮಾಡಿ' ಎಂತ ಇದ್ದುದನ್ನು 'ಮಜ್ಜನ ಮಾಡಿ' ಎಂದು ತಿದ್ದುವುದೇ ಸರಿಯಲ್ಲವೆ ? 'ಮೃಡ ನೇತ್ರೆ' ಎಂದಿದ್ದರೆ ಅದು 'ಮೃಗನೇತ್ರೆ' ಎಂದಿರಬೇಕು. 'ತಾರಕಾದಿಯ ಪಿತ' ಎಂಬುದರ ಶುದ್ಧರೂಪ 'ತಾರಕಾರಿಯ ಪಿತ' ಅಂದರೆ ಶಿವ. ಇಂತಹ ಸ್ಪಷ್ಟ ಗೋಚರ ದೋಷಗಳ ತಿದ್ದುಪಡಿಗಳನ್ನಿಲ್ಲಿ ಮಾಡಿಕೊಂಡಿದೆ. 'ಶಂಖು ಚಕ್ರ' ಎಂಬುದನ್ನು 'ಶಂಖ ಚಕ್ರ' ಎಂತಲೇ ಮಾಡಿಕೊಂದಿದೆ. ಅದಕ್ಕೆಲ್ಲ ಪಾಠಾಂತರ ಅನವಶ್ಯಕವೆಂದು ಭಾವಿಸಿದೆ.

ಯಾವ ಸಾಹಿತ್ಯಕೃತಿಯೇ ಇರಲಿ, ಹಲವು ಪ್ರತಿಗಳಿದ್ದಾಗ, ಪಾಠಾಂತರಗಳಿರುವುದು ಸಹಜ. ಅಂಥವುಗಳಲ್ಲಿ ಸಂಪಾದಕನು ತನ್ನ ವಿವೇಕದೃಷ್ಟಿಯಿಂದ ಹೆಚ್ಚು ಶುದ್ಧಪಾಠವೆನಿಸಿದ ವಾಗ್ರೂಪವನ್ನು ಸಂಭಾವ್ಯ ಮೂಲಪಾಠವಾಗಿ ಪರಿಗಣಿಸಬೇಕಾಗುತ್ತದೆ. ಸಂಪಾದನದಲ್ಲಿ ಅದಕ್ಕೆ ಅನುಕ್ರಮದಲ್ಲಿ ಸಂಖ್ಯೆಯಿತ್ತು ಉಳಿದ ಸಾರ್ಥಕ ಪಾಠಾಂತರಗಳನ್ನು ಆಯಾ ಪುಟದಡಿಯಲ್ಲಿ, ಇಲ್ಲವೇ ಕೊನೆಗೆ ಅದೇ ಸಂಖ್ಯಾಸೂಚಿಯೊಂದಿಗೆ ಪ್ರತಿಯ ನಿರ್ದೇಶನದೊಂದಿಗೆ ಕೊಡುವುದು ಸೂಕ್ತ ವಿಧಾನ. ಶೋಭಾನೆ ಹಾಡುಗಳನ್ನು ಸಂಪಾದಿಸುವಾಗ ಉಪಲಬ್ಧವಾಗುವ ಪ್ರತಿಗಳೆಂದರೆ, ಕೆಲವು ಕೈಬರೆಹದವುಗಳಿಂದ ಬರೆದುಕೊಂಡವು ಹಾಗೂ ಹಾಡುಕಾರ್ತಿಯರಿಂದ ಹೇಳಿಸಿ, ಬರೆದುಕೊಂಡ ಪ್ರತಿಗಳು. ಹಾಡುಗಳು ಕೂಡ ಹತ್ತಾರು, ನೂರಾರು. ಆದುದರಿಂದ ಪ್ರತಿಗಳ ಉಲ್ಲೇಖಕ್ಕೆ ಆಸ್ಪದವಿಲ್ಲ. ಪಾಠಾಂತರಗಳನ್ನು (ಇದ್ದಲ್ಲಿ) ಕೊಡುವುದಕ್ಕೆ ಮಾತ್ರ ಸಾಧ್ಯ. ಇರುವ ಪಾಠಾಂತರಗಳು ಕೂಡ ಹೆಚ್ಚಾಗಿ ಅದೇ ಜಿಲ್ಲೆಯವು—ಅಂದರೆ ಯಾವ ಜಿಲ್ಲೆಯ ಹಾಡೋ ಪಾಠಾಂತರವೂ ಅದೇ ಜಿಲ್ಲೆಯದು. ಇಂತಹ ಕಡೆ ಪಾಠಾಂತರದ ಜಿಲ್ಲಾ ಸೂಚನೆಯಿರುವುದಿಲ್ಲ. ಉ. ದ. ಶಿ. ಎಂಬಿವು ಇಲ್ಲಿ ಬಳಸಲಾದ ಉತ್ತರ ಕನ್ನಡ, ದಕ್ಷಿಣ ಕನ್ನಡ, ಶಿವಮೊಗ್ಗ—ಎಂಬ ಜಿಲ್ಲೆಗಳ ಸಂಕ್ಷಿಪ್ತ ಚಿಹ್ನೆಗಳು. ಕೊಟ್ಟಿರುವ ಪಾಠಾಂತರಗಳಿಂದ ವಿದಿತವಾಗುವುದೇನೆಂದರೆ—ದಕ್ಷಿಣ ಕನ್ನಡ ಜಿಲ್ಲೆಯ ಶೋಭಾನೆಗಳು ಎಲ್ಲಿಯೋ ಒಂದೆರಡನ್ನು ಬಿಟ್ಟರೆ, ಇತರವು ಬೇರೆ ಜಿಲ್ಲೆಗಳಲ್ಲಿ ಪ್ರಚಲಿತವಾಗಿಲ್ಲ. ಆದರೆ, ಶಿವಮೊಗ್ಗ ಜಿಲ್ಲೆಯ ಪ್ರದೇಶಗಳಲ್ಲಿ ದೊರತ ಎಷ್ಟೋ ಶೋಭಾನೆಗಳು ಉತ್ತರ ಕನ್ನಡ ಜಿಲ್ಲೆಯಲ್ಲಿಯೂ ಉಪಲಬ್ಧವಿವೆ. ಯಾವುದಾದರೂ ಹಾಡಿಗೆ ಕೊಟ್ಟಿರುವ ಪಾಠಾಂತರಗಳಲ್ಲಿ ಜಿಲ್ಲೆಯ ಸೂಚಿಯಿಲ್ಲವಾದರೆ, ಆ ಪಾಠಾಂತರ ಅದೇ ಜಿಲ್ಲೆಯದೆಂದು ತಿಳಿಯಬೇಕು. ಪಾಠಾಂತರವು ಬೇರೆ ಜಿಲ್ಲೆಯದಾದರೆ ಮಾತ್ರ ಆ ಜಿಲ್ಲೆಯ ಸೂಚನೆ. ಯಾವುದಾದರೊಂದು ಹಾಡು ಯಾವ ಜಿಲ್ಲೆಯಲ್ಲಿ ಉಪಲಬ್ಧವಾದುವೆಂಬುದನ್ನು ಶೋಭಾನೆಗಳ ಸೂಚಿಯಲ್ಲಿ ಆಯಾ ಹಾಡಿನ ಮುಂದೆ ಗೊತ್ತುಮಾಡಿದೆ. ಗೊತ್ತು ಮಾಡಿದವುಗಳಲ್ಲಿ (ಉ.ಶಿ.ಗಳಲ್ಲಿ) ಒಂದು ಜಿಲ್ಲೆಯವು ಇನ್ನೊಂದು ಜಿಲ್ಲೆಯಲ್ಲಿ ಕೂಡ ಪ್ರಚಲಿತವಿರುವುವು ಇನ್ನೆಷ್ಟೋ ಇರಬಹುದು. ಆದುದರಿಂದ ಈ ವಿಭಾಗ ರೇಖೆಯನ್ನು 'ಸ್ಥೂಲವಾಗಿ' ಎಂದೆಣಿಸಬೇಕು.

ಪ್ರಕೃತ ಗ್ರಂಥದಲ್ಲಿ 'ಶೋಭಾನೆಗಳು ಭಾಗ–ಒಂದು' ಎಂಬುದೇ ಮುಖ್ಯ ಪಠ್ಯ. ಇನ್ನುಳಿದವು ಅವುಗಳ ವಿಚಾರಕಿರಣಗಳು. 'ಹವ್ಯಕರ ಶೋಭಾನೆಗಳು' ಎನ್ನುವಾಗ ಮೊದಲು ಬರುವ 'ಹವ್ಯಕರು' ಯಾರು ? ಎಂಬುದನ್ನು ನಮಗೆ ದೊರೆಯುವ ಇತಿಹಾಸ ಪುರಾಣಗಳ ಆಧಾರದಿಂದ ಮತ್ತು ಈಗಿನ ಹವ್ಯಕ ಸಮಾಜದ ಸ್ಥಿತಿ ವಿವರಗಳಿಂದ ನಿರೂಪಿಸುವುದು ಯುಕ್ತವಾಯಿತು. ಅದಕ್ಕಾಗಿ ಪರಾಮರ್ಶ ಭಾಗದ ನಾಲ್ಕು ಅಧ್ಯಾಯಗಳಲ್ಲಿ ಒಂದನೆಯ ಅಧ್ಯಾಯವನ್ನು ರೂಪಿಸಲಾಯಿತು. ಕನ್ನಡ ಸಾಹಿತ್ಯ

ಕ್ಷೇತ್ರದಲ್ಲಿ ಬಲುಮಟ್ಟಿಗೆ ಅಲಕ್ಷಿಸಲಾಗಿರುವ ಈ ಸಾಹಿತ್ಯವನ್ನು ಲಾಕ್ಷಣಿಕವಾಗಿ ಕಂಡು ಇದರ ಸ್ಥಾನಮಾನಗಳನ್ನು ಕಲ್ಪಿಸಿ, ಅಧ್ಯಯನಶೀಲರ ಕುತೂಹಲವನ್ನು ಜಾಗೃತ ಗೊಳಿಸುವ ಪ್ರಯತ್ನವನ್ನು ಎರಡನೆ ಅಧ್ಯಾಯದಲ್ಲಿ ಕೈಗೊಳ್ಳಲಾಯಿತು. ಮೂರನೆ ಅಧ್ಯಾಯದಲ್ಲಿ ಈ ಗೇಯ ಸಾಹಿತ್ಯದ ಧಾಟಿ–ಛಂದಸ್ಸುಗಳನ್ನು ನಿರೂಪಿಸುವ ಮೂಲಕ, ಕನ್ನಡ ಛಂದಸ್ಸಿನಲ್ಲಿ ಬಹಳ ಹಿಂದಿನ ಕಾಲದಿಂದಲೇ ಕೆಲವಾರು ಹೊಸ ದಾರಿಗಳನ್ನು ಹೇಗೆ ಕಂಡುಕೊಳ್ಳಲಾಗಿತ್ತೆಂಬುದನ್ನು ತೋರಿಸಿಕೊಡಲಾಗಿವೆ. ಅದಕ್ಕಾಗಿ ಕೆಲವು ನವೀನ ಪಾರಿಭಾಷಿಕಗಳನ್ನು ಪ್ರಸ್ತಾವಿಸಿ, ನಿರೂಪಣೆ ಮಾಡಲಾಗಿದೆ. ಇನ್ನು ಪರಾಮರ್ಶೆಯಲ್ಲಿ ನಾಲ್ಕನೆಯ ಅಧ್ಯಾಯವೆಂಬುದು ಉದಾಹೃತ ಶೋಭಾನೆಗಳಿಗೆ ಒಂದು ಬಗೆಯ ಪ್ರಾಯೋಗಿಕ ವಿವರಣೆಯಾಗಿದೆ. ಈ ವಿವರಣೆ ಕೂಡ ಬೆರಲು ಮಾಡಿ ಅರುಂಧತೀದರ್ಶನ ಮಾಡುವಷ್ಟು ಮಾತ್ರ. ಕೂಲಂಕಷ ಇಲ್ಲವೇ ತಲಸ್ಪರ್ಶಿ ವಿವರಣೆ ಅಲ್ಲ. ಶುಭ ಸಂಸ್ಕಾರಗಳ ಉದ್ದೇಶವೇನು ? ವಿಧಿ ವಿಧಾನಗಳೇನು ? ಅರ್ಥವೇನು ? ಮತ್ತು ಅವುಗಳಲ್ಲಿ ಸೊಗಸೇನು ? ಎಂಬುದನ್ನರಿಯಲು ಇಲ್ಲಿ ದಾರಿ ಗಾಣಿಸಿದೆ, ಅಲ್ಲದೆ ಆ ದಾರಿಯ ಕತ್ತಲೆಗೆ ಸೂಟಿ ಇಲ್ಲವೇ ದೀಪ ಹಿಡಿಯಲಾಗಿದೆ.

ಶೋಭನಗೀತ ಸಾಹಿತ್ಯದ ಕ್ಷೇತ್ರದಲ್ಲಿ ಹೊಸ ಹೊಸ ಅಧ್ಯಯನಕ್ಕೆ ಈ ನಾಲ್ಕು ಪರಾಮರ್ಶೆಯ ಅಧ್ಯಾಯಗಳು ಪ್ರೇರಕವಾಗುವುವೆಂದು ಭಾವಿಸಲಾಗಿದೆ. ನಮ್ಮ ನಾಡಿನ ಒಂದು ಜನವರ್ಗದಲ್ಲಿ ಬಹುಕಾಲದಿಂದ ಪ್ರಚಲಿತವಾಗಿ ಈಗೀಗ ನಷ್ಟವಾಗು ತ್ತಿರುವ ಒಂದು ವಿಶಿಷ್ಟ ಗೇಯ ಸಾಹಿತ್ಯದ ಪ್ರಕಾರಗಳನ್ನೂ ಸೊಗಸನ್ನೂ ತಿಳಿಯು ವುದು, ಅವು ಪ್ರತಿಪಾದಿಸುವ ಶುಭ ಸಂಸ್ಕಾರ–ಸಂಸ್ಕೃತಿಗಳ ಜ್ಞಾನಕಣಗಳನ್ನು ಆರಿಸು ವುದು, ಮೌಲ್ಯ ನಿರ್ಣಯಿಸುವುದು ಸುಲಭವೇನೂ ಅಲ್ಲ. ಆ ಕಾರ್ಯಕ್ಕೆ ಕೈಯಿಕ್ಕಿರುವ ಈ ಗ್ರಂಥ ಒಂದು ಉತ್ತಮ ಸಂಶೋಧನ ಗ್ರಂಥದ ಸಮಗ್ರ ಲಕ್ಷಣವನ್ನು ಒಳ ಗೊಂಡಿದೆಯೆಂಬ ಧಾರ್ಷ್ಟ್ಯ ಈ ಲೇಖಕನಿಗಿಲ್ಲ. ಇದೊಂದು ಸಾರ್ಥಕ ಪ್ರಯತ್ನ, ಇದರಲ್ಲಿ ಗುಣಾಧಿಕ್ಯವಿದೆ—ಎಂದು ಸಹೃದಯರು ಅರಿತುಕೊಳ್ಳುವರಾಗಿ ಭಾವಿಸ ಲಾಗಿದೆ.

o—O—o

ಇನಿಜೇನಂತುಟಿನಿಪ್ಪ ಗೇಯಗುಣದಿಂ ವಿದ್ವಜ್ಜನಾಮೋದ ಸಂ
ಜನಯುಚ್ಛಂದದ ಬಂಧ ಬಂಧುರತೆಯಿಂ ಸಂಶೋಧನಾಂಶು ಪ್ರಕಾ
ಶನದಿಂ ಸಂಸ್ಕೃತಿ ದೀಪ್ತಿಯಿಂದತುಲ ಸಾಹಿತ್ಯದ್ಯುತಿ ಸ್ಥಾನ ಶೋ
ಭನದಿಂ ಶೋಭನಗೀತವೃಂದಮಿದನಿನ್ನಾರ್ ಮಾನಿಸರ್ ? ಮಾನಿಸರ್.

—ಕವಿ ಕನೀಯಂ

# ಶೋಭಾನೆಗಳ ಸೂಚಿ

ಸಂಖ್ಯೆ, ಹಾಡು, ಜಿಲ್ಲೆ (ದ—ದಕ್ಷಿಣ ಕನ್ನಡ, ಉ—ಉತ್ತರ ಕನ್ನಡ, ಶಿ—ಶಿವಮೊಗ್ಗ) ಸಾಲು, ನೊಲ್ಲು, ಪ್ರಾರಂಭ ಪುಟದ ಕ್ರಮದಲ್ಲಿ

**ಚತುರ್ಥಿಯ ಹಾಡುಗಳು**

## ಗೃಹಪ್ರವೇಶದ ಹಾಡುಗಳು

## ವಿವಾಹ ವಿನೋದದ ಶೋಭಾನೆಗಳು (ಹಳಿದಾಡುವದು)



## ಗೃಹಿಣಿ ದಿನಚರಿ



## ಅಧ್ಯಾಯ—2 ಜನ್ಮದಿನೋತ್ಸವ (ಪೂರ್ವೋತ್ತರ ಸಹಿತ)

## ಕೋಡಿ (ಸೀಮಂತದ) ಹಾಡುಗಳು



## ಜನ್ಮೋತ್ಸವ



## ಅಧ್ಯಾಯ—3 ಉಪನಯನ (ಪೂರ್ವೋತ್ತರ ಸಹಿತ)

## ಅಧ್ಯಾಯ—4 ಐಚ್ಛಿಕ: ಪೂಜೆ, ವ್ರತ, ಹಬ್ಬ, ಹೋಮ.

## ಅಧ್ಯಾಯ—5 ಪುಣ್ಯಕಥಾತ್ಮಕ

## ಭಾಗ — ಒಂದು

# ಶೋಭಾನೆಗಳು

ಅಧ್ಯಾಯಗಳು

1. ಮದುವೆಯ ಹಾಡುಗಳು
2. ಜನ್ಮೋತ್ಸವ (ಪೂರ್ವೋತ್ತರ ಸಹಿತ)
3. ಉಪನಯನ (ಪೂರ್ವೋತ್ತರ ಸಹಿತ)
4. ಐಚ್ಛಿಕ : ಪೂಜೆ, ವ್ರತ, ಹಬ್ಬ, ಹೋಮ
5. ಪುಣ್ಯಕಥಾತ್ಮಕ

**ಧಾಟಿಯ ಸಂಕೇತಗಳು :**

1. ಹಾಡುಗಳಲ್ಲಿ ಬರುವ ಅಡ್ಡಗೆರೆ '—' (ಅ) ಲಯಸಂಜ್ಞಕ,
   (ಆ) ಆವೃತ್ತಿಸೂಚಕ, (ಇ) ಮುಂದಿನ ಶಿಖಾಪಾದ ದರ್ಶಕ,
   (ಈ) ಅದರ ಹಿಂದಿನ ಮುಂದಿನ ಗಣಗಳನ್ನು ಧ್ಯಾತಗೊಳಿಸಿ (ಎಳೆದು) ಹಾಡಬೇಕೆಂಬ ಸನ್ನೆ.

2. ನೀಟಗೆರೆ '।' ಪಾದಾಂತ್ಯ ಯತಿ (ಮುಡಿ) ಸಂಜ್ಞಕ. ಅದರ ಸ್ಥಾನ—
   (ಅ) ಅತೀತದ ಮತ್ತು ಮುಡಿಯ ಮುಂದೆ
   (ಆ) ವರಣ, ಶಿಖಾಪಾದ, ಆವೃತ್ತಿ ಇವುಗಳಿಗೆ ಹಿಂದೆ.

3. ಜೋಡು ನೀಟಗೆರೆ '॥' ವಿಳಂಬ, ಮಧ್ಯಮ, ದ್ರುತ ಎಂಬ ಯಾವುದಾದರೊಂದು ಗತಿ (ಲಯ) ಪರಿವರ್ತನೆಯ ಸಂಕೇತ.

ವಿ.ಸೂ. . ಧಾಟಿಯ ವಿಷಯವಾಗಿ ಹೆಚ್ಚಿನ ವಿವರವನ್ನು ತಿಳಿಯಲು ಪರಾಮರ್ಶೆ . ಅಧ್ಯಾಯ 3, ಪರಿಶೀಲಿಸಿ.

# ಅಧ್ಯಾಯ : 1

# ಮದುವೆಯ ಹಾಡುಗಳು

## 1. ಶ್ರೀ ಗಣಪತಿಯ ಬೇಡುವುದು (ತ್ರಿಪದಿ)

ಶ್ರೀ ಗಣಪತಿ ನಿನ್ನ ಚರಣಾರವಿಂದಕ್ಕೆ
ಬಾಗಿ ವಂದಿಸುವ ದಯೆಮಾಡು—ನಮಗೀಗ
ಯೋಗ ಸನ್ಮತಿಯ—ಕರುಣಿಸು ೧

ನಿಗಮಗೋಚರ ನಿತ್ಯ ಮಾಂಗಲ್ಯದಾಯಕ
ಸುಗುಣ ಸಂಪನ್ನ ಗುಣನಿಧಿ—ಪಾಲಿಸು
ಭುಜಗ ಭೂಷಣನೆ—ದಯೆಮಾಡು ೨

ಆಸನ ಅರ್ಘ್ಯಾದಿ ಧೂಪ ದೀಪಗಳ ಸು
ವಾಸನೆ ಪನ್ನೀರು ಬಹುತರ—ಪುಷ್ಪವ
ತೋಷದಿ ತವ ಪಾದಕ್ಕಿರಿಸುವೆ ೩

ಆನಂದದಲಿ ಗುರು ಪೂಜೆಯ ಮಾಡುವದ
ಜ್ಞಾನಸ್ವರೂಪ ಕೈಕೊಂಡು—ನಮ್ಮಯ ಅ
ಜ್ಞಾನ ದುರಿತಗಳ—ಪರಿಹರಿಸು ೪

ಹೋಮ ನೇಮಂಗಳ ಪೂಜೆ ನೈವೇದ್ಯವ
ಆ ಮಹಾಸಭೆಯ ಪ್ರಾರ್ಥನೆ—ಕೈಗೊಂಡು
ಕಾಮಿತ ಫಲವ—ಕರುಣಿಸು ೫

ಸಿದ್ಧಿವಿನಾಯಕ ಸಿದ್ಧಿಫಲದಾಯಕ
ವಿಘ್ನವ ಕಳೆದು ನಿರ್ವಿಘ್ನದಿಂದಲಿ ನಮ್ಮ[1]
ಅಜ್ಞಾನ ದುರಿತ—ನೀಗಿಸು ೬

---

1 ನಿರ್ವಿಘ್ನದಿ ನಮ್ಮಯ

ಎಳ್ಳುಂಡೆಗಳು ಕಬ್ಬು ಕದಳಿ ಬಾಳೆಯ ಹಣ್ಣು*
ಒಳ್ಳೆತಾದವಲು ಕಡಲೆಯು—ಮೊದಲಾದ
ಎಲ್ಲಾ ನೈವೇದ್ಯ—ಇರಿಸುವೆ ೭

ಅಂಬಿಕೆಯ ತನಯ ಗೋವಿಂದನ ಸಖಿಸೂನು
ನಂಬಿದೆನು ನಿನ್ನ ಪದಗಳ—ಯುಗಳಕ್ಕೆ
ಬೆಂಬಿದವರಗುದಿಸು—ದಯೆಮಾಡು ೮

ಮದುವೆ ಮುಂಜಿಯು ಶುಭ ಶೋಭನಂಗಳೊಳೆಲ್ಲ
ಮೊದಲ ಪೂಜೆಯನು ಕೈಗೊಂಬ—ಗಣಪತಿ
ಮಧುಪುರ ಸ್ಥಿರವಾಸ—ದಯೆಮಾಡು ೯

## 2. ಸಿದ್ಧಿವಿನಾಯಕನನ್ನು ಪ್ರಾರ್ಥಿಸುವುದು (ತ್ರಿಪದಿ)

ಸಿದ್ಧಿ ವಿನಾಯಕ ಸಿದ್ಧಿಯನು ಮಾಡಯ್ಯ
ಸಿಬ್ಬಲುಂಡಲಿಗೆ ನಿನಗೀವೆ—ಗಣನಾಥ
ಶೀಘ್ರದಲಿ ಮತಿಯ—ಕರುಣಿಸು ೧

ಕಾರ್ಯ ವಿನಾಯಕ ಕಾರ್ಯವನು ಮಾಡಯ್ಯ
ಕಾರೆಳ್ಳು ಕಡಲೆ ನಿನಗೀವೆ—ಗಣನಾಥ
ಕಾರ್ಯದಲಿ ಮತಿಯ—ಕರುಣಿಸು

ಒಳ್ಳೆಯ ವಿನಾಯಕ ಒಳ್ಳಿತನು ಮಾಡಯ್ಯ
ಎಳ್ಳುಂಡಲಿಗೆ ನಿನಗೀವೆ—ಗಣನಾಥ
ಒಳ್ಳೆಯ ಮತಿಯ—ಕರುಣಿಸು ೩

ಉದ್ದಿನ ಒಳಗಿಪ್ಪ ಮುದ್ದು ವಿನಾಯಕ
ಉದ್ದಿನುಂಡಲಿಗೆ ನಿನಗೀವೆ—ಗಣನಾಥ
ಬುದ್ಧಿಯುಳ್ಳ ಮತಿಯ—ಕರುಣಿಸು ೪

* ಕದಳಿ ಎಂಬುದು ಬಾಳೆಯಲ್ಲಿ ಒಂದು ಜಾತಿ. ಆದುದರಿಂದ 'ಕದಳಿ ಬಾಳೆ' ದ್ವಿರುಕ್ತಿಯಲ್ಲ.

ಹೆಸರಿನ ಒಳಗಿಪ್ಪ ಎಸೆವ ವಿನಾಯಕ
ಹೆಸರಿನುಂಡಲಿಗೆ ನಿಸಗೀವ—ಗಣನಾಥ
ಹೆಸರುಳ್ಳ ಮತಿಯ—ಕರುಣಿಸು ೫

ಅತ್ತ ಹಳ್ಳದಲಿಪ್ಪ ಇತ್ತ ಗ್ರಾಮಕೆ ಬಪ್ಪ
ನಿತ್ಯದಲಿ ಬಪ್ಪ ಬೆಳವಿನ[1]—ಕಾರ್ಯಕ್ಕೆ
ಕರ್ತೃವಾಗಯ್ಯ—ಗಣಪತಿ ೬

ಹಾಗೆ ಹಳ್ಳದಲಿಪ್ಪ ಹೀಗೆ ಗ್ರಾಮಕೆ ಬಪ್ಪ
ಯಾವಾಗಲು ಬಪ್ಪ ಬೆಳವಿನ—ಕಾರ್ಯಕ್ಕೆ
ಒಡೆಯನಾಗಯ್ಯ—ಗಣಪತಿ ೭

## 3. ಹೆಣ್ಣು ಕೇಳಿದ್ದು (ಅಷ್ಟತಾಳದ ಗತಿ)

ಕೊಡಬೇಕು ಪಾರ್ವತಿಯ । ಪರ್ವತರಾಯ
ಕೈಲಾಸವಾಸನಿಗೆ
ಕೊಡಬೇಕು ನಿನ್ನಯ ಮೋಹದ ಮಗಳನು
ಕೊಡಬೇಕು ಪಾರ್ವತಿಯ । ಕೈಲಾಸದ
ಒಡೆಯ ಶಿವಗೆ ಸುತೆಯ ಪ

ಗಜಮುಖನಿಗೆ ಎರಗಿ । ಬ್ರಹ್ಮನ ರಾಣಿ
ವಾಣಿ ಸರಸ್ವತಿಗೆ ನಮಿಸಿ
ಕೈಲಾಸವಾಸ ಶ್ರೀ ಪರಮೇಶ್ವರರ
ಮದುವೆ ವಿಸ್ತಾರವನು । ಒರೆಯುವೆ ಕೇಳಿ
ಮದುವೆ ವಿಸ್ತಾರವನು ೧

ಪರ್ವತನುದರದಲಿ । ಪಾರ್ವತಿದೇವಿ
ಸುತೆಯಾಗಿ ಜನಿಸಿದಳು
ಧರೆಯೊಳು ಹೆಸರಾದ ಪರ್ವತರಾಯನು
ಘನ ಸಂತೋಷದಿ ಸಲಹಿದ । ಆ ಮಗಳನು
ಘನ ಸಂತೋಷದಿ ಸಲಹಿದ ೨

1 ಬೆಳವು—ಅಭಿವೃದ್ಧಿ ; ಶುಭಕಾರ್ಯ.

ನಾರಿ ಪಾರ್ವತಿದೇವಿಯು । ನಲಿದಾಡಲು
ಧಾರಿಣೀಧರ ಮುದದಿ[1]
ನೀರೆ ನಿನ್ನನು ಇನ್ನಾರಿಗೆ ಕೊಡಲೆಂದು
ಭಾರಿ ಚಿಂತೆಯೊಳಿದ್ದನು । ಪರ್ವತರಾಯ
ಭಾರಿ ಚಿಂತೆಯೊಳಿದ್ದನು ೩

ಮೋದದಿ ಮಗಳ ಕರೆದು । ಪರ್ವತರಾಯ
ತೊಡೆ ಮೇಲೆ ಕುಳ್ಳಿರಿಸುತ
ಮೇದಿನಿಯೊಳು ಕಾಣೆ ನಿನಗೊಪ್ಪುವ ಪತಿಯ
ನಾರಿ ಪಾರ್ವತಿ ನೀ ಹೇಳು । ಯಾರೆನುತಲಿ
ನಾರಿ ಪಾರ್ವತಿ ನೀ ಹೇಳು[2] ೪

ತಂದೆಯ ಮಾತ[3] ಕೇಳಿ । ಪಾರ್ವತಿ ನಗು
ತಂದು ತಲೆಯನು ಬಾಗಿ
ಇಂದುಧರನ ನಾನು ತಪಮಾಡಿ ಒಲಿಸುವೆ
ತಂದೆ[4] ಚಿಂತಿಪ್ಪುದೇತಕೆ । ನೀನೆಂದಳು
ತಂದೆ ಚಿಂತಿಪ್ಪುದೇತಕೆ ೫

ಐದು ವರ್ಷದ ಬಾಲೆಯು । ತಪವ ಮಾಡಿ
ನಾಗಭೂಷಣನೊಲಿಸಿ[5]
ಆ ಪರಮೇಶನ ತಪದಿ ವರಿಸುವೆನೆಂದು
ನಾಚುತ್ತ ಹೇಳಿದಳು । ಆ ಕ್ಷಣದಲಿ
ನಾಚುತ್ತ ಹೇಳಿದಳು ೬

---

1 ಮನದಿ ಪಿತನ ಮನೆಯೊಳು
2 ಹೆತ್ತ ಮಗಳ ಕರೆದು । ಪರ್ವತರಾಯ
ಹತ್ತಿರ ಕುಳ್ಳಿರಿಸಿ
ಒಪ್ಪುವ ಪತಿಯನು ಹೇಳಬೇಕೆನುತಲಿ
ಗಿರಿರಾಜನು ನಗುತ । ಹೇಳಿದನಾಗ
ಗಿರಿರಾಜನು ನಗುತ (ಉ)
3 ಪಿಂದ ಮಾತನ್ನು 4 ಒಡನೆ 5 ಆ ಪರಶಿವನೊಲಿಸಿ

ಕಾನನೊಳಗೆ[1] ಪೋಗಿ । ಸ್ನಾನವ ಮಾಡಿ
ನಾನಾ ಪರಿಯ ಪುಷ್ಪವ
ಬಿಲ್ವಪತ್ರೆಯ ತಂದು ಹರನಿಗೆ ಅರ್ಪಿಸಿ
ಪರಶಿವನನು ಮನದಲಿ । ಭಜಿಸಿದಳು
ಪರಶಿವನನು ಮನದಲಿ ೭

ಮಾಡಿದ ತಪಕೆ ಮೆಚ್ಚಿ । ಆ ಪರಶಿವನು
ನಂದಿವಾಹನವನೇರಿ[2]
ಇಟ್ಟ ಕೆಂಜೆಡೆ ಬಿಗಿದುಟ್ಟು ಹುಲಿಯ ಚರ್ಮ
ಒಲಿದು ಪ್ರತ್ಯಕ್ಷನಾದ । ಪಾರ್ವತಿಗೆ ತಾ
ನೊಲಿದು ಪ್ರತ್ಯಕ್ಷನಾದ ೮

ಅಂದಾ ಸಂಗತಿಯ ಕೇಳಿ । ಪರ್ವತರಾಯ
ನಂದವಾಗಿಯೆ ಬಂದನು
ಅಂಗಳ ರಚಿಸಿ ತೋರಣವನು ಕಟ್ಟಿಸಿ
ಮಂಗಳ ಕಾರ್‍ಯಕಾಗಿ । ಸಂಭ್ರಮವಾಯ್ತು
ಮಂಗಳ ಕಾರ್‍ಯಕಾಗಿ ೯

ಬಂಧು ಬಾಂಧವರ ಕರೆಸಿ[3] । ಪರ್ವತರಾಯ
ಪಟ್ಟಣ ಶೃಂಗರಿಸಿದ
ನಾಳೆ ಪಾರ್ವತಿಯನು ಧಾರೆಯೆರೆವೆನೆಂದು
ಆ ಶಿವನಿಗೆ ಕರೆಯ । ಕಳುಹಿದನು
ಆ ಶಿವನಿಗೆ ಕರೆಯ ೧೦

ಕೈಲಾಸ ಪುರದಿಂದಲಿ । ದಿಬ್ಬಾಣವು
ಹರುಷದಿ ತರಳಿದುದು
ಪಂಚಮ ವಾದ್ಯವು ಎಸೆದುದ ಕೇಳುತ
ಚೆಂದದೊಳಿದಿರುಗೊಂಡು । ಉಪಚರಿಸಿದರು
ಚೆಂದದೊಳಿದಿರುಗೊಂಡು ೧೧

---

1 ಕಾಡಿನೊಳಗೆ 2 ದೇವತೆಗಳನು ಕೂಡಿ ; ಬೇಕೆಂದು ನಿಂದಿಹನು 3 ಬಂಧುಗಳ ಕರೆಯಿಸಿದ

ನೆರೆದಿಹ ಸಭೆಯೊಳಗೆ[1] । ಪರ್ವತರಾಯ
ಪುರೋಹಿತರನೆ ಕರೆಸಿ
[2]ಗೋತ್ರವ ಕೇಳುತ ಮಂತ್ರಬಿನ್ನಪ ಮಾಡಿ
ಬೇಗ ಪರ್ವತರಾಯನು । ಒಳಗೆ ಹೋಗಿ
ಬೇಗ ಪರ್ವತರಾಯನು[2] ೧೨

ಬೇಗದಿ ಪಾರ್ವತಿಯ । ಶೃಂಗಾರಿಸಿ
ಕರೆತಂದು ಸಭೆಯೊಳಗೆ
ಪರಮೇಶ್ವರನಿಗೆ ಧಾರೆಯನೆರೆಯಲು
ಅಷ್ಟಮ ವಾದ್ಯಗಳು । ಎಸೆದವು
ಅಷ್ಟಮ ವಾದ್ಯಗಳು ೧೩

ಪುಷ್ಪದ ಮಾಲೆಯನು । ಪಾರ್ವತಿ ಪರ
ಮೇಶ್ವರನಿಗಿಕ್ಕಲು
ಸುರರು ಭೂಸುರರೆಲ್ಲ ಸಂತೋಷದಿಂದಲಿ
ಪುಷ್ಪದ ಮಳೆಗಳನು । ಕರೆದರಾಗ
ಪುಷ್ಪದ ಮಳೆಗಳನು ೧೪

---

1 ನೆರೆದ ಸಭೆಯೊಳಗಾಗ, ನೆರೆದ ಸಭೆಯ ಪ:ಥ್ಯದಿ

2 ಉತ್ತಮವಾಗಿದ್ದ ಕುಲಗೋತ್ರವ ನೋಡಿ
ಪುತ್ರಿ ಪಾರ್ವತಿಯ ತಾನು । ಧಾರೆಯನೆರೆದ
ಪುತ್ರಿ ಪಾರ್ವತಿಯ ತಾನು
ಹೆಣ್ಣು ಕೇಳಿದ್ದಕ್ಕೆ ಉತ್ತರವಾಗಿಯೂ ಈ ಹಾಡು ಬಳಕೆಯಾಗಿದೆ. ಆಗ ಅದರ ಪಲ್ಲವಿ ಹೀಗೆ:
ಕೊಡುತೇವೆ ಪಾರ್ವತಿಯ । ಪರ್ವತರಾಯ
ಕೈಲಾಸವಾಸನಿಗೆ
ಕೊಡುತೇವೆ ನಮ್ಮಯ ಮೋಹದ ಮಗಳನ್ನು
ನಾರಿ ಪಾರ್ವತಿಯ ಪರಮೇಶ್ವರನಿಗೆ ॥ ಪ ॥

## 4. ಸಾಗರದ ಹೆಣ್ಣು ಕೇಳಿದ್ದು

ಪಾಶಾಂಕುಶವ ಹಿಡಿದು ಮೂಷಿಕವನೇರಿದ
ಶೇಷನಾಭರಣ ಧರಿಸಿದ—ಮುದ್ದು ವಿ
ಘ್ನೇಶನ ಮುನ್ನ[1]—ಬಲಗೊಂಬೆ ೧

ಕರದಿ ಪುಸ್ತಕವೀಣೆ ಸರ್ವರ ಕಲ್ಯಾಣಿ
ವರ ಬ್ರಹ್ಮ[2] ರಾಣಿ ಫಣಿವೇಣಿ—ಕಲ್ಯಾಣಿ
ಸರಸ್ವತಿಯ ಮುನ್ನ—ಬಲಗೊಂಬೆ ೨

ಅಂದಸುರಾಸುರರು ಅಂಬುಧಿ ಕಡಯಲು[3]
ಚೆಂದದಲಿ ಹೇಳಿ[4] ಕಮಲದ—ಮಧ್ಯದಿ
ರಂಭೆ ಮಹಾಲಕ್ಷ್ಮಿ[5]—ಜನಿಸಿದ ೩

ಆ ಸುರರು ಭೂಸುರರು ವಾಸುಕಿ ಶ್ರೀಸುಖಿ[6]
ಶ್ರೀಶರಧಿಯನ್ನೆ ಕಡೆವಾಗ—ಮಾಲಕ್ಷ್ಮಿ
ಆ ಸಮಯ ಬಂದು—ಜನಿಸಿದ ೪

ಲಕ್ಷ್ಮಿ[7] ಹುಟ್ಟಿದಳೆಂದು ಹೊಸ್ತಿಲಲಿ ಕೇಳಿದ
ಮೊಕ್ಕ ಜಾಹ್ನವಿಯ ಮುಳುಗಿದ[8]—ಸಾಗರ
ಹೊನ್ನ ದಕ್ಷಿಣೆಯ—ಕೊಡಲ್ಹೋದ[9] ೫

ಬಾಲೆ[10] ಹುಟ್ಟಿದಳೆಂದು ಬಾಗಿಲಲಿ ಕೇಳಿದ
ಹೋಗಿ ಗಂಗೆಯನೆ ಮುಳುಗಿದ—ಸಾಗರ
ನಾಂದಿ ದಕ್ಷಿಣೆಯ—ಕೊಡಲ್ಹೋದ[11] ೬

ಜಾತಕ ಹೇಳಿರಿ ಜ್ಯೋತಿಷ್ಯರೆಲ್ಲರು[12]
ಜಾತಿ ಪೊಂಬೆಟ್ಟಿ (?) ಬಿಳಿಯೆಲೆ—ಪೀಳ್ಯವ
ಶ್ರೀ ಶರಧಿ ತಂದು—ಕೊಡಿಸಿದ ೭

---

1 ಮುಂದೆ 2 ಬ್ರಹ್ಮನ 3 ಕಡೆವಲ್ಲಿ 4 ಕೆಂದಾವರೆಯ 5 ಶ್ರೀಲಕ್ಷ್ಮಿ 6 ಗಿರಿಸುತೆ
7 ಪುತ್ರಿ 8 ಮುಳುಗೆದ್ದು 9 ಮತ್ತೆ ದುಂದುಭಿಯ ಹೊಯಿಸಿದ 10 ದೇವಿ
11 ಹೂವ ದುಂದುಭಿಯ ಹೊಯಿಸಿದ 12 ಜೋಯಿಸರೆಲ್ಲರು

ಮೂವಟ್ಟಿ ಗಿರಿಯರು ಆದವು ದಶರಾತ್ರಿ
ಸಾದು ಕಣಗಳ ಮನದಲಿ—ಇಕ್ಕಿಸಿ*
ಮಹಾಲಕ್ಷ್ಮಿ ಎಂಬ್ಹೆಸರ—ಬರೆದರು ೮

ಲಕ್ಷ್ಮಿ ಹುಟ್ಟಿದ ಗಳಿಗೆ ಒಪ್ಪುವ[1] ಎಂಬ್ಹೇಳಿ[2]
ಹುಟ್ಟಿದ ಮನೆಗೇನೂ ಭಯವಿಲ್ಲ—ಶ್ರೀಹರಿಯು
ಒಲಿಸ್ಯಾಳು ಒಂದೇ—ನಿಮಿಷಕ್ಕೆ ೯

ನಾರಿ ಹುಟ್ಟಿದ ಗಳಿಗೆ ಆಯವನೇನೆಂಬೆ
ಗಂಡ ಆದಿಯವೇನೂ ಭಯವಿಲ್ಲ—ನಾರಿಯರ
ಒಲಿಸ್ಯಾಳು ಒಂದೇ—ನಿಮಿಷಕ್ಕೆ ೧೦

ತಂದು ತೊಟ್ಟಿಲಲಿಟ್ಟು ರಂಗವಲ್ಲಿಯನಿಕ್ಕಿ
ಮುಂಡಾಸಗಳನೆ ಇಳಿಬಿಟ್ಟು—ನಾರಿಯರು
ಗುಂಡನುರುಳಿಸಿದರೊಲವಿಂದ[3] ೧೧

ಭೂತಳದೊಳು ಜಗನ್ಮಾತೆ ಹುಟ್ಟಿದಳೆಂದು
ಸೇಸೆಯ ತಳಿದು ಮಗವಿಟ್ಟು ಪರದೇಶಿ (?)[4]
ಜಾತಕದ ಓಲೆ—ಬೆಸಗೊಂಡು ೧೨

ಸೊಂಟಕ್ಕೆ ಒಪ್ಪುವ ಕಾಂತಿಯ ಒಡ್ಯಾಣ
ಗಂಟೆ ಸರಪಳಿಯು ಹೊಳೆಯುತ್ತ—ಮಾಲಕ್ಷ್ಮಿ
ನಾರಾಯಣಗೆಣೆಯಾಗಿ—ಬಳೆದಳು ೧೩

ನಳಿತೋಳಿಗೊಪ್ಪುವ ಕಡಗ ಓಂಬಳೆ ಚಳಕಿ
ಪೊಳಪಿಗೆ ಮೈಯು ಹೊಳೆವಂತೆ—ಮಾಲಕ್ಷ್ಮಿ
ಬಳೆದಳು ಶ್ರೀಹರಿಗೆ—ಎಣೆಯಾಗಿ ೧೪

ಮುಗುಳ್ನಗೆ ಸುಡಿ ಮುದ್ದು ಮೊಳೆವಲ್ಲು ದಾಳಿಂಬ
ಅದರ ಬಿಳುಪಿಂಗೆ ಹೊಳೆದಂತೆ—ಮಾಲಕ್ಷ್ಮಿ
ಶ್ರೀಹರಿಗೆಡೆಯಾಗಿ—ಬಳೆದಳು ೧೫

---

* ಅರ್ಥ ಅಸ್ಪಷ್ಟ 1 ಒಪ್ಪುವಂಥದು 2 ಒಪ್ಪವುಂಟೇನೆಂಬೆ 3 ಗುಂಡ ಹಾರಿಸಿದ ಗಗನಕ್ಕೆ
4 ? (ಅರ್ಥ ಅಸ್ಪಷ್ಟ)

ಶರಧಿರಾಜನು ತನ್ನ ಮಗಳ ತೊಡೆಯಲಿಟ್ಟು
ಧರೆಯೊಳು ನಿನಗೆ ಸರಿಬಂದ—ಪುರುಷನ
ಅರುಹು ಎನ್ನೊಡನೆ—ಎನುತಿದ್ದ ೧೬

ಸರ್ವಗುಣ ಸಂಪನ್ನ ಸರ್ವಗುಣಗಂಭೀರ
ಸರಿಗೆ ನರಪಳಿಯ ವನಮಾಲಿ—ನರಗಳ ಶ್ರೀ
ಹರಿಗಿಡದಿನ್ನಾರಿಗಿಡೆನೆಂದ1 ೧೭

ಆಡಿದ ಮಾತನು ಕೇಳಿದ ನಾರದ
ಸ್ವಾಮಿ ಶ್ರೀಹರಿಗೆ ಅರುಹುವೆನೆನುತಲಿ
ದ್ವಾರಕಾಪುರಕೆ—ನಡೆತಂದ ೧೮

ತಕ್ಕ ಕೃಷ್ಣನೆ ನಿನ್ನ ಅಷ್ಟೈಶ್ವರ್ಯಕ್ಕೆ
ಚಿಕ್ಕವಳು ಲಕ್ಷ್ಮಿ ಬಳೆಯುತ್ತಲಿದ್ದಾಳೆ
ಸತ್ಯಸಾಗರನ—ಮನೆಯಲ್ಲಿ ೧೯

ಮಿತ್ರೆ ದೇವಕಿದೇವಿ ಅರ್ಥಿಯಲೆನುತಿದ್ದಳು
ಪುತ್ರಯ್ಯ ನೆರೆವ ಮದುವೆಗೆ—ಶ್ರೀಕೃಷ್ಣಂಗೆ
ತರಬೇಕು ದೊರೆಯ—ಮಗಳನು ೨೦

ನಾರಿ ದೇವಕಿದೇವಿ ಬೇಗವಲೆನುತಿದ್ದಳು
ಬಾಲಯ್ಯ ನೆರೆವ ಮದುವೆಗೆ—ಶ್ರೀಕೃಷ್ಣಂಗೆ
ತರಬೇಕು ದೊರೆಯ—ಮಗಳನು ೨೧

ಉಪ್ಪರಿಗೆ ಒಳವಿಕೆ2 ಪಟ್ಟೆಮಂಚದ ಮೇಲೆ
ಸುತ್ತ ದೀವಿಗೆಯ ಬೆಳಕಿಲಿ—ಹೇಳಿದಳೆ
ಪುತ್ರಯ್ಯ ನೆರೆದ—ಮದುವೆಗೆ—ಶ್ರೀಕೃಷ್ಣಂಗೆ
ತರಬೇಕು ದೊರೆಯ—ಮಗಳನು ೨೨

ಅರಸಿ ಮಾತನು ಕೇಳಿ ಕರೆಸಿದನೆ ಜೋಯಿಸರ
ತರಿಸಿ ಪಂಚಾಂಗ ತೆಗೆದೋದಿ ಹೇಳಿದ
ಹೆಣ್ ಕೇಳಲ್ಹೋಪ—ದಿನಗಳ ೨೩

---

1 ಎಂದ—ಎಂದಳು 2 ಒಳವಿಕೆ—ಒಳಗಡೆ

ಕರೆಸಿದನೆ ಕರಣಿಕರ ಬರೆಸಿದನೆ ಓಲೆಯ
ತರಿಸಿ ಪಂಚಾಂಗ ತೆಗೆದೋದಿ—ಕೇಳಿದ
ದಿನ್ ನೋಡಲ್ಹೋಪ—ದಿನಗಳ ೨೪

ಸೂರ್ಯನ ಬಲವುಂಟು ಶುಕ್ರನ ಬಲವುಂಟು
ಶುಕ್ರಗೆ ಬೃಹಸ್ಪತಿಯ ಬಲವುಂಟು—ಎಂದ್ಹೇಳಿ
ಜೋಯಿಸರು ನಗುತ—ನುಡಿದರು ೨೫

ಇಂದ್ರನ ಬಲವುಂಟು ಚಂದ್ರನ ಬಲವುಂಟು
ಕುಜಗೆ ಬೃಹಸ್ಪತಿಯ ಬಲವುಂಟು—ಎಂದ್ಹೇಳಿ
ಜೋಯಿಸರು ನಗುತ—ನುಡಿದರು ೨೬

ಸುಗ್ಗಿ ಬೆಳ್ದಿಂಗಳು ಅಬ್ಬರದಿ ಬಂದಾವು
ಸುಗ್ಗಿಯ ಒಳಗೆ ಮದುಮಗ—ನಾದಾನೆಂದು
ವಸುದೇವಗೆ ನಗುತ—ನುಡಿದರು ೨೭

ಬೇಸಗೆ ಬೆಳದಿಂಗಳು ಲೇಸಾಗಿ ಬಂದಾವು
ಬೇಸಗೆಯೊಳಗೆ ಮದುಮಗ—ನಾದಾನೆಂದು
ಜೋಯಿಸರು ನಗುತ—ನುಡಿದರು ೨೮

ಸತ್ಯಸಾಗರದಲಿ ಲಕ್ಷ್ಮಿಯೈದಳಂತೆ[1]
ಚೆಚ್ಚರದಿ[2] ನೋಡಿ ಬರುತೇನೆ—ಎಂದು ವಸುದೇವ
ಸುತ್ತ[3] ದುಂದುಭಿಯ—ಹೊಯ್ದನು ೨೯

ಕ್ಷೀರಸಾಗರನ ಮನೆಲಿ ಲಕ್ಷ್ಮೀದೇವಿ
ಇದ್ದಾಳೆ ನೋಡಿ ಬರಲೆಂದು—ವಸುದೇವ
ಹೂವ ದುಂದುಭಿಯ ಹೊಯ್ಸಿದ ೩೦

ಪಟ್ಟದ ಮರಿಯಾನೆಯ[4] ಹತ್ತಿದನೆ ವಸುದೇವ
ಸುತ್ತ ದುಂದುಭಿಯ ಹೊಯಿಸುತ್ತ—ವಸುದೇವ
ಸತ್ಯಸಾಗರಕೆ—ಹೊರಟನು ೩೧

1 ಲಕ್ಷ್ಮಿಯಿರುವಳಂತೆ 2 ಚಂದದಲಿ 3 ಸತ್ಯ 4 ಪಟ್ಟಣದ ಮರಿಯಾನೆ

ಪಟ್ಟಣದ ಮರಿಯಾನೆ ಪತ್ತಿದನೆ ಬಲರಾಮ
ಮುತ್ತಿನ ಬೆಳ್ಗೊಡೆಯ ಬಲಗೈಲಿ—ಹಿಡಕೊಂಡು
ಲಕ್ಷ್ಮಿಯ ಕೇಳ—ಹೊರಟನೆ[1] ೩೨

ಪಟ್ಟೆ ಹಚ್ಚಡ ಹೊದ್ದು ಮುತ್ತಿನುಂಗುರವಿಟ್ಟು
ಮುತ್ತಿನ ಸತ್ತಿಗೆಯ ನೆರಳಲಿ[2] ವಸುದೇವ
ಕೃಷ್ಣಗೆ ಹೆಣ್ಣ ಕೇಳ—ಹೊರಟನೆ ೩೩

ಶಾಲಿ ಹಚ್ಚಡ ಹೊದ್ದು ನೀಲದುಂಗುರವಿಟ್ಟು
ಹೂವಿನ ಸತ್ತಿಗೆಯ ನೆಳಲಲಿ—ವಸುದೇವ
ಸ್ವಾಮಿಗೆ ಹೆಣ್ ಕೇಳ—ಹೊರಟನು ೩೪

ವಸುದೇವರು ತಾವಂತೆ ಅರಸು ಬಲರಾಮರಂತೆ
ಕುಶಲದಿ[3] ಗೋವಳರ ಒಡಗೊಂಡು—ನಮ್ಮನೆಯ
ಕುಶಲೆಯ[4] ಕೇಳಲಿಕೆ—ಬರುತಾರೆ ೩೫

ಆನೆಮೇಲೆ ಪಟ್ಟಣಕೆ ಬರುವವರಾರೆಂದು
ಕ್ಷೀರಸಾಗರನು ಬೆಸಗೊಂಡು—ಕೇಳಿದ
ಮುತ್ತಿನ ಕೋಲ—ಹೊಳಲೋರ ೩೬

ಸತ್ತಿಗೆ ಮೇಲ್ ಪಟ್ಟಣಕೆ ಬರುವವರಾರೆಂದು
ಸತ್ಯಸಾಗರನು ಬೆಸಗೊಂಡು—ಕೇಳಿದ
ಹೂವಿನ ಕೋಲ—ಹೊಳಲೋರ ೩೭

ಲಕ್ಷ್ಮಿಯಲಂಕರಿಸಿ ಪಟ್ಟೆಯ ನೆರಿಮುಡಿಸಿ[5]
ಸಕಲಾಭರಣವ ಇಡಿಸಿರೆ—ನಮ್ಮನೆಗೆ
ಲಕ್ಷ್ಮಿಯ ಕೇಳಲ್—ಬರುತಾರೆ ೩೮

---

1 ಕೃಷ್ಣಗೆ ಹೆಣ್ಕೇಳಲ್ ಹೊರಟನೆ 2 ಸತ್ತಿಗೆ ಚಾಮರದ ನೆಳಲಲ್ಲಿ 3 ಹರುಷದಿ
4 ಹೊರಟ ಸಾಗರನ ಪುರಕಾಗಿ 5 ನೆರಿದು—ನೆರಿವಾಳಿ

ಉಪ್ಪರಿಗೆ ಕಂಬಕ್ಕೆ ಹಚ್ಚಿರಿಸಿ ದೀವಿಗೆಯ[1]
ಕೃಷ್ಣಗೆ ಗದ್ದಿಗೆಯ ಕುಳಿರ್ಹಾಸಿ[2]—ನಮ್ಮನೆಯ
ಲಕ್ಷ್ಮಿಯ ಕೇಳಲಿಕೆ—ಬರುತಾರೆ ೩೯

ಮಾಳಿಗೆಯ ಕಂಬಕ್ಕೆ ತೂಗಿ ಕೈದೀವಿಗೆಯ
ಸೂರ್ಯಗದ್ದಿಗೆಯ ಕುಳಿರ್ಹಾಸಿ—ನಮ್ಮನೆಯ
ಮಹದೇವಿಯ ಕೇಳ—ಬರುತಾರೆ ೪೦

ಅಂದು ತಾ ಸಾಗರ ಅಂದಣವೇರಿದ
ಮುಂದುಭಿಯ ಸುತ್ತ ಹೊಯಿಸುತ್ತ—ಸಾಗರ
ಬಂದ ವಸುದೇವರೆದುರಿಗೆ ೪೧

ಕಾಳೆ ಸೂಳೈಸುತ್ತ ಬಾಗಿಲಿಗೆ ಬಂದವು[3]
[4]ಕಾಲಿಗೆ ನೀರ ಕೊಡಿಸಿದ—ನಾಗರ
ಕ್ಷೇಮವಾರ್ತೆಯನು[4]—ಬೆಸಗೊಂಡ ೪೨

ಬಂದ ಬೀಯಗರಿಗೆ[5] ಜಂಬುಕಾನವ ಹಾಸಿ
[6]ಬಂದಿರೋ ನೀವು ಕುಳ್ಳಿರಬೇಕೆಂದು
ಸಿಂಧು ಸಾಗರನು ನುಡಿದನು[6] ೪೩

ಬಾಹರ್ಕೈವರಿಗೆ ಜಾಡಿ ಕಂಬಳಿ ಹಾಸಿ
ಬಂದಿರೋ ನೀವು ಕುಳ್ಳಿರಲೆ—ಬೇಕೆಂದು
ಕ್ಷೀರಸಾಗರನು—ನುಡಿದನು ೪೪

ಎಂದೆಂದು ನಮ್ಮನೆಗೆ ಬಂದವರು ನೀವಲ್ಲ
ಇಂದೇನು ಬಂದ ಹೊಸಪರಿ—ಎಂದ್ಹೇಳಿ[7]
ಸತ್ಯಸಾಗರನು ಬೆಸಗೊಂಡ ೪೫

---

1 ಹಚ್ಚಿಕೈದೀವಿಗೆಯ 2 ಕುಳಿರ್ಹಾಸಿ—ಕುಳಿತುಕೊಳ್ಳುವುದಕ್ಕಾಗಿ ಹಾಸಿ
3 ಬಂದರು 4 ಬೀಯಗರ ನೋಡಿ ವಸುನಕ್ಕು ಶರಧೀಶ ಕ್ಷೇಮಕುಶಲವನೆ
5 ಬಂದರ್ಕೈವರಿಗೆ 6 ಪನ್ನೀರ ಗಿಂಡಿ (ಸಂತೋಷದಿಂದ) ತರಿಸಿದ—ವೀಳ್ಯವ ಕೊಡಿಸಿ ಬಂದ ಕಾರಣವ ಬೆಸಗೊಂಡ 7 ಎಂದೆನುತ

ನಿತ್ಯದಲಿ ನಮ್ಮನೆಗೆ ಬಪ್ಪವರು ನೀವಲ್ಲ
ಮತ್ತೇನು ಬಂದ್ರಿ ಹೊಸಪರಿ—ಎಂದ್ಹೇಳಿ
ಸತ್ಯಸಾಗರನು—ಬೆಸಗೊಂಡ ೪೬

ಎಂದೆಂದು ನಿಮ್ಮನೆಗೆ ಬಂದವರು ನಾವಲ್ಲ
ಕೃಷ್ಣಗೆ ಲಕ್ಷುಮಿಯ ಕೊಡುವದುಂಟಾದರೆ
ಎಂದೂ ನಿಮ್ಮನೆಗೆ—ಬರುತ್ತೇವೆ ೪೭

ನಿತ್ಯದಲು ನಿಮ್ಮನೆಗೆ ತಪ್ಪದೆ ಬರುವರಲ್ಲ
ಕೃಷ್ಣಗೆ ಲಕ್ಷ್ಮಿ ಕೊಡುವದುಂಟಾದರೆ
ನಿತ್ಯದಲೂ ನಾವು—ಬರುತೇವೆ ೪೮

ನಾವು ಕನ್ಯಾರತ್ನ ಕೇಳಲು ಬಂದೈದೇವೆ
ನೀವ್ನಿಮ್ಮ ಮಗಳ ಕೊಡಬೇಕು—ಎನ್ನುತ ವಸು
ದೇವರು ನಗುತ ನುಡಿದರು ೪೯

ಉಪ್ಪರಿಗೆ ಒಳಪಿಕೆ ಹೋದನೆ ಸಾಗರ
ಅಕ್ಕತಂಗಿಯರ ಬೆಸಗೊಂಡು—ಕೇಳಿದ
ಲಕ್ಷ್ಮಿಯ ಕೃಷ್ಣನಿಗೆ—ಕೊಡಬಹುದೆ ೫೦

ಮೂರ್ವರುಷ ತುಂಬಲಿಲ್ಲೆ ಮುದ್ದು ಮಾಲಕ್ಷ್ಮಿಗೆ
ಲಗ್ನಕಿನ್ನೇನು ಅವಸರ—ಎಂದ್ಹೇಳಿ
ಸತ್ಯಸಾಗರನು—ನುಡಿದನು ೫೧

ಪಟ್ಟೆಯನುಡಲರಿಯು ತುಪ್ಪೋಗರ ಉಣಲರಿಯು
ಬಟ್ಟಲು ಮೋರೆಯನೆ ತೊಳಿಲರಿಯದ[1] ಲಕ್ಷ್ಮಿಯ
ಕೊಡುವವರುಂಟೋ—ಜಗದಲ್ಲಿ ೫೨

ಪಟ್ಟೆಯನುಡಿಸೇವು ತುಪ್ಪೋಗರ ಉಣಿಸೇವು[2]
ಬಟ್ಟಲ ಮೋರೆಯನೇ ತೊಳಸೇವು—ಲಕ್ಷ್ಮಿಯ
ಕೃಷ್ಣಗೆ ನೀವು—ಕೊಡಬೇಕು ೫೩

1 ತೊಳಿಲೆ—ತೊಳೆಯಲು 2 ಉಣಿಸೇವು—ಉಣಿಸುವೆವು

ಗೆಜ್ಜೆಯನಿಟ್ಟಿರುವ ಕಾಲಿನ್ನೂ ಬಲಿಲಿಲ್ಲೆ
ಮುದ್ದುಭಾಷೆ ಮಾತು ಮರಿಲಿಲ್ಲೆ—ಮರಿಲಿಲ್ಲದ ಮಗಳನು
ಕೊಡುವದೇನುಂಟೇ—ಧರಮೇಲೆ ೫೪

ಗೆಜ್ಜೆಯನಿಟ್ಟಿದ್ದ ಹಜ್ಜೆಯನಿಡಿನೇವು[1]
ಸಜ್ಜನದ ಮಾತ ಕಲಿಸೇವು[2]—ಲಕ್ಷ್ಮಿಯ
ನಾರಾಯಣನೀಗೆ[3]—ಕೊಡಬೇಕು ೫೫

ಹತ್ತು ವರ್ಷ ತುಂಬ್ಲಿಲ್ಲೆ ಮಿತ್ರೆ ಮಹಾಲಕ್ಷ್ಮಿಗೆ
ಮದುವಗಿನ್ನೇನು ಅವಸರ—ವಸುದೇವರೆ
ಮುಂದ್ಹೋಗಿ ನೋಡಿ—ಬದಲ್ಹೆಣ್ಣ ೫೬

ಮುಂದ್ಹೋಗಿ ನೋಡಿದರೆ ಒಂದು ನೂರು ಹೆಣ್ಣುಂಟು
ಅಂದವಿಲ್ಲ ಹಣ್ಣು ಚೆಲುವಿಲ್ಲ—ಚೆಲುವಿಲ್ಲದ ಹಣ್ಣು
ಬಾರದು ನಮ್ಮ—ಮನಸ್ಸಿಗೆ ೫೭

ಅತ್ಹೋಗಿ ನೋಡಿದರ ಹತ್ತುನೂರ್ ಹೆಣ್ಣುಂಟು
ಒಪ್ಪಾಗಿ ಇಲ್ಲೆ ಬಿಳುಪಿಲ್ಲೆ—ಆ ಹೆಣ್ಣು
ಒಪ್ಪದು ನಮ್ಮ—ಮನಸ್ಸಿಗೆ ೫೮

ಕಂಡ ಕಂಡ ಗೊಲ್ಲತೇರ ಎಂಜಲ ಮೆಲುವನು
ಕೊಂಬು ಕೊಳಲೂದಿ ಮೆರೆವನು—ಮೆರೆವ ಗೋವಳನಿಗೆ
ಚೆಂದುಳ್ಳ ಮಗಳ—ಕೊಡೆನೆಂದ ೫೯

ರುಕುಮನ ಕಾದಿದನು ರುಕ್ಮಿಣಿಯ ತಂದನು
ಸವತೇರು ಬಹಳ ಎನುತಲೆ—ಸಾಗರ ತನ್ನ
ಮೋಹದ ಮಗಳ—ಕೊಡೆನೆಂದ ೬೦

ಅಚ್ಚ ಶ್ರೀತುಳಸಿಯ ಮುಚ್ಚುಮದುವೆಯಾದನು
ಅಕ್ಕಂದಿರು ಬಹಳ ಎನುತಲೆ—ಸಾಗರ ತನ್ನ
ಮುತ್ತಿನ ಮಗಳ—ಕೊಡೆನೆಂದ ೬೧

1 ಹಜ್ಜೆಯ ಬಲಿಸೇವು 2 ಮುದ್ದು ಭಾಷೆ ಮಾತ ಮರೆಸೇವು 3 ನಾರಾಯಣ ದೇವರಿಗೆ

ಅಕ್ಕಿರಾಶಿಯಷ್ಟು ಹೆತ್ತಮ್ಮನ ಬಳಗವು
ಗುತ್ತಿ ನಾಡೊಳಗೆ ಐದಾರೆ[1]—ಅವರ ಮನಕೆ
ಸರಿ ಬಂದ್ರೆ ಮಗಳ—ಕೊಡುತೇವೆ[2] ೬೨

ಕೃಷ್ಣಗೆಂದು ಒಪ್ಪಲಿಕೆ ಹುಟ್ಟಿದಳೆ ಮಾಲಕ್ಷ್ಮಿ
ಸಪ್ತ ಸಾಗರವ ಹೃದಯದಿ—ಹೃದಯದಿಟ್ಟಾಳುವನ
ಇಷ್ಟೊ ಪರಿಯಿಂದ—ಜರೆಪಿರೊ ೬೩

ಅತ್ತೆ ಒಳ್ಳೆಯೊಳಾಗಿ ಪುತ್ರ ಸಣ್ಣವನಾಗಿ[3]
ಹೊಸ್ತಿಲೊಂದಾಗಿ ನೆರೆಮನೆ[4]—ಇದ್ದರೆ
ಕೊಡುತೇವ[5] ನಮ್ಮ—ಮಗಳನು ೬೪

ಅತ್ತೆ ಒಳ್ಳೆಯಳುಂಟು ಪುತ್ರ ಸಣ್ಣವನುಂಟು
ಒಪ್ಪಕ್ಕೆ ಕೇರಿ ಮನೆಯುಂಟು—ಎಂದರೆ
ಕೃಷ್ಣಗೆ ಲಕ್ಷ್ಮಿಯನು—ಕೊಡಿರೆಂದ ೬೫

ಮನೆಯೇನು ನೋಡುವಿರಿ ಮಿಗಿಲು ಮಂಟಪಶಾಲೆ
ಗಲಗಲನೆ ನಲಿವ ಹಂಸಯು—ಪಲ್ಲಕ್ಕಿ
ಅವ ನೋಡಿ ಹೆಣ್ಣ—ಕೊಡಬೇಕು ೬೬

ಅವನೇನ ನೋಡೇವು ಅವಗೆ ನಾವ್ ಕೊಟ್ಟೇವು
ಮನೆಯಾಗಿದ್ದತ್ತೆ ಗುಣವಂತೆಯಾದರೆ
ವರ ನೋಡಿ ಹೆಣ್ಣ—ಕೊಡುತೇವ ೬೭

1 ಐದಾರೆ—ಇದ್ದಾರೆ 2 ಕೊಡುತೇನೆ 3 ಚಿಕ್ಕವನಾಗಿ 4 ಒಪ್ಪಕ್ಕೆ ಕೇರಿಮನೆಯಾಗಿ
5 ಕೊಟ್ಟೇವು

## 5. ರುಕ್ಮಿಣಿ ಓಲೆ ಬರೆದದ್ದು

ಓಲೆಯ ಬರೆದಳು ರುಕ್ಮಿಣಿಯು[1]
ನಾರಾಯಣ ಹರಿ ದ್ವಾರಕಿಯ ಕೃಷ್ಣನಿಗೆ
ವಸುದೇವ ದೇವಕಿ ತನಯನಿಗೆ ಪ

ಕುಂಡಿನಿ ನಗರದಿ ರುಕ್ಮಿಣಿ ಸ್ವಯಂವರ
ದಂಡಿಗೆ ಕ್ಷೋಣಿಯ ತೀರದಲಿ
ಚಂದ್ರಮಂಡಲ ನಕ್ಷತ್ರಜ್ಯೋತಿಯ ಪ್ರಭೆ
ದುಂದುಭಿ ಪಾರಿಜಾತಗಳೆಸೆಯೆ ೧

ಪಚ್ಚೆಯ ಪರಿಮಳ ತಳಿರು ತೋರಣಗಳು
ಅಚ್ಚಕರ್ಪೂರದ ನೀಲವರ್ಣ[2]
ಉತ್ಸವವಾಗಿದ ಮದುವೆಯ ಚಾರಿತ್ರ
ಅಚ್ಯುತರಾಯಗೆ ಬಿನ್ನವವ ೨

ಕನ್ನಡಿ ಕಲಶವು ಕನಕದ ಸರಿಗೆಯು
ಸ್ವರ್ಣಮಾಣಿಕ್ಯದಾಭರಣಗಳು
ಜಾಹ್ನವಿ ಜನಕನು[3] ಜಾಣೆಯರರಸನು
ಸ್ವರ್ಣಮಾಣಿಕದ ತೋರಣವೆಸೆಯೆ ೩

ಓಲೆ ಕಂಠವ ತರಹೇಳಲು ರುಕ್ಮಿಣಿ
ಜಾಲಂಧ್ರದೊಳು ಕಂಜಾಕ್ಷಿಯರು
ಶೂಲಪಾಣಿಯ ತನಯನನೇ ನೆನೆಯುತ
ಓಲೆಕಂಠವ ಹುಡುಕಾಡಿದರು ೪

ಕಂಠವ ಕಾಣದೆ ಕಳವಳವಾಗಲು
ಮಿಂಚುವ ಕಿತ್ತುಗುರಲಿ ತಿದ್ದಿ
ಕಂತುಪಿತನ ನೆನೆಯುತ್ತ ರುಕ್ಮಿಣಿ ಬೇಗ[4]
ಪತ್ರಿಕೆ ಬರೆಯಲು ತೊಡಗಿದಳು ೫

---

1 ರುಕುಮಿಣಿಯು 2 ನಿತ್ಯಕಲ್ಯಾಣಿ ನೀಲವೇಣಿ 3 ಜಠರನು 4 ಭರದಿ

ಇಟ್ಟರಿಸಿನ ತೊಡೆದೋಲೆಯು ಎಡಗೈಲಿ
ಒಪ್ಪುವ ಬಲಗೈಯಲಿ ಕಂಠ
ಸರ್ಪಶಯನನಾ ಬೇಡಿಕೊಂಡಳ ಮಿತ್ರೆ
ಪತ್ರಿಕೆ ಬರೆಯಲು ತೊಡಗಿದಳು ೬

ಮುತ್ತು ಮಾಣಿಕದಾ ಪೆಟ್ಟಿಗೆಯೊಳಗಿಹ[1]
ಮುತ್ತಿನೋಲೆಯು ಕರದಲಿ ಪಿಡಿದು
ಸರ್ಪಶಯನ ಬೇಡಿಕೊಂಡಳು ರುಕ್ಮಿಣಿ
ಅಚ್ಯುತರಾಯಗೆ ಬಿನ್ನಪವ ೭

ಪಟ್ಟಾವಳಿಯ ಸೀರೆ ನೆರಿಪಿಡಿದೇ ಉಟ್ಟು[2]
ಮುತ್ತು ಮಾಣಿಕದಾ ಬೆಳಕಿನಲಿ[3]
ಮುತ್ತಿನ ಕಂಠ ತಿರುಗಿಸುತ ಬರೆದಳು
ಗೋವಳರಾಯಗೆ ಬಿನ್ನಪವ ೮

ಉಪ್ಪರಿಗೆ ಒಳಪಿಕೆ ಪಟ್ಟೆಮಂಚದ ಮೇಲೆ
ಮುತ್ತಿನ ಒರಗು ಸುಪ್ಪತ್ತಿಗೆಯು
ಸುತ್ತ ದೀವಿಗೆಯ ಬೆಳಕಿಲಿ ಬರೆದಳು
ವಾರಿಜನಾಭಗೆ ಬಿನ್ನಪವ ೯

ಅಂಬರೀಷನ ಶಾಪವ ಪರಿಪರಿಸಿದಗೆ[4]
ಕಂಬದಲಿ ಒಡೆದು ಮೂಡಿದವಗೆ[5]
ನಂಬಿದ ಪ್ರಹ್ಲಾದಗೆ ವರವನಿತ್ತವಗೆ ಕೃ
ಪಾಂಬುಧಿ ಕೃಷ್ಣಗೆ ಬಿನ್ನಪವ ೧೦

ನಡುಸಭೆಯಲಿ ದುಶ್ಶಾಸನನು ದ್ರೌಪದಿ ಸೀರೆ
ಪಿಡಿದು ಸೆಳೆಯುತಿರುವುದ ಕಂಡು
ಕಡುಹರುಷದಿ ಅಕ್ಷಯವಾಗಲಿಯೆಂದ
ಕಡುಗಲಿ ಕೃಷ್ಣಗೆ ಬಿನ್ನಪವ ೧೧

1 ಪೆಟ್ಟಿಗೆಯೊಳಗೊಪ್ಪುವ 2 ಪಟ್ಟೆಯ ಸೀರೆಯು ನೆರಿಪಿಡಿದೇ ಉಟ್ಟು ; ಪಟ್ಟೆ ಸೀರೆಯನುಟ್ಟು ಬಟ್ಟು ಮುತ್ತನೆ ಕಟ್ಟಿ 3 ಮಾಣಿಕದಾಭರಣವಿಟ್ಟು 4 ಶಾಪವನಳಿದವ ನೀನು 5 ಕಂಬದಿಂದೊಡೆದು ಬಂದವ ನೀನು

ತಿಂಗಳು ಬಾಹದು ಗಂಗೆಯ ಜನಕನೆ
ಅಗ್ರಜನರಿಯ ಪಿತನರಿಯ
ಅಗ್ರಜನರಿಯ ಪಿತನರಿಯದಂದದಿ
ತನ್ನ ಬಳಿಗೆ ಓಲೆ ಕಳುಹಿದಳು ೧೨

ಬರೆವ ರಾಯಸಕೆ ಅರೆದರಿಸಿನ ಉದ್ದಿ
ಅರಗು ತರಿಸಿ ಮುದ್ರೆಯನಿಕ್ಕಿ[1]
ಉರಗಶಯನ ಬೇಡಿಕೊಂಡಳೆ ರುಕ್ಮಿಣಿ
ತರುಣಿ ಪತ್ರಿಕೆಯನು ಕಳುಹಿದಳು ೧೩

ಪತ್ರಿಕೆಯನ್ನತಿ ವೇಗದಿಂದಲೆ ತಂದು
ಸತ್ಯವಿಪ್ರನ ಕೈಯಲಿ ಕೊಡಲು
ಚಿತ್ತವಲ್ಲಭ ನರಸಿಂಹಗೆ ಕೊಡು ಎಂದು
ಮಿತ್ರೆ ಪತ್ರಿಕೆಯನೆ ಕಳುಹಿದಳು ೧೪

ನಾಳಿನಿರುಳಿಗೆ ಎನ್ನಯ ಮದುವೆಯು ಎಂಬೆ
ವೇಳೆಗೆ ಬಂದೊದಗುವದೆಂಬೆ[2]
ಕೇಳೆಲೆ ರುಕ್ಮಿಣಿ ಸನ್ನೆಯೊಳೆನ್ನಯ
ಹಾರಿ ಹೋಗಲಿಕೆ ರೆಕ್ಕೆಗಳಿಲ್ಲವೆ[3] ೧೫

ಪದುಮನಾಭನ ದಿವ್ಯನಾಮವ ನೆನೆದರೆ
ಎದುರಾಗಿ ಪುಷ್ಪಕ ಬರುವುದೆಂದು
ಮುದದಿಂದೇರಿಕೊಂಡು ನೀ ಮುಂದೆ ನಡೆಯೆಂದು
ಬುಧನನು ಮುಂಪಕೆ ಕಳುಹಿದಳು ೧೬

ಮೂರು ಮುಕ್ಕಾಲು ಗಳಿಗೆಯಿಂದೊಳಗೇ
ಹಾರಿತು ದ್ವಾರಕ ಪತ್ತನಕೆ
ನಾರಸಿಂಹನ ಅರಮನೆಯ ಬಾಗಿಲ ಮುಂದೆ
ಹಾರುವ ಮುಂದಕೆ ತೆರಳಿದನು ೧೭

1 ಮುದ್ರಿಕೆಯನಿಟ್ಟು 2 ಬಂದು ಒದಗಲೆಂಬೆ 3 ಪಕ್ಕಗಳಿಲ್ಲವೆ

ಬಂದು ವಿಪ್ರನು ಶ್ರೀಹರಿಯ ಶ್ರೀಚರಣದ
ದ್ವಂದ್ವಕ್ಕೆರಗಿಯೇ ಪೊಡಮಟ್ಟು
ಸಂಭ್ರಮದಿಂದಲಿ ತಂದ ಪತ್ರಿಕೆಯನು
ತಂದು ಕೈಯೊಳಗಿಟ್ಟು ವಂದಿಸಿದ ೧೮

ಬಾರೋ ಭೂಸುರ ಬಹು ದಣಿದೆ ನೀನೆನುತಲಿ
ಕ್ಷೀರ ಸಕ್ಕರೆ ಹಣ್ಣು ತರಿಸಿ ಕೊಟ್ಟು
ಆಲೇಖದ ತುದಿಯಲ್ಲಿ ಬರೆದ ಪತ್ರಿಕೆ ನೋಡಿ
ಮಾನಿನಿ ಮಣಿಗೆ ಕುಶಲವೆ ಎಂದ[1] ೧೯

ಅಣ್ಣನೋಡು ಹೆಂಗುಸರ ಗನ್ನಗತಕತನ[2]
ತನ್ನಣ್ಣನರಿಯ ಪಿತನರಿಯ
ತನ್ನಣ್ಣನರಿಯ ಪಿತನರಿಯದಂದದಿ
ನನ್ನ ಬಳಿಗೆ ಓಲೆ ಕಳುಹಿದಳು ೨೦

ಈ ರೀತಿಯಲಿ ಬರೆದೋಲೆಯ ನೋಡುತ
ಭೂರಿ ಸೇನೆಗಳೆಲ್ಲ ಬರಲಿಯೆಂದು
ಹರಿ ರಥವನೀಕ್ಷಣ ನಡತಂದೆನು
ಮಾನಿನಿ ಮರುಗಿದರರುಹೆಂದನು ೨೧

ಹೊತ್ತು ನೋಡುವಳು ಹಂಬಲಿಸುವಳು ರುಕ್ಮಿಣಿ
ಪಟ್ಟೆಮಂಚದ ಮೇಲೊರಗುವಳು
ಪಟ್ಟೆಮಂಚದ ಮೇಲೆ ಒರಗಿ ಹಂಬಲಿಸುವಳು
ಕೃಷ್ಣರಾಯನು ಏಕೆ ಬರಲಿಲ್ಲವೋ ! ೨೨

ಹೋದ ಬ್ರಾಹ್ಮಣನೇಕೆ ಬರಲಿಲ್ಲೆನುತಲಿ
ವೇದೋತ್ತಮ ಕೃಷ್ಣ ಬಂದದ್ದಿಲ್ಲ
ಈ ದೇಹವನು ಧರಿಸಿ ಹಾಸ್ಯವಾಯಿತೆಂದು
ಚೇದಿರಾಯನ ಬಯಕೆ ತೀರಿತಿಂದು ೨೩

1 ತಾನೆ ಅರ್ಚಿಸಿದನೊಲವಿಂದ 2 ಬುದ್ಧಿಗೆ ತಕ್ಕಂಥ

ಬಾಡಂಗಳರಿಸಿನ ತೀರ ತೊಂಡಿಲುಗಳು
ಕಾಡಿಗೆ ನೆನೆಗಡಲೆ ಕಿವಿಯೋಲೆ
ಕೂಡೆ ಕರ್ಪೂರ ವೀಳ್ಯಂಗಳರಸಿಕೊಟ್ಟು
ನೀಡಿವಳೆ ಬಾಲೆ ಬಾಗಿನ ಗೌರಿಗೆ[1] ೨೪

ಮುತ್ತ ಬಾಗಿನ ಕೊಂಡಾ ಸತಿಯುವರೆಲ್ಲ
ಮುತ್ತೈದೆಯಾಗಂದು ಹರಸಿದರು
ಎತ್ತಿಯೆ ಕರಗಳ ಮುಗಿದು ಹೊರವಂಟರು
ಚಿತ್ತದನುರಾಗವ ತಾಳಿದರು ೨೫

ಕೃಷ್ಣನು ಬರುವುದು ತಡವಾಯಿತೆನುತಲೆ
ಮುತ್ತಿನ ಹಾರವ ಹರಿದು ಚೆಲ್ಲಿ
ಮಿತ್ರೆಯರಾಯಲು ಶ್ರೀಕೃಷ್ಣ ಬಂದನು
ಮುತ್ತಿನ ರಥದಿ ಕುಳ್ಳಿರಿಸಿದನು[2] ೨೬

ಮುತ್ತಿನ ಮೊರ ಕಟ್ಟು ಎಪ್ಪತ್ತು ಸಾವಿರ
ಉಪ್ಪಳ ಗೌರಿಯ ತೀರದಲ್ಲಿ
ಮಿತ್ರೆ ರುಕ್ಮಿಣಿ ಬಾಗಿನವನು ಕೊಡುವಲ್ಲಿ
ತಟ್ಟನೆ ರಥದಿ ಕುಳ್ಳಿರಿಸಿದನು ೨೭

ನಿಲ್ಲು ನಿಲ್ಲೋ ಹೆಣ್ಣ ಕಳ್ಳ ಗೋಪಾಲನೆ
ಎಲ್ಲಿಗೆ ಒಯ್ವೆಯೊ ಅನುಜೆಯನು
ನಮ್ಮೆಲ್ಲವರಿಗೂ ಎದುರಾಗಬೇಕೆಂದು
ಅಲ್ಲೇ ಮುತ್ತಿದರು ಹರಿಯ ಬಂದು ೨೮

ಬೆನ್ನಟ್ಟಿ ಬರುವಂಥ ರುಕ್ಮನ ಕಂಡಲ್ಲಿ
ಭಂಗಿಸಿ ಬೈದು ಭಂಗವ ಪಡಿಸಿ[3]
ಮುಂದಣ ಕೈಯೆರಡು ಹಿಂದಕ್ಕೆ ಕಟ್ಟಿಸಿ ಮು
ಕುಂದ ಹೊಕ್ಕನು ದ್ವಾರಕಪುರವ[4] ೨೯

---

1 ಭಾಮೆ ನೀಡಿದಳೆ ಗೌರಿಯ ಬಾಗಿನ 2 ರಥದಿ ಪ್ರತ್ಯಕ್ಷವಾದ 3 ಮಾಡಿ
4 ಮುಕುಂದ ಪಟ್ಟಣಕೆ ಕಳಿಸ್ಯಾಯಿತು

## 6. ನಿಶ್ಚಯದ ತಾಂಬೂಲ

ಆಯಿತೆ ಮನ ನಿಶ್ಚಯ । ಅತ್ತೆಮ್ಮಗೆ
ತೋರಿದ ಕೋರಿಕೆಯ ಪ

ಒಪ್ಪಂಥ ವರನು ಆಗಿ । ಪ್ರಾಯದೊಳೊಳ
ಗಿಪ್ಪತ್ತು ವರುಷವಾಗಿ
ಅಚ್ಚ ಕೆಂಪಾದ ಮಗಗೆ ಕೊಡಬೇಕೆಂದು
ನಿಶ್ಚಯ ಮಾಡಿದ್ದು ನಿಮಗೆ ಸಂದಣಿಸಿತೆ ೧

ಊರ ಮುಂದಿನ ಗದ್ದೆಯು । ಸೇದುವ ಬಾವಿ
ಬಾಗಿಲ್ಮುಂದಣ ಕೆರೆಯು
ಮೋಲು ಮುತ್ತಿನ ಮಣಿ ಸಾಲು ತೆಂಗಿನ[illegible]
ಬಾಲನಿಗಲ್ಲದಿನ್ನಾರಿಗೆ ಕೊಡುವಿರೆ ೨

ಬಂಧುಗಳೊಳಗಿವನು । ನೋ[illegible]ಲು [illegible]ಲು
ಸುಂದರನಾಗಿಹನು
ಇಂದು ವಧೂವರರ ವೃಂದ ಸಮೀಕ್ಷಿಸಿ
ಚೆಂದವೆನ್ನುವದು ಆನಂದದಿ ಮೆರೆವುದು ೩

ಪೆಟ್ಟಿಗೆ ಪಲ್ಲಕ್ಕಿಯು । ಅವರ ಮನೆ
ಪಟ್ಟೆ ಮಂಚದ ಕಂಬವು
ಇಷ್ಟದಿ ಬಪ್ಪವರಿಗಾದರ ಮಾಡುವರು ಈ
ಶಿಷ್ಟನಿಗಲ್ಲದಿನ್ನಾರಿಗೆ ಕೊಡುವಿರೆ ೪

## 7. ಅಕ್ಕಿ ತೊಳಸಿದ್ದು—1

ಸಿದ್ಧಿವಿನಾಯಕ ಸಿದ್ಧಿಯ ಮಾಡಯ್ಯ
ಉದ್ದಿನುಂಡಲಿಗೆ ನಿನಗೀವೆ—ಗಣಪತಿ
ಸಿದ್ಧಿಯ ಮತಿಯ—ಕರುಣಿಸು ೧

ದ್ವಾರಕಾಪುರದಲ್ಲಿ ವಾರಿಜ[1] ಶ್ರೀಕೃಷ್ಣ
ನಾರಿ ಸೌಭದ್ರೆಯನು ಕರೆದನೆ—ಕರೆದು ಸಣ್ಣಕ್ಕಿಯ
ಬೇಗ ತೊಳಸೆಂದು—ನುಡಿದನೆ ೨

ಅಣ್ಣನ ನುಡಿಕೇಳಿ ಬಣ್ಣದ ಸೀರೆಯನುಟ್ಟು
ಕಣ್ಣಿಗಂಜನವ ತೆಗೆದ್ಹಚ್ಚಿ—ಸೌಭದ್ರೆ
ಸಣ್ಣಕ್ಕಿ ಹೇಳಿ—ತರಿಸಿದ ೩

ಪಟ್ಟೆವಾಳಿಯನುಟ್ಟು ಬಟ್ಟ[2]ಕುಂಕುಮವಿಟ್ಟು
ಅಚ್ಚ ಕಂಕಣವ ಕೈಗಿಟ್ಟು—ಸೌಭದ್ರೆ
ಅಕ್ಕಿ ತೊಳಸಲಿಕೆ—ಅನುವಾದ ೪

ಸಾಲವಾಳಿಯನುಟ್ಟು ಹಾರಪದಕವಿಟ್ಟು
ದೋರೆ ಕಂಕಣವ ಕೈಗಿಟ್ಟು—ಸೌಭದ್ರೆ
ಅಕ್ಕಿ ತೊಳಸಲಿಕೆ—ಅನುವಾದ ೫

ಅತ್ತಿಗೆ ನಾದಿನಿಯರು ಅರ್ಥಿಯಿಂದಲೆ ಏಳಿ
ಸುತ್ತಣ ಕೇರಿ ಸತಿಯರು—ಒಡಗೊಂಡು
ಅಕ್ಕಿ ತೊಳಸಲಿಕೆ—ಅನುವಾದ ೬

ನಂದಿವಾಹನ ಸುವ್ವಿ[3] ತಂದೆ ಗಣಪತಿ ಸುವ್ವಿ
ವಂದಿಸಿ ಶಾರದೆಗೆ ಸುವಿಯೆಂದು—ಸೌಭದ್ರೆ
ಅಕ್ಕಿ ತೊಳಸಿದಳೆ—ಬೆಳವಿಗೆ ೭

---

1 ವಾರಿಜ—ಇಲ್ಲಿ ವಾರಿಜಾಕ್ಷ ಎಂದು ಇದ್ದಿರಬಹುದು ; ಆಗ ಒಂದು ಅಕ್ಷರ ಹೆಚ್ಚಾಗುತ್ತದೆ. ಆದುದರಿಂದ ಇಲ್ಲಿ ವಾರಿ–ಸೆರೆಯಾಳು, ಜ–ಹುಟ್ಟಿದವ. ಸೆರೆಯಾಗಿದ್ದ ವಸುದೇವನಲ್ಲಿ ಜನಿಸಿದವನು—ಎಂದು ಅರ್ಥ ಮಾಡಬಹುದು 2 ಬಟ್ಟ—ವೃತ್ತಾಕಾರದ.

3 ಸುವ್ವಿ–ಸುವ್ವಾಲಿ–ಮದುವೆ, ಮುಂಜಿಗಳಿಗೆ ಮುನ್ನ ಮುತ್ತೈದೆಯರು ಅಕ್ಕಿ ತೊಳಸುವಾಗ ಹಾಡುವ ಹಾಡುಗಳಲ್ಲಿ ಬರುವ ಶುಭ ಸಂಕೇತದ ಪಲ್ಲವಿಯ ಶಬ್ದ ; ಇದು 'ಶಿವ' ಶಬ್ದದ ದೇಸಿಯ ರೂಪ.

ನೀಲಕಂಠನೆ ಸುವ್ವಿ ಲೋಲೆ ಪಾರ್ವತಿ ಸುವ್ವಿ
ಬಾಲಗಣಪತಿಗೆ ಸುವಿಯೆಂದು—ಸೌಭದ್ರೆ
ಗೋದಿ ತೊಳಸಿವಳೆ—ಬೆಳವಿಗೆ ೮

ಕರುಣಾಸಾಗರ ಸುವ್ವಿ ಗಿರಿಜಾವಲ್ಲಭ ಸುವ್ವಿ
ಕರಿಮುಖ ಪಿತನೇ ಸುವಿಯೆಂದು—ಸೌಭದ್ರೆ
ಬೇಗದಿಂದಕ್ಕಿ—ತೊಳಸಿದ ೯

ಕಡಲ ಶಯನ ತಂದ ಕಡಗ ಹಸ್ತವ ಮಾಡಿ
ಸಡಗರದಿಂದ ಸತಿಯರು—ಒಡಗೊಂಡು
ಸೌಭದ್ರೆ ಅಕ್ಕಿ ತೊಳಸಿದ ೧೦

## 8. ಅಕ್ಕಿ ತೊಳಸಿದ್ದು—2

ಅಂದವುಳ್ಳೊರಳಿಗೆ ಚಂದದ ಧೂಪವ ತೋರಿ
ಚಂದದಲಿ ಶಿವನ ಬಲಗೊಂಡು—ನಾರಿಯರು
ಗಂದಸಾಲೆಯಕ್ಕಿ ಒರಳ್‌ಪೊಯ್ಸೆ—ಸುವ್ವಿ ಸುವ್ವಿ ಸೂವಾಲ್ಯ ೧

ಆಯುವುಳ್ಳೊರಳಿಗೆ ಛಾಯಾಧೂಪವ ತೋರಿ
ಬೇಗದಲಿ ಶಿವನ ಬಲಗೊಂಡು—ನಾರಿಯರು
ಗೋಧಿಸಾಲಕ್ಕಿ—ಒರಳ್ಪೊಯ್ಸೆ—ಸುವ್ವಿ ಸುವ್ವಿ ಸೂವಾಲ್ಯ ೨

ಅಕ್ಕಿ ತುಂಬಲೆ ಗೂಡು ಬತ್ತ ತುಂಬಲೆ ಗೂಡು
ರೊಕ್ಕ ತುಂಬಲಿಕೆ ಕರಡಿಗೆ—ಬರಬೇಕೆಂದೆ
ಅಪ್ಪನ ಮನೆಯು—ಬೆಳವಿಗೆ—ಸುವ್ವಿ ಸುವ್ವಿ ಸೂವಾಲ್ಯ ೩

ಬೇಳೆ ತುಂಬಲೆ ಗೂಡು ಬೆಲ್ಲ ತುಂಬಲೆ ಗೂಡು
ನಾಣ್ಯ ತುಂಬಲಿಕೆ ಪೆಟ್ಟಿಗೆ—ಬರಬೇಕೆಂದೆ
ಅಣ್ಣನ ಮನೆಯು—ಬೆಳವಿಗೆ—ಸುವ್ವಿ ಸುವ್ವಿ ಸೂವಾಲ್ಯ ೪

ಗಟ್ಟದ ಕೆಳಗಿನ ಗಟ್ಟಿ ಬೆಂಡನೆ ತಂದು
ತೊಟ್ಟು ತೊಟ್ಟೆಂಬ ಮರನವ—ತೆಕ್ಕೊಂಡು
ಮಿತ್ರಿಯರಕ್ಕಿ ಹಸಮಾಡೆ—ಸುವ್ವಿ ಸುವ್ವಿ ಸೂವಾಲ್ಯ ೫

ಅಕ್ಕಿ ಕರಿಯಕ್ಕಿಯು ಅಕ್ಕ ಬೆಳಿಯಕ್ಕಿಯು
ಅಕ್ಕಿಯ ತೊಳೆದ ಹಣಿನೀರು—ಕುಡಿವಲೆ ಬಂದ
ಹಕ್ಕಿ ಹೇಳಿದವೆ—ಶಕುನವ—ಸುವ್ವಿ ಸುವ್ವಿ ಸೂವಾಲ್ಯ ೬

## 9. ಅಕ್ಷತೆ ಕಲಸಿದ್ದು

ಬಲಗೊಂಬೆ ಗಜಮುಖನ ಬಲಗೊಂಬೆ ಕರಿಮುಖನ
ಬಲಗೊಂಬೆ ಸ್ವಸ್ತಿ ಅರಸನ—ಷಣ್ಮುಖನ
ಬಲಗೊಂಡಕ್ಷತವ—ಕಲಸಿರೆ ೧

ಗುರುವಿಗೆ ನವೋ ಎಂಬೆ ಶಾರದೆಗೆ ನಮೋ ಎಂಬೆ
ಕ್ಷೀರಶಯನನಿಗೆ[1] ಪರಶಿವಗೆ—ನವೋ ಎಂಬೆ
ನವೋ ಎಂದು ಕೈಯ—ಮುಗಿವೆನು ೨

ವಂದಿಸುವೆ ಶಾರದೆಗೆ ವಂದಿಸುವೆ ಸರಸ್ವತಿಗೆ
ವಂದಿಸುವೆ ಕ್ಷೀರ ಶಯನಗೆ—ಪರಶಿವಗೆ
ವಂದಿಸಿ ಕೈಯ—ಮುಗಿವೆನು ೩

ತೆಂಗಿನ ಕಾಯನು ತಂದು ದೇವರಿಗಿಟ್ಟು
ಇಂದಿನ ಕಾರ್ಯ ಜಯವಾಗಲೆನ್ನುತ್ತ
ಶುಭದಿಂದಕ್ಷತವ—ಕಲಸಿರೆ ೪

ಹತ್ತು ಕೊಳಗ ಅಕ್ಕಿ ಹತ್ತು ತೆಂಗಿನ ಕಾಯಿ
ಇಟ್ಟು ದೇವರಿಗೆ ಎರಗುವೆ—ನಮ್ಮ ಕಾರ್ಯ
ಅರ್ಥಿಯಲಿ ಕೂಡಿ—ಬರಬೇಕು ೫

ಕದಳಿ ತೆಂಗಿನ ಕಾಯ ಮನೆಯ ದೇವರಿಗಿಟ್ಟು
ನೆನೆದ ಕಾರ್ಯಗಳು ಶುಭವಾಗಲೆನುತಲೆ
ಮನೆಯ ದೇವರಿಗೆ—ಎರಗುವಿ ೬

---

1 'ಕ್ಷೀರ ಶಯನ' ಎಂಬಲ್ಲಿ 'ಕ್ಷೀರ ಸಾಗರ ಶಯನ' ಎಂದು ಅರ್ಥವಿಟ್ಟುಕೊಳ್ಳಬೇಕು.

ಹೊಸ್ತಿಲ ದೇವರಿಗೆ ತುಪ್ಪ ಸಕ್ಕರೆಯಿಕ್ಕಿ
ಎತ್ತಿದ ಕಾರ್ಯ ಜಯವಾಗಲೆನುತಲೆ
ಹೊಸ್ತಿಲ ದೇವರಿಗೆ—ಎರಗುವಿ ೭

ಹಸನಾದ ಅಕ್ಕಿಯ ಶಶಿಮುಖಿಯರೆ ತನ್ನಿ
ಹೊಸ ಮುತ್ತು ಬಿಗಿದ ಹರಿವಾಣದೊಳಗಿಟ್ಟು
ಕುಶಲದೊಳಕ್ಷತವ—ಕಲಸಿರೆ ೮

ಪಂಕಜಮುಖಿಯರು ಕುಂಕುಮವ ತೆಗೆತಂದು
ಪಂಚರತ್ನಗಳ ಬಿಗಿದಿಟ್ಟು—ಹರಿವಣದಿ
ನಾರಿಯರಕ್ಷತವ—ಕಲಸಿರೆ ೯

ಸರಸಿಜ ಮುಖಿಯರು ಅರಸಿನವ ತೆಗೆತಂದು
ವರುಷಕ್ಕೊಂದೆರಡು ಮದುವೆಯಾಗಲಿ ಎಂದು
ಗೌರಿಯರಕ್ಷತವ— ಕಲಸಿರೆ ೧೦

ಮುತ್ತಿನ ಹರಿವಾಣದಿ ಅತ್ತರದಕ್ಷತೆ[1] ಕಲಸಿ
[2]ಪೊಕ್ಕು ಕೇರಿಯನೆ ಕರೆವಲೆ—ಹೋದರೆ
ಅಕ್ಷತೆ ಕೊಟ್ಟು—ಕರೆದರೆ[2] ೧೧

## 10. ಕೇರಿ ಕರೆದದ್ದು

ಕರೆದಳೆ ದೇವಕಿ ಕೇರಿಯನು
ತರಳೆ ಬೇಗದಿ ಬರಬೇಕೆಂದು
ಕರೆದಳೆ ದೇವಕಿ ಕೇರಿಯನು ಪ

ಗುರುಗಣಪತಿ ಶಾರದಾಂಬೆಯ ಚರಣಕೆ
ಕರವ ಮುಗಿದು ಶಿರಬಾಗುವೆನು
ತರಳೆಯಲ್ಲವೆ ನೀನು ಪೊರೆಯಬೇಕೆನ್ನನು
ಕರಿವದನನ ಮಾತೆ ಕರುಣಿಸೆಂದು ೧

1 ರತ್ನದಕ್ಷತೆ 2 ಸುತ್ತಣ ಬಂಧುಗಳ ಕರೆಸುವಂಥಾ ವಾರ್ತೆ ಮತ್ತಾಗಲಿ ನಮ್ಮ ಮನೆಯಲ್ಲಿ

ಇಂದಿನ ಬೆಳಗಿಗೆ ಬಂಧುಗಳೆಲ್ಲರ ಆ
ನಂದದಿ ಕರೆಸಬೇಕೆಂದೆನುತ
ಚಂದದಿ ನೇರಿ ಪಟ್ಟಣಗರ ಕರೆದು ಬಾ
ರೆಂದು ವಸುದೇವನು ನುಡಿದಾಗ ೨

ಪತಿಯ ಮಾತನು ಕೇಳಿ ಸತಿ ದೇವಕಿ ತನ್ನ
ಪತಿಯೊಡನಿಂತು ಪೇಳಿದಳಾಗ
ಹಿತನುಗ್ರಸೇನನ ಮಾತೆ ಬರಬೇಕೆಂದು
ಅತಿ ಶೀಘ್ರದೋಲೆ ಕಳುಹುವೆನೆಂದಳು ೩

ಅರಸುಗಳಿಗೆ ಓಲೆ ಬರೆಯಬೇಕೆನುತಲೆ
ಕರೆಸಿದಳೇ ಲೇಖನದವರ
ಬರೆಸಿದಳೆ ಸಕಲ ದೇಶದ ರಾಯರಿಗೆಲ್ಲ
ಅರಸಿನ ಉದ್ದಿ ಕಳುಹಿದಳೆ ೪

ಸಂತೋಷದಿಂದಲೆ ಸಕಲ ಬಂಧುಗಳಿಗೆ
ಶಾಂತಭೂಪನ[1] ಪ್ರೇಮದ ಸತಿಗೆ
ಕುಂತೀದೇವಿಯು ಸಹ ಬರಬೇಕೆನುತಲೆ
ಅತ್ಯಂತ ವಾರ್ತೆ ಕಳುಹಿದನಾಗ ೫

ದೇವಕಿ ಉದಯವಾಗದ ಮುನ್ನ ಎದ್ದಳೆ
ಭಾವಮೈದುನರನು ಕರೆವೆನೆಂದು
ಗೋವಳರಾ ಮನೆ ಕೇರಿ ಪಟ್ಟಣಗಳ
ಭಾವೆಯರೊಡಗೊಂಡು ಕರೆದಳಾಗ ೬

ಬಾಲಚಂದ್ರನ ಪ್ರಭೆ ಪೋಲ್ವ ಸೀರೆಯನುಟ್ಟು
ನೀಲ ಮಾಣಿಕದಾಭರಣವಿಟ್ಟು
ಕಾಲುಂಗಿಲ ಬೆಳ್ಳಿ ಹಿಂಡುಗಂಕಟವಿಟ್ಟು
ದೇವಕಿ ಕೇರಿಯ ಕರೆದಳಾಗ ೭

1 ಶಾಂತಭೂಪ—ಶಂತನು ರಾಜ

ಪಟ್ಟೆ ಪೀತಾಂಬರ ಸೀರೆಯ ನೆರಿಯುಟ್ಟು
ಪೀತಾಂಬರದ ಕುಪ್ಪಸ ತೊಟ್ಟು
ಜಾತಿ ಮಾಣಿಕದಾಭರಣವನೇ ಯಿಟ್ಟು
ಚೆಂದದಿಂದಲಿ ಶೃಂಗರವಾದಳೆ ೮

ಶೃಂಗಾರವಾಗಿ ದೇವಕಿ ದೇವಿ ತನ್ನಯ
ಸಂಗಡ ನಾರಿಯರೊಡಗೂಡಿ
ರಂಗುಮಾಣಿಕ ಹರಿವಾಣಗಳನೆ ಪಿಡಿದು
ಮಂಗಲವಾದ್ಯದಿ ಹೊರಟಳಾಗ ೯

ಬಡವರೆಲ್ಲರು ಬನ್ನಿ ಹುಡುಗರೆಲ್ಲರು ಬನ್ನಿ
ಬಿಡದೆ ಬನ್ನಿರಿ ಎಲ್ಲ ಬೆಳವಿಗಾಗಿ
ಕಡೆಯ ಕೇರಿಯ ಹೆಣ್ಣುಮಕ್ಕಳೆಲ್ಲರು ನೀವು
ಸಡಗರದಿಂದ ಬನ್ನಿರೆಂದಳು ೧೦

ಸಿದ್ಧ ಪುರುಷರು ಬನ್ನಿ ರುದ್ರರೆಲ್ಲರು ಬನ್ನಿ
ವಿದ್ವಾಂಸರೆ ನೀವು ಬನ್ನಿರೆಂದು
ತಿದ್ದಿ ತಿಲಕವಿಟ್ಟು ಸತಿಯರೆಲ್ಲರು ನಿಮ್ಮ
ಮುದ್ದುಮಕ್ಕಳು ಕೂಡಿ ಬರಬೇಕೆಂದು ೧೧

ಮಕ್ಕಳೆಲ್ಲರು ಬನ್ನಿ ಮನೆಯೋರೆಲ್ಲರು ಬನ್ನಿ
ಮಕ್ಕಳೆ ಬನ್ನಿ ಭೋಜನಕೆಂದು
ಅಕ್ಕತಂಗಿಯರೆಲ್ಲವರೊಡಗೂಡುತ
ಅಕ್ಕರೆಯಿಂದಲಿ ಬನ್ನಿರೆಂದಳು ೧೨

ಭಾವಮೈದುನ ಅತ್ತೆ ಮಾವ ಸಹಿತ ನಿಮ್ಮ
ಬಾಲಕರೊಡಗೂಡಿ ಬರಬೇಕೆಂದು
ಗೋವನು ಕಾಯುವ ಗೋವಳರೆಲ್ಲರ
ದೇವಕಿ ಕರೆದಳೆ ಸಂಭ್ರಮದಿ ೧೩

ವೇದಶಾಸ್ತ್ರದ ಪಂಡಿತರೆಲ್ಲರು ಬನ್ನಿ
ಸಾಧುಸಂತಾದಿ ಸುಜ್ಞಾನಿಗಳು
ಬೀದಿ ಬೀದಿಯಲೆಲ್ಲ ಕಂಡ ಕಂಡವರನು
ದೇವಕಿ ದೇವಿಯು ಕರೆದಳಾಗ ೧೪

ನರುವರನೆಲ್ಲ ಕರೆದು ದೇವಕಿ ತನ್ನ
ಕರದೊಳಕ್ಷತೆ ಹರಿವಣ ಪಿಡಿದು
ನರುವರಿಗುಪಚಾರ ಮಾಡಬೇಕೆನುತಲೆ
ತಿರುಗಿ ಬಂದಳೆ ತನ್ನ ಮಂದಿರಕೆ ೧೫

ಚಂದದಿ ಕೇರಿಕೇರಿಯನೆಲ್ಲ ಕರೆದು
ಬಂದಳೆ ವಾದ್ಯಘೋಷಗಳಿಂದ
ಇಂದು ಸರ್ವರಿಗೆ ಮೃಷ್ಟಾನ್ನವ ಬಡಿಸಬೇ
ಕೆಂದು ದೇವಕಿ ದೇವಿ ಕರೆದಳಾಗ ೧೬

## 11. ಚಪ್ಪರ ಹಾಕಿದ್ದು

ಚಪ್ಪರವನಿಕ್ಕಿಸಿದ ಒಪ್ಪವ ನೋಡಿದ
ಚಪ್ಪರಕೂ ಮನೆಗೂ ತಿರುಗಿದ—ಅಪ್ಪಯ್ಯ
ಅಕ್ಕಿಯೆಷ್ಟು ಬೇಕು—ತೊಳಿಸ್ವೋಲೆ ೧

ಚಾವಡಿಯನಿಕ್ಕಿಸಿದ ಅಂದವ ನೋಡಿದ
ಚಾವಡಿಗೂ ಮನೆಗೂ ತಿರುಗಿದ—ಅಪ್ಪಯ್ಯ
ಗೋದಿಯೆಷ್ಟು ಬೇಕು—ತೊಳಿಸ್ವೋಲೆ ೨

ಅಕ್ಕಿರಾಶಿಯಂತೆ ಹೆತ್ತಮ್ಮನ ಬಳಗವು
ಗುತ್ತಿನಾಡೊಳಗೆ ಇರುವರು—ಬಂದರೆ
ಹತ್ತುಕಂಡುಗದಕ್ಕಿ—ತೊಳಸ್ಬೇಕು ೩

ಗೋದಿರಾಶಿಯಂತೆ ತಾಯಮ್ಮನ ಬಳಗವು
ಗೋವೆ ನಾಡೊಳಗೆ ಇರುವರು—ಬಂದರೆ
ಆರ್ಕಂಡುಗಕ್ಕಿ—ತೊಳಸ್ಬೇಕು ೪

ಮುತ್ತಿನ ಕೊಳಗಕ್ಕೆ ಮರಿಬಾಯಿ ಮುಚ್ಚಲು
ಮುತ್ತು ಕೆತ್ತಿಸಿದ ಕೊಳಗವ—ತೆಕ್ಕೊಂಡು
ಅಕ್ಕಿಯ ಅಳೆದ—ಬೆಳವಿಗೆ ೫

ಹೂವಿನ ಕೊಳಗಕ್ಕೆ ಮರಿಬಾಯಿ ಮುಚ್ಚಲು
ಹೂವ ಕೆತ್ತಿಸಿದ ಕೊಳಗವ—ತೆಕ್ಕೊಂಡು
ಗೋದಿಯ ಅಳೆದ—ಬೆಳವಿಗೆ ೬

## 12. ತೋರಣ ಕಟ್ಟಿದ್ದು

ಹತ್ತು ಪಡಿ ಅಕ್ಕಿಯು ಹತ್ತು ತೆಂಗಿನ ಕಾಯಿ
ಸತ್ಯಗಣಪತಿಯ ಬಲಗೊಂಡು—ನಮ್ಮನೆಯ
ಮುತ್ತಿನ ತೋರಣವ—ರಚಿಸಿದ ೧

ಅಪ್ಪನ ಆಳುಗಳು ತುಪ್ಪ ಅನ್ನವನುಂಡು
ಗುತ್ತಿಯ ನಾಡ ವನಕ್ಹೋಗಿ—ಕಡಿದರು
ಅಚ್ಚ ಸಂಪಗೆಯ—ಎಳೆಗಳ ೨

ಗುತ್ತಿಂದ ಎಳೆ ಬಂದ ಮುತ್ತಿನ ಗಳ ಬಂದ
ಗುತ್ತಿಯಾಚಾರಿ ಮಗ ಬಂದ—ನಮ್ಮನೆಯ
ಮುತ್ತಿನ ತೋರಣವ—ಬಿಗಿವಲೆ ೩

ಗುತ್ತಿಂದ ಎಳೆ ಬಂದು ಚಪ್ಪರದೊಳಿಳಿದವು
ಅಪ್ಪಯ್ಯ ಹೋಗಿ ಬೆಲೆಮಾಡಿ—ತಂದನು
ಪುಷ್ಪ ತೋರಣವ—ರಚಿಸ್ವೋಲೆ ೪

ತೋರಣ ಕಟ್ಟಿಸಿದ ಒಪ್ಪವ ನೋಡಿದ
ತೋರಣಕೂ ಮನೆಗೂ ತಿರುಗಿದ—ಅಪ್ಪಯ್ಯ
ತೋರಣ ಕಟ್ಟಿದವರಿಗುಡುಗೊರೆ ೫

ಅಕ್ಕಿ ಸಾಹಿತ್ಯವ ಮುತ್ತಿನ ಮೊರದೊಳಗಿಟ್ಟು
ರೊಕ್ಕ ವೀಳ್ಯವನೆ ನಡುಗಿಟ್ಟು—ತಂದೆವು
ತೋರಣ ಕಟ್ಟಿದವಗೆ—ಉಡುಗೊರೆ ೬

ಗೋದಿ ಸಾಹಿತ್ಯವ ಹೂವಿನ ಮೊರದೊಳಗಿಟ್ಟು
ಕಾಯಿ ವೀಳ್ಯವನೆ ನಡುಗಿಟ್ಟು—ತಂದೆವು
ತೋರಣ ಕಟ್ಟಿದವಗೆ—ಉಡುಗೊರೆ ೭

ಬೇಳೆ ಸಾಹಿತ್ಯವ ಚಿನ್ನದ ಮೊರದೊಳಗಿಟ್ಟು
ತುಪ್ಪ ಬೆಲ್ಲವನೇ ನಡುಗಿಟ್ಟು—ತಂದೆವು
ತೋರಣ ಕಟ್ಟಿದವಗೆ—ಉಡುಗೊರೆ ೮

## 13. ವಧುವಿಗೆ ಎಣ್ಣೆ ಎರಯುವುದು—1

ಶ್ರೀಕರಗಜಮುಖನ । ಪ್ರಾರ್ಥಿಸಿ
ಲೋಕೇಶನ ಪಿತನ
ಏಕಮನದಿ ಧ್ಯಾನಿಸಿ ಭೂಮಿಜೆಗಾ
ಸಾಕಾರದಿ ತೈಲವ ತಲೆಗೆರಿಸಿರು ॥
ವಾ ಕಥನವ ಪಾಡಿ—ಪೊಗಳುವ ೧

ಘಮಘಮಿಸುತಲಿರುವ । ಪರಿಮಳ
ದೊಗುಪುಗೆಯಿಂ ಮೆರೆವ
ಸೊಗಯಿಸುವಣ್ಣೆಯ ಕರದೊಳು ಪಿಡಿದಾ
ಮುಗುದೆಯು ತನ್ನಯ ಮಗಳ ಶಿರದಿ ನಸು ॥
ನಗೆಯೊಳಗೊತ್ತಿದಳು—ತವಕದಿ ೨

ಮಂಗಲಕರವೆನಿಸಿ । ತೈಲವ
ಹಿಂಗದೆ ತಲೆಗಿರಿಸಿ
ಸಂಗಡ ಶೋಭಾನಂಗಳ ಪಾಡುತ
ಅಂಗನಾಮಣಿಯರು ಪ್ರಾರ್ಥಿಸಿದರು ಶ್ರೀ ॥
ರಂಗನ ಸೋದರಿಯ—ಜಯವೆಂದು ೩

## 14. ವಧುವಿಗೆ ಎಣ್ಣೆ ಎರೆಯುವುದು—2

ಶ್ರೀಮಹಾಲಕ್ಷ್ಮಿಯ ನೋಡಿ
ಕಾಮಿನಿಯರು ಕೈಯ ನೀಡಿ ॥
ಸಾಮಜಗಾಮಿನಿಯರು ಹರಿವಣದಿ
ನೇಮಿಸಿ ತೈಲವ ನೆತ್ತಿಯೊಳಿರಿಸುತ
ಕ್ಷೇಮದಿ ಸರ್ವರು ಮದುಮಗಳಿಗೆ ಸು ॥
ಪ್ರೇಮದಿ ಚರ್ಚಿದರು[1]—ಹಸಿಯೆಣ್ಣೆ ೧

ಬಾರೇ ಬಾರೆಂದು ನಾರಿಯರು
ಚಾರು ಸುಂದರಿಯರ್ಧಾಂಗಿಯರು ॥
ಮಾರನ ಮುಂಗೈಯರಗಿಣಿಯಂತಿಹ
ಕಾರುಣ್ಯಾಂಬುವನೆರೆಯುವಳಿಗೆ ಶ್ರೀ
ನಾರಾಯಣ ನವರತ್ನ ವಿಹಾರಗೆ ॥
ಕೂರಿಸಿ ಚರ್ಚಿಸಿದರು—ಹಸಿಯೆಣ್ಣೆ ೨

ಭೃಂಗ ಕುಂತಳೆಗೆ ವಿಧುಮುಖಿಗೆ
ಸಂಗೀತಲೋಲೆಯ ಶಿರಕೆ ॥
ಅಂಗನೆಯರು ಕೊಂಡಾಡುತ ಮುದದಿ
ಶೃಂಗಾರಂಗಳ ಬೀರುತ ಗುಣದಿ
ಮಂಗಲಕರ ಪಂಚಲಿಂಗ ಸುಪ್ರಿಯನ ॥
ಅಂಗನೆಗೆ ಬೇಗ ರಚಿಸ್ಯಾರು ೩

## 15. ಕಲಶ ನೀರೆರೆಯುವುದು (ವಧುವಿಗೆ)

ಕಲಶ ನೀರೆರೆದು ಅರಸಿಯರೆಲ್ಲರು
ಸರಸಿಜವದನೆ ಶ್ರೀ ಜಾನಕಿಯ ಮುಡಿಗೆ ಪ

ಭೂಮಿದೇವಿಯ ಮಗಳಾದ ಸೀತಾಂಗನೆಯ
ಹೇಮದ ಮಣೆಮೇಲೆ ಕುಳ್ಳಿರಿಸುತ್ತಲೆ ೧

---

1 ಚರ್ಚು—ಹಚ್ಚು, ಲೇಪಿಸು.

ರತ್ನದ ಗಿಂಡಿಗೆ ಸುತ್ತ ಸೇಡಿಯ ಹಚ್ಚಿ
ತೆಂಗಿನ ಫಲವ ತಂದಿಟ್ಟು ಪೂಜಿಸಿದರು ೨

ಪನ್ನೀರ ಕಲಶವ ಪಿಡಿದು ರಂಭೆಯರು
ರನ್ನದಕ್ಷತೆಯಿಟ್ಟು ಎರೆದರು ನೀರನು ೩

ಜನಕನ ಸುತೆಯಾದ ಜಾನಕಿದೇವಿಗೆ
ಮಿಥಿಲೆಯ ನಾರಿಯರು ಕಲಶ ನೀರೆರೆದರು ೪

## 16. ವರನಿಗೆ ಎಣ್ಣೆ ಹನಿಸಿದ್ದು

ಶ್ರೀಲಲಿತಾಂಗಿಯರತಿ ಮುದದಿ
ಬಾಲಕಿಯರು ಮಿಗೆ ಪ್ರೈಯರದಿ
ಮೇಲು ಮುತ್ತಿನ ಹರಿವಾಣದೊಳರಿಸಿನ
ಜಾಳಿಸಿದಾ ಹಸಿಯೆಣ್ಣೆಯ ವಿಭವದಿ ॥
ಬಾಲಕೃಷ್ಣನಿಗೆ—ರಚಿಸ್ಯಾರು ೧

ವರ ಸರಸಿಜದಳ ಲೋಚನೆಯು
ಪರಮಪಾವನೆ ಗುಣಮಣಿಯು
ವರ ಕಲ್ಯಾಣ ವಿಧಾನದ ವಿಭವದಿ
ತರುಣೀಮಣಿ ತನ್ನಮೃತಕರಾಗ್ರದಿ ॥
ಶಿರದೊಳೆಣ್ಣೆಯನು—ರಚಿಸ್ಯಾರು ೨

ಅಂಬುಜಮುಖಿ ಕರಕಮಲದಲಿ
ಕುಂಭಕುಚದ ನಡು ಬಳುಕಿನಲಿ
ಪೊಂಬಣ್ಣದ ವರದಂಗುಲಿ ತೈಲವ
ನಿಂಬಿನೊಳಿಟ್ಟು ಹರಸಿ ಕುಮಾರಗೆ ॥
ತುಂಬಿಸಿ ಮಸ್ತಕವ—ರಚಿಸ್ಯಾರು ೩

ಚಾರುತರದ ಶೃಂಗಾರದಲಿ
ಕಾರಣ ಕಾರಣವೆನ್ನುತಲಿ
ಬೇರೆ ಬೇರೆಲ್ಲ ವಿಚಾರಿಸಿ ಸಾರಿಸಿ
ಕಾರುಣ್ಯದಲಿ ಕುಮಾರ ಕೃಷ್ಣಯ್ಯಗೆ ॥
ನಾರಿಯರೆಣ್ಣೆಯನು—ರಚಿಸ್ಯಾರು ೪

ಮನ್ನಿಸುತಲಿ ಮನ್ನಣೆಗಳನು
ಉನ್ನತ[1] ಪುಣುಗು ಜವಾದಿಗಳನು
ಸನ್ಮಾನಿಸಿ ವೈವಾಹದ ವಿಭವದಿ
ಚಿನ್ಮಯ ಗುರು ಪಂಚಲಿಂಗನನುಗ್ರಹ[2] ॥
ಮುನ್ನಾಗಲೆನುತ—ರಚಿಸ್ಯಾರು ೫

## 17. ನಾಂದಿ ಮಾಡಿದ್ದು (ವರಸಿಗೆ)

ಶ್ರೀಗಜವದನನ ಬಲಗೊಂಡು
ಯೋಗೇಶ್ವರಿಯ ಪಾದವ ಕಂಡು
ಭಾಗವತೋತ್ತಮ ನಾಗರ ಶಯನಗೆ
ಆಗಮೋಕ್ತದಲಿ ಪುರೋಹಿತ ಮುಖದಲಿ ॥
ಬೇಗದಿ ನಾಂದಿಯನೆ[3]—ಗೈದರೆ ೧

ಮನ್ನಿಸಿ ಮದುಮಗನನು[4] ಗೈದು
ಹೊನ್ನಂಗಿಯ ತೊಡಿಸುತಲೊಲಿದು[5]
ಕನ್ನಡಿ ಕುಂಕುಮ ಕಲಶಗಂಧಾಕ್ಷತೆ[6]
ಪನ್ನೀರ ಚಳಿಯುಗಳಿಂದಲಿ[7] ಶೋಭಿಪ ॥
ಚಿನ್ನದ ಮಂಟಪವ—ಗೈದರೆ ೨

ಮಧುರಸದಲಿ ಮಗಮಗಿಸಿರುವ
ವಿಧವಿಧಾಲಂಕೃತದಿಂದೆಸೆವ[8]
ಮಧುರಸದಲಿ ಮಣಿಮಯದಿಂದೊಲಿದಿಹ
ಚದುರುತನದಿ ಹೊಂಬಣ್ಣದ ನಿಲಯಕೆ[9] ॥
ಒದಗಿಸಿದರಲ್ಲಿ—ನಮೋ ಎಂದು[10] ೩

---

1 ಪನ್ನತ 2 ಪಂಚಲಿಂಗನ ಮಿತ್ರ 3 ಸಾಂದ್ಯವನೆ 4 ಮದೆ ಮಗನನು 5 ಹೊನ್ನಾಗಿಯೆ ತೋರಿಸುತಂದು 6 ಪುಣುಗು ಜವಾಜಿಯು 7 ಪನ್ನೀರಿನ ಪ್ರಕ್ಷಾಳದಿ 8 ದಿಂದೊಲಿವ 9 ದಿಬ್ಬಣದ ವಿಜಯಕೆ 10 ಒದಗಿ ವಂದನೆಯು ಗೈದರು

ಪರಿಪರಿ ದ್ರವ್ಯಂಗಳ ತರಿಸಿ
ಮೆರೆದೊಪ್ಪುವ ಸರ್ವರು ವೆರಸಿ[1]
ಗುರುಹಿರಿಯರು ಭೂಸುರ ಮುನಿವರ್ಗಕೆ
ಶಿರಬಾಗಲು ಸ್ವಸ್ತಿಕದಲಿ ಭಕ್ತಿಯೊ ॥
ಳರಗಿ[2] ನಾಂದಿಯನೇ—ಗೈದರು ೪

ಫಲಜಲ ಪುಷ್ಪಾದಿಗಳಿಂದ
ತಳಿರು ಕುಂಚದ ತೋರಣದಿಂದ[3]
ಪೊಳೆವ ಪೀತಾಂಬರ ನೆಲಕೊಲೆದಾಡುತ[4]
ನಳಿನನಯನನಿಗೆ ಮೊಗದಲಿ ರಂಜಿಪ ॥
ಚೆಲುವನೆನ್ನೇನ—ಪೊಗಳುವೆ ೫

ಅತಿಶಯದಲಿ ಸುರವನಿತೆಯರು
ನುತಿಸುತ ಶೋಭನದೊಳಗವರು
ಅತಿಗಳೆಯದೆ ಮನ ಮತಿ ಹಿಂಚಾಗವೆ
ಗತಿಗೈಯುತ ಮಹಿಮಾತಿಶಯನಿಗೆ ॥
ಜತೆಯ ನಾಂದಿಯನೇ—ಗೈದರು ೬

ವಾರಿಜಲೋಚನನಿವನೆನುತ
ಮಾರಜನಕನಿವ ತಾನಾಗಿರುತ
ಈ ರೀತಿಗಳಲಿ ನಾಂದಿ ಮುಖಂಗಳ
ಚಾರುತರದಿ ಕೊಂಡಾಡುತ ಪೊಗಳುತ ॥
ಭೂರಿ ಸಂಭ್ರಮದ—ಇರಲಂದು ೭

ಕೊಂಬು ಕಹಳೆ ವಾದ್ಯದ ರವದಿ
ತುಂಬಿತು ಸರ್ವದಿಕ್ಕುಗಳತಿ ಮುದದಿ
ತುಂಬುರು ನಾರದ ಗೀತವಿನೋದದಿ
ಸಂಭ್ರಮದಲಿ ಜಯಜಯದ ಸಿನಾದದಿ ॥
ಇಂಬಿನ ನಾಂದಿಯನೇ—ಗೈದರು ೮

---

1 ವಹಿಸಿ 2 ಸುಸ್ಥಿರದಲಿ ಶೋಭಿಸುತಿರಗಿ 3 ಪುಷ್ಪಾದಿ ತಂಡುಲದಿಂದ
4 ಚಲಿಸುತಲಾಡುತ

ಇಂದಿರೆಯನು ವರಿಸುವೆಯೆನುತ
ಚಂದಿರ ರುಚಿರಾನನನಾದವನ
ಎಂದೆಂದಿಗು ವಂದಿಸೆ ಜನವೃಂದ
ಚೆಂದದಿ ತಂದೆ ಶ್ರೀ ಪಂಚಲಿಂಗಪ್ರಿಯ ॥
ಬಂದು ಸಲಹುವನು—ಮುದದಿಂದ ೯

## 18. ಪಾಂಡವರ ನಾಂದಿ

ಗಜಮುಖಗೆ ಅಭಿನಮಿಸಿ ಪೇಳುವೆ ಮುದದಿಂದ
ಪಂಚಪಾಂಡವರ ಚೆಲುವಿನ—ವಿಸ್ತಾರ
ಕೇಳಿ ನೀವೆಲ್ಲ—ಕಿವಿಗೊಟ್ಟು ೧

ಪಾಂಡುಕುಮಾರರ ನಾಂದಿಗೆ ಅನುಕೂಲ
ಮಾಡಿರೆಂದೆನುತ ನುಡಿದರು—ಗುರುಗಳು
ಸಂತೋಷದಿಂದ—ನಗುತಲಿ ೨

ಕರೆಸಿದ ಗುರುಗಳ ಬರೆಸಿದ ಪತ್ರಿಕೆಯ
ಸಪ್ತಮುನಿಗಳಿಗೆ ಸರಿಯಾಗಿ—ಬರೆಸಿದ
ನಾಂದಿಗೆಲ್ಲವರು—ಬರಬೇಕು ೩

ಬರೆಸಿದ ಪತ್ರಿಕೆಯ ಕಳುಹಿ ವಸಿಷ್ಠರಿಗೆ
ಮುನಿಗಳು ಬೇಗ ಸಕಲರು—ಒಡಗೊಂಡು
ನಾಂದಿ ಸಮಯಕ್ಕೆ—ಬರಬೇಕು ೪

ಗುರುಕುಲೋತ್ತಮರು ಮಹಾಮುನಿ ಋಷಿಗಳು
ವೃದ್ಧರು[1] ಸಹಿತ ಬರಬೇಕು—ಪಾಂಡವರ
ನಾಂದಿ ಸಮಯಕ್ಕೆ—ಅನುವಾಗಿ ೫

ಪಾದಕಮಲದ ವಲ್ಲಿ ಕಂಬಿ ಶಾಲನೆ ಹೊದ್ದು
ಜೋಯಿಸರು ತಾವು ಬರಬೇಕು—ಪಾಂಡವರ
ನಾಂದಿ ಸಮಯಕ್ಕೆ—ಅನುವಾಗಿ ೬

---

1 ರುದ್ರರು

ಮಿತ್ರವರ್ಗದವರು ಸತ್ಯಸಂಘದವರು
ಮತ್ತೆ ಸಕಲರನು[1] ಒಡಗೊಂಡು—ಬರಬೇಕು[2]
ಪಾಂಡವರ ನಾಂದಿ—ಸಮಯಕ್ಕೆ ೭

ಮಲ್ಲಿಗೆ ಮುಡಿದವರು ಶೃಂಗಾರದ ಸುಗುಣೆಯರು
ಚೆಲ್ಲಗಣ್ಣುಗಳ ಜಾಣೆಯರು—ಬರಬೇಕು
ಪಾಂಡವರ ನಾಂದಿ—ಸಮಯಕ್ಕೆ ೮

ಚಿಕ್ಕ ಬಾಲರು ಸಹ ಸೊಬಗಿನ ಸುಗುಣೆಯರು
ಮಲ್ಲಿಗೆ ಮುಡಿದು ನಗುತಲೆ—ಬಂದರು
ಪಾಂಡವರ ನಾಂದಿ—ಸಮಯಕ್ಕೆ ೯

ಶತಕೋಟಿ ಸಾವಿರದ ಬೆಲೆಯುಳ್ಳ ಫಲ ಕಾಯ[3]
ಪಾಂಡವರ ನಾಂದಿ ಸಮಯಕ್ಕೆ—ಕೊಡಿರೆಂದು
ಸಿಂಧುರಾಯನಿಗೆ—ತಿಳಿಸಿದ ೧೦

ಪಂಚಪಾಂಡವರಿಗೆ ಪಂಚಮಿ ಮಾಸವು
ಶುದ್ಧ ಶುಭವೆಂದು ಮುಹೂರ್ತ—ತಿಳಿಸುತ
ಓಲೆಯ ಬರೆದು—ಕಳುಹಿದ ೧೧

ತಿಳಿದನು ಭೂಪಾಲ ಪಾಂಡವರ ನಾಂದಿಯು
ಕಾಲಕ್ಕನುವಾಗಿ ಕಳುಹಿದ—ಹಸ್ತಿನಪುರಕೆ
ನಾಂದಿ ಸಮಯಕ್ಕೆ—ಸರಿಯಾಗಿ ೧೨

ಲಕ್ಷ ಬಿಡಿಮುತ್ತಿನ ಬೆಲೆಯುಳ್ಳ ತಾಳಿಯ[4]
ಪಾಂಡವರ ನಾಂದಿ ಸಮಯಕ್ಕೆ—ಕಳಿಸೆಂದು
ಪತ್ರಿಕೆಯ ಬೇಗ—ಕಳುಹಿದ ೧೩

ಓಲೆಯ ನೋಡಿದ ಹರುಷವ ತಾಳಿದ
ಶತಕೋಟಿ ಸಾವ್ರ[5] ಬೆಲೆಯುಳ್ಳ—ತೆಂಗಿನ ಕಾಯ[6]
ಲಕ್ಷ ಬಂಡಿಯಲಿ—ಕಳುಹಿದ ೧೪

---
1 ಸವಿರಸ್ಸು 2 ಬಂದವರೆ 3 ಬೆಲೆಯುಳ್ಳ ಆಡಕೆಯ 4 ರಾಶಿಯ 5 ಸಾವಿರ
6 ರಾಶಿಯ

ಗುರುಕುಲೋತ್ತಮರು ಮಾಮುನಿಗಳು ಋಷಿಗಳು
ವೃದ್ಧರು ದ್ವಿಜರು ಸಹಿತಲೆ—ಬಂದರು
ಪಾಂಡವರ ನಾಂದಿಗನುವಾಗಿ[1] ೧೫

ಎಲ್ಲೋರು ಬಂದಾರು ಸಂತೋಷದಿಂದಲಿ
ಪಾಂಡವರ ನಾಂದಿ ಸಮಯಕ್ಕೆ—ಬಂದರು
ಉಲ್ಲಾಸದಿಂದ—ನಗುತಲೆ ೧೬

ಮುತ್ತಿನ ಮಣೆಯಿಟ್ಟು ಸುತ್ತ ಮುತ್ತೈದೆಯರು
ಪಾಡುತ್ತ ಪಾಡಿ ಹೊಗಳುತ್ತ—ಕುಳಿತರು
ಪಾಂಡವರ ನಾಂದಿ—ಸಮಯಕ್ಕೆ ೧೭

## 19. ಪನ್ನೆ ಮಾಡಿದ್ದು

ಪನ್ನೆಯ ಕಾರ್ಯವನು । ಮಾಡಿಸಿದನು
ಪನ್ನಗಶಯನನಿಗೆ
ಉನ್ನತ ವೈಭವದಿಂ ವಸುದೇವನು
ನಂದಿವಾಹನ ಸಖ ನಂದಕಂದನಿಗೆ ಪ

ಲೋಕಸಂಪನ್ನರಾದ । ಬ್ರಾಹ್ಮಣರಿಂದ
ನೋಡಿಸಿ ಜಾತಕವ
ಯೋಗನಕ್ಷತ್ರವು ಕರಣ ತಿಥಿಯು ವಾರ
ಅತಿ ಶುಭಲಗ್ನದಿ ರೂಢಿಪ ಹರಿಗೆ ೧

ಚಂದ್ರ ತಾರಾಬಲವ । ನೋಡುತಲಾಗ
ಮಂದಹಾಸದೊಳೆಲ್ಲರು
ಮಂದರೋದ್ಧರನಿಗೆ ಇಂದು ಸುಮುಹೂರ್ತವು
ಚಂದವಾಗಿಹುದೆಂದು ನಿಂದು ಪೇಳಿದರಲ್ಲಿ ೨

1 ನಾಂಧಿ ಸಮಯಕ್ಕೆ

ಸಲಿಲವ ತಂದಿರಿಸಿ । ಪುಪದೊಳಾಗ
ಹೊಳೆವ ಕನ್ನಡಿಯನಿಟ್ಟು
ಬಾಳು ಕತ್ತರಿ ಹರಿತಾಯುಧಗಳನಿರಿಸಿ
ಹರಿಯನು ಕರೆದು ಪನ್ನೆಯ ಮಾಡಿಸಿದರು ೩

ಸೌನವದಾ ತೈಲವ । ಮತ್ತವನಿಗೆ
ಪೂಸಿ ವಿಶೇಷವನು
ಸೂಸುವ ತೈಲದಿ ತೊಳೆಸಿ ಶ್ರೀಹರಿಗೇ
ಸಾಸಿರ ನಾಮಗೆ ಪನ್ನೆಯ ಗೈದರು ೪

ಮಂಗಲ ಗೀತವನು । ಹಾಡುತಲಾಗ
ಮಂಗಲಾಂಗಿನಿಯರೆಲ್ಲ
ಅಂಗಜಪಿತನಿಗೆ ಸ್ನಾನವ ಗೈಸುತ
ರಂಗಿಸಿಂದಲಿ ನಿಂದು ಸಂತೋಷದಿಂದಲಿ ೫

ಮಂಗಲ ತಿಲಕವನು । ಮಾಧವಗಿಟ್ಟು
ಮಂಗಳಾಂಗಿನಿಯರೆಲ್ಲ
ಅಂಗಜಪಿತನಿಗೆ ವಸನವನುಡಿಸುತ್ತ
ರಂಗಿನಿಂದಲಿ ನಿಂದು ಸಂತೋಷದಿಂದಲಿ ೬

## 20. ಕಲಶ ಮೀಯುವುದು (ಪುರುಷನು)

ಶ್ರೀಮದ್ಗುರುವರನಡಿಗೆರಗಿ । ಚೆಲ್ವ
ಸಾಮಜವದನಗೆ ತಲೆವಾಗಿ
ಕಾಮಿತವಾಗಿ । ಕರದಲಿ ಬಾಗಿ
ಕಾಮಿನಿಯರು ಬಂದು ಹೇಮದ ಕಲಶವ ॥
ಪ್ರೇಮದಿ ನಸುನಗುತ—ಪಿಡಿದರು ೧

ಸುರುಚಿರ ಮಾಣಿಕ ಹೊಳಪಿಂದ । ಚೆಲ್ವ
ಮರಕತ ಮೇಲ್ವಾಸುಗಳಿಂದ
ಹರಿಗೋವಿಂದ । ಮದುಮಗನೆಂದಾ
ಕರದೊಳು ಸಪ್ತಋಷೀಶ್ವರ ಸತಿಯರು ॥
ನೆರೆದು ಬಾಗಿದರು—ಕಲಶವ ೨

ಶ್ರುತಿಯುಪನಿಷತ್[1] ಮೊದಲಾದವರು । ಭಾಗೀ
ರಥಿ ಯಮುನರ್ಧಾಂಗಿಯರು
ಅತಿ ಚದುರೆಯರು । ಅಮರಾರ್ಚಿತರು
ಚತುರಾನನ ಪಿತ[2] ಮದುಮಗನೆನುತಲಿ ॥
ಹಿತದಿ ಬಾಗಿದರು—ಕಲಶವ[3] ೩

ಅಂದಚಂದದ ಪಂಚವಾದ್ಯಗಳು । ಸುರ
ದುಂದುಭಿ ಭೇರಿನಗಾರಿಗಳು
ಧಂಧಣಿರೆನಲು । ಸಭೆ ಘೇಯೆನಲು[4]
ಚಂಪನಗಂಧಿಯರಂದುಗೆ ಘಿಲಿಕೆನ ॥
ಲಂದು ಬಾಗಿದರು—ಕಲಶವ ೪

ಚಂಚಲವಳಿದ[5] ಕೃಶಾಂಗಿಯರು । ವಿ
ಪಂಚಿಯೊಳತಿಶಯ ಚದುರೆಯರು
ಪಂಚಲಿಂಗೇಶ । ಸಖನು ರಮೇಶ
ಪಂಚಲಿಂಗನ ಸಖ ದಾಮೋದರನಿಗೆ ॥
ಕಾಂಚನ ಕಲಶಗಳ—ಎರೆದರು ೫

## 21. ಸಮಾವರ್ತನೆ ಹಾಡು

ಸತ್ಯವ್ರತವೆಂಬುದು ಸ್ವಾಮಿ ನಮ್ಮಲ್ಲಿಯ
ಭಕ್ತರ ಭಾಗ್ಯ ನಿಜದೇವ—ಗಜಮುಖ
ಭಕ್ತರಿಗೆ ಮತಿಯ—ಕರುಣಿಸು ೧

ವ್ರತ ಸಮಾವರ್ತನೆ ಅನುಕೂಲವಾದವು
ಸಕಲ ಬಂಧುಗಳ ಒಡಗೊಂಡು—ತಮ್ಮಯ್ಯ
ಪುರುಷರ ರತ್ನ—ಹೊರವಂಟ ೨

1 ಶ್ರುತಿನೃಪನುಷ 2 ಚದುರನ ಪಿತ 3 ಕಾಂಚನ ಕಲಶಗಳ ಎರೆದರು
4 ಸಂದಣಿಸಿರಲು ಸಭೆಗೇಯೆನಲು 5 ಚಂಚಲವಳಿಯ

ಚಪ್ಪರ ಮೇಲ್ಕಟ್ಟು ಒಪ್ಪದಿಂದಾದವು
ಪೆತ್ತಮ್ಮನ ಕರೆಸಿ ಕರದಲ್ಲಿ—ವೀಳ್ಯವ ಕೊಟ್ಟು
ನೆತ್ತಿಗೆಣ್ಣೆಯನೇ—ಎರೆದಳು ೩

ಮಜ್ಜನದ ಮನೆಗಾಗಿ ಮದುವಳಿಗ ಹೊರಟನು
ಗುಗ್ಗುಡಿಸಿ ಕಾಳೆ ಹಿಡಿದರು—ತಾಯೊಡನೆ
ಕಳಸ ನೀರ್ ಕಾಸಿ—ಎರೆದರು ೪

ಸ್ನಾನದ ಮನೆಯಲ್ಲಿ ಬೀಯಗ ಬಂಧುಗಳು
ಗೋಧಿ ಅಕ್ಷತೆಯ ತಳಿದರು—ತಮ್ಮನ
ತಾಯಿಗೆ ಹೊದಿಸಿದರೆ—ಹೊಸ ಬಣ್ಣ ೫

ಪಚ್ಚೆ ಹಚ್ಚಡ ಹೊದ್ದು ಮುತ್ತಿನುಂಗುರವಿಟ್ಟು
ಮುತ್ತಿನ ಒಂಟಿ ಹೊಳೆಯುತ್ತ—ಪುರೋಹಿತರು
ಪುತ್ರನ ಕೆಲಸವೆಸಗಿದರು ೬

ಅಗ್ನಿಯ ಕೊಡು ಬಾರೆ ಮುದ್ದುಮೊಗದ ನೀರೆ
ಅರ್ಜುನನ ಪಟ್ಟದರಸಿಯೆ—ಕೃಷ್ಣನ ತಂಗಿ
ಅಗ್ನಿಯ ತಂದು—ಕೊಡು ಬಾರೆ ೭

ಪಾವಕನ ಕೊಡು ಬಾರೆ ಕೋಮಳೆ ಸೌಭದ್ರೆ
ಪಾರ್ಥನ ಪಟ್ಟದರಸಿಯೆ—ಕೃಷ್ಣನ ತಂಗಿ
ಪಾವಕನ ತಂದು—ಕೊಡು ಬಾರೆ ೮

ಅಂದಿಗೆ ಕಾಲೋಳೆ ಅಂಗಜನ ಪಾಲೋಳೆ[1]
ನಿಂಬೆ ಮಾದಳಿರ ನೆರಿಯೋಳೆ—ಸೌಭದ್ರೆ
ರಂಭೆ ಪಾವಕನ—ಕೊಡು ಬಾರೆ ೯

ಹಾವುಗೆಗಾಲೋಳೆ ಅವಸರ ಮೆಲ್ಲಡಿಯೋಳೆ
ಈಳೆ ಮಾದಳಿರ ನೆರಿಯೋಳೆ—ಸೌಭದ್ರೆ
ನಾರಿ ಪಾವಕನ—ಕೊಡು ಬಾರೆ ೧೦

---

1 ಪಾಲೋಳು—ಅರ್ಧಾಂಗಿ ; ಪತ್ನಿ

ಮುತ್ತಿನ ಹರಿವಾಣದಿ ಮೊಗೆದಗ್ನಿ ಪುರುಷನ
ಬೆಟ್ಟುಂಗುರ ಗಮ್ಮೃಗ್ರೈಲೆಂದು—ತಂದಳು
ಕೃಷ್ಣ ಕುಳ್ಳಿರುವ—ಜಗಲಿಗೆ ೧೧

ಒಪ್ಪಗ್ನಿ ಪುರುಷನ ಒಪ್ಪದಲೆದುಗೊಂಡು
ಪುಷ್ಪವಕ್ಷತೆಯ ತಳಿದರು—ತಮ್ಮಯ್ಯನ
ಅಕ್ಕಗೆ ಹೊದಿಸಿದರೆ—ಹೊಸ ಬಣ್ಣ ೧೨

ಭಾವಾಗ್ನಿ ಪುರುಷನ ಬೇಗದಲೆದುಗೊಂಡು
ಹೂವು ಅಕ್ಷತೆಯ ತಳಿದರು—ತಮ್ಮಯ್ಯನ
ತಂಗಿಗುಡಿಸಿದರೇ—ಹೊಸ ಬಣ್ಣ ೧೩

ಆಲ ಅಶ್ವತ್ಥವು ದೇವಚಂದನವು ಶ್ರೀ
ಗಂಧ ಮೊದಲತ್ತಿ ಸಮಿಧೆಯು—ಸಹಿತಾಗಿ
ಬೇಗ ಪಾವಕನ—ಕೊಡು ಬಾರೆ ೧೪

ಸೋಮಾರ್ತ್ನೆ ಹಚ್ಚಡ ಧೋತ್ರ ಮುಂಡಾಸವು
ಹೂವಿನ ಮಾಲೆ ಹವಳ್ಸರ—ಅರಸಿನ ಕಪ್ಪು
ಬೇಗ ಬಾಸಿಗವ—ತರಹೇಳಿ ೧೫

ಬೆಟ್ಟಿಲ್ಲಿ ಕಪ್ಪನು ಹೆತ್ತಮ್ಮ ತೆಕ್ಕೊಂಡು
ಸೃಷ್ಟಿಯಾಳುವನ ಅರಳುಗಣ್ಣಿಗೆ ಕಪ್ಪ
ಹೆತ್ತಮ್ಮ ಹಚ್ಚಿ—ನಡೆದಳು ೧೬

ನಿಲುವುಗನ್ನಡಿಯಲಿ ನಗೆಮೊಗ ನೋಡಿಡ
ನನಗೆ ಸರಿಯಾದ ಮಡದಿಯಿಲ್ಲಾ ಎಂದು
ಪುತ್ರಯ್ಯ ಕಾಶಿ ಗ್ಹೊರಟನು ೧೭

ಅಕ್ಕಿ ಬೇಳೆಯ ಗಂಟ ಕಟ್ಟಿ ಪೊಂಬಟ್ಟಲಲಿ
ಚಿಕ್ಕ ತಮ್ಮಯ್ಯ ಹೆಗಲಲ್ಲಿ—ಇಟ್ಟುಕೊಂಡು
ಚೊಕ್ಕದಿ ಕಾಶಿಗ್ಹೊರಟನು ೮

ಗೋಧಿ ಬೇಳೆ ಗಂಟ ಹೂಡಿ ಹೊಂಬಟ್ಟಲಲಿ
ರಾಯ ತಮ್ಮಯ್ಯ ಹೆಗಲಲ್ಲಿಟ್ಟುಕೊಂಡು
ಪುತ್ರಯ್ಯ ಕಾಶಿಗ್ಹೊರಟನು ೧೯

ಉಪ್ಪರಿಗೆಯೊಳವಿಗೆ ಪೊಕ್ಕನೆ ತಮ್ಮಯ್ಯ
ಹೆತ್ತಮ್ಮನ ಪಾದಕ್ಕೆರಗಿದ—ಕೈಮುಗಿದು
ಯಾತ್ರೆಗಪ್ಪಣೆಯು—ಕೊಡಿರೆಂದ ೨೦

ಮಾಳಿಗೆಯೊಳವಿಗೆ ಹೋದನೆ ತಮ್ಮಯ್ಯ
ಹೆತ್ತಮ್ಮನ ಪಾದಕ್ಕೆರಗಿದ—ಎರಗಿ ಕರಗಳ ಮುಗಿದು
ಯಾತ್ರೆಗಪ್ಪಣೆಯು—ಕೊಡಿರೆಂದ ೨೧

ಪುತ್ರ ಕಾಶಿಗ್ಹೋಪ ಉತ್ಸಾಹವೇನಿದು
ಪಟ್ಟೆಮಂಚಕೆ ತಕ್ಕ ನಾರಿಯು—ಇಲ್ಲವೆಂದು
ಪುತ್ರಯ್ಯ ಕಾಶಿಗ್ಹೊರಟನು ೨೨

ಆವುಗೆ ಮೆಟ್ಟಿದ ಹವಳಸರ ಕಟ್ಟಿದ
ಉಪವೀತಿಯಾಗಿ ಕೊಡೆಹಿಡಿದು—ತಮ್ಮಯ್ಯ
ಯಾತ್ರೆಗಪ್ಪಣೆಯು—ಕೊಡಿರೆಂದ ೨೩

ಪುತ್ರ ಕಾಶಿಗೆಂದು ಹೊಸ್ತಿಲನಿಳಿವಾಗ
ಅಕ್ಷತೆ ತಂದರೆದುರಲ್ಲಿ—ತಾಯವ್ವನ
ಚೊಚ್ಚಲ ಮಗ ಕಾಶಿಗ್ಹೊರಟನು ೨೪

ಕಂದ ಕಾಶಿಗೆಂದು ಬಾಗಿಲನಿಳಿವಾಗ
ತುಂಬಿದ ಕೊಡ ಬಂದು ಎದುರಾಗಿ—ತಾಯವ್ವನ
ಚೆಂದದ ಮಗ ಕಾಶಿಗ್ಹೊರಟನು ೨೫

ಕೆರೆ ಬಾವಿ ತೆಗೆಸುತ್ತ ಅರವಟಿಗೆ ನಿಲಿಸುತ್ತ
ಸೆರೆಯಲ್ಲಿದ್ದವರ ಬಿಡಿಸುತ್ತ—ತಮ್ಮಯ್ಯ
ದೊರೆಮಗ ಕಾಶಿಗ್ಹೊರಟನು ೨೬

ದಧ್ಯನ್ನ ಬಂದಾವು ಅಗ್ನಿ ಎದುರಾದವು
ಗಾರ್ದಭ ಸ್ವರವು ನಡೆದವು—ತಾಯವ್ವನ
ಮುದ್ದಿನ ಮಗ ಕಾಶಿಗ್ಹೊರಟನು ೨೭

ಸುರೆಭಾಂಡ ಬಂದವು ಸೂಳೆಯರೆದುರಾದರು
ಮನ ಜಯವಾಗೆ ಶಕುನಗಳಾದವು
ಬಾಲಯ್ಯ ಕಾಶಿಗ್ಹೊರಟನು ೨೮

ಜೋಡಾಗಿ ಇಬ್ಬರು ಬ್ರಾಹ್ಮಣರೆದುರಾದರು
ಮನವು ಜಯವಾಗೆ ಶಕುನಗಳಾದವು
ಬಾಲಯ್ಯ ಕಾಶಿಗ್ಹೊರಟನು ೨೯

ಆಯುಧ ಕೈಲೊಬ್ಬ ಶೂದ್ರನೆದುರಾದನು
ಮನವು ಜಯವಾಗೆ ಶಕುನಗಳಾದವು
ಬಾಲಯ್ಯ ಕಾಶಿಗ್ಹೊರಟನು ೩೦

ಪುತ್ರ ಕಾಶಿಗೆಂದು ಹತ್ತು ಹಜೆಯ ನಡೆದ
ತರುವೆನು ನಿನಗೆ ಮಡದಿಯನೆಂದರೆ
ಬೇಗದಿ ತಮ್ಮ—ತಿರುಗಿದ ೩೧

ಬಾಲ ಕಾಶಿಗೆಂದು ಆರು ಹಜೆಯ ನಡೆದ
ತರುವೆನು ನಿನಗೆ ಮಡದಿಯನೆಂದರೆ
ಬೇಗದಲಿ ತಮ್ಮ—ತಿರುಗಿದ ೩೨

ಇಂದಿಗೆಂಟು ದಿನಕೆ ರಂಭೆಯನು ನಿನ್ನ ಕು
ಟುಂಬ ಸಹಿತಾಗಿ ಕಳುಹುವೆನೆಂದರೆ
ಚಂದದಿ ತಮ್ಮಯ್ಯ—ತಿರುಗಿದ ೩೩

ನಾಳೆಗೆಂಟು ದಿನಕೆ ನಾರಿಯನು ನಿನ್ನನ್ನು
ಓಪಾಸನ ಸಹಿತಾಗಿ ಕಳುಹುವೆನೆಂದರೆ
ಬೇಗದಿ ತಮ್ಮಯ್ಯ—ತಿರುಗಿದ ೩೪

ಮುತ್ತಿನ ಕೊಡೆಯನು ಉಪ್ಪರಿಗೆಗೆ ಸಾದಿದ
ಅಕ್ಕಿ ಬೇಳೆ ಗಂಟ ಇಳುಹಿದ—ತಮ್ಮಯ್ಯ
ಯಾತ್ರೆಯ ಮಾಡಿ—ಬಳಲಿದ ೩೫

ಅಕ್ಕಿ ಬೇಳೆಗಳುಂಟು ತುಪ್ಪ ಕಣಿಕೆಗಳುಂಟು
ಮೆಟ್ಟು ಮೆಟ್ಟೀಗೂ ಉಗಿನೀರು[1] ನೆಲುಂಟು
ಕಾಶಿ ಪಟ್ಟಣದಿ—ಸುಖಿ ನಾವು ೩೬

1 ಉಗಿನೀರು—ನೀರುಬುಗ್ಗೆ

ಹೊಸ್ತಿಲೆ ಕಾಶಿಯು, ಕರ್ತೃ ವಿಶ್ವೇಶ್ವರ
ಹೊಸ್ತಿಲ ಮುಂದೆ ಸುರನದಿ—ಎಂದವನ
ಅಕ್ಕನ ಗಂಡ—ನಸುನಕ್ಕ ೩೭

ಬಾಗಿಲೆ ಕಾಶಿಯು ಕೂಡೆ ವಿಶ್ವೇಶ್ವರ
ಬಾಗಿಲ ಮುಂದೆ ಸುರನದಿ ಎಂದವನ
ಸೋದರ ಮಾವ—ನಸುನಕ್ಕ ೩೮

ಬ್ರಹ್ಮಚಾರಿ ನಕ್ಷತ್ರ ಇನ್ನೇಕೋ ತಮ್ಮಯ್ಯ
ನಿನ್ನ ಮಾವಯ್ಯ ಮಗಳ ಕೊಡುತ್ತೇನೆಂದ
ಬ್ರಾಹ್ಮಣೋತ್ತಮನೆ—ಹಸೆಗೇಳು ೩೯

ಗಂಗಾ ಯಾತ್ರೆಯ ಮಾಡಿ ಬಾಲ ತಾ ಬಳಲಿದ
ಕೆಂಡ ಸಂಪಗೆಯ ಕುಸುಮದಂತೈದನೆ
ಮುತ್ತಿನಾರತಿಯಾ—ತರಹೇಳಿ ೪೦

ಕಾಶೀ ಯಾತ್ರೆಯ ಮಾಡಿ ಬಾಲ ತಾ ಬಳಲಿದ
ನಾಗಸಂಪಗೆಯ ಕುಸುಮದಂತೈದನೆ
ಕುಶಲದಾರತಿಯಾ—ಬೆಳಗಿರೆ ೪೧

## 22. ಬಾಸಿಗ ಬಂದದ್ದು

ಇಂದು ಮದುವೆಯೆಂದು ಬೆಂಡುಗಾರ[1]ಗೆ ಹೇಳಿ
ತೊಂಡಿಲ ಬಾಸಿಗವೆ ಬರಲೆಂದು—ಅಪ್ಪಯ್ಯ
ಗುತ್ತಿಗೆ ಓಲೆ—ಕಳುಹಿದ ೧

ನಾಳೆ ಮದುವೆಯೆಂದು ಜೂಳ್ಯಗಾರಗೆ ಹೇಳಿ
ಜೂಳ್ಯ ಬಾಸಿಗವೆ ಬರಲೆಂದು—ಮಾವಯ್ಯ
ಗೋವೆಗೆ ಓಲೆ—ಕಳುಹಿದ ೨

ಬಾಸಿಗ ನೇಯ್ದವನೆ ಒಪ್ಪವಾಗಿ ನೇಯಿ ಕಂಡ್ಯಾ
ಬಾಸಿಗದ ಮೇಲೆ ಗಿಳಿರಾಮನಿಲ್ಲದಿರೆ
ಚಿಕ್ಕ ತಮ್ಮಯ್ಯ—ಮುನಿದಾನು ೩

1 ಬೆಂಡುಗಾರ—ಗುಡಿಗಾರ

ಜೂಳ್ಯವ ನೇಯ್ವವನೆ ಆಯವಾಗಿ ನೇಯ್ ಕಂಡ್ಯಾ
ಜೂಳ್ಯದ ಮೇಲೆ ಗಿಳಿರಾಮಸಿಲ್ಲದಿರೆ
ರಾಯನ ತಂಗವ್ವ—ಮುನಿದಾಳು ೪

ದೇವಲೋಕದಿಂದ ಬಂದಾವೆ ಬಾಸಿಗ
ಚಂದ್ರಸೂರ್ಯಮರ ಗರಿಮುಚ್ಚಿ—ಮುತ್ತಿಡಿಸಿ
ಬಂದಾವೆ ಲಕ್ಷ್ಮಿಯರಸಗೆ ೫

ಸತ್ಯಲೋಕದಿಂದ ಬಂದಾವೆ ಬಾಸಿಗ
ಚಂದ್ರಸೂರ್ಯಮರ ಗರಿಮುಚ್ಚಿ—ಹೂಪಿಡಿಸಿ[1]
ಬಂದಾವೆ ಲಕ್ಷ್ಮಿಯರಸಗೆ ೬

ಮುತ್ತಿನ ಬಾಸಿಗ ಬಟ್ಟಲಲಡಗಿವ[2]
ಅಪ್ಪಯ್ಯ ಹೋಗಿ ಬೆಲೆಮಾಡಿ—ತಂದನು
ಚಿಕ್ಕತಮ್ಮಯನ—ನೊಸಲಿಗೆ ೭

ಹೂಪಿನ ಬಾಸಿಗ ಬಂದು ಹರಿವಾಣದಲ್ಲಡಗಿದ
ಅಣ್ಣಯ್ಯ ಹೋಗಿ ಬೆಲೆಮಾಡಿ—ತಂದನು
ರಾಯ ತಮ್ಮಯನ—ನೊಸಲಿಗೆ ೮

ಬಟ್ಟಲಲಿ ಅರಳಿದ ಬಟ್ಟುಮುತ್ತಿನ ಬಾಸಿಗ
ವಿಪ್ರರು ಓದಿ ಸಭೆ ಓದಿ—ಕಟ್ಟಿದರು
ನಮ್ಮ ಅಣ್ಣಯನ—ನೊಸಲಿಗೆ ೯

ಬಾಸಿಗ ನೇಯ್ದವರಾರು ಬಾಸಿಗ ಚಂದವಾಗಿದೆ
ಬಾಸಿಗವ ಮೇಲೆ ಗಿಳಿರಾಮ—ಹೊನ್ನ ಗೊಂಬೆ
ಲತ್ತವಾಡುತಿವೆ—ನೊಸಲಲಿ ೧೦

ಜೂಳ್ಯ ನೇಯ್ದವರಾರು ಜೂಳ್ಯ ಚಂದವಾಗಿದೆ
ಜೂಳ್ಯದ ಮೇಲೆ ಗಿಳಿರಾಮ—ಹೊನ್ನ ಗೊಂಬೆ
ಲತ್ತವಾಡುತಿವೆ—ನೊಸಲಲಿ ೧೧

---

1 ಮುತ್ತಡಚಿ 2 ಬಟ್ಟಲಲಿ ಅರಳಿದ

## 23. ಬಾಸಿಗ ಇದಿರುಗೊಂಡದ್ದು

ಇದಿರುಗೊಂಡರು ಬಾಸಿಗವನತಿ ಸಡಗರದಿ ಶಶಿಮುಖಿಯರು
ಕಡುತರಾನಂದದಲಿ ಅಕ್ಷತೆಯಿಡಿಸಿ ತಾವುತ್ಸವದೊಳು ಪ

ಮುನ್ನವೇ ಪೇಳಿರುವ ತೆರದಲಿ ಚೆನ್ನದಾ ಬಾಸಿಗವನು
ಸನ್ನುತಾಂಗಗೆ ತಂದಿರಲು ಅತಿ ಮನ್ನಣೆಯೊಳಾ ನತಿಯರು ೧

ಮುತ್ತಿನಿಂದಲಿ ಕೂಡಿಯಿರುತಿಹ ಹತ್ತುಸಾವಿರ ಚಿತ್ರವು
ಮತ್ತೆ ಅವುಗಳ ಮಧ್ಯದಲ್ಲಿಯೆ ರತ್ನದಿಂ ತುಂಬಿರುವವು ೨

ಪಳದ ಬಿಳಿ ಕೇಸರಿಯ ಬಣ್ಣದಿ ಹೊಳೆವ ಹರಳನು ಕೂಡ್ರಿಸಿ
ಬಲು ಸುಶೋಭೆಯನೆತ್ತಿ ತೋರುವ ಚೆಲುವ ಬಾಸಿಗವನ್ನು ತಾವ್ ೩

ಒಂದು ಸಾಲಲಿ ಹಳ್ಳಕಲ್ಲುಗಳಿಂದ ತುಂಬಿಯೆ ಇರುವದಿ
ನ್ನೊಂದು ಸಾಲಲಿ ವಜ್ರದಿಂ ಕೊರೆದಂದವಾಗಿಹ ಚಿತ್ರವು ೪

ಹರನ ಸುತ ಗಣಪತಿಯ ಚಿತ್ರವು ತರಣಿತೇಜವ ಬೀರುತ
ಇರುವ ಬಾಸಿಗವನ್ನು ಬೇಗನೆ ಸಲಿಲಜಾಕ್ಷಿಯರಿತ್ತರು ೫

## 24. ಬಾಸಿಗ ಮುಡಿಸಿದ್ದು

ಮಾರಜನಕ ಹರಿಗೆ । ಸಂತಸ
ವೇರಿ ನಗುತ ದೊರೆಗೆ
ಮುರಭಂಜನ ಮಧುಸೂದನಾಚ್ಯುತನಿಗೆ
ಮರಕತದಾ ಬಾಸಿಗವನು ತರುತಲೆ ॥
ಶಿರಕೆ ಕಟ್ಟಿದರೆ—ನತಿಯರು ೧

ಇಂದಿರೆಯರಸನಿಗೆ । ದೇವರ
ದುಂದುಭಿಗಳು ಮೊಳಗೆ
ಸುಂದರ ಶ್ರೀಗೋವಿಂದನ[1] ಪಣೆಗೆ
ಕುಂದಣವೇರಿದ ಬಾಸಿಗ ತರುತಲೆ ॥
ಚೆಂದದಿ ಕಟ್ಟಿದರೆ—ಹರಸುತ್ತ ೨

1 ಗೋಪಿ ಕಂದನ

ದೇವರ ದೇವನಿಗೆ । ಭಕ್ತ ಸಂ
ಜೀವ ಶಂಕರಸಖಿಗೆ
ಸಾವಧಾನದಿ ಗೋವಿಂದನ ನೊಸಲಿಗೆ
ದೇವಕಿ ಬಾಸಿಗವನೆ ಕಟ್ಟಿ ಹೆರಸುತ ॥
ಹೂವಿನಾರತಿಯ—ಬೆಳಗಿದ ೩

## 25. ದಿಬ್ಬಣಕ್ಕೆ ಕರೆಯುವುದು

ಬನ್ನಿರೈ । ದಿಬ್ಬಣಕ್ಕೆಲ್ಲ । ಬನ್ನಿರೈ ಪ

ಬಂದೆವ್ಮ ದಿಬ್ಬಣ ಚಂದ ಕಾಣರೀಕ್ಷಣ
ಒಂದು ಕರೆಯಲೀಗ ಬಂದೆವು ಅಪ

ಮಿತ್ರೆಯರಿರ ಪ್ರೀತಿಯಿತ್ತು ಬರಲು ಖ್ಯಾತಿ
ಯಾಯ್ತೆಲ್ಲವತಿ ಮೋದ ಚಿತ್ತಕೆ ೧

ಬಾಲಿಕಾ ಮಣಿಯರೆ ಲೀಲೆಯೊಳ್ ಬನ್ನಿರಿ
ಲೀಲೆಯೊಳೊರೆದುದನಾಲಿಸಿ ೨

## 26. ದಿಬ್ಬಣ ಎದ್ದದ್ದು

ದಿಬ್ಬಣಕೇಳಿರೆಲ್ಲವರೀಗ । ಒಳ್ಳೆ
ಉಬ್ಬಿನಿಂ ಮಿಥಿಲಾಪುರಕೆ ಬೇಗ ಪ

ಪ್ರೇಮದಿ ಮಿಥಿಳೇಂದ್ರ ಬರೆದ ಲೇಖನ ನೋಡಿ
ಭೂಮಿಪ ದಶರಥ ಹರುಷ ಗೂಡಿ
ಸ್ವಾಮಿ ವಸಿಷ್ಠರೊಳರುಹುತೆಲ್ಲವ ಬಾಗಿ
ನೇಮವ ಕೈಗೊಂಡನು ನಯದಿ ೧

ಧರೆಯೊಳಾ ಮಿಥಿಲಾಪುರದೊಳೆನ್ನಯ ರಾಮ
ಹರನ ಧನುವನೆತ್ತಿ ನಿಸ್ಸೀಮ
ತರಳೆಯು ಗೆಲಿದಿಪನಂತೆ ಆ ಲಗ್ನಕೆ
ಕರೆಯು ಬಂದಿದೆ ಏಳುವುದೆಲ್ಲ ೨

ಅಕ್ಕ ತಂಗಿಯರೇಳಿ ಚಿಕ್ಕತಾಯಿಯರೇಳಿ
ಚಿಕ್ಕಮಕ್ಕಳ ಮಾತೆಯರೇಳಿ
ಅಕ್ಕರೆಯೊಳು ಸುತ್ತುಮುತ್ತಿನ ಬಂಧುಗಳ್
ಫಕ್ಕನೇಳಿರಿ ದಿಬ್ಬಣಕೀಗ ೩

ತಡವ ಮಾಡುವುದೇಕೆ ಪುರಜನರೆಲ್ಲರು
ನಡಗರದಲಿ ಮಿಥಿಲಾಪುರಕೆ
ನಡೆಯಲಿ ದಿಬ್ಬಣ ಬಾಲವೃದ್ಧರು ನಿ
ಮ್ಮೊಡೆಯ ಶ್ರೀರಾಮನ ಮದುವೆಗೀಗ ೪

ನಾರಿಯರೆಲ್ಲರು ಸಿಂಗರವಾಗುತ
ತೋರ ಮುತ್ತಿನ ಕನ್ನಡಿ ಕಲಶ
ಓರಂತೆ ಪಿಡಿದು ಬಿತ್ತಕ್ಕಿ ಸಹಿತಲೆಲ್ಲ
ನಾರುವದೇನ ಬಣ್ಣಿಸಲರಿಮು ೫

ಚಾರುತರದಿ ನವರತ್ನದಿ ಜಿಗಿದಿಪ
ಭಾರಿ ಸತ್ತಿಗೆ ಚಾಮರಗಳಿಂದ
ಮೀರಿತು ಪ್ರಭೆಯು ಭಾಸ್ಕರನ ಕಾಂತಿಯನಿಂತೀ
ವಾರಾಂಗನೆಯರು ಸಹಿತಲಾಗ ೬

ಭೇರಿ ದುಂದುಭಿ ವಾದ್ಯ ಘೋರಿಡುತಾಗಲು
ಮೇರುವ ಮುಟ್ಟಲು ರಥ ಪತ್ತಿ
ಏರುತಲಾನೆ ಕುದುರೆ ಸಹಿತೈವಲು
ತೋರಿತು ಕೆಂದೂಳಂಬರದಿ ೭

ತಾಳ ತಂಬಟೆ ಗಿಡಿಬಿಡಿ ಕಿನ್ನರಿರವ
ಮೂಲೋಕದಿ ಮೊಳಗಲು ರಭಸ
ಪೇಳಲಳವೆ ಸುಧಾರಿಸಿದ ವಾದ್ಯಗಳಿಂದ
ಏರಿ ವಾಹನವನು ಬರುತಿರ್ದಾರು ೮

ಭಾನುವಂಶಜ ವೀರಾಗ್ರಣಿ ಬಂದನು
ಶ್ರೀನಿವಾಸನ ಲಗ್ನದ ದಿಬ್ಬಣ
ತಾನೊಡಗೊಂಡೈತಹನು ದಿಗ್ಗಜಗಳಿ
ಆನುವುದೆನುತ ಕಹಳೆಯುಲಿಯೆ ೯

ಬರುತ ದಾರಿಯೊಳಲ್ಲಲ್ಲರವಟ್ಟಿಗೆ
ಇರಿಸಿರೆ ಪಡಿ ಬೀಡಾರಗಳ
ಬರುವ ಬೀಗರಿಗೆಂದಾಗಲು ಜನಕನ
ಮರಿಯಾದೆಯ ಬಣ್ಣಿಸದರಾರು ೧೦

ಸತ್ಯಮೂರುತಿ ಪರವಸ್ತುವ ನೋಡಲು
ಪೃಥ್ವಿಯೀರೇಳರೊಳಿಹರೆಲ್ಲ
ಚಿತ್ತದಿ ಭಜಿಸುತುತ್ತಮ ರಾಮನ ಪಾದ
ಭೃತ್ಯರು ಬಂದರು ಸಂಭ್ರಮದಿ ೧೧

## 27. ದಿಬ್ಬಣ ಹೊರಟದ್ದು—1

ಶ್ರೀಗುರುವಿನ ಚರಣಾಂಬುಜದಲಿ ತಲೆ
ವಾಗಿ ವಾಣಿಯ ಕೊಂಡಾಡುತ ।
ರಾಗರಸಾಸ್ವಿತನಾಗಿ ಹೇರಂಬನ
ನಾಗಮೋಕ್ತದಿ ನುತಿ ಮಾಡುತ ।
ಯೋಗಿನಿಯನು ಸಿದ್ಧಿ ಗಣಪತಿಗೊಲಿದು ಸ
ರಾಗದಿ ಪರಿಣಯ ಮಾಡಬೇಕೆನುತಲಿ ॥
ಭೋಗಿ ಭೂಷಣನುಲ್ಲಾಸದಿ ।
ನಾಗಶಯನನೊಳು ಸ್ನೇಹದಿ ।
ಬೇಗ ನಿರ್ಣಯಿಸಿ ವಿಲಾಸದಿ ।
ಆಗಮೋಕ್ತದಿ ಸಮಾವರ್ತನೆ ಗೈಸಿ ಸ
ರಾಗದಿ ದಿಬ್ಬಣ ದ್ವಾರಕೆಗೈತಂ ॥
ದಾಗಮವ ಪೇಳಿ—ಪೊಗಳುವೆ ೧

ನಾರಾಯಣ ಮಹಾಲಕ್ಷ್ಮಿ ಸಮೇತದೊ
ಳೇರಿ ಗರುಡನನು ಹಾರಿಸಿ ।
ಭೂರಿ ಸಂತೋಷದಿ ರಜತಾದ್ರಿಗೆ ಬಂ
ದೋರಣದಲಿ ಮೈದೋರಿಸಿ ।
ಸಾರಸಭವ ಸುರವಾರ ದಿಕ್ಪಾಲರು
ಓರಂತೆ ಪೊಗಳಿ ಕೊಂಡಾಡಿ ಸಂಭ್ರಮದಲಿ ॥

ಭೇರಿ ನಗಾರಿಯ ಬಾರಿಸಿ ।
ಚಾರು ಚಾಮರಗಳ ಹಾರಿಸಿ ।
ಕಾರುಣ್ಯದಿ ಕೈವಾರಿಸಿ ।
ಓರಂತೆ ಪೊಗಳಿ ಪಾಠಕರು ಕೊಂಡಾಡಲು
ಭೂರಿ ನಿಗಮ ಶ್ರುತಿ ತೀರ್ಥಾಂಗನೆಯರು ॥
ಬೇರೆ ಬೇರೆಲ್ಲ—ಪೊಗಳ್ಯಾರು ೭

ನಂದಿ ಭೃಂಗೀಶ ರೇಣುಕ ಮುಖ್ಯ ಪ್ರಮಥರ
ವೃಂದ ಸಮೇತ ಸಂತೋಷದಿ ।
ಇಂದ್ರಮುಖ್ಯಾಮರ ಸಂದಣಿ ಮನು ಮುನಿ
ವೃಂದ ನೆರೆದುದುಲ್ಲಾಸದಿ ।
ಇಂದುಶೇಖರ ಮುದ್ದು ಸಿದ್ಧಿಗಣೇಶಗೆ
ಸುಂದರ ಮೂರ್ತಿ ಸುರಾಸುರ ವಂದ್ಯನಿ ॥
ಗಂಧ ಮಂತ್ರಾಕ್ಷತೆ ತಳಿಯುತ್ತ ।
ಇಂದುಶೇಖರ ವಯೆದೋರುತ್ತ ।
ಅಂದಣದಲಿ ಕುಳ್ಳಿರಿಸುತ್ತ ।
ದುಂದುಭಿ ವಾದ್ಯಗಳಿಂದ ಸಂಭ್ರಮದಲಿ
ಚೆಂದದಿ ಮದುಮಗ ಸಹಿತ ಸಂತಸದೊಳ ॥
ಗಂಧು ದಿಬ್ಬಣದಿ—ಪೊರಟರು ೮

ಛತ್ರ ಚಾಮರ ಸಿಂಧ ಸೀಗುರಿ ಮಣಿಮಯ
ಸತ್ತಿಗೆಯಂಬರದತ್ತಲು ।
ಮಿತ್ರನ ಬೆಳಕಿನ್ನೆತ್ತಲೆನಲು ಬಹು
ರತ್ನದ ಸುಪ್ರಭ ಸುತ್ತಲು ।
ಧಿತ್ತಾಂ ಧಿಮಿಕೆನ್ನುತ್ತಾಪ್ಸರೆಯರು
ಅತ್ಯುಲ್ಲಾಸದಿ ನೃತ್ಯಂಗಳ ಮಾ ॥
ಡುತ್ತ ಸಂತೋಷದೊಳೊಲೆಯುತ್ತ ।
ಮಿತ್ರೆಯರೊಗ್ಗಿಲಿ ನಲಿಯುತ್ತ ।
ಸುತ್ತಲು ಚಾಮರವಿಕ್ಕುತ್ತ ।
ಮತ್ತಕಾಶಿನಿಯರು ಶೋಭಾನವ ಪಾ
ಡುತ್ತ ವಿನೋದದಿ ಮದುಮಗ ಸಹಿತಲೆ ॥
ಪೃಥ್ವಿಯಗಲದಲಿ—ಬರಲೆಂದು ೯

ಪಂಚಬ್ರಹ್ಮ ಕಲಾನಿಧಿಯೊಲಿದು ಪ್ರ
ಪಂಚಕೆ ಚೋದ್ಯವ ತೋರುತ ।
ಸಂಚಿತ ದೋಷಾಪಹಾರಿ ಸದ್ಭಕ್ತರ
ವಾಂಛಿತಗಳ ತಾನೀಯುತ ।
ವಾಂಛಲ್ಯದೊಳು ಪಳಂಚುತ ಮಾಯಾ
ಗೊಂಚಲಿನೆಸಕದ ಪಂಚೀಕರಣಕೆ ॥
ವಂಚಿಸದುರೆ ಮೈದೋರುವ ।
ಚಂಚಲತೆಯ ಕಳೆದಾಡುವ ।
ತಾಂ ಚಲಿಸದೆ ದಯೆಮಾಡುವ ।
ಕಾಂಚನಗರ್ಭಾದ್ಯಖಿಳ ಸದ್ಭಕ್ತರ
ಗೊಂಚಲಿನೆರಕದಿ ಪಂಚಲಿಂಗೇಶ್ವರ ॥
ಮುಂಚೆ ದಿಬ್ಬಣದಿ—ಬರಲಂದು ೫

## 28. ದಿಬ್ಬಣ ಹೊರಟಿದ್ದು—2

ಗುರು ಗಣಪನ ಪಾದಕಮಲಕ್ಕೆ ನಮಿಸಿ
ಶಾರದಾಂಬೆಗೆ ಎರಬಾಗಿ ವಂದಿಸುತ
ತ್ರಿಜಗದೊಡೆಯ ಜಗದೀಶನ ದಿಬ್ಬಣ ॥
ಹೊರಟ ಪದನವನೆ—ರಚಿಸುವೆ ೧

ಗಿರಿರಾಜನ ಸುತೆ ತರಳೆ ಶ್ರೀಗಿರಿಜೆ
ಹರ ತನ್ನ ಪತಿಯಾಗಬೇಕೆಂದನುತ
ಕಡು ಉಗ್ರ ತಪವ ತಾ ಚರಿಸಲು ವನದಿ ॥
ಹರನು ಮೆಚ್ಚಿದನೆ—ಗಿರಿಜೆಗೆ ೨

ಗಿರಿಜೆ ಒಲಿದಿಹಳು ಬರಬೇಕೆಂದೆನುತ
ತರುಣಿ ಪಾರ್ವತೀಪತಿಯಾಗಬೇಕೆನುತ
ಪರುವತನೋಲೆಯ ಕಳುಹಿದ ಹರಗೆ ॥
ಬರುವುದು ದಿಬ್ಬಣವ—ಒಡಗೂಡಿ ೩

ಹರನು ಓಲೆಯ ನೋಡಿ ಪರಮ ಸಂಭ್ರಮದಿ
ಕರೆಸಿದ ತನ್ನ ಪರಿವಾರವನೆಲ್ಲ
ತೆರಳಬೇಕು ಗಿರಿರಾಜನ ಪುರಕೆ ॥
ತರುಣ ಪಾರ್ವತಿಯ—ವರಿಸಲು ೪

ಕರೆಸಿದ ದೇವ ದೇವತೆಯರನೆಲ್ಲ
ಬರಬೇಕು ಕೈಲಾಸಪುರಕೆ ಎಂದೆನುತ
ಪರಮ ವೈಭವದಿಂದ ಸರ್ವರನೊಡಗೊಂಡು ॥
ಹರನ ದಿಬ್ಬಣವು—ಹೊರಟಿತು ೫

ಇಂದ್ರನು ಶಚಿದೇವಿ ಸಹಿತಲೆ ಬಂದ
ಮುಂದೆ ಊರ್ವಶಿ ರಂಭಯರು ತಾವಿರಲು
ಬಂದರು ದೇವಲೋಕದ ಸುರರೆಲ್ಲರು ॥
ಹರನ ದಿಬ್ಬಣಕೆ—ಹೊರಟರು ೬

ಸುರರು ಕಿನ್ನರರು ಯಕ್ಷರು ಗಂಧರ್ವರು
ಹರಿ ದ್ವಾರಪಾಲಕ ಸನಕ ಸನಂದರು
ಸರ್ವಲೋಕದ ದೇವತೆಗಳೊಂದಾಗುತ ॥
ಹರನ ದಿಬ್ಬಣಕೆ—ಹೊರಟರೆ ೭

ಅಷ್ಟದಿಕ್ಪಾಲಕರೆಲ್ಲರೊಟ್ಟಾಗಿ
ಸರ್ಪಭೂಷಣನ ವಿವಾಹಕೆಂದೆನುತ
ತಟ್ಟನೆ ಸರ್ವಲೋಕದ ದೇವತೆಗಳು ॥
ಹರನ ದಿಬ್ಬಣಕೆ—ಹೊರಟರೆ ೮

ನಾರದ ಮುನಿಗಳು ತುಂಬುರ ಸಹಿತ
ವೇದವ್ಯಾಸರು ವಾಲ್ಮೀಕಿ ಮುನಿಗಳು
ಸಪ್ತಋಷಿಗಳೆಲ್ಲ ಒಂದಾಗಿ ಸೇರುತ ॥
ಹರನ ದಿಬ್ಬಣಕೆ—ಹೊರಟರೆ ೯

ಅತ್ರಿಮುನಿಯು ಅನಸೂಯಾದೇವಿಯರು
ವಸಿಷ್ಠಾರುಂಧತಿ ಮಹಾಪತಿವ್ರತೆಯರು
ಸೃಷ್ಟಿ ನಿರ್ಮಿಪ ಬ್ರಹ್ಮ ಸರಸ್ವತೀದೇವಿಯು ॥
ಹರನ ದಿಬ್ಬಣಕೆ—ಹೊರಟರೆ ೧೦

ಶೇಷಶಯನ ಆದಿನಾರಾಯಣನು
ಆದಿ ಲಕ್ಷ್ಮೀದೇವಿಯನೊಡಗೂಡಿ
ಗರುಡಗಮನನಾಗಿ ತ್ವರಿತದಿ ಹೊರಟನೆ ॥
ಹರನ ದಿಬ್ಬಣಕೆ—ಹರುಷದಿ ೧೧

ಪರಿಪರಿ ಮಂಗಲವಾದ್ಯಗಳಿಂದ
ನಾನಾವಿಧ ಸಂಗೀತಗಳಿಂದ
ಪರಮ ವೈಭವದಿಂದ ಹರನ ದಿಬ್ಬಣವು ॥
ಹೊರಟಿತು ಪರ್ವತನ—ಪುರಕಾಗಿ ೧೨

ಪತಿವ್ರತೆಯರು ಸರ್ವರು ಒಂದೊಂದಾಗಿ
ಪರಮೇಶ್ವರನ ವಿವಾಹಕೆಂದೆನುತ
ಪರಿಪರಿವಿಧದಿ ಶೃಂಗಾರವಾಗುತ್ತ ॥
ಹರನ ದಿಬ್ಬಣಕೆ—ಹೊರಟರೆ ೧೩

ನೀಲಕಂಠನು ವಿಧವಿಧದಿ ಶೃಂಗರಿಸಿ
ಗಜಚರ್ಮಾಂಬರಧಾರಿ ತಾನಾಗಿ
ಭುಜಗಾಭರಣನಾಗಿ ಭಸ್ಮಲೇಪನ ಮಾಡಿ ॥
ಹೊರಟನೆ ದಿಬ್ಬಣವನೊಡಗೂಡಿ ೧೪

ಕೊರಳಿಗೆ ರುದ್ರಾಕ್ಷಿಮಾಲೆಗಳಿಂದ
ಕರದಿ ತ್ರಿಶೂಲ ಡಮರು ಪಿಡಿಯುತ್ತ
ಭರದಿ ನಂದಿಯನೇರಿ ಪರಮ ವೈಭವದಿಂದ ॥
ಹೊರಟನೆ ದಿಬ್ಬಣವನೊಡಗೂಡಿ ೧೫

ಕೆಂಗಣ್ಣ ಶಿವನು ಶಿರದಿ ಗಂಗೆ ಧರಿಸಿ
ಮಂಗಳಾಂಗಿಯನು ಪಾರ್ವತಿಯ ವರಿಸಲು
ಸಂಗಡ ಮಂಗಲವಾದ್ಯಗಳಿಂದಲಿ ॥
ಹೊರಟನೆ ದಿಬ್ಬಣವನೊಡಗೂಡಿ ೧೬

ಮಂಗಳಾಂಗಿಯರಂಗ ಶೃಂಗಾರವಾಗಿ
ಮಂಗಳಾತ್ಮಕ ಪರಶಿವನ ಕೂಡಿರಿಸಿ
ಮಂಗಳಾಕ್ಷತೆ ಆರತಿಯನೆ ಮಾಡುತ್ತ ॥
ಮಂಗಳ ಪಾಡಿದಳೆ—ಮುದದಿಂದ ೧೭

ಈ ಪರಿಯಲಿ ಪರಶಿವನ ದಿಬ್ಬಣವು
ಹೊರಟಿತು ಪರ್ವತರಾಜನ ಪುರಕೆ
ಸುರರು ಭೂಸುರರೆಲ್ಲ ಹೂಮಳೆಗರೆಯುತ್ತ ॥
ಹೊರಟರು ದಿಬ್ಬಣಕೆ—ಸಕಲರು ೧೮

## 29. ದಿಬ್ಬಣ ಎದುರುಗೊಳ್ಳಲು ಕರೆಯುವುದು

ಶರಣೆಂಬೆ[1] ಶಾರದೆಗೆ ಶರಣೆಂಬೆ ಸರಸ್ವತಿಗೆ
ಶರಣೆಂದು ಕರವ ಮುಗಿವೆನು—[2]ನಮ್ಮನೆಯ
ಕಾರ್ಯ ಕೈಗೂಡಿ—ಬರಲೆಂದು[2] ೧

ಕೃಷ್ಣದೇವರು ಬಂಧು ಬಾಂಧವರೊಡಗೂಡಿ[3]
ತೋರಣದ ಮುಂದೆ ನಿಲುವನು—[4]ನಮ್ಮನೆಯ
ನಾರಿಯರು ಹೋಗಿ—ಎದುರ್ಗೊಳ್ಳಿ[4] ೨

ಸರಸ್ವತಿಯರೊಂದಾಗಿ ಸರಸವನಾಡುತ್ತ
ಸುರಗಿ ಸಂಪಗೆಯ ಮುಡಿಯುತ್ತ—[4]ನಾರಿಯರು
ಸರಸದಿಂದ್ಹೋಗಿ—ಎದುರ್ಗೊಳ್ಳಿ[4] ೩

ಮಲ್ಲಿಗೆ ಮುಡಿದಿದ್ದ ಮಾಲಕ್ಷ್ಮಿ ನೀನೇಳು
ನಲ್ಲೆಯರೆಲ್ಲ ಒಡಗೊಂಡು—ನಮ್ಮನೆಗೆ
ಬಂದ ದಿಬ್ಬಣವನೆದುರ್ಗೊಂಬ ೪

ಭಾರತಿ ನೀಯೇಳು[5] ನಾರಿಯರೊಡಗೊಂಡು
ನಾಗಸಂಪಗೆಯ ಮುಡಿಕೊಂಡು—ನಾರಿಯರು
ಬೇಗದಲಿ ಹೋಗಿ—ಎದುರ್ಗೊಳ್ಳಿ ೫

---

1 ಶರಣೆನ್ನಿ 2 ನಮ್ಮ ಕಾರ್ಯ ಒಟ್ಟಿ ಕೈಗೂಡಿ ಬರಬೇಕು. 3 ರೊಡಗೊಂಡು
4 ನಮ್ಮನೆಗೆ ಬಂದ ದಿಬ್ಬಣವನೆದುರ್ಗೊಂಬ 5 ಭಾಗೀರಥಿ ನೀನೇಳಿ

ಅರಿಸಿನ ಕುಂಕುಮಪಿಟ್ಟು ಅರುಂಧತಿ ಗುಣ ಸಂಪನ್ನೆ
ಕಮಲ ಪುಷ್ಪವನೇ ಮುಡಿಕೊಂಡು[1]—ಚದುರೆಯರು[2]
ಬರುವ[3] ದಿಬ್ಬಣವನೆದುಗೊಳ್ಳಿ ೭

[4]ಅಂಕಣದ ಅರಮನೆಯ ಒಳವಿಕೆ ಮಿತ್ರೆಯರು
ಹೋಗಿ ಕಲಶವನು ತೆಗೆತನ್ನಿ—ನಮ್ಮನೆಗೆ[4]
ಬಂದ ದಿಬ್ಬಣವ—ಎದುಗೊಂಬ ೭

ಪಟ್ಟೆಯನುಟ್ಟುಕೊಂಡ ಮಿತ್ರೆಯರೆ ನೀವೇಳಿ[5]
ಬಪ್ಪವರೇಳಿ ಕ್ಷಣದಲ್ಲಿ—ನಮ್ಮನೆಗೆ
ಬಂದ ದಿಬ್ಬಣವ—ಎದುಗೊಂಬ ೮

[6]ದ್ರೌಪದಿ ಸೌಭದ್ರೆ ನಾರಿಯರೆಲ್ಲರು
ಮಿತ್ರೆ ರುಕ್ಮಿಣಿಯು ಸಹಿತಲೆ—ನಮ್ಮನೆಯ
ಬಂದ ದಿಬ್ಬಣವ—ಎದುಗೊಂಬ[6] ೯

ಮಿತ್ರೆಯರೆಲ್ಲರು ಮುತ್ತಿನಕ್ಷತೆ ಪಿಡಿದು
ಅಚ್ಚಮಲ್ಲಿಗೆಯ ಮುಡಿಯುತ್ತ ನಾರಿಯರು
ಬಂದ ದಿಬ್ಬಣವ—ಎದುಗೊಂಬ ೧೦

ಅಪ್ಪಯ್ಯರಾಯನ ಪಟ್ಟೆಮಂಚದ ಮೇಲೆ
ಒಪ್ಪದಿ ಬಂದು ಹೋಗುವ—ಅರಗಿಳಿ ಬನ್ನಿ
ಬಪ್ಪ ದಿಬ್ಬಣವ—ಎದುಗೊಂಬ ೧೧

ಮಾವಯ್ಯರಾಯನ ಸಾಲುಮಂಚದ ಮೇಲೆ
ಆಯದಿ ಬಂದು ಹೋಗುವ—ಅರಗಿಳಿ ಬನ್ನಿ
ಬಂದ ದಿಬ್ಬಣವ—ಎದುಗೊಂಬ ೧೨

---

1 ಮುಡಿದಿದ್ದ 2 ವನಿತೆಯರೇಳಿ 3 ಬಂದ 4 ಎಪ್ಪತ್ತು ಅಂಕಣದ ಅರಮನೆಯೊಳವಿಕೆ, ಮಿತ್ರೆಯರು ಹೋಗಿ ಕಲಶವ—ತೆಗೆತನ್ನಿ 5 ಪಟ್ಟೆಯ ಹೊದ್ದುಕೊಂಡು ಈಗ ಎಲ್ಲವರೇಳಿ
6 ದ್ರೌಪದಿ ಮೋಹಕಿ ವಿನಯದಿ ಒಡಗೊಂಡು
ಮುಗುಳು ಸಂಪಗೆಯ ಮುಡಿಯುತ್ತ—ನಾರಿಯರು
ಈಗ ದಿಬ್ಬಣವ ಎದುಗೊಳ್ಳಿ

ಪಟ್ಟೆ ಹಚ್ಚಡದವರು ಮುತ್ತಿನುಂಗುರದವರು
ಅಪ್ಪಯ್ಯ ನಿನ್ನ ಸರಿಯವರು—ಬಂದೈದಾರೆ
ಪಟ್ಟೆಮಂಚವಿಳಿದು—ಎದುರ್ಗೊಂಬ ೧೩

ಸಾಲಿ ಹಚ್ಚಡದವರು ನೀಲದುಂಗುರದವರು
ಮಾವಯ್ಯ ನಿನ್ನ ಸರಿಯವರು—ಬಂದೈದಾರೆ
ಸಾಲಿ ಮಂಟಪವಿಳಿದು—ಎದುರ್ಗೊಳ್ವ ೧೪

ಮುತ್ತು ಸೂಸಕ ದಂಡೆ ರತ್ನದ ಬೈತಲೆ
ಮತ್ತಾವ ನಾಡ ಚೆಲುವೆಯರು—ಬಂದೈದಾರೆ
ಪಟ್ಟೆಮಂಚವಿಳಿದು—ಎದುರ್ಗೊಂಬ ೧೫

ಹೂವು ಸೂಸಕ ದಂಡೆ ಕೈವಾರದ ಬೈತಲೆ
ಈಗಾವ ನಾಡ ಚೆಲ್ವೆಯರು—ಬಂದೈದಾರೆ
ತೂಗುಮಂಚವಿಳಿದು—ಎದುರ್ಗೊಳ್ವ ೧೬

ಹೆಬ್ಬಾಗಿಲ ಗರಿಸಿಗೆಯು ಭದ್ರತರದ ಕೀಲು
ಭದ್ರೆಯರು ಬಾಗಿ ಬರಬೇಕು—ನೀವಿಟ್ಟ
ಬಜ್ಜರದ ಸಾಲೆ—ಜತನವು ೧೭

ತಲೆಬಾಗಿಲ ಗರಿಸಿಗೆಯು ಹೊಳೆವ ದಂತದ ಕೀಲು
ನಾರಿಯರೆ ಬಾಗಿ ಬರಬೇಕು—ನೀವಿಟ್ಟ
ಹರಳ್ ಹೊನ್ನಿನೋಲೆ—ಜತನವು ೧೮

## 30. ದಿಬ್ಬಣಿಗರು ಬಂದದ್ದು

ದಿಬ್ಬಣಿಗರು ನಡೆತಂದರಾಗ
ಅಬ್ಬರದಲಿ ಅಪ್ಪ[1] ಪುರಕೆ ಬೇಗ ಪ

1 ಮಿಥಿಲಾ

ಸತ್ಯಮೂರುತಿ ಪರವಸ್ತು ದಂಡಿಗೆಯೇರಿ
ಪಸ್ತಾರದಲಿ ವಾದ್ಯ ಭೇರಿಗಳು
ಸತ್ತಿಗೆ ಚಾಮರ ಚಿತ್ರ[1] ಚೌರಿಗಳಿಂದ
ಅರ್ಥಿಯಿಂ[2] ಪರಮ ಪುರುಷನು ಬಂದ ೧

ಜ್ಞಾನಮತಿಯು ಮನ ಸೂರೆಗೊಂಬವ ಬಂದ
ತಾನೆ ತಾನಾದತಿ ಶೂರ[3] ಬಂದ
ಜ್ಞಾನಮೂರುತಿ ಭವದೂರ[4] ಬಂದಾನೆಂದು
ತಾನಾಗಿ[5] ಕಾಳೆ ಸೂಳೈಸಿದವು ೨

ಸರ್ವಭರಿತ ಬಂದ ಸರ್ವಾತ್ಮನು ಬಂದ
ನಿರ್ವಿಕಾರನು ನಿರುಪಮನು ಬಂದ
ನಿರ್ವೈರ[6] ನಿತ್ಯನಿರ್ಮಲನು ಬಂದಾನೆಂದು
ಬಿರುದಿನ[7] ಕಾಳೆ ಸೂಳೈಸಿದವು ೩

ಸಾರವಾಗಿಯೆ ಸರ್ವಸಾಕ್ಷಿರೂಪನು ಬಂದ
ಘೋರ ದುರಿತ ಭವಹರನು ಬಂದ
ಧೀರ ನಿರ್ಗುಣ ಭಕ್ತಾಧೀನ ಬಂದಾನೆಂದು
ಭೋರೆಂಬ ಕಹಳೆ ಸೂಳೈಸಿದವು ೪

ಉನ್ನತದಲಿ ಸರ್ವವಾದ್ಯ ಭೋರಿಡುತಲಿ
ಚೆನ್ನಾಗಿ ಮೊಳಗುತಿರಲು ಕಾಳೆ
ಕನ್ನಡಿ ಕಲಶ ಕಾಂತೆಯರ ಸಂದಣಿಯಿಂದ
ಸನ್ನುತ ಗೃಹಕೆ ಬಂದರು ನೋಡಿ ೫

---

1 ಛತ್ರ 2 ಅರ್ಥಿಲಿ 3 ತಾನೆತಾನಾದ ಕೇಯೂರ 4 ಭಕ್ತಾಧೀನ 5 ಭೋರೆಂಬ
6 ನಿರ್ವಯಿ 7 ತಾನಾಗಿ

## 31. ದಿಬ್ಬಣ ಬಂದೊಡನೆ ಮನೆಕಡೆಯಿಂದ ಉಪಚಾರ ಹೇಳುವುದು

ಬಂದಿರೋ ಸರುವರು[1] ಬಂಧುಗಳೆಲ್ಲರು ಪ

ಬಿಸಿ । ಲಿಂದ ಬಲು ಬಳಲುತಲಿ
ತೃಷೆ । ಯಿಂದ ಬಾಯಾರುತಲಿ
ಹಸಿವೇರಿ ಮುಖ ಬಾಡಿ
ಹಸನಾಗಿ ದಣಿದಿರಿ ೧

ಇಕೊ । ಇಲ್ಲಿ ಪರಿಮಳ ಜಲವು
ಮಗು । ಇಲ್ಲಿ ಶುದ್ಧೋದಕವು
ತೊಳಕೊಳ್ಳಿರೆಲ್ಲರೀಗ
ಕೈಕಾಲು ಮುಖಗಳ ೨

ಮೃದು । ರತ್ನಕಂಬಳಿಯಲ್ಲಿ
ನವ । ರತ್ನ ದಸಿಮಣಿಯಲ್ಲಿ
ವರ ಪಿಷ್ಟರಗಳಲ್ಲಿ
ಕುಳ್ಳಿರಿ ಸುಖದಲಿ ೩

ತಂ । ಗಾಳಿ ಬೀಸುವ ವ್ಯಜನ
ಶೃಂ । ಗಾರ ವಾಗಿಹ ಭವನ
ಮಂಗಳೋತ್ಸವಕೀಗಾ
ಗಂತುಕರೆಲ್ಲರು ೪

ಸವಿ । ಕೊಳ್ಳಿರಿತ್ತ ನೀವೆಲ್ಲ
ಕೈ । ಕೊಳ್ಳಿರೀ ಸೀಯಾಳ
ರಸದಾಳಿ ಕಬ್ಬುಕೋಲು
ರಸ ಪಾನಕಂಗಳ ೫

---

1 ದಿಬ್ಬಣಿಗರು

ಮಂ । ದಾರ ಮಲ್ಲಿಗೆ ಕಮಲ
ಕುಂ । ದಾರವಿಂದದ ಮುಗುಳ
ಸೌಗಂಧ ಪನ್ನೀರ
ಸ್ವೀಕಾರ ಸುಖಕರ ೬

## 32. ಬಾಯಾರಿಕೆ ಕೊಡುವುದು

ಜಲರುಹ ವದನೆಯರೊಲವಿನೊಳಾಲಿಸಿ
ಸುಲಲಿತ ವಾಕ್ಯವನಿಂದಿನೊಳು ।
ಬಳಲಿದ ಪದ ಕೋಮಲ ವದನಂಗಳ
ತೊಳೆವುದು ನಿರ್ಮಲ ಸಲಿಲದೊಳು ।
ತಳುವದೆ ಬೇಗ । ನಲವಿನೊಳೀಗ
ತಳತಳಿಸುವ ಸುಸ್ಥಳದೊಳಗೆಲ್ಲ ಕು ॥
ಳ್ಳಿರಿ ನೀವಿಂದಿರದೆ—ಸುಖವಾಗಿ ೧

ಜಡಕೊಡಪಡಲಡಿಗಡಿಗೆ ಸಂಗಡ ಗುಡ
ಹೊಡಿ ಸಕ್ಕರೆ ಕಲ್ಕಂಡಗಳು ।
ಕಡು ಬೆಡಗಿನೊಳೊಡನೊಡನೆಡೆಬಿಡದೆಯೆ
ಬೆಡಗಿನ ಮಡದಿಯರೊಗ್ಗಿನೊಳು ।
ಕುಡಿವರು ಬರದೆ । ಕೊಡಿಸುವರಿರದೆ ।
ಉಡುಪಡೆಯೊಡೆಯನ ಸಡಗರದಾನನ ॥
ಸಿಡಿಮುಡಿಗೊಂಡಿಹರು—ದೃಢವಾಗಿ ೨

ಸ್ತುತ್ಯಲವಂಗ ಲಾವಂಚೆಗಳಿಂದಲಿ
ಉತ್ತಮವಾದುಷ್ಣದ ಜಲವು ।
ಮತ್ತೆ ಸುಧಾಕರ ಕರವನು ಮೋಹಿಪ
ಪ್ರತ್ಯೇಕದೊಳೊಪ್ಪುವ ಪಯವು ।
ಇತ್ತಲು ಗುಡದಿ । ಅತ್ತ ಶರ್ಕರದಿ ।
ವಿಸ್ತರಿಸಿದ ಪಾನಕ ಶರ್ಬತ್ತುಗ ॥
ಳೊತ್ತಿನೊಳಿಹುದು—ಕುಡಿವುದು ೩

ಸುರಲೋಕವೆ ಪಾವನತರೆಯೆನಿಸುತ
ಧರೆಯೊಳಗಿಪ ಮಾನವರನ್ನು ।
ನಿರುತದಿ ಪ್ರೋಕ್ಷಿಪೆನೆನುತೆ ಹರಿಯುತನ
ಪರತದಿ ತಾ ಶೋಭಿಸುತಿನ್ನು ।
ಸರಿಯುವರಿರದೆ । ಮೆರೆವಳು ವರದೆ ।
ಸರುವರ ಹಿತದೊಳು ಮೆರೆಯುವ ನೀರನು ॥
ಹರುಷದೊಳಿರಿಸಿದೆವು—ಕುಡಿವುದು ೬

ಶಂಕಾರಹಿತ ಹರಿವಾಣದಿ ಶೋಭಿಪ
ಪಂಕಜದಳ ಕೋಮಲವೆನಲು ।
ಶಂಕರ ಹಿತ ಸಿತ ವೀಳೆಯ ಪೂಗವ
ಲಂಕರಿಸುತ ತಂದಿರಿಸಿದೆವು
ಕುಂಕುಮದಳಿಯ । ತಿಂತಿಣಿ ಬಳಿಯ ।
ಇಂಗಡಲೊಡೆಯನ ಪ್ರಿಯನನು ನೆನೆಯುತ ॥
ಶಂಕರ ಹಿತವೆಂದು ನವಿದಿರಿ ೭

## 33. ಗಂಡಿನವರು ಬಿಡಾರ ಕೇಳಿದ್ದು—1

ಸಿದ್ಧಿ ವಿನಾಯಕನ ಶೀಘ್ರದಿ ಪೂಜಿಸಿ
ಇದ್ದವರ ಮನೆಯ ಮದುವೆಯ—ದಿಬ್ಬಣಿಗರು
ಸಿದ್ಧದ ಮನೆಯ—ಕೇಳಿದರು ೧

ಅಕ್ಕರದಿ ಕದತೆಗೆದು ಕೊಪ್ಪರಿಗುವಕವ ತುಂಬಿ
ಸೀಸೀರ ಬಾವಿಯಿರುವಂಥ—ನಮಗೊಂದು
ಚಂದದ ಬೀಡಾರ—ಕೊಡಿಸಯ್ಯ ೨

ಹತ್ತು ಸಾವಿರ ನಮ್ಮ ಎತ್ತು ಬಂದೈದಾವೆ
ಕಿತ್ತಳೆ ಮಾದಳೆಯ ಮದರಂಗಿ—ಗಿಡಗಳ
ಕಿತ್ತು ಬಿಸುಟಾವೆ—ಮರಿಯಾನೆ ೩

ವಿದ್ಯವುಳ್ಳ ಹುಡುಗರಿಗೆ ವಿದ್ಯವನೋದಲಿಕೆ
ವಿದ್ಯವನೋದಿ ಗಣಿತವ ಹೇಳಲಿಕೆ
ವಿದ್ಯಾಶಾಲೆಯನೆ—ಕೊಡಿಸಯ್ಯ ೪

ಚಿತ್ತಜಸಖಿಯರಿಗೆ ಸ್ನಾನವ ಮಾಡಲಿಕೆ
ಸ್ನಾನವ ಮಾಡಿ ಮಂಡಯ ಬಾಚಲಿಕೆ
ಬಚ್ಚಲುಮನೆ ತೋರಿ—ನಮಗೊಂದ ೫

ಪಂಕಜಮುಖಿಯರಿಗೆ ಕುಂಕುಮ ಹಚ್ಚಲಿಕೆ
ಅಚ್ಚಮಲ್ಲಿಗೆಯ ಮುಡಿಯೋಲೆ—ನಮಗೊಂದು
ಅಂದದ ಬೀಡಾರ—ಕೊಡಿಸಯ್ಯ ೬

ಹಾಲು ಮೊಸರ ಕೋಣೆ ಹತ್ತಿರ ದೇವರ ಕೋಣೆ
ಸೀನೀರಿನ ಬಾವಿ ಇರುವಂಥ—ನಮಗೊಂದು
ಚಂದದ ಮನೆಯ—ಕೊಡಿಸಯ್ಯ ೭

ವೇದ ಬಲ್ಲವರಿಗೆ ವೇದವನೋದುವಲಿ
ವೇದಗ್ರಂಥವನೇ ಬರೆವಾಲೆ—ನಮಗೊಂದು
ವೇದದುಪ್ಪರಿಗೆ—ಬಿಡಬೇಕು ೮

ಹುಟ್ಟಿದಾರಭ್ಯವು ಪಟ್ಟಣ ಕಂಡವರಲ್ಲ
ಸೃಷ್ಟಿಪಾಲಕರೆ ದಯೆಮಾಡಿ—ಬಂದವರಿಗೆ
ಇಷ್ಟದುಪ್ಪರಿಗೆ—ಬಿಡಬೇಕು ೯

ಹೊಸ್ತಿಲಿಗೆ ಸೇಡಿ[1]ಲ್ಲೆ ಪುತ್ರರಿಗೆ ಹಾಲಿಲ್ಲೆ
ಪುತ್ರರಾಡಲಿಕೆ ಗಿಳಿಯಿಲ್ಲೆ—ಬೀಡಾರವ
ಕೊಟ್ಟು ಹೋದವನ—ಹೆಸರೇನೊ ೧೦

ಉಪ್ಪರಿಗೆ ಒಳಪಿಕೆ ಎಪ್ಪತ್ತು ಹೆಗ್ಗಣ ಜರವು[2]
ಸರ್ಪ ಕಚ್ಚಿದರೆ ಉರಿ ಭಾಳ[3]—ನೀ ಬೇಗ
ನಿಂಬೆಯ ಹಣ್ಣ ಕೊಡಿಸಯ್ಯ ೧೧

ಹಾಂಗೆ ಕುಂಚವ[4] ಬೀಸಿ ಹೀಂಗೆ ಕುಂಚವ ಬೀಸಿ
ಸ್ವಾಂಗೆಯ[5] ಸೊಪ್ಪ ಮರೆಮಾಡಿ—ಬೀಡಾರವ
ತೋರಿ ಹೋದವನ—ಹೆಸರೇನೊ ೧೨

---

1 ಸೇಡಿ—ಜೇಡಿ 2 ಜರ—ಬಿಲ 3 ಭಾಳ—ಬಹಳ
4 ಕುಂಚ—ಪೊರಕೆ 5 ಸ್ವಾಂಗೆ—ಅಡಕೆಮರದ ಸೋಗೆ

## 34. ಬಿಡಾರ ಕೇಳಿದ್ದು—2

ಮಡದಿ ಮಣಿಯೆ ಲಾಲಿಸೆ । ಬೀಡಾರವ
ಸಡಗರದಲಿ ತೋರಿಸೆ ॥
ಕಡುಬೆಡಗ ನಿಡುಗುರುಳ ಸತಿಯರು
ಪ್ರೊಡವಿಪಾಲರು ಸಹಿತ ದಿಬ್ಬಣ
ದೊಡನೆ ನಿನ್ನಯ ಗೃಹಕೆ ಬಂದರು
ಜಡಜಮುಖಿ ನೀ ಸ್ಥಳವ ತೋರಿಸೆ ಪ

ಮುತ್ತಿನುಪ್ಪರಿಗೆಗಳು । ಅರ್ಥ್ಯದೊಳು ಮೆರೆವ
ಚಪ್ಪರ ಚೌಕಿಗಳು ॥
ವಿಸ್ತರದ ಶಾಲೆಗಳು ಗೋಪುರ
ಮತ್ತಗಜ ರಥ ತುರಗ ಮಾರ್ಬಲ
ಒಪ್ಪ ಸ್ಥಳವೆಲ್ಲಿಹುದು ಪೇಳೆಲೆ
ಮತ್ತಕಾಶಿನಿ ಮಂದಗಾಮಿನಿ ೧

ಲೋಕಲೋಕದ ಜನರು । ಭೂಪಾಲವರ್ಗವ
ನೇಕದಿ ಬಂದಿಹರು ॥
ಯಾಕೆ ಬೇಸರಗಳು ನಿನಗೆ ವಿ
ವೇಕದಿಂದಡಿಗೆಯನು ಮಾಡುವ
ಸೋಪಸ್ಕರ ಸಹಿತಾಗಿ ರಂಜಿಪ
ಪಾಕಶಾಲೆಯನೀಗ ತೋರಿಸೆ ೨

ಅಂದಣ ಕರಿತುರಗ । ಕಾಲಾಳುಗಳಿಗೆ
ಚಂದದ ಮನೆ ತೋರಿಸೆ ॥
ಸುಂದರದ ಗೋವುಗಳ ತರತರ
ದಿಂದ ಬಂಧಿಸಿ ಮೇವನಿಕ್ಕುವ
ಅಂದವಾಗಿಹ ಸ್ಥಳವ ತೋರಿಸು
ಮಂದಗಾಮಿನಿ ಬೇಗ ಮದದೊಳು ೩

ಪಂಕಜಮುಖಿಯರಿಗೆ । ಕಸ್ತೂರಿ ಕುಂಕುಮಾ
ಲಂಕರಿಸುವ ಸ್ಥಳವ ॥
ವಂಕಿ ತೋಳ್ಬಳೆ ಕಡಗ ಮುದ್ರಿಕೆ
ಕಂಕಣವ ಮಣಿ ಭೂಷಣಂಗಳ
ಶಂಕುಸರವನು ಕಂಠಿಯಿಡುವಲಿ
ಅಂತರಂಗದ ಸ್ಥಳವ ತೋರಿಸೆ ೪

ಮತ್ಸ್ಯಲೋಚನೆಯರಿಗೆ । ಅತಿಶಯದ ಹರುಷದಿ
ಅಚ್ಚ ಕೆಮ್ಮಣ್ಣಗಳ ॥
ಒತ್ತಿ ಮಂಡೆಯ ಬಾಚಿ ಕಟ್ಟುತ
ಸ್ವಚ್ಛವಾಗಿಯೆ ಮಡಿಯ ಮಾಡುವ
ಬಚ್ಚಲದ ಸ್ಥಳವೆಲ್ಲಿ ಪೇಳಲೆ
ಮತ್ತಕಾಶಿನಿ ಮಂದಗಾಮಿನಿ ೫

ಶಶಿಮುಖಿ ರನ್ನೆ ಕೇಳು । ಶಿಶುಗಳಿಗೆ ರಂಜಿಪ
ಹಸನಾದ ಸ್ಥಳ ತೋರಿಸು ॥
ಬಿಸಜಗಂಧಿನಿಯರಿಗೆ ಕಡಗವ
ಜನದೂಳಾಭರಣವನು ಇಡುವಲಿ
ಹೊಸ ಗೃಹವ ನೀನೆಮಗೆ ತೋರಿಸೆ
ಬಿಸಜ ಗಂಧಿನಿ ಕುಸುಮ ಲೋಚನೆ ೬

ಕೋಟಿ ಭೂಪಾಲಕರು । ಈ ನಿನ್ನ ಗೃಹಕೆ
ನಾಟಿಯಿಂ ಬಂದಿಹರು ॥
ಕೋಟೆ ಕೊತ್ತಲ ಕೆರೆಯ ಬಾವಿಯು
ತೋಟಿಗನ ಸಹಿತಾಗಿ ಪೂಜಿಪೆ
ನಾಟ್ಯ ನೃತ್ಯದ ಪಾಠಶಾಲೆಯ
ಸೂಟಿಯಿಂದಲೆ ನಮಗೆ ತೋರಿಸೆ ೭

## 35. ಬಿಡಾರ ಬಿಟ್ಟದ್ದು

ಯಾರೆ ಬಿಡಾರ ಕೇಳುವಳು । ನೀರೆ
ತೋರುವೆ ನಿನಗೆ ಬೇಕಾದಂಥ ಸ್ಥಳವ ಪ

ಉಪ್ಪರಿಗೆ ಕೋಣೆಗೆ ಬಾರೆ । ನಿನಗೆ
ಒಪ್ಪಂಥ ಲೋಡನ್ನೆ ನೋಡೆ
ಉಪ್ಪರಿಗೆ ಒಳಗೆರಡರಗಿಳಿಗಳು ಬಂದು
ಮಿತ್ರೆ ನಿನ್ನುಪಚಾರ ಮಾಡುವ ಪರಿಯು ೧

ಮಾಳಿಗೆ ಕೋಣಿಗೆ ಬಾರೆ । ನಿನಗೆ
ಮೇಲಾದ ಲೋಡನ್ನೆ ನೋಡೆ
ಮಾಳಿಗೆ ಒಳಗೆರಡರಗಿಳಿಗಳು ಬಂದು
ಲೋಲೆ ನಿನ್ನುಪಚಾರ ಮಾಡುವ ಪರಿಯು ೨

ಅಂದವ ಕೋಣಗೆ ಬಾರೆ । ನಿನಗೆ
ಅಂದದ ಲೋಡನ್ನೆ ನೋಡೆ
ಅಂದರದೊಳಗೆರಡರಗಿಳಿಗಳು ಬಂದು
ರಂಭ ನಿನ್ನುಪಚಾರ ಮಾಡುವ ಪರಿಯು ೩

## 36. ಪಾದ ತೊಳೆದದ್ದು (ಮದುಮಗನ)

ಪಾದವ ತೊಳೆದ ಪರ್ವತರಾಯ । ಮಗಳ
ಧಾರೆಯನೆರೆವೆನೆಂದೆನುತ ಬೇಗ ಪ

ಗುರುಗಣಪತಿ ಸರಸ್ವತಿಗಭಿವಂದಿಸಿ
ವರದೆ[1] ಶಾರದೆಗೆ ವಂದನೆಯ ಮಾಡಿ
ಪರುವತರಾಯ ಪರಮೇಶನ[2] ಪಾದವ
ತೊಳೆದ ಪದನವ[3] ಪೇಳ್ವೆ ವಿನಯದಲಿ ೧

ವನಜಲೋಚನೆ ಪಾರ್ವತಿ[1] ಪೋಗಿ ಶೀಘ್ರದಿ
ವನದೊಳು ತಪವನಾಚರಿಸುತಿರೆ
ವನಜಲೋಚನೆಯು ತಪಕೆ ಮೆಚ್ಚಿ ಬಂದಿಪ
ಪರಮೇಶ್ವರನ ಪಾದವ ತೊಳೆದ ೨

1 ಇರದೆ 2 ಪರಮೇಶ್ವರನ 3 ಪದವ, ಹದನ 4 ಪಾರ್ವತಿ

ಪರುವತರಾಯನು[1] ತರಳೆ ಪಾರ್ವತಿಯನು
ಹರನಿಗೆ ಧಾರೆಯೆರೆವೆನೆಂದು
ಸುರರು ಭೂಸುರರೆಲ್ಲ ನೆರೆದಿದ್ದ ಸಭೆಯಲಿ
ಪರಶಿವಮೂರ್ತಿಪಾದವ[2] ತೊಳೆದ ೩

ನಂದಿಯನೇರಿ ಭೂಮಂಡಲ ತಿರುಗಿದ[3]
ಇಂದುವ ಧರಿಸಿ[4] ಜಗದಿ ಮೆರೆದ
ಇಂದುವದನೆಯ ತಪಕೆ ಮೆಚ್ಚಿ ಬಂದಿಹ
ಚಂದ್ರಶೇಖರನ ಪಾದವ ತೊಳೆದ ೪

ಬಂಗಾರ ಗಿಂಡಿಯ ಉದಕವ ಹಿಡಿಯುತ[5]
ಅಂಗನೆ ಮೇನಕೆಯಳು ಸಹಿತ
ಮಂಗಳವಾದ್ಯ ಮೃದಂಗ[6] ನಾದಗಳಿಂದ
ಗಂಗಾಧರನ ಪಾದವ ತೊಳೆದ ೫

ಸೃಷ್ಟಿಗೀಶ್ವರನ ಪಾದವ ತೊಳೆಯಲು ಗಂಗೆ
ತಟ್ಟನೆ ಹರಿದು ಬಂದಳು ಜಗಕೆ
ಸೃಷ್ಟಿಯ ಜನರ ಪಾವನ ಮಾಡೆನುತಲಿ[7]
ತಟ್ಟನೆ ವರವಿತ್ತ ಪರಶಿವನು ೬

ಮಂಗಲ ಕಾರ್ಯದೀ ಪದನವ[8] ಪೇಳಲು
ಮಂಗಲವಿತ್ತು ಮಾನಿನಿಯರಿಗೆ
ಗಂಗಾಧರ ಗೌರಿಯು ಬಂದು ಶೀಘ್ರದಿ
ಮಂಗಲವೀವರು ವಧುವರರ್ಗೆ ೭

---

1 ರಾಯ ತನ್ನ 2 ಮೂರ್ತಿಯ ಪದ 3 ತಿರುಗುತ 4 ತರಿಸಿ 5 ತುಂಬುತ
6 ಗಾನದ 7 ಮಾಡಿಸುತಲಿ 8 ಪದವನು

## 37. ದಿಬ್ಬಣ ಎದುರ್ಗೊಂಡು ಒಳಗೆ ಹೋಗುವದು

ಶ್ರೀರಘುರಾಮಚಂದ್ರಮನ
ಚಾರು ಚಂದಿರ ಮೊಗ ಮದುಮಗನ ॥
ಧಾರಿಣಿಪತಿ ಜನಕನು ತೋಷಿಸುತ
ನಾರೀಮಣಿಯರೊಡಗೂಡಿ ಭಾಷಿಸುತ
ಭೂರಿ ಸಂಭ್ರಮದಲಿ ಬಲಗೈಪಿಡಿಯುತ ॥
ನಾರಿ ಮಂಟಪಕೆ—ಬರುತಿರ್ದ ೧

ಭೇರಿ ನಗಾರಿ ಘೋಷದಲಿ
ಭೂರಿ ಸಂಗೀತದೊತ್ತಿನಲಿ ॥
ನಾರಿಯರೆಂಬ ಶೋಭಾನದ ರವದಿ
ವಾರಾಂಗನೆಯರ ನೃತ್ಯದೊಯ್ಯಾರದಿ
ಮಾರನ ಕೋಟಿ ಲಾವಣ್ಯಾದಿ ಬೆಳಗುವ ॥
ಚಾರು ಮದುಮಗನ—ಕರೆತಂದ ೨

ಚರಣನೂಪುರ ಘಲಿಘಲಿಕು
ಕರದೊಳುಂಗುರಗಳ ಪೊಳಕು ॥
ಉರು ಕಟಿದಾಬು ನೇವಳ ತಳಪಳಕು
ಕೊರಲೊಳು ಹಾರ ರತುನಗಳ ಬೆಳಕು
ತರುಣಾರ್ಕಾಮಿತ ಭಾಸದಿ ಬೆಳಗಲು ॥
ಹರುಷದೊಳರಮನೆಗೆ—ನಡೆತಂದ ೩

ದುರಿತಸಾಗರವನ್ನೆ ಹರಿದ
ಕರುಣಾವಾರಿಧಿ ಕರಿವರದ ॥
ದುರುಳ ಸುಬಾಹು ತಾಟಕಿಯರ ಗೆಲಿದ
ನರನಾಟಕತನದಿಂದಲಿ ಹೊಳೆದ
ವರರಘುರಾಮನನೊಡಗೊಂಡು ಜನಕನು ॥
ಹರುಷದೊಳರಮನೆಗೆ—ನಡೆತಂದ ೪

ನವರತ್ನ ಖಚಿತದಾಸನದಿ
ನವನೂತನದ ವೈಭವದಿ ॥
ನವಮಂತ್ರಾತ್ಮಕ ಬೆಳಗಲು ಮುದದಿ
ನವನೂತನ ವೇದಂಗಳ ಸ್ವರದಿ
ನವರಸಾಲಂಕೃತ ಪಿತ ಪಂಚಲಿಂಗನ ॥
ನವವಿಧ ಭಕ್ತಿಯಲಿ—ಸ್ತುತಿಸ್ಯಾರು ೫

## 38. ಸಭೆಗೆ ಕರೆಯುವುದು

ಬನ್ನಿ ಸಭೆಗೆ ತಡವೇನು । ಬನ್ನಿ
ಬನ್ನಿ ಸಭಗೆ ತಡವೇನು । ನಮ್ಮ ಪ

ಮನ್ನಣೆ ಕೈಗೊಳ್ಳಿರಿನ್ನು । ಸಣ್ಣ
ಮನ್ನಣೆ ಕೈಗೊಳ್ಳಿರಿನ್ನು । ಬಲು
ಬನ್ನಬಟ್ಟಿರುಪಿರಿ[1] । ಸಣ್ಣವರೆಲ್ಲವರು ಅಪ

ಕಾಲಿಗೆರೆದುಕೊಳ್ಳಿ ನೀರು । ಮುಖದ
ಮೇಲೇರುತಿದೆ ಬೆವರ್ಚೋರ್ನರು । ಬಲು
ಆಲಸ್ಯ[2]ಪಟ್ಟಿರುಪಿರಿ[3] । ಪಲಕ್ಕಿ ಸಾರಿ ಕುಡಿರಿ[4] ೧

ಕಲ್ಲು ಸಕ್ಕರೆ ದ್ರಾಕ್ಷೆಯನ್ನು । ಹೊಸ
ಬೆಲ್ಲ ನೀರೆಳನೀರನ್ನು । ಬಹು[5]
ಉಲ್ಲಾಸದಲ್ಲಿ ಕೊಳ್ಳಿ । ಇಲ್ಲವಾದ್ರೆ ತರಿಸಿಕೊಳ್ಳಿ ೨

ತರತರದಾಸನವನ್ನೆ । ಈಗ
ತರಿಸಿ ತರಿಸಿ ಕೊಡಿಸಿದೆನೆ । ನೀವು
ಬರುತ ಬರುತ ಹೊತ್ತು
ಸರಿದು ಸರಿದು ಹೋಯ್ತು ೩

1 ಬನ್ನಬಟ್ಟಾಪರಿ 2 ಬಹಳಾಲಸ್ಯ 3 ಪಟ್ಟಿರೀಗ 4 ಪಾನ್ಕಕುಡಿರಿ (ಉ.) 5 ನೇವ್

ಏಲಕ್ಕಿ ಜಾಯಿಕಾಯಿ ಕೂಡಿ । ನೀವು
ವೀಳ್ಯಾಮೃತವ ಬೇಗ ಮಾಡಿ । ಹೆಚ್ಚು[1]
ಕಾಲ ಕಳೆಯಲು[2] ವ್ಯರ್ಥ
ಹಾಳಪ್ಪುದೀ ಸುಮುಹೂರ್ತ[3] ೪

ಶಂಖ ಚಕ್ರಾಂಬುಜಧಾರಿ[4] । ಚೆಲ್ವ
ವೆಂಕಟರಮನುದಾರಿ[5] । ಪಾದ
ಕಿಂಕರರನು ಕಾವ
ಶಂಕರ ಪ್ರಿಯಭಾವ ೫

## 39. ಉಪಚರಿಸುವುದು

ಒಂದಾಗಿ ಬಹಳ । ಬಂದಿರೆ ಸಕಲ
ಚಂದವಾದುದು ಮನಕೆ । ದಿಬ್ಬಣಿಗರೆ
ಚಂದವಾದುದು ಮನಕೆ ಪ

ಹಸಿಪ್ಪು ತಡವು । ನಿಮಗೆಂದು ನಾವು
ಧ್ಯಾನಿಸಿಕೊಂಡಿಹೆವು । ನೋಡುವೆವು
ಧ್ಯಾನಿಸಿಕೊಂಡಿಹೆವು ೧

ಬಿಸಿಲ ಕಾಂತಿಯೊಳು । ಬಳಲಿ ದಾರಿಯೊಳು
ವಶಗೆಟ್ಟು ನೀವು ಬೇರೆ । ಕಂಗೆಟ್ಟಿರಿ
ವಶಗೆಟ್ಟು ನೀವು ಬೇರೆ ೨

ಸಣ್ಣ ಕನ್ನೆಯರು । ಚಿಕ್ಕ ಬಾಲಕರು
ಅಯ್ನೂರು ಮಂದಿಗಳು । ತಾವಿರುವರು
ಅಯ್ನೂರು ಮಂದಿಗಳು ೩

ಚಾಮರ ಪಿಡಿದು । ಬೀಸುವೆವೊಲಿದು
ಕ್ಷೇಮವಾಗಲಿಯೆನ್ನುತ । ಬೀಸಲು ಮತ್ತಾ
ಕ್ಷೇಮವಾಗಲಿಯೆನ್ನುತ ೪

---
1 ಹೊತ್ತು 2 ಕಳೆಯೆ 3 ದೀ ಮುಹೂರ್ತ 4 ಚಕ್ರಾಂಕಿತಧಾರಿ 5 ವೆಂಕಟೇಶ್ವರ ದಯೆಧೋರಿ

## 40. ಉಪಚರಿಸಿದ್ದಕ್ಕೆ ಉತ್ತರ

ಬಂತು ಬಂತೂ ಬಂತೆಮಗುಪಚಾರ
ಸಂತೋಷವಾಂತೆವು ಶ್ರೀಕಾಂತೆಯರೇ ಪ

ಸಾರೆಳನೀರು । ಕ್ಷೀರಪನ್ನೀರು
ಬಾರಿಗೆ ಮಿತಿಯನು ಮೀರಿಹುದು.. ಬಂತು ೧

ಕಲ್ಲುಸಕ್ಕರೆಯು । ಫುಲ್ಲಲೋಚನೆಯರ್
ಎಲ್ಲಎಲ್ಲವ ಸಲ್ಲಿಸಿದರುಲ್ಲಾಸದಿ ಬಂತು ೨

ಕಸ್ತೂರಿಗಂಧ । ಮಿತ್ರೆಯರ್ ತಂದ
ಕಸ್ತೂರಿ ವೀಳ್ಯವಸಿತ್ತಿಹುದು . ಬಂತು ೩

ತರತರದೊಸಗೆ । ಮೆರೆಯುವ ಸಭೆಗೆ
ತರಿಸುತಿತ್ತರು ಬಲು ನೀರೆಯರು.. .ಬಂತು ೪

ಪಂಕಜನಯನ । ಶಂಕರಪ್ರಿಯನ
ವೆಂಕಟರಮಣನ ಕಿಂಕರಗೇ....ಬಂತು ೫

## 41. ತಾಂಬೂಲ ಹಚ್ಚಿದ್ದು

ಗುರು ಲಂಬೋದರಗೆರಗುತ ಶಾರದೆ
ಚರಣ ಸರೋಜವ ಸ್ತುತಿಮಾಡಿ ।
ಹರಿಹರ ಸುರಪಾದ್ಯರ ಬಲಗೊಳ್ಳುತ
ಸರಸದಿ ಕವಿಗಳ ದಯೆಬೇಡಿ ।
ವರ ರಘುರಾಮನ ಪರಿಣಯದೊಳು ಮ
ತ್ತಿರದೆಲೆಯಡಕೆಯ ಸಮುಧರಿಸಿದ ವಿ ॥
ಸ್ತರವ ನಾ ಪೇಳಿ—ಪೊಗಳುವೆ ೧

ಭೂಮಿಪ ಜನಕನು ಕಾಮಿನಿ ಸೀತೆಗೆ
ಪ್ರೇಮದ ವರನಿವನಹುದೆಂದು ।
ಕಾಮಿನಿಯರ ಸಂದೋಹವ ಕೂಡುತ
ರಾಮನನಿದಿರ್ಗೊಳ್ಳುತ ಬಂದು ।
ಭೂಮೀಶರು ಕುಳಿತಾ ಮಹಾಸಭೆಯಲಿ
ಸೋಮಧರನ ಪ್ರಿಯನ ಕರವಿಡಿದಾ ॥
ಹೇಮಮಂಟಪಕೆ—ಕರೆತಂದ ೨

ಮೆರೆವ ಮಂಟಪದಿ ಕುಳ್ಳಿರಿಸುತ ಮಿಥಿಲೇ
ಶ್ವರ ಸಭ್ಯರ ತಾನುಪಚರಿಸಿ ।
ಹರುಷದಿ ಮಂತ್ರೋಚ್ಚರಣೆಯ ಕೇಳುತ
ಲೆರಕದಿ ಗಂಧಾಕ್ಷತೆ ಕೊಡಿಸಿ ।
ತರುಣಿಯರೆಲ್ಲರು ಪರಿಪರಿಯಿಂದಲಿ
ಸುರುಚಿರ ಶೋಭನ ಪಾಡುತ ಸರ್ವರ ॥
ನೆರೆದುಪಚರಿಸಿ—ಸೊಬಗಿಂದ ೩

ಸನ್ಮತದಿಂದಲಿ ಪನ್ನೀರನೆ ತಳಿ
ದುನ್ನತ ಸೊಬಗಿನೊಳೆಲ್ಲವರು ।
ಚಿನ್ನದ ಹರಿವಾಣವನ್ನು ತರಿಸಿರೆಂದು
ಬಿನ್ನಣದಿಂದಲಿ ಪೇಳುವರು ।
ಚೆನ್ನಾಗಿಹ ತಬಕನ್ನುಭಯದ ಸಭೆ
ಗುನ್ನತದಿಂ ತರಿಸುತಯೆಲೆಯಡಕೆಯ ॥
ಇನ್ನು ಸಭೆಗೆಲ್ಲ—ಕೊಡಿರೆಂದ ೪

ಭೇರಿಯ ಕೊಂಬು ನಗಾರಿಯ ಘೋಷದಿ
ಭೂರಿ ಸಭೆಯು ಘೇಯೆನ್ನುತಲೆ ।
ಪಾರುವರಿರದೆ ವೃಂದಾರಕರೆಲ್ಲರು
ಶ್ರೀರಮಣನ ಕೊಂಡಾಡುತಲೆ ।
ತೋರುವ ಸಭೆಯ ವಿಚಾರಿಸಿ ವೈದಿಕ
ರಾರೆನ್ನುತ ಜತೆಜತೆಯಿಂದುಭಯದಿ ॥
ಸಾರಿ ಎಲೆಯಡಕೆ—ಕೊಡಿಸ್ಯಾರು ೫

ನಾರಿಯರೆಲ್ಲ ಶೃಂಗಾರವ ಮಾಡುತ
ಸೀರೆ ಸರಿಯ ಸಮವನೆ ಗೈದು ।
ನಾರಿಪ ಪುಣುಗು ಪನ್ನೀರು ಕುಂಕುಮ ಕ
ಸ್ತೂರಿಯ ನೀಡಿ ಜನರಿಗೊಲಿದು ।
ಬೇರೆ ಬೇರೆಲ್ಲರು ಚಾರು ಪರಿಮಳವ
ಬೀರುತ ದಿಬ್ಬಣಿಗರ ಪಿವರಿಸುತಲೆ ॥
ಮೀರಿ ತಾಂಬೂಲ—ಕೊಡಿಸ್ಯಾರು ೬

ಮೇಲುವ ಸಮಗೈದಾ ಲಲಿತಾಂಗಿಯರ್
ನೀಲಮೂಗುತಿ ಫಾಳಿಸುತಿರಲು ।
ಕಾಲಂದುಗೆಯು ವಿಶಾಲದೊಳುಲಿವುದು
ಬಾಲಕಿಯರು ಬಲು ಬೆಡಗಿನೊಳು ।
ನೀಲದಾರತಿಗಳ ಕೋಳ್ಯೂರೇಶನ
ಫಾಳಕೆಯೆತ್ತಿಯಕ್ಷತೆಗಳನಿಟ್ಟರು ॥
ಲೋಲಾಕ್ಷಿಯರೈದೆ—ನುತಿಸ್ಯಾರು ೭

## 42. ಮಂತ್ರಬಿನ್ನಪ

ಪಂಚವಾದ್ಯವು ಮೊಳಗೆ ಸತ್ತಿಗೆ ಮೇಲಳಿಯನ
ಬೇಗದಿಂದೆದ್ದು ಕುಳಿರಾಸಿ—ಮಾವಯ್ಯ
ಮಂತ್ರಬಿನ್ನಪವ—ತೊಡಗಿದ ೧

ಸರ್ವವಾದ್ಯವು ಮೊಳಗೆ ಆನೆ ಮೇಲಳಿಯನ
ಬೇಗದಿಂದೆದ್ದು ಕುಳಿರಾಸಿ—ಮಾವಯ್ಯ
ಮಂತ್ರಬಿನ್ನಪಕೆ—ತೊಡಗಿದ ೨

ಶುಕ್ರನುದಯದೊಳೆದ್ದು ಯಮುನೆಯ ಮುಂದಾಗಿ
ಬೇಗದಿಂದೆದ್ದು ಕುಳಿರಾಸಿ—ಮಾವಯ್ಯ
ಮಂತ್ರಬಿನ್ನಪಕೆ—ತೊಡಗಿದ ೩

ಸೂರ್ಯನುದಯದಲೆದ್ದು ಭಾಗೀರಥಿ ಮುಂದಾಗಿ
ಸರ್ವದೇವರಿಗೂ ಶರಣೆಂದು—ಮಾವಯ್ಯ
ಮಂತ್ರಬಿನ್ನಪವ—ತೊಡಗಿದ ೪

ಉದಯದಲಿ ಎದ್ದನು ಯಮುನೆಯಲಿ ಮಿಂದನು
ಮುತ್ತಿನ ಗಿಂಡಿಯಲಿ ಉದಕವ—ತೆಕ್ಕೊಂಡು
ಮುತ್ತಿನ ಮಂಟಪವ—ಇಳಿದನು ೫

ಪಟ್ಟೆ ತುಂಬಿದ ಧೋತ್ರ ಬೆರಳಲಿ ಪಾವಿತ್ರ
ಬೆಳ್ಳಿಗಿಂಡಿಯಲಿ ಉದಕವ—ತೆಕ್ಕೊಂಡು
ಹೂವಿನ ಮಂಟಪವ—ಇಳಿದನು ೬

ಹತ್ತೆಳೆ ಜನಿವಾರ ಹೊಟ್ಟೆ ಮೇಲಲೆಯುತ್ತ
ಇಟ್ಟ ಶ್ರೀಗಂಧ ಬೆವರುತ್ತ—ಮಾವಯ್ಯ
ಮಂತ್ರ ಬಿನ್ನಪವ—ತೊಡಗಿದ ೭

ಹರಿವಣದಲಕ್ಷತೆ ಹೂವಿನ ಗಿಂಡಿಯಲುದಕ
ಹೂವಿನ ಬೀಸಣಿಗೆ ಬಲಗೈಲಿ—ಹಿಡಕೊಂಡು
ಮಾವ ಬಿನ್ನಹವ—ತೊಡಗಿದ ೮

ಬಟ್ಟಲೊಳಕ್ಷತೆ ಮುತ್ತಿನ ಗಿಂಡಿಯಲುದಕ
ಮುತ್ತಿನ ಬೀಸಣಿಗೆ ಬಲಗೈಲಿ—ಹಿಡಕೊಂಡು
ಮಾವ ಬಿನ್ನಪವ—ತೊಡಗಿದ ೯

ಬಾಗಿಲಿಗಳಿಯನು ಬಂದ ಬಾಣಬಿರುಸನು ಬಿಟ್ಟು
ಬಾಗಿಲಿಗೆ ಬಂದ ಮದುಮಗ—ಮಾವಯ್ಯ
ಮಂತ್ರ ಬಿನ್ನಪವ—ತೊಡಗಿದ ೧೦

ಹೊಸ್ತಿಲಿಗಳಿಯನು ಬಂದ ಚಕ್ರಬಾಣವ ಬಿಟ್ಟು
ಹೊಸ್ತಿಲಿಗೆ ಬಂದ ಮದುಮಗ—ಮಾವಯ್ಯ
ಮಂತ್ರ ಬಿನ್ನಪವ—ತೊಡಗಿದ ೧೧

ಪಟ್ಟೆ ಹಚ್ಚಡ ಹೊದ್ದು ಮುತ್ತಿನುಂಗುರವಿಟ್ಟು
ಮುತ್ತಿನ ಬೀಸಣಿಗೆ ಬಲಗೈಲಿ—ಹಿಡಕೊಂಡು
ವೇದ ಬಿನ್ನಪವ—ತೊಡಗಿದ ೧೨

ಸಾಲಿಹಚ್ಚಡ ಹೊದ್ದು ಹೂವಿನುಂಗುರವಿಟ್ಟು
ಹೂವಿನ ಬೀಸಣಿಗೆ ಬಲಗೈಲಿ—ಹಿಡಕೊಂಡು
ಮಂತ್ರ ಬಿನ್ನಪವ—ತೊಡಗಿದ ೧೩

ಮಂಟಪಕ್ಕಳಿಯನು ಬಂದನೆಂದಿರುವಾಗೇ
ಳೆಂಟು ದೀವಿಗೆಯ ತರಹೇಳಿ[1]—ಮಾವಯ್ಯ
ಮಂತ್ರಬಿನ್ನಪವ—ತೊಡಗಿದ ೧೪

ಚಾವಡಿಗಳಿಯನು ಬಂದ ನಂಟರ ಬರಹೇಳಿ
ಆರು ದೀವಿಗೆಯ ತರಹೇಳಿ—ಮಾವಯ್ಯ
ಮಂತ್ರಬಿನ್ನಪವ—ತೊಡಗಿದ ೧೫

ಮುತ್ತಿನ ಚಪ್ಪರದಿ ಮಾರಾಯರ ಸನ್ನಿಧಿಯಲಿ
ಹತ್ತೆಂಟು ಲಕ್ಷ ನೆರೆದಲ್ಲಿ—ಮಾವಯ್ಯ
ವೇದಬಿನ್ನವ—ತೊಡಗಿದ ೧೬

ಹೂವಿನ ಚಪ್ಪರದಿ ಮಾರಾಯರ ಸನ್ನಿಧಿಯಲಿ
ಆರೇಳು ಲಕ್ಷ ನೆರೆದಲ್ಲಿ—ಮಾವಯ್ಯ
ವೇದಬಿನ್ನಪವ—ತೊಡಗಿದ ೧೭

## 43. ಸಭಾಲಂಕಾರ

ಗುರುಗಣಪತಿಯ ಭಜಿಸಿ ಶಾರದೆಯ
ಅರುಹುವೆ ಸಭೆಯ ವಿಸ್ತಾರ ಪ

ಲಕ್ಷ್ಮೀರಮಣಗೆ ಮಾಡುವರೊಸಗೆ
ಜಿಷ್ಣುಮಂಟಪ ಕಳುಹಲ್ಕೆ ೧

ಮಂಟಪ ಬಹಳ ಹೊಳೆಯಲು ಸಕಲ
ನಂಟರಿಷ್ಟರು ಬಂದರಾಗ ೨

ಕಂಬ ವಜ್ರಗಳು ಹೊಳೆಯುತಲಿರಲು
ರಂಭೆ ಪಣ್ಣಸ ಗೊನೆ ನೂರು ೩

ಮುತ್ತುಮಾಣಿಕದಿ ಮರಕತಮಯದಿ
ಸುತ್ತಿದ ಸಭೆ ಮಿಗಿಲಾಗಿ ೪

1 ಬೆಳಗಲು

ಕೊಂಬು ಕಹಳೆಯು ವಾದ್ಯದ ಧ್ವನಿಯು
ತುಂಬುತಿರಲು ಸಭೆಗಂದು ೫

ರಂಗವಲ್ಲಿಗಳು ಬಹುಚಿತ್ರಗಳು
ಬಂಗಾರದೆಸಳಿನ ಹೂವು ೬

ನೃತ್ಯಗಾಯನವು ಕಾವ್ಯವಾಚನವು
ಭೃತ್ಯರೋಡಾಡುತಿದ್ದಾರು ೭

ಉಂಡೆ ಮುದ್ದುಗಳು ವರಪಟಾಕಿಗಳು
ಕೊಂಡೆಲ್ಲ ಗದ್ದಲಗೈದು ೮

ಪಚ್ಚೆಕರ್ಪೂರ ಊದುಬತ್ತಿಗಳು
ಹೆಚ್ಚಾಗಿ ಗೈಯೆ ಸುಗಂಧ ೯

ಗಂಧವೀಳ್ಯವನು ಸಭೆಗಿಡೆ ಮೇಣು
ಚಂದವಾಗಲು ಸಭೆ ತಾನು ೧೦

ಮಲ್ಲಿಗೆ ಸುಮದ ಮಾಲೆಯು ವಿವಿಧ
ಅಲ್ಲಿಗಲ್ಲಿಗೆ ನೇರ್ಚುವಾಗ ೧೧

ಇಂತು ರಾಜಿಸುವ ಮಂಟಪದೆಡೆಯೊಳ್
ಕಂತುಜನಕ ರಾಮನಿರ್ದ ೧೨

ಮಂಗಲವೆನುತ ಪಾಡುತ ಮತ್ತಾ
ಮಂಗಲಾತ್ಮಕರಿರ್ದರಾಗ ೧೩

## 44. ಸಭೆಯ ಪೂಜೆ

ಸಭೆಯ ಪೂಜೆಯ ಮಾಡಿದ । ಪರ್ವತರಾಯ
ಸಭೆಯ ಪೂಜೆಯ ಮಾಡಿದ ಪ

ವಿಭವದಿ ವಿಬುಧರ ಸಭೆಯೊಳು ಕೂಡಿಸಿ
ಶುಭಕಾರ್ಯಾರಂಭದಿ ಅಭಿನಮಿಸುತಲಾಗ ಅಪ

ನಂದಿವಾಹನವನೇರಿ । ಬಂದಿರುತಿಹ
ಇಂದುಶೇಖರನ ತಾನು
ಅಂದದಿಂದೆದುರ್ಗೊಂಡು ಸುಂದರಾಸನದೊಳು
ಮಂದಹಾಸದಿ ಬೇಗ ತಂದು ಕೂಡ್ರಿಸುತಾಗ ೧

ಕುಲಪುರೋಹಿತರ ಕೂಡಿ । ಲಲನೆಯ ಜೋಡಿ
ನಲಿ ಸಂಕಲ್ಪವನು ಮಾಡಿ
ಸುಲಲಿತ ಭಾವನೆಯಿಂದ ತಾನೊಡಗೂಡಿ
ನಳಿನಾಕ್ಷಿಯ ಮದುವೆಗೆಂದು ಸಂಭ್ರಮದೊಳು ೨

ಮುತ್ತುರತ್ನಗಳಿಂದಲಿ । ಶೋಭಿಸುತಿಹ
ಶಿಸ್ತಾದ ಭವನದೊಳು
ತೆತ್ತಿಸಕೋಟಿ ದೇವಾದ್ಯರು ಕುಳಿತಿರೆ
ಹತ್ತಿರದಲಿ ತಾನು ಹಸ್ತವ ಮುಗಿಯುತ್ತ ೩

## 45. ಅಳಿಯನ ನೋಡುವುದು (ಅತ್ತೆ)

ಕಡಗ ಕಂಕಣವಿಟ್ಟ ಉಡುಪಮುಖಿ । ಬಹು
ಬೆಡಗಿನಿಂದಲಿ ಬಂದು ನೋಡೆ ಸಖಿ । ಈ
ಪೊಡವಿಯೊಳಿಂಥ ಅಳಿಯ
ಮೃಡನಾಣೆ ಕಾಣೆನಮ್ಮ ೧

ದಾನದೊಳಗೆ ಧರ್ಮಜನಂತೆ । ಸ್ನಾನ
ನೇಮದೊಳಗೆ ಮುನಿಜನರಂತೆ । ನಿನ್ನ
ಪ್ರೇಮದೊಳಿಂಥ ಅಳಿಯ
ಈಗ ದೊರಕಿದನಮ್ಮ ೨

ಜಾಗದೊಳಗೆ ಕರ್ಣನ ಪೋಲ್ವ । ವೈ
ಭೋಗದೊಳಗೆ ಇಂದ್ರನ ಪೋಲ್ವ । ನಿನ್ನ
ಯೋಗದೊಳಿಂಥ ಅಳಿಯ
ಈಗ ದೊರಕಿದನಮ್ಮ ೩

ಮಲ್ಲಿಗೆ ಪೂ ಶಿರದೊಳಿಳವಟ್ಟು । ರತ್ನ
ಜಲ್ಲಿ ಬಾಸಿಗ ಉಂಗುರಗಳಿಟ್ಟು । ಬರುವ
ಫುಲ್ಲನಾಭನೊಳ್ಮನ
ವಲ್ಲೆ ನಿಮ್ಮಗಳಿಗರಸ ೪

## 46. ಹೂ ಹಚ್ಚುವದು—1

ಪಚ್ಚಿದರ್ ಸುಮಗಳನು । [1]ನಾರಿಯರು
ಸ್ವಚ್ಛದೊಳೆಲ್ಲವನು[1] ಪ

ಪೆಚ್ಚಿನ ಸಭೆಜನ । ಮೆಚ್ಚುವಂದದಿ ಘನ
ಅಚ್ಚಮಲ್ಲಿಗೆ ಚೆಂಡ । ಬಿಚ್ಚಿಕೊಳ್ಳುತ್ತ ಖಂಡ[2] ಅಪ

ಕಾಳಾಪಿ ವೇಣಿಯರು । ಪನ್ನೀರು ಗಂಧ
ಕೋಲಾಹಲವ ಗೈದರು
ಬಾಲೆಯರ್ ಸುರುಚಿರ । ಮಾಲೆಯರ್ ಸುಗುಣವಿ
ಶಾಲೆಯರ್ ಮುಕುರಕ । ಪೋಲೆಯರ್ ಪೊಗಳುತ ೧

ಸುರಗಿ ಸೇವಂತಿಗೆಯ । ಬಹುವಿಧ
ಪರಿಮಳ ಸಂಪಗೆಯ
ತರತರ ಸುಮಗಳ । ತರಿಸಿ ತರಿಸಿ ಸಮ
ಧರಿಸಿ ತಲೆಯ ಮೇಲೆ । ನೆರೆದ ಸೀರೆಯರೆಲ್ಲ ೨

ಕಸ್ತೂರಿ ಹಣೆಗೆ ಬೊಟ್ಟು । ನಾರಿಯರು ಸ
ಮಸ್ತರ ಹಣೆಯೊಳಿಟ್ಟು
[3]ಮತ್ತೊ ಮತ್ತವರಿಗೆ । ಮುತ್ತಿನಕ್ಷತೆ ಮುಖ
ಕಿತ್ತು ಸುಮಿತ್ರೆಯ । ರತ್ತಿತ್ತ ತಿರುಗುತ್ತ[3] ೩

1 ಸಭೆ ಮೆಚ್ಚಲಿಕೆಲ್ಲವನು 2 ಹೂವ ಬಿಚ್ಚಿಕೊಳ್ಳುತ್ತ ಬೇಗ
3 ಮತ್ತವರಿವರಿಗೆ ಮುತ್ತಿನಕ್ಷತೆಯಿಟ್ಟು ಅತ್ತಿತ್ತ ತಿರುಗುತ್ತ ಮಿತ್ರೆಯರೆಲ್ಲರು

ಶಂಖಚಕ್ರಾಂಕಿತನು । ಸಕಲ ಸುರ
ಸಂಕುಲ ಸೇವಿತನು
ಪಂಕಜನಯನ ಶು । ಭಂಕರ ವದನನ
ಕಿಂಕರೋದ್ಧರ ಶ್ರೀ । ವೆಂಕಟರಮಣನ ೪

## 47. ಹೂ ಹಚ್ಚುವದು—2 (ದಶಪದಿ—ಧವಳಾರ)

ಶಾರದಾಂಬೆಯ ಪಾದಕೆರಗುವೆನು । ಶ್ರೀಗುರುವಿನಂಘ್ರಿಗೂ
ನಾರಿ ನಾ ಸನ್ಮತಿಯ ಬೇಡುವೆನು ।
ಚಾರುತರದ ವಿವಾಹ ಮಂಟಪ
ದೋರಣದಿ ನೆರೆದಿರುವ ಸಭೆಯೊಳು
ನಾರಿ ಪುರುಷರು ಮುಖ-ಮುಖದಿ ಕ
ಸ್ತೂರಿ ಮಲ್ಲಿಗೆಂಪರಲ ಜನರಿಗೆ
ಹಚ್ಚಲು । ಸಭೆಯೊಳಗೆ ಸರ್ವರು
ಮೆಚ್ಚಲು । ಪರಿಮಳವು ನಾಸಿಕ
ಚುಚ್ಚಲು । ಸಂಭ್ರಮದಿ ಪುಷ್ಪವ ॥
ಭೂರಿಸಭೆಗೆಲ್ಲ—ಕೊಡಿಸ್ಯಾರು ೧

ದುಂಡುಮಲ್ಲಿಗೆ ಜಾಜಿ ಸಂಪಗೆಯು । ಮಂದಾರ ಕೇತಕಿ
ಕುಂಡಿಗೆಯ ಸುಮ ವೈಜಯಂತಿಯು ।
ಕೊಂಡು ಕೊಂಡು ಸುಮಂಗಲದಿ ಮುಂ
ಕೊಂಡು ಪನ್ನಗವೇಣಿಯರು ಮಿಗೆ
ತಂಡತಂಡದ ಕನಕ ರತ್ನದ
ಗೊಂಡೆಯದ ಪರಿವಣದಿ ಸುಮಗಳ
ಚೆಂಡಿರೆ । ಪರಿಮಳದಿ ಶೋಭಿಪ
ದುಂಡಿರೆ । ಭ್ರಮರಾಳಿ ಝೇಂಕೃತಿ
ಗೊಂಡಿರೆ । ವೈಭವದಿ ಸುಮಗಳ ॥
ಕೊಂಡು ಕೊಡಿಸಿದರು—ಸಭೆಗೆಲ್ಲ ೨

ಪಾರಿಜಾತದ ಮಾಲೆ ಮಾಲತಿಯು । ಏರವಂತಿಕೆಯು ಮಂ
ದಾರ ಸೇವಂತಿಗೆಯು ಸಂಪಗೆಯು ।
ಸಾರಸಾಯತದರಲು ಮೊದಲಹ
ಭೂರಿ ಪರಿಮಳ ಪುಷ್ಪನಿಕರವ
ತೋರಿ ತೋರಿ ಮಹಾನಭಗೆ ವಿ
ಸ್ತಾರದಲಿ ನಮಘರಿಸಿ ಸಂಭ್ರಮ ॥
ದೋರುತ । ಅಂಗನೆಯರೆಡೆಯಲಿ
ಸಾರುತ । ಮೃದುವಚನದಮೃತವ
ಬೀರುತ । ಅಲಂಕರದಿ ಬಳಿಕ ಪಿ ॥
ಚಾರಿಸುತ ಸುಮವ—ಕೊಡಿಸ್ಯಾರು ೩

ಗಂಧಕಸ್ತೂರಿ ಕುಂಕುಮಾಕ್ಷತೆಯು । ಕಮ್ಮೆಣ್ಣೆಗಳ ಮುದ
ದಿಂದ ಪೂಸಿದರೊಲಿದು ಬಗೆಬಗೆಯು ।
ಚಂದಚಂದದ ಪರಿಮಳಂಗಳ
ಮಂದಗಮನೆಯರೆಲ್ಲ ಕೊಡುತಲಿ
ವೃಂದದಲಿ ನಡೆತರುತ ಮಿಗೆ ಸಾ
ನಂದದಲಿ ಪನ್ನೀರ ಕಲಶವ
ತಂದರು । ಅಲ್ಲಲ್ಲಿ ಸಭೆಯಲಿ
ನಿಂದರು । ಕೋಕ್ಯಾದುತಲಿ ತಾವ್
ಬಂದರು । ಮತ್ತಲ್ಲಿ ಬಲು ಬೆಡ ॥
ಗಿಂದ ಸಭೆಯೊಳಗೆ—ಮೆರೆದರು ೪

ಉತ್ಸಹಂಗಳ ತೋರಿ ಸಂತಸದಿ । ಮಾಂಗಲ್ಯಕರದಿ ಸು
ವಿಸ್ತರದ ಬಹುವಾದ್ಯ ಸಂಭ್ರಮದಿ ।
ಹಸ್ತಕಡಗದ ಬಾಲೆಯರು ಪುರು
ಷೋತ್ತಮಪ್ರಿಯ ಪಂಚಲಿಂಗನ
ಚಿತ್ತದಲಿ ಭಾವಿಸುತ ಸುಮವ ಸ
ಮಸ್ತರಿಗೆ ಕೊಟ್ಟೊಲಿದು ಕೋಮಲ
ಗಾತ್ರದಿ । ಮಘಮಘಿಪ ಪರಿಮಳ
ಸೂತ್ರದಿ । ಶ್ರೀಹರಿಯ ಪೊಗಳಿ ವಿ
ಚಿತ್ರದಿ । ವೈವಾಹದಂದಿನ ॥
ವಿಸ್ತಾರವನೊಲಿದು—ಪೊಗಳ್ಯಾರು ೫

## 48. ಒಬ್ಬನಿಗೆ ಆರತಿ

ಪರ ನವರತ್ನ ಖಚಿತ ಮಂಟಪದಿ
ಸುರುಚಿರ ಕನಕ ಸುರುಚಿರಾಸನದಿ
ಪರ ಶಿವ ಗಿರಿಜಾಪರಿಣಯಕೋಸುಗ
ಪರಿತೋಷದಿ ಬಂದು ಭರದಿ ಕುಳ್ಳಿರಲಾ ॥
ತರುಣಿಯರಾರತಿಯಾ—ಬೆಳಗಿರೆ ೧

ಸರಸಿಜಭವಮುಖ ದಿವಿಜವಂದಿತಗೆ
ಮರುಳ ಪುರತ್ರಯ ಸಂಹರಿಸಿದಗೆ
ಕರುಣದಿ ಬಕುತರ ಪೊರೆವ ಮಹಾತ್ಮಗೆ
ಎರದಿ ಶಶಿಯ ಕಲೆ ಧರಿಸಿದ ದೇವಗೆ ॥
ಸರಸಿಜದಾರತಿಯಾ—ಬೆಳಗಿರೆ ೨

ದಕ್ಷನ ಯಜ್ಞ ವಿನಾಶಗೈದವಗೇ
ಅಕ್ಷಯ ಮಹಿಮಗೆ ಗೋಕ್ಷವಾಹನಗೆ
ರಕ್ಷೋಗಜ ಹರಿಯಕ್ಷ ಜಗತ್ರಯ
ಸಾಕ್ಷಿಪಿಭೂತ ಪರಾತ್ಪರ ರೂಪಗೆ ॥
ತ್ರ್ಯಕ್ಷನಿಗಾರತಿಯಾ—ಬೆಳಗಿರೆ ೩

ಪಂಚಬಾಣಗೆ ಪಂಚತ್ವ[1] ದಾಯಕಗೆ
ವಾಂಛಿತ ಫಲಗಳನೀವ ರೂಪನಿಗೆ
ಕಾಂಚನ ತುಂಡಿಲ ಶಿರವೊಂದನೆ ಕಿತ್ತು
ಪಂಚಾನನ ಸುಪ್ರಪಂಚ ಮೂರುತಿಗೆ ॥
ಕಾಂಚನದಾರತಿಯಾ—ಬೆಳಗಿರೆ ೪

ವೇದಾರಾಧಿತ ವರ ಶುಭಕರಗೆ
ಮಾಧವ ಸಖನಿಗೆ ವರದಗೆ ಶಿವಗೆ
ಸಾಧು ಸಜ್ಜನರನು ಪೊರೆವ ಶಂಕರನಿಗೆ
ಸಾದರದಲಿ ಸಲಹೆನ್ನುತ ಬಹಳ ವಿ ॥
ನೋದದೊಳಾರತಿಯಾ—ಬೆಳಗಿರೆ ೫

---

1 ಪಂಚಾತ್ಮ

ಉರಗಾಭರಣ ಧರಿಸಿ ಮೆರೆದವಗೆ
ಗರಳವ ಕಂಧರದೊಳು ಧರಿಸಿದಗೆ
ಕರಿಚರ್ಮಾಂಬರ ವರಭಸ್ಮಾಂಗಗೆ
ಶರಣಾಗತರನುದ್ಧರಿಸಿದ ದೇವಗೆ ॥
ಸುರುಚಿರದಾರತಿಯಾ—ಬೆಳಗಿರೆ ೬

ಅಘಸಂದೋಹ ವಿನಾಶ ಸೂತ್ರಸಿಗೆ[1]
ಅಗರು ಮುಖ್ಯಾತಿ ಸುಗಂಧ ಗಾತ್ರಸಿಗೆ
ನಿಗಮಾಗಮ ವೇದ್ಯಾದಿ ಕಾರಣಗೆ
ಜಗದೊಡೆಯಗೆ ಗಂಗೆಯ ಪೊತ್ತವಗೆ ॥
ಮೃಗಮದದಾರತಿಯಾ—ಬೆಳಗಿರೆ ೭

ಅನುದಿನ ಸಕಲ ಮುನೀಂದ್ರ ಸೇವಿತಗೆ
ಘನ ಸಚ್ಚಿನ್ಮಯಾನಂದ ಮೂರುತಿಗೆ
ಜನನ ಪಾಲನ ಸಂಹರ ಕಾರಣ ಪರ
ಘನ ಪುಳುಂಚೇಶ್ವರ ಜಯಜಯವೆನ್ನುತ ॥
ಮಣಿಮಯದಾರತಿಯಾ—ಬೆಳಗಿರೆ ೮

## 49. ಮಧುಪರ್ಕ ಕೊಟ್ಟಿದ್ದು

ಗುರು ಗಣಪತಿಯರ ಚರಣವ ನೆನೆದು
ವರ ಶಾರದೆಯ ಪೂಜಿಸಿ ಮನವೊಲಿದು
ಗಿರಿರಾಜನು ಮನದೊಳು ತಾ ನಲಿದು
ಪರಮ ಸಂಭ್ರಮದೊಳು ಮಧುಪರ್ಕವನು ॥
ಹರುಷದಲಿ ಗೈದನೊಲವಿಂದ[2] ೧

ಸುರದುಂದುಭಿಯು ಮೊಳಗುತಲಿರಲು
ಹರನತಿ ಸಂತೋಷಿಸಿ ಬರುತಿರಲು
ಗಿರಿರಾಜನು ಕಂಡತಿ ತೋಷದೊಳು
ಕರೆದೆದುರ್ಗೊಂಡು ಕೈಹಿಡಿದು ಕುಳ್ಳಿರಿಸಿಯೆ ॥
ಮಧುಪರ್ಕವನಂದು—ಗೈದನೆ[3] ೨

---
1 ಹವ ಹರಿವಿಂದ್ರಸೇವಿತಗೆ 2 ಗೈದರೊಲವಿಂದ 3 ಗೈದಾರೆ

ಸುರತರುಣಿಯರ ಶೋಭಾನದಲಿ
ವರ ತರುಣಿಯರ ಸಮ್ಮೇಳದಲಿ
ತರಳೆಯ ಶಿವನಿಗರ್ಪಿಸಬೇಕೆನುತಲಿ
ಹರಿವಾಣದಿ ಸಾಹಿತ್ಯವನಿರಿಸಿಯೆ ॥
ಮಧುಪರ್ಕವನಂದು—ಗೈದನೆ ೩

ಮೂರು ಕಣ್ಣೊಳು ಮೆರೆವವಗೆ
ಅಪಾರ ಮಹಿಮ ಶಂಕರ ಶಿವಗೆ
ನಾರಿ ಗಂಗೆಯ ಶಿರದೊಳು ಧರಿಸಿದಗೆ
ಜೀರಿಗೆ ಬೆಲ್ಲವನಿತ್ತಾತಿ ಹರುಷದಿ ॥
ನಾರುತ ಮಧುಪರ್ಕ—ಗೈದನೆ ೪

ಇಂದುವಮೌಳಿಗೆ ಚಂದ್ರಶೇಖರಗೆ
ಸುಂದರ ಮುಖದಿ ರಂಜಿಸುವವಗೆ
ನಂದಿಯನೇರಿದ ಜಂಗಮರೂಪಗೆ
ಸಿಂದತಿ ಹರುಷದಿ ವಸ್ತ್ರಾಭರಣದಿ ॥
ಚಂದದಿ ಮಧುಪರ್ಕ—ಗೈದರೆ ೫

ಕೇಶವ ಪ್ರೀತಗೆ ಕರುಣಾಕರಗೆ
ಸಾಸಿರ ನಾಮದಿ ತಾ ಮೆರೆವವಗೆ
ಈಶ ಮಹೇಶ ಸರ್ವೇಶನಾದವಗೆ
ಸೂಸುತ ಪುಷ್ಪಗಂಧಾಕ್ಷತೆಯಿಂದಲಿ ॥
ಈಶಗೆ ಮಧುಪರ್ಕ—ಗೈದರೆ ೬

ಶಿವನಿಗೆ ತಾ ಮಧುಪರ್ಕವ ಗೈದು
ಅವನೀಧರಪತಿ[1] ಮನದೊಳು ನಲಿದು
ಹವಣಿಸುತಲೆ ಭೂಪಾಲರಿಗೊಲಿದು
ವಹಿಸುತ ವಸ್ತ್ರಾಭರಣಗಳಿಂದಲೆ ॥
ವಿವರಿಸಿ ಮಧುಪರ್ಕ—ಗೈದರೆ ೭

1 ಅವನಿಪತಿಯು

ವಿಧಿಯುಕ್ತದಿ ತಾ ಮಧುಪರ್ಕವನು
ಅಧಿಕ ಸಂತೋಷಗಳಿಂದಲೆ ಗೈದು
ಪದಕೆರಗಿಯೆ ಸದಾಶಿವನಿಗೆ ಹರುಷದಿ
ಮುದದಿಂ ತನ್ನ ಮಗಳನೀಯುವೆನೆಂದು ॥
ಮಧುಪರ್ಕವನಂದು—ಗೈದರೆ ೮

ಈ ಪರಿಯಿಂದಲಿ ಮಧುಪರ್ಕವನು
ಭೂಪತಿ ಶಿವನಿಗರ್ಪಿತವೆಂದೆನಲು
ಜಯ್ಜಾ ಕಿಸುತಲೆ ಸುರರೆಲ್ಲರು ನಲಿದು
ಮೂಪ್ಪುರ ಮುಳುಗುವ ತೆರದಿ ಪೂಮಳೆಗಳ ॥
ಬಹುಪರಿಯಿಂದ—ಗೈದರೆ ೯

## 50. ನಿಶ್ಚಯ ತಾಂಬೂಲ (ವಾಗ್ದಾನ)

ಆಯಿತೆ ಮನ ನಿಶ್ಚಯ । ಅತ್ತೆಮ್ಮಗೆ
ತೋಂದ ಕೋಲಿಕೆಯ ಪ

ಒಪ್ಪಂಥ ವರನು ಆಗಿ । ಪ್ರಾಯದೊಳೊಳ
ಗಿಪ್ಪತ್ತು ವರುಷವಾಗಿ
ಅಚ್ಚ ಕೆಂಪಾದ ಮಗಗೆ ಕೊಡಬೇಕೆಂದು
ನಿಶ್ಚಯ ಮಾಡಿದ್ದು ನಿಮಗೆ ಸಂಪಣವಿಸಿತೆ ೧

ಊರ ಮುಂದಿನ ಗದ್ದೆಯು । ಸೇದುವ ಬಾವಿ
ಬಾಗಿಲ್ಮುಂದಣ ಕೆರೆಯು
ಮೇಲು ಮುತ್ತಿನ ಮಣಿ ಸಾಲು ತೆಂಗಿನ ತೋಟ
ಬಾಲನಿವಗಲ್ಲದಿನ್ನಾರಿಗೆ ಕೊಡುವಿರೆ ೨

ಬಂಧುಗಳೊಳಗಿವನು । ನೋಡಲು ಬಲು
ಸುಂದರನಾಗಿಹನು
ಇಂದು ವಧುವರರ ವೃಂದವು ಈಕ್ಷಿಸಿ
ಚಂದವೆನ್ನುವದು ಆನಂದದಿ ಮೆರೆವುದು ೩

ಪೆಟ್ಟಿಗೆ ಪಲ್ಲಕ್ಕಿಯು । ಅವರ ಮನೆ
ಪಟ್ಟೆಮಂಚದ ಕಂಬವು
ಒಪ್ಪವರಿಗಾದರಣೆಯು ಮಾಡುವ ಜನ
ಶಿಷ್ಟನಿವಗಲ್ಲದಿನ್ನಾರಿಗೆ ಕೊಡುವಿರೆ ೪

## 51. ವಸ್ತ್ರ ಉಡಿಸುವುದು (ವರನಿಗೆ)

ವಾರಿಜಾಂಬಕ ಕೃಷ್ಣಗೊಸನವನು । ಉಡಿಸಿದರ್ ಸಭೆಯಲಿ
ವಾರಿಜಾಂಬಕ ಕೃಷ್ಣಗೊಸನವನು ಪ

ಮುತ್ತು ಮಾಣಿಕ ಚಿತ್ರಚಿತ್ರದ
ಸುತ್ತುಕೆಲಸಗಳಿಂದ ಶೋಭಿಪ ॥
ಸ್ತುತ್ಯಸುವರ್ಣದ ಚಿತ್ರಮಂಟಪದಲ್ಲಿ ೧

ದೇವ ದೇವಗೆ ಪಾವನಾತ್ಮಗೆ
ದೇವಕೀಸುತ ಸರ್ವಶಕ್ತಗೆ ॥
ಸರ್ವರು ಕೊಡುತ್ತ ಪಟ್ಟೆಶಾಲುಗಳನು ೨

ಚಕ್ರಧರನಿಗೆ ಶಕ್ರವಂದ್ಯಗೆ
ಏಕಮೂರುತಿ ರತ್ನಸಾರಗೆ ॥
ಲೋಕವ ಕಾಯುವ ಶ್ರೀಕಾರ ಮೂರ್ತಿಗೆ ೩

## 52. ಮಂಗಲ ಕೇಳಿದ್ದು (ಹೆಣ್ಣಿನವರು)

ಬಟ್ಟಲ ಹಿಡಿದೆವು ಪಟ್ಟೆಯ ಕೊಡಬೇಕು
ಪುಟ್ಟ ತಂಗವನ ಕುರುಳಿಗೆ—ಒಪ್ಪುವ[1]
ಮುತ್ತಿನ ತೊಂಡಿಲವ—ಕೊಡಬೇಕು ೧

ಹರಿವಾಣ ಹಿಡಿದೆವು ಸಾಲಿಯು ಕೊಡಬೇಕು
ಬಾಲೆ ತಂಗವನ ಕುರುಳಿಗೆ—ಒಪ್ಪುವ
ಹೂವಿನ ತೊಂಡಿಲವ—ಕೊಡಬೇಕು ೨

---

1 ಒಪ್ಪುವಂಥ

ಕಬ್ಬಿಣದ ತಳಿಪಿಡಿದು ಮಧ್ಯರಾತ್ರಿ ಬಂದಿರಿ
ವಜ್ರಮಾಣಿಕದ ತೊಡಿಗೆ—ಬಂಗಾರವ
ತಂದಿದಿರ ನಮ್ಮ—ಮಗಳಿಗೆ ೩

ನೇತ್ರದ ತಳಿಪಿಡಿದು ರಾತ್ರಿಲಿ ಬಂದಿರಿ
ಜಾತಿ ಮಾಣಕದ ತೊಡಿಗೆಯ—ಬಂಗಾರವ
ತಂದಿದಿರೆ ನಮ್ಮ—ಮಗಳಿಗೆ ४

ಹಲಸಿನ ಕಾಯಷ್ಟು ಚಿನ್ನ ತರಿಸಿ ತೂಗಿ
ಅಕ್ಕಸಾಲಿಗನು ಗೈದಿದ್ದ—ಬಂಗಾರವ
ತಂದಿದಿರೆ ನಮ್ಮ—ಮಗಳಿಗೆ ೫

ಬಾಳೆಕಾಯಷ್ಟು ಚಿನ್ನ ತರಿಸಿ ತ್ರಾಸಿಲಿ ತೂಗಿ
ರಾಯಕ್ಕಸಾಲಿ ಗೈದಿದ್ದ—ಬಂಗಾರವ
ತಂದಿದಿರೆ ನಮ್ಮ—ಮಗಳಿಗೆ ೬

ತುಪ್ಪದ ದೀವಿಗೆ ಚಪ್ಪರಕೆ ಹೊಗೆಯೆಂದು
ಸಣ್ಣ ದೀವಿಗೆಯ ಬೆಳಕಿಲಿ—ಮಾಡಿಸಿದ
ಹೊನ್ನ ತಂದಿದಿರೆ—ಮಗಳಿಗೆ ೭

ಎಣ್ಣೆಯ ದೀವಿಗೆ ಕಣ್ಣಿಗೆ ಹೊಗೆಯೆಂದು
ಸಣ್ಣ ದೀವಿಗೆಯ ಬೆಳಕಿಲಿ—ಮಾಡಿಸಿದ
ನಾಣ್ಯ ತಂದಿದಿರೆ—ಮಗಳಿಗೆ ೮

ಒಪ್ಪಿಡಿರೆ ಒಪ್ಪಿಡಿರೆ ಪುತ್ರಿಗೆ ಬಂಗಾರವ
ಪತ್ತು ಸಾವಿರಕೂ ಮಿಗಿಲಾದ—ಕರಿಮಣಿಯ
ಒಪ್ಪಿಡಿರೆ ನಮ್ಮ—ಮಗಳಿಗೆ ೯

ತಂದಿಡಿರೆ ತಂದಿಡಿರೆ ಬಾಲೆಗೆ ಬಂಗಾರವ
ಆರು ಸಾವಿರಕೂ ಮಿಗಿಲಾದ—ಕಾಲುಂಗುರ
ತಂದಿಡಿರೆ ನಮ್ಮ—ಮಗಳಿಗೆ ೧೦

## 53. ಉಂಗಿಲುಡಿಕೆ[1] ತಂದದ್ದು (ತ್ರಿಪದಿ)

ಕಬ್ಬಿಣದ ತಳಿಹಿಡಿದು ದಿಬ್ಬಣ ನಾವ್ ಬಂದೆವು
ಮುತ್ತು ಮಾಣಿಕದ ತಳಿಗೆಯ—ತಂದೆವು
ಉತ್ತಮ ಬೀಯಗರ—ಮಗಳಿಗೆ ೧

ಕಾರಿನ ತಳಿಹಿಡಿದು ರಾತ್ರಿಲಿ ನಾವ್ ಬಂದೆವು
ನಿತ್ಯುಳ್ಳ ಬೀಯಗರ ಮಗಳಿಗೆ—ತಂದೆವು
ಹೂವು ಮಾಣಿಕದ—ತಳಿಗೆಯ ೨

ಶುಕ್ರವಾರದ ದಿವಸ ಸಾಗರದಂಗಡಿಯಲ್ಲಿ
ಅಪ್ಪಯ್ಯ ಹೋಗಿ ಬೆಲೆಮಾಡಿ—ತಂದನು
ಮಿತ್ರೆಯ ಸಣ್ಣ—ನಡುವಿಗೆ ೩

ಭಾನುವಾರದ ದಿವಸ ಸಾಗರದಂಗಡಿಯಲ್ಲಿ
ಅಪ್ಪಯ್ಯ ಹೋಗಿ ಬೆಲೆಮಾಡಿ—ತಂದನು
ನಾರಿಯ ಸಣ್ಣ—ನಡುವಿಗೆ ೪

ಪಟ್ಟೆಯ ನೇಯ್ವವನು ಚಂದಾಗಿ ನೇಯ್ದನು
ಚಂದದಿ ಹೊಲಿದ ಗಿಳಿರಾಮ—ತಂದ ಸೀರೆ
ಮಿತ್ರೆ ತಂಗವ್ವ—ಉಡಲೆಂದು ೫

ಸಾಲಿಯ ನೇಯ್ವವ ಅಂದಾಗಿ ನೇಯ್ದನು
ಅಂದದಿ ಹೊಲಿದ ಗಿಳಿರಾಮ—ತಂದ ಸೀರೆ
ಮಿತ್ರೆ ತಂಗವ್ವ—ಉಡಲೆಂದು ೬

ಪಟ್ಟೆಯ ಸೀರೆಯ ಪುಟ್ಟಗಳಿಗೆ ಮಾಡಿ
ಮಿತ್ರೆಯರು ನಾವು ಹರಸುತ್ತ—ತಂದೆವು
ಮಿತ್ರೆ ಬೀಗಿತಿಯ—ಬರಹೇಳಿ ೭

ಸಾಲಿಯ ಸೀರೆಯ ಸಾದು ಗಳಿಗೆ ಮಾಡಿ
ನಾರಿಯರು ನಾವು ಹರಸುತ್ತ—ತಂದೆವು
ನಾರಿ ಬೀಗಿತಿಯ—ಬರಹೇಳಿ ೮

---

1 ಉಂಗಿಲುಡಿಕೆ—ಧಾರೆಸೀರೆ (ಉಂಗಿಲು—ಉಂಗುರ. ಉಡಿಕೆ—ಉಡುಗೆ, ಸೀರೆ)

ಮಗ್ಗದ ಸೀರೆಯ ಸಣ್ಣಗಳಿಗೆ ಮಾಡಿ
ರಂಭೆಯರು ನಾವು ಹರಸುತ್ತ—ತಂದೆವು
ರಂಭೆ ಬೀಗಿತಿಯ—ಬರಹೇಳಿ ೯

## 54. ಚಿನ್ನ ಹರಿವಾಣದಲ್ಲಿ ಇಡುವುದು

ವಂದಿಸಿ ಸರಸ್ವತಿಯ । ಭಾವದಿ ಬಲ
ವಂದು ಶ್ರೀಗಣಪತಿಯ ॥
ಅಂದಚಂದದೊಳೆಸೆವ ನಿತ್ಯಾ
ನಂದ ಶ್ರೀಗೋವಿಂದ ಪರಮಾ
ನಂದ ದೇವಕಿ ಕಂದ ಹರುಷದಿ
ಇಂದುಮುಖಿ ರುಕ್ಮಿಣಿಗೆ ಚಿನ್ನವ ॥
ತಂದು ಕೊಡಿಸಿದನು—ಹರುಷದಿ ೧

ಓಲೆ ಮೂಗುತಿ ಬಂದಿಯ । ಕರ್ಣದೊಳಿಟ್ಟ
ಮೇಲೆ ಬುಗುಡಿ ಕುಚ್ಚಿಯ
ನೀಲ ಮೇಘಶ್ಯಾಮ ಲಕ್ಷ್ಮಿಗೆ
ಮೇಲು ಮೇಲಾಗಿರುವ ಕೊಪ್ಪು ಥ
ಡಾಳಿಸುವ ಸರಪಣಿ ಸುವರ್ಣದೊ
ಳಾಳುತಿರೆ ಇಂತಾಭರಣಗಳ ॥
ನೀಲ ಕುಂತಳೆಗೆ—ತೊಡಿಸಿದ ೨

ರತ್ನದ ಅರಳೆಲೆಯು । ಚಿನ್ನದ ಲಿಪಿ
ಚಿತ್ರದ ಕೇದಗೆಯು ॥
ಮುತ್ತು ಮುಂವಲೆಬೊಟ್ಟು ಮಲಕು ವಿ
ಚಿತ್ರ ಕಾಯಿಸ್ತ್ರಾಳಿ । ಉರುಕಿನ
ಪತ್ತಿಗೆಯು ನಾನಾ ಸರಂಗಳ
ಚಿತ್ತಜನ ಪಿತ ಹರುಷದಿಂದಲಿ ॥
ಮತ್ತಕಾಶಿನಿಗೆ—ಕೊಡಿಸಿದ ೩

ತಳತಳಿಸುವ ರಶ್ಮಿಯ । ಚಿಂತಾಕು ಮೇ
ಲ್ಪೊಳೆವ ಶಾಕಟಿ ಚೌಲಿಯ ॥

ತಲೆಗೆ ಮಲ್ಲಿಗೆಯರಲು ಜಡೆಗಂ
ದುಲಿವ ಜಡೆಗೊಂಡೆಗಳು ಮೇಲೆಡ
ಸಲುವ ಕೇದಗೆ ಮಲಕು ತಿರುಪಿನ
ಚೆಲುವ ಪುಷ್ಪವ ಹರುಷದಿಂದಲಿ ॥
ಲಲನೆಗೆಂದೆನುತ—ಕೊಡಿಸಿದ ೪

ವಂಕಿ ಮುಂತಾದುವನ್ನು । ಮೇಲೆನೆದಿಹ
ಶಂಕರ ಪ್ರೀತ ತಾನು ॥
ಕಂಕಣವು ದೋರೆಗಳು ಚಳಕಿಸು
ವಂತ ಹವಳದ ಕಟ್ಟು ಹಿಂಬಳೆ
ಪಂಕಜಾನನೆ ಮಾರಜನನಿಗೆ
ಶಂಕರನ ಸುಪ್ರೀತ ಹರುಷದಿ ॥
ಶಂಕೆಯಿಲ್ಲದೆಯೆ—ಒಲಿದಿತ್ತ ೫

ಪನ್ನಂಗಶಯನ ತಾನು । ತನ್ನಯ ಮೋಹ
ಕನ್ನೆಗೆಂದೆನುತವನು ॥
ಚಿನ್ನದುಂಗುರ ಡಾಬು ಸರಪಣಿ
ಯನ್ನು ತೇಜೋಮಯನು ತನ್ನಯ
ಕನ್ನೆ ರುಕ್ಮಿಣಿಗೆಂದೆನುತ ಸ್ಮರ
ಸನ್ನಿಭನು ತಾ ಹರುಷದಿಂದಲಿ ॥
ಮನ್ನಿಸಿ ಕೊಟ್ಟ—ಮಡದಿಗೆ ೬

ಕಾಲಿಗೆ ಪಾಡಗವು । ಗೆಜ್ಜೆಯು ಹೊನ್ನ
ಮಾಲೆ ರತ್ನಾವಳಿಯು ॥
ನೀಲ ಮಾಣಿಕ ಮುತ್ತುರತ್ನ ವಿ
ಶಾಲ ಗೋಮೇದಿಕ ಪ್ರವಾಳವ
ಖೂಳಹರ ಕಿದೆಊರ[1] ವಾಸನ
ಮೇಳದವ ಸಂತೋಷದಿಂದಲಿ ॥
ಬಾಲೆಗೆಂದೆನುತ—ಒಲಿದಿತ್ತ ೭

1 ಕಿದೆಊರು—ಕಾಸರಗೋಡು ತಾಲೂಕಿನ ಕಿದೂರು ಎಂಬ ಸ್ಥಳ. ಕಿದಊರು ಎಂತಲೂ ಹೆಸರು. ಇಲ್ಲಿನ ದೇವರು ಮಹಾಲಿಂಗೇಶ್ವರ. ಕಿದೆವೂರ ವಾಸನ ಮೇಳದವ—ಕೃಷ್ಣ.

## 55. ತಿಲಕವಿಡುವುದು

ಶ್ರೀಗುರುವರನಡಿ ಮೆಲ್ಲಡಿಯ
ಬಾಗಿ ವಂದಿಸಿ ಗಣಪತಿಯ
ವಾಗೀಶ್ವರಿ ಸರಸತಿಯರ ಪದವ
ಈಗಲೆ ಬೇಡುವೆ ಕೃತಿಯಲಿ ಮೆರೆವ
ಸಾಗರ ಕನ್ಯೆಗೆ[1] ತಿಲಕವ ರಚಿಸಿದ ॥
ಆಗಮವ ಪೇಳಿ—ಪೊಗಳುವೆ ೧

ಬಟ್ಟಕುಚದ ಕನ್ನೆಯರು
ಒಟ್ಟಾಗಿ ಕೂಡುತಲವರು
ಸೃಷ್ಟಿಸುತೆಯ[1] ಕರೆತಂದು ನಾರಿಯರು
ತಟ್ಟನೆ ಮೆಲ್ಲಾಸನ ಬಳಿಗವರು
ಪುಟ್ಟಿ ಮಹಾಲಕ್ಷ್ಮಿಗೆ ಬೊಟ್ಟನಿಕ್ಕಿದ ಪಟ ॥
ಯೆಷ್ಟೆಂದು ಪೇಳಲಳವಲ್ಲ ೨

ಸುಂದರಾಂಗಿಯರೆಲ್ಲ ಕೂಡಿ
ಚಂದದ ಕುಂಕುಮ ತೀಡಿ
ಇಂದಿದು ಸರಿಯಾಯ್ತೆಂದತಿ ಬೇಗ
ಒಂದಾಗುತ ತಾವೆಲ್ಲವರಾಗ
ಕುಂದದೆ ಶೋಭನ ಪಾಡುತಲಿರ್ದರು ॥
ನಂದಿಕೇಶ್ವರನ—ಭಗಿನಿಗೆ[2] ೩

## 56. ಮಂಗಲ ಸೀರೆ ಉಡಿಸುವುದು

ಮಂಗಲವಸ್ತ್ರವನುಡು ಮಗಳೆ । ನೀ
ರಂಗನರ್ಧಾಂಗಿಯಾಗುವೆ ಮಗಳೇ ಪ

---

1 ಲಕ್ಷ್ಮಿ, ಸೀತೆ—ಇಬ್ಬರನ್ನು ಒಂದೆಯಾಗಿ ಪರಿಗಣಿಸಲಾಗಿದೆ. ಹಾಗೆಯೇ ಶ್ರೀಮನ್ ನಾರಾಯಣನೂ ಕೃಷ್ಣನೂ ಒಂದೇ ಎಂದು ಹಾಡುಗಳಲ್ಲಿ ಪರಿಗಣಿಸಿದೆ. 2 ಲಕ್ಷ್ಮಿಯು ಶಿವನ ತಂಗಿ ಹಾಗೆಯೇ ಪಾರ್ವತಿಯು ಕೃಷ್ಣನ (ವಿಷ್ಣುವಿನ) ಸೋದರಿ.

ರಂಗುರಂಗಿನ ಹೊಸ ಹೊಸ ವಸನಗಳು
ಚಂದವಾಗಿಹ ಜರತಾರಿಗಳು
ತುಂಬಿದ ಸಭೆಯೊಳು ಹರಿಯನು ವರಿಸಲು
ಶುಭದ ವಸ್ತ್ರವ ನೀ ಉಡು ಮಗಳೆ ೧

ಹೊಸವಸನಂಗಳು ಎಸೆಯುತಲಿಹವು
ಹಸಿರು ಪೀತಾಂಬರ ಶೋಭಿಪುದು
ನಸುನಗೆಯಿಂದಲಿ ಹಸನ ಮುಖದೊಳು
ಕುಶಲದಿಂದಲಿ ನೀ ಉಡು ಮಗಳೆ ೨

ಪಟ್ಟೆ ಪೀತಾಂಬರ ಮಿನುಗುತಲಿಹುದು
ಸುತ್ತಲು ಜರಿ ಚೌಕಟ್ಟಿಹುದು
ಮಿತ್ರೆಯರೆಲ್ಲರು ವಿಸ್ತರದಿಂದಲಿ
ಮತ್ತೆ ಕರೆಯುವರು ಬಾ ಮಗಳೆ ೩

## 57. ಚಿನ್ನ ತೊಡಿಸಿದ್ದು (ವಧುವಿಗೆ)

ಚಿನ್ನವ ತೊಡಿಸಿದರಬಲೆಯರು
ಮನ್ಮಥ ವೈರಿಯ ಸತಿಗೊಲಿದು ಪ

ಹಸಿರು ಕುಪ್ಪಸವನ್ನು ತೊಡಿಸುತಲಿ
ಎಸೆದು ರಂಜಿಸುತಿಹ ನೊಸಲಿನಲಿ
ಮಿಸುಪ ಕುಂಕುಮ ಬೊಟ್ಟಿನೆಸಕದ ಬಾಲೆಗೆ
ಪೊಸ ವಜ್ರದೋಲೆಯ ಸಾರ್ಚಿದರು ೧

ಬಾವುಲಿ ಮಾಗಾಯರಳೆಲೆಯ
ಭಾವದೊಳೊಪ್ಪುವೇಕಾವಳಿಯ
ಶ್ರೀವರನರಸಿಯು ನಸುನಗುತಲಿ ಮಹಾ
ದೇವಿಗೆ ಪಾಡಗವಿರಿಸಿದಳು ೨

ಕಂಕಣ ಕಾಜು ಹಿಂಬಳೆಗಳನು
ವಂಕಿ ಕಡಗ ಎಡಬಳೆಗಳನು
ಅಂಕಿತಮುಂಗುರ ದೋರೆ ಚೆಳಕಿಗಳ
ಪಂಕಜನೇತ್ರೆಗೆ ತೊಡಿಸಿದರು ೩

ವರ ಕಟ್ಟಾಣಿಯ ಸರಗಳನು
ಮೆರೆವ ಪುತ್ತಳಿ ಮಾಲೆ ಪದಕವನು
ವರ ಮುಂಡು ಮಣಿಸರ ಗೆಜ್ಜೆ ಟಿಕ್ಕಿಗಳನು
ಗಿರಿಜೆಯ ಕಂಠದೊಳಿರಿಸಿದರು ೪

ತಳತಳ ತಳಿಸುವ ಬಂದಿಯನು
ಪೊಳೆಯುವ ಹವಳದ ಮಾಲೆಯನು
ಪಿಳುಕು ಪಳುಕು ಸಮ್ಮಿಳಿತದಿ ರಂಜಿಸಿ
ಹೊಳೆವ ಕಾಶಿಸ್ತ್ರಳಿ ತೊಡಿಸಿದರು ೫

ಸ್ವರ್ಣಕೇದಗೆ ಜಡೆಗೊಂಡೆಯನು
ರತ್ನಮಾಣಿಕ ರಾಕುಟಿಗಳನು
ಹುಣ್ಣಿವೆ ಚಂದ್ರನಂದದಿ ತಳತಳಿಸುವ
ಚಿನ್ನದ ಕಮಲವ ಮುಡಿಸಿದರು ೬

ಸರ್ವಾಭರಣ ಶೋಭಿತಗಳನು
ತಿರುಪಿನ ಸುಮ ಮುಂತಾದುವನು
ಶರ್ವಾಣಿಯ ಸರ್ವಾಂಗಕೆ ವಿಭವದಿ
ಸರ್ವಾಭರಣವನಿರಿಸಿದರು ೭

ವರ ಪಂಚಲಿಂಗನ ಸತಿಯೆನಿಸಿ
ಶರಣರಿಷ್ಟಾರ್ಥಂಗಳ ಸಲಿಸಿ
ಸುರರಿಪುಗಳ ಸಂಹರಿಸಿದ ದೇವಿಯ
ಸಿರಿದೇವಿಯು ಶೃಂಗರಿಸಿದಳು ೮

## 58. ತಲೆ ಬಾಚುವುದು

ಗುರು ಗಣೇಶರಡಿಗೆ ಎನ್ನ ಶಿರವ ಬಾಗುವೆ
ಸಿರಿಯ ಮುಡಿಯ ಕಟ್ಟಿದ ಪರಿಯ ಪಿರಿದು ಪೊಗಳುವೆ ಪ

ಶರಧಿಸುತೆಯ ಕರೆದು ತಂದು ಹರುಷದಿಂದಲಿ
ಸುರರ ಸತಿಯರೆಲ್ಲ ನೆರೆದು ಭರದಿ ಪಾಡುತ ೧

ಮೆರೆವ ರನ್ನದಿಂದ ಗೈದ ವರ ಬಾಚಣಿಗೆಯ
ಕರದಿ ಪಿಡಿದು ಬಾಚಿದರು ಶರಧಿ ತನುಜೆಯ ೨

ಸುರಪನರಸಿ ಬಂದು ಕುಳಿತು ಕುರುಳ ಪಿಡಿಯುತ
ಮೆರೆಯುವೆಣ್ಣೆಗಂಟನಿಡಲು ಅಗ್ನಿಸತಿಯು ತಾ ೩

ಭರದಿ ಶಚಿಯು ತುರುಬ ಕಟ್ಟಲರಿಯಳೆನ್ನುತ
ಜರೆಯುತಾಗಲೊಂದು ವಿಧದಿ ತುರುಬ ಕಟ್ಟುತ ೪

ಯಮನ ಸತಿಯು ಬಂದು ಕುಳಿತು ಕ್ರಮವಲ್ಲೆನ್ನುತ
ಸಮವ ಗೈವೆನೆಂದದೊಂದು ಕ್ರಮದಿ ಕಟ್ಟುತ ೫

ಸರಿಯಲ್ಲೆಂದು ನಿಋಋುತಿಯ ರಮಣಿ ಕಟ್ಟಲು
ವರುಣನರಸಿ ನೋಡಿ ಭರದಿ ಸರಿಯ ಗೈಯಲು ೬

ಚಂದವಾಗಲಿಲ್ಲವೆಂದು ಗಂಧವಹ ಸತಿ
ಬಂದು ಕಟ್ಟೆ ಧನದನರಸಿ ಬಂದು ಕೋಪಿಸಿ ೭

ಕುರುಳ ಕಟ್ಟುತಿರಲು ಈಶನರಸಿ ಕಂಡಳು
ಸರಿಯಿದಲ್ಲವೆಂದು ಜಡೆಯ ಹಾಕಿ ಕಟ್ಟಲು ೮

ಚಂದವಾದುದೆಂದರೆಲ್ಲ ತಮ್ಮ ತಮ್ಮೊಳು
ಇಂದುಮುಖಿಯಿಂದೀವರಾಕ್ಷಿ ಲಕ್ಷ್ಮಿ ಮೆರೆದಳು ೯

## 59. ಮುಡಿ ಕಟ್ಟುವುದು

ಶ್ರೀಗುರು ಗಣಪರಂಘ್ರಿಯನು
ಆಗಮೋಕ್ತದಿ ಪೂಜೆಯನು ॥
ನಾ ಗೈಯುತ ಬ್ರಹ್ಮಾಣಿಗೆ ಮಣಿದು
ಶ್ರೀ ಗಿರಿಜೆಯ ವೈವಾಹದೊಳೊಲಿದು
ನಾಗವೇಣಿಯ ಸಿರಿಮುಡಿಯಲಂಕರಿಸಿದ ॥
ಆಗಮವ ಪೇಳಿ—ಪೊಗಳುವೆ ೧

ಪರ್ವತೇಶನ ಸುತೆಯನ್ನು
ಶರ್ವನಿಗೀವುದೆಂದವನು ॥
ಸರ್ವ ಬಂಧುಗಳನು ಬರಿಸಿ ಪಟ್ಟಣವ
ಸರ್ವ ಶೃಂಗರಿಸುತ ಸುರಸಂಕುಲವ
ಗರ್ವರಹಿತ ಬರಮಾಡಿಸುತಿರಲಾ ॥
ಸರ್ವೇಶ ಸರ್ವ—ರೊಡಗೂಡಿ ೨

ಕನ್ನಿಕಾಮಣಿಯಾಗಿ ಮೆರೆವ
ನಿನ್ನ ಮಗಳನು ಶೃಂಗರವ ॥
ಚೆನ್ನಾಗಿಯೆ ದಿಬ್ಬಣ ಬರುವುದಕೆ
ಮುನ್ನವೆ ಗೈಸಿ ಕುಳ್ಳಿರಿಸಬೇಕದಕೆ
ಇನ್ನಾದರು ಮೋಹನ್ನೆಯ ಸಿರಿಮುಡಿ ॥
ಯನ್ನು ನೇವರಿಸು—ಲಲಿತಾಂಗಿ ೩

ಕಲ್ಯಾಣಕ್ಕೈತಂದ ಜನಕೆ
ಬೆಲ್ಲನೀರನು ಕೊಡುವುದಕೆ ॥
ಇಲ್ಲ ಒಳಗೆ ತೆಗೆದೀಯಲು ಜನರು
ನಿಲ್ಲದೆ ಎಲೆ ಅಡಕೆಯ ಕೇಳುವರು
ಎಲ್ಲ ಕೆಲಸ ತನಗಾಗಿದೆ ಪೇಳಲೆ ॥
ಫುಲ್ಲಲೋಚನೆಯ—ಮುದದಿಂದ ೪

ನಿರುಪಮಾಲಂಕಾರಗೈದು
ಹರುಷದಿ ಕುಳ್ಳಿರಿಸುವದು ॥

ವರ ಗೃಹದೇವರ ಮುಂದೆ ಮಗಳನು
ಸಿರುತದಿಂದೆಸೆ ಕಾಂತನ ಭಗಿನಿಯರು
ಕರೆತಂದಳು ದೈನ್ಯದ ಮಾತೊಂದೆದೆ ||
ಒರೆಪೆನು ನಾದಿನಿಯೆ—ವಿಭವದಿ ೫

ತರಳೆಯ ತುರುಬ ಸೇವರಿಸಿ
ಸರಿಗೈದು ನೀವಲಂಕರಿಸಿ ||
ಕರುಣದೊಳೆನಲು ಹಸಾದವೆಂದೆನುತ
ವರ ಕಮ್ಮೆಣ್ಣೆಯದೆಲ್ಲಿ ತೋರೆನುತ
ತರಿಸಿ ಸೊಸೆಯ ಕುಳ್ಳಿರಿಸುತ್ತಬಲೆಯರ್ ||
ವೆರಸಿ ಸಿರಿಮುಡಿಯ—ಬಿಡಿಸುತ್ತ ೬

ಕಸ್ತೂರಿ ಕಮ್ಮೆಣ್ಣೆ ತೈಲ
ಒತ್ತುತ ಸಿರಿಮುಡಿಗೆಲ್ಲ ||
ಮುತ್ತು ಮಾಣಿಕ ಪಪಿ ವೈಡೂರಿಯದಿ
ರತ್ನಕೃತೋತ್ತಮ ಹಣಿಗೆಯ ಮುಖದಿ
ಹಸ್ತದಿ ಪಿಡಿದು ಬಗತ್ತಲೆ ಸಮಗೈ ||
ಯುತ್ತ ನೊಂಪಿಸುತ—ಕುರುಳನು ೭

ಶೃಂಗರಿಸುತ ಸಿರಿಮುಡಿಯ
ಚಂದದಿಂದಲಿ ತನ್ನ ಸೊಸೆಯ ||
ಮುಂದಿಹ ನಾದಿನಿಯರ ಕೇಳಿದಳು
ಅಂದವನರುಹುವದೆನಗಿಂದಿನೊಳು
ನಂದನೆಯಳ ಸಿರಿಮುಡಿಯ ಕಟ್ಟುವ ಕ್ರಮ ||
ಎಂದೆನಲುಸುರಿದರು—ಚೆಲುವೆಯರು ೮

ಸೆಳೆಗಂಟಿಕ್ಕಲು ಸೊಬಗೆನುತ
ತಿಳುಹಿದಳೊರ್ವಳು ನಗುತ ||
ಚೆಲುವೆ ಹಾಗಲ್ಲ ಕಲ್ಯಾಣದ ಕಟ್ಟು
ತಿಳುಹಲಿಲ್ಲವಳಿಗೆ ಕೇಳ್ ಕಿವಿಗೊಟ್ಟು
ಹೊಳೆವಡಾ ಮುಡಿಗೆ ಸಮಾನವಿನ್ನೊಂದರ ||
ತಿಳುಹೆನು ಹಿತ ಬೇರೆ—ವಧುವಿನ ೯

ಸುಳಿಗುರುಳನೆ ಸಜ್ಜಿಗೈದು
ಎಳೆಯೆಳೆ ಮಾಡುತ್ತ ನೆಯಿದು ॥
ಚೆಲುವ ಜಡೆಗೆ ಜಡಗೊಂಡೆಯನಿರಿಸಿ
ಸಳಸಳಿಸಿರಿ ಸೀವೆಲ್ಲರು ವೆರಸಿ
ತಳುವದೆಯೆನಲದಕಳವಡುತಲೆ ಕಳ ॥
ಕಳವ ಚೆನ್ನಗಳ—ತರಿಸುತ್ತ ೧೦

ಚೆಂಪ ಬೀಜದ ಗಂಟು ಮುಡಿಗೆ
ಚೆಂದ ಕಾಣಲು ಬೇರೆ ತನಗೆ ॥
ಇಂದಿರಲೀ ಪರಿ ನಾರಿಯರೆಲ್ಲ
ಒಂದು ಗಳಿಗೆ ಸನ್ಮಾನಿಸುತಿರಲಾ
ಚೆಂದದಿ ನಡೆಸಬೇಕೆನುತಲೆ ವಾದಿಸ ॥
ಲಿಂದೀಸು ಫಲವು—ತಡವಿಲ್ಲ ೧೧

ಮುಂದಲೆ ಬೊಟ್ಟನು ತೊಡಿಸಿ
ಮುಂದಡ್ಡ ಕೇದಗೆ ಮುಡಿಸಿ ॥
ಓಂದೆ ರಾಕುಟಿ ಚೌಲಿಯು ಜಡೆಗೊಂಡೆ
ಅಂದ ಮಿಸುಪ ಮಲ್ಲಿಗೆ ಮುಗುಳ್ ದಂಡೆ
ಅಂದೆಡಬಲದಿ ಸುವರ್ಣ ಕೇತಕಿಯನ್ನು ॥
ಬಂಧಿಸಿದರಂದು—ಜಡೆಯಲ್ಲಿ ೧೨

ಭಾವಜ ಸತಿರೂಪೆಗೊಲಿದು
ಭಾವಕಿಯರು ತೋಷವಡೆದು ॥
ತಾವರೆಯರಲು ಮಂದಾರ ಮಾಲೆಗಳ
ಸೇವಂತಿಗೆ ಮೊದಲಾದ ಸುಮಗಳ
ಠೀವಿಯಿಂ ಮುಡಿಸುತ ಕರದಿ ರಚಿತ ಪೂ ॥
ಮಾಲಾವಳಿಯ ಕಂಠ—ಕಿರಿಸುತ್ತ ೧೩

ಇಂತಲಂಕರಿಸೆ ನಾರಿಯನು
ಕಾಂತೆ ಪಾರ್ವತಿಯಧರವನು ॥
ಅಂತರಿಕ್ಷದಿ ಪೊಗಳುತ್ತಿರಲಾಗ
ಸಂತಸ ಸಿಂಹಾಸನ ಮಣೆಯೊಳಾಗಾ
ಮುಂತೆ ಕುಳ್ಳಿರಿಸುತ ಕುಲದೇವರ ಮಿಗೆ
ಎಂತಾದರು ನಮ್ಮೊಳ್—ತರವಲ್ಲ ೧೪

ತಾಮ್ರಚೂಡನ ಪುರ[1]ದೊಳಗೆ
ಸಾಮ್ರಾಜ್ಯವಾಳ್ವ ಶಂಕರಗೆ ॥
ಸುಮ್ಮಾನದಿಂದ ಸುಪತ್ನಿಯರೆಲ್ಲ
ಒಮ್ಮನದಿಂದಕ್ಷತೆಗಳ ಕೊಡುತ
ಹೆಮ್ಮಕ್ಕಳು ಸುಮ್ಮಾನಿಸಿದರೆ ಸ್ತ್ರೀ ॥
ಧರ್ಮರೂಪಿಣಿಯೇ—ದಯಮಾಡು ೧೫

## 60. ಹೂ ಮುಡಿಸುವದು (ಮದುಮಗಳಿಗೆ)

ಗಜವದನನ ಪಾದವ ನೆನೆದು
ದ್ವಿಜ ಗುರುಗಳ ವರಗಳ ಪಡೆದು
ತ್ರಿಜಗದೊಡತಿ ಸರ್ವೇಶ್ವರಿ ಮುಡಿಗತಿ
ಭಜಕ ಜನರು ತಾವ್ ಕುಜನಕುಠಾರಿಗೆ ॥
ರಜತದ ಸುಮವ—ಮುಡಿಸ್ಯಾರು ೧

ಸಲ್ಲೆಯರಾಗಲೆ ಕೂಡುತಲಿ
ನಿಲ್ಲದೆ ಕರೆಯುತ ಬೇಗದಲಿ
ಸಲ್ಲಲಿತದ ಸುಮರಥಿಲ್ಲಿಯನಾಗಳಿ
ಫುಲ್ಲನಯನೆಯರು ಮಲ್ಲಿಗೆ ಕುಸುಮವ ॥
ನಿಲ್ಲದೆ ಮುಡಿಸಿದರು—ನಲವಿಂದ ೨

ವೃತ್ತಕುಚೆಯರು ಶೋಭಾನದಲಿ
ಸತ್ಯ ಸುಮಂಗಲವಾದ್ಯದಲಿ
ಚಿತ್ತಜ ವೈರಿಯ ಪತ್ನಿಗೆ ಸಾಂಗದಿ
ಮತ್ತೆ ಕೇತಕಿಸುಮ ಭಕ್ತಿಯೊಳಾಗಲೆ ॥
ಮುಕ್ತಿದಾಯಕಿಗೆ—ಮುಡಿಸ್ಯಾರು ೩

ಇಂಪಾಗಿಹ ಗಾನಗಳಿಂದ
ಚಂಪಕ ಪುಷ್ಪದ ಗುಣದಿಂದ
ಸೊಂಪುಗಳಿಂದ । ಕಂಪುಗಳಿಂದ
ಪೆಂಪಿನೊಳ್ ಮೆರೆಯುವ ಸಂಪಗೆಂಯಲರನು ॥
ಅಂಪಿತ ಗುಣದಿ—ಮುಡಿಸ್ಯಾರು ೪

1 ತಾಮ್ರಚೂಡನ ಪುರ—ಕೋಳಿಯೂರು (ಕಾಸರಗೋಡು ತಾಲೂಕಿನಲ್ಲಿದೆ)

ಚೆಂದನಗಂಧೇಭ ಗಮನೆಯರು
ಸುಂದರ ಸುಮಗಳ ತಂದವರು
ಕುಂದದೆ ಬೇಗ । ಚೆಂದದೊಳಾಗ
ಮುಂದಕೆ ಪೊರೆಯುವ ನಂದಿಕೇಶ ಸತಿ ॥
ಯೆಂದು ತಾವಾಗ—ಮುಡಿಸ್ಯಾರು ೨೫

## 61. ವಧು ಮಂಟಪಕ್ಕೆ ಬಂದದ್ದು

ಬಂದಳು ರತಿಯು ಚೆಂದದಿ ನಲಿಯುತ
ಮನ್ಮಥನಿರುವಾ ಮಂಟಪಕೆ
ಮನ್ಮಥನಿರುವಾ ಮಂಟಪಕೆ ಪ

ಮಂಗಳವಾದ್ಯವು ಘೋರಿಡುತಿರಲು
ಅಂಗನೆಯವರು ಪಾಡುತಿರೆ[1] ಅ ಪ

ಕೊರಲೊಳು ಮುತ್ತಿನ ಹಾರ ಪದಕವು
ತಳತಳಿಸುತ ಅಲೆದಾಡುತಲಿ
ನಳಿನ ನಯನೆಯರು ಗೀತವ ಹಾಡಲು
ಬಂದಳೆ ರತಿಯು ಮಂಟಪಕೆ ೧

ಮಂಗಲ ವಸ್ತ್ರವ ನೆರಿವಿಡಿದುಟ್ಟು
ತೊಂಡಿಲ ಜೂಳ್ಯಗಳಲೆಯುತಿರೆ
ಕರದೊಳು ಮಲ್ಲಿಗೆ[2] ಮಾಲೆಯ ಪಿಡಿದು
ಬಂದಳೆ ರತಿಯು ನಲಿಯುತಲಿ ೨

ಕರದಲಿ ಪಿಡಿದಿಹ ಮಲ್ಲಿಗೆ ಮಾಲೆಯು[3]
ತಳತಳಿಸುತ್ತ ಹೊಳೆಯುತಿರೆ
[4]ಅಂಗನೆಯರು ಸನ್ಮಂಗಲ ಹಾಡಲು
ಬಂದಳೆ ರತಿಯು ಸಂಭ್ರಮದಿ[4] ೩

---

1 ಸುಂದರ ಸ್ತ್ರೀಯರು ಸೇರುತಲಿ 2 ಪುಷ್ಪದ 3 ಕರದೊಳು ಹೂವಿನ ಮಾಲೆಯ ಪಿಡಿದು
4 ಮೊಳಗುತಲಿರಲು ಮಂಗಳ ವಾದ್ಯವು ನಳಿನಾಂಬಕಿಯರು ಹಾಡುತಲಿ

ಕಮಲ ಭೂಪನ ಸುತೆ ಬಂದಳು ಬೇಗ
ಸೋದರ ಮಾವನ ಜೊತೆಯಲ್ಲಿ
ವೈದಿಕರಾಗ ಸುಮುಹೂರ್ತ ಸಾವಧಾನ
ವೇದೋಚ್ಚಾರವ ಮಾಡುತಿರೆ ೪

ಹರುಷದಿ ರತಿಯು ಬಂದಳೆ ಬೇಗ
ಬಿರಿಮಲ್ಲಿಗೆ ಸರ ಪಿಡಿಯುತಲಿ
ಪರಿಪರಿ ನಲಿಯುತ ಮಾಲೆಯ ಪಿಡಿದು
ಸರಸಿಜಾಕ್ಷಿ ಕಡುನಾಚುತಲಿ ೫

ಭೂಸುರರೆಲ್ಲ ವೇದವ ಪಠಿಸಲು
ಭಾಸುರ ಮಂಟಪ ಮಧ್ಯದಲಿ
ಭೂಸುರರೆಲ್ಲರು ಕೂಡಿದ ಸಭೆಯೊಳು
ಬಂದಳೆ ರತಿಯು ಹರುಷದಲಿ ೬

## 62. ತೆರೆ ಹಿಡಿದದ್ದು

ಪಟ್ಟೆಯ ತೆರೆಗಳ ಮತ್ತೆಲ್ಲಿ ಓಡಿಯಲಿ[1]
ಪುತ್ರ ತಂಗವನ[2] ಮದುವೆ ಮಂಟಪದಲ್ಲಿ[3]
ಪಟ್ಟೆಯ ತೆರೆಯು—ಹಿಡಿದರು[4] ೧

ಸಾಲಿಯ ತೆರೆಗಳ ಈಗೆಲ್ಲಿ ಓಡಿಯಲಿ
ನಾರಿ ತಂಗವನ ಮದುವೆಯು—ಮಂಟಪದೊಳಗೆ
ಸಾಲಿಯ ತೆರೆಯು—ಓಡಿದರು ೨

ಪಟ್ಟೆಯ ತೆರೆಗಳ ಮತ್ತಾರು ಹಿಡಿದರು
ಬಿಟ್ಟರೊ ತಂಗವನ ಓರಿಯು—ಸೋದರ ಭಾವ
ಪಟ್ಟೆಯ ತೆರೆಯು—ಹಿಡಿದನು ೩

1 ಓಡಿಬೇಕು 2 ಚಿಕ್ಕತಮ್ಮಯ್ಯನ 3 ದೊಳಗೆ 4 ಒಟ್ಟಿದವೆ ಸಾಲಿ ತೆರೆಗಳು

ಪಟ್ಟೆ ತೆರೆಯ ಒಳಗೆ ಪುತ್ರ ನಿಂದೈದಾನೆ
1 ಮಿತ್ರೆಯ ಬೇಗ ಕರೆತನ್ನಿರೆನುತಲಿ
ಜೋಯಿಸರು ನಗುತ—ನುಡಿದರು[1] ೪

ಗೋತ್ರವರ್ಣವ ಹೇಳಿ ಘೋತ್ರದ[2] ತೆರೆ ತೆಗೆದರು
ಮಿತ್ರೆ ತಂಗವ್ವ ತಲೆಬಾಗಿ—ಇರುವಳು
ಕಾಂತನ[3] ಬಾಸಿಗಕೆ—ಎದುರಾಗಿ ೫

ಕನ್ಯಾವರ್ಣವ ಹೇಳಿ ಬಣ್ಣದ ತೆರೆ ತೆಗೆದರು[4]
ರಂಭೆ ತಂಗವ್ವ ತಲೆಬಾಗಿ—ನಿಂದಳ[5]
ಕಾಂತನ[6] ಬಾಸಿಗಕೆ—ಎದುರಾಗಿ ೬

ಮಿತ್ರೆ ನಿನ್ನರಸನ ಬೊಟ್ಟು ಗಂಧವ ನೋಡೆ
ಮುತ್ತಿನ ಬಾಸಿಗದ[7] ಗಿಳಿಹಿಂಡ—ನೋಡೆಂದು
ಅಪ್ಪ[8] ತೋರಿಸಿದ—ಮಗಳಿಗೆ ೭

ಗುತ್ತಿಂದ ಬಂದವು ಹತ್ತು[9] ಸಾವಿರ ಗಿಳಿ
ಮಿತ್ರೆ ತಂಗವನ ಅರಸನ[10]—ನೋಡೇವೆಂದು[11]
ಮುತ್ತಿನ ಮಂಟಪಕೆ—ಇಳಿದವು[12] ೮

ಗ್ರಾವಿಂದ ಬಂದವು ಆರು[13] ಸಾವಿರ ಗಿಳಿ
ನಾರಿ ತಂಗವ್ವನ ಪುರುಷನ—ನೋಡೇವೆಂದು
ಹೂವಿನ ಮಂಟಪಕೆ—ಇಳಿದವು ೯

ಗುತ್ತಿಯ ಗಿಳಿಗಳಿಗೆ ತುಪ್ಪ ಸಕ್ಕರೆಯಿಕ್ಕಿ[14]
ಅಪ್ಪ ಭಾಷೆಯಲಿ ಕರೆದನು—ಮಾತಾಡಿಸಿ
ಗೋವೆಯ ಗಿಳಿಯ—ಕಳುಹಿದ ೧೦

---

1 ಮಿತ್ರೆ ತಂಗವ್ವ ತಲೆಬಾಗಿ—ಬರುತಾಳೆ
ಪುತ್ರನ ಬಾಸಿಗಕೆ ಎದುರಾಗಿ

2 ನೇತ್ರದ 3 ರಮಣನ 4 ತೆಗೆದರೆ 5 ಬರುತಾಳೆ 6 ಗಂಡನ 7 ಒಪ್ಪದಲಿ ನಲಿವ
8 ಅವ್ರಪ್ಪ 9 ಎಪ್ಪತ್ತು 10 ಪುರುಷನ 11 ನೋಡೇವೆಂದು 12 ಇಳಿದವೆ
13 ನಲವತ್ತು 14 ಕೊಟ್ಟು

ಗೋವೆಯ ಗಿಳಿಗಳಿಗೆ ಹಾಲು ಸಕ್ಕರೆಯಿಕ್ಕಿ
ಮಾವ[1] ಭಾಷೆಯಲಿ ಕರೆದು ಮಾತಾಡಿಸಿ
ಗೋವೆಯ ಗಿಳಿಯ—ಕಳುಹಿದ ೧೧

ನಾರಿ ನಿನ್ನರಸನ ಗೀರು ಗಂಧವ ನೋಡೆ
ಓರಣದಿ ನಲಿವ[2] ಗಿಳಿಹಿಂಡ—ನೋಡೆಂದು
ಮಾವ ತೋರಿಸಿದ—ಮಗಳಿಗೆ ೧೨

ಅಕ್ಕಿ ಜೀರಿಗೆ ನಿಮ್ಮ ಪುಟ್ಟವಳ ಕೈತುಂಬಿ
ಅಚ್ಯುತನ ಮೇಲೆ ತಳಿಬೇಕು—ಮಾಲಕ್ಷ್ಮಿ
ಅಷ್ಟಸೌಭಾಗ್ಯ—ನಿನಗಕ್ಕು ೧೩

ಎಲ್ಲ ವರ್ಣವ ಹೇಳಿ ಒಲ್ಲಿತೆರೆ ತೆಗೆದರು
ನಾರಿ ತಂಗವ್ವ ಹಿಡಿದಿದ್ದ—ಹೂಮಾಲೆ
ವಲ್ಲಭನ ಕೊರಳಿಗವರಿದ ೧೪

ಗೋತ್ರವರ್ಣವ ಹೇಳಿ ನೇತ್ರದ ತೆರೆ ತೆಗೆದರು
ಕಾಂತೆ ತಂಗವ್ವ ಹಿಡಿದಿದ್ದ—ಹೂವಿನ ಮಾಲೆ
ಪುತ್ರನ ಕೊರಳಿಗವರಿದ ೧೫

ಸೂತ್ರವರ್ಣವ ಹೇಳಿ ನೇತ್ರವ ತೆರೆ ತೆಗೆದರು
ನಾರಿ ತಂಗವ್ವ ಹಿಡಿದಿದ್ದ—ಹೂವಿನ ಮಾಲೆ
ಬಾಲನ ಕೊರಳಿಗವರಿದ ೧೬

## 63. ಮಂಗಲಾಷ್ಟಕ ಪಠಿಸಿದ್ದು

ಸರ್ವಕಾರ್ಯಗಳಲ್ಲು ಆದಿಪೂಜಿತನಾದ
ಗಣಪತಿಯ ಪೂಜೆಯನು ಮಾಡಿ—ಜೋಯಿಸರು
ಮಂಗಲಾಷ್ಟಕವ—ಪಠಿಸಿದ ೧

1 ತಂದೆ 2 ಹೂವಿನ ವಾಸಿಗದ; ಅವರಿದ—ತೊಡಿಸಿದಳು

ವೇದ ಚೋರಕನಾದ ಅಸುರನ ವಧಿಸಲು
ಮತ್ಸ್ಯಾವತಾರವನೆ ಗೈದ—ಶ್ರೀಹರಿಗೆ
ಮಂಗಲಾಷ್ಟಕವ—ಪಠಿಸಿದ ೨

ಪಾನಂತ ಋತುಪಿನೊಳುಧ್ಬವಿಸಿರುವಂಥ
ವನರುಹನೇತ್ರನನೇ ವರಿಸಿಹ—ಲಕ್ಷ್ಮಿಗೆ
ಮಂಗಲಾಷ್ಟಕವ—ಪಠಿಸಿದ ೩

ಕಡಲೊಳು ಭೂಮಿಯು ಹೊಗುವುದೆಂದಾಯಿತು
ಕೂರ್ಮಾವತಾರವನೆ ಗೈದ—ಶ್ರೀಹರಿಗೆ
ವೇದ ಮಂಗಲವ—ಪಠಿಸಿದ ೪

ದುರುಳ ಹಿರಣ್ಯಾಕ್ಷನ ಕೊರಳ ಕೊಯ್ಯಲು ತಾನು
ವರಾಹಾವತಾರವನು ಗೈದ—ಶ್ರೀಹರಿಗೆ
ವೇದ ಮಂಗಲವ—ಪಠಿಸಿದ ೫

ತರಳ ಪ್ರಹ್ಲಾದನ ಸರಳ ಭಕ್ತಿಗೆ ಮೆಚ್ಚಿ
ಕಂಬವನೊಡೆದು ಹೊರಬಂದ—ನರಸಿಂಹಗೆ
ಮಂಗಲಾಷ್ಟಕವ ಪಠಿಸಿದ ೬

ಬಲಿಯೊಳ್ ದಾನವ ಬೇಡಿ ಪಾತಾಳಕಟ್ಟಿದ
ವಾಮನ ರೂಪ ಶ್ರೀಹರಿಯ—ಉದ್ವಾಹದೊಳು
ವೇದಮಂಗಲವ—ಪಠಿಸಿದ ೭

ದುಷ್ಟಕ್ಷತ್ರಿಯ ಕುಲವ ಸಿಟ್ಟಿನಿಂದಲಿ ಕೊಂದು
ಶ್ರೇಷ್ಠ ಪರಶುವನೆ ಧರಿಸಿದ—ಭಾರ್ಗವಗೆ
ಮಂಗಲಾಷ್ಟಕವ—ಪಠಿಸಿದ ೮

ರಾವಣಾದ್ಯಸುರರ ಬಾಧೆಯ ನೀಗಲು
ರಾಮಾವತಾರವನೆ ಗೈದ—ರಾಮರಿಗೆ
ವೇದಮಂಗಲವ—ಪಠಿಸಿದ ೯

ದುಷ್ಟಶಿಕ್ಷಕನಾಗಿ ಶಿಷ್ಟಪಾಲಕನಾಗಿ
ಇಷ್ಟಾರ್ಥ ನೀಡಿದಂಥ—ಶ್ರೀಕೃಷ್ಣಗೆ
ಮಂಗಲಾಷ್ಟಕವ—ಪಠಿಸಿದ ೧೦

ತ್ರಿಪುರರ ಸತಿಯರ ವ್ರತಭಂಗವನೆ ಗೈದ
ಅತಿ ಪ್ರೀತಿಯಿಂದ ಬೌದ್ಧಾವತಾರನಿಗೆ
ವೇದ ಮಂಗಲವ—ಪಠಿಸಿದ ೧೧

ಬಿಳಿಯ ತೇಜಿಯನೇರಿ ಬಿಂಕದಿಂದಲಿ ಬಂದು
ಹೊಳೆವ ಖಡ್ಗವನೆ ಧರಿಸಿದ—ಕಲ್ಕಿಗೆ
ಮಂಗಲಾಷ್ಟಕವ—ಪಠಿಸಿದ ೧೨

## 64. ಮಾಲೆ ಹಾಕುವುದು (ಲಕ್ಷ್ಮಿ ವಿಷ್ಣುವಿಗೆ)

ಶ್ರೀಗುರು ಗಣಪರ ಶೀಘ್ರದಿ ನೆನೆಯುತ್ತ
ಯೋಗ ಮಹೇಶ್ವರಿಯೊಳು ಮತಿ ಬೇಡುತ್ತ
ಈಗ ನಾನುಸುರುವೆನು । ಇಂದಿರೆ ಕೈಯೊಳ್
ಹೂಗಿನ ಮಾಲೆಯನ್ನು । ಹಿಡಿದು ನಸು
ಬಾಗಿ ಲಜ್ಜಿಸುತ ತಾನು । ದೇವಾಸುರರನು ॥
ಆಗ ಮಂಗಳ ಹಾವಭಾವದಿ
ನಾಗ ಕಂಡಳು ಬ್ರಹ್ಮನಂಗವ
ಈಗಳಿವ ಬಲು ವೃದ್ಧನೆನಗೆ ಸ
ರಾಗವಾಗದೆನುತ್ತಲಿಂದ್ರನ ॥
ಬಾಗಿ ನೋಡಿದಳು—ನಲವಿಂದ ೧

ಘನನಲ್ಲ ಇವನೆಂದು ಗಾಢಗರ್ವಿತನೆಂದು
ಇನನ ಕಾಣುತಲಂದು ಇಚ್ಛೆಯಾಗದೆ ಮುಂದು
ಧನಪತಿಯನು ಕಂಡಳು । ಧನಾಢ್ಯನೀ
ತನ ಹೆಮ್ಮೆ ಬೇಡೆಂದಳು । ಚಂದ್ರನ ಕಂಡು
ಮನದಿ ಚೆನ್ನಿಗನೆಂದಳು । ಮತ್ತೊಂದ ನೆನೆದಳು ॥
ದಿನದಿನಕೆ ಕ್ಷೀಣತೆಯು ವೃದ್ಧಿಯು
ಜನಿಪುದಿವನೇಕೆನುತ ಪಾವಕ
ನನುವ ನೋಡುತ ಜ್ವಲಿಸುತಿಹನೆಂ
ದೆನುತ ಮೆಲ್ಲಡಿಯಿಡುತ ಮುಂದಕೆ ॥
ವನಿತಾಮಣಿ ಬಂದಳೊಲವಿಂಧ ೨

ಮಾರುತನನು ಕಂಡು ಮನಪಿಕ್ಕದ್ಯೈತಂದು
ಸಾರಿ ಈತನೊಳೆಂದೂ ಸರಸವಲ್ಲೆನಗೆಂದು
ತೋರದಿನ್ನಾರೆಂದಳು । ಈಶ್ವರನು ಸಂ
ಹಾರ ಮೂರುತಿಯೆಂದಳು । ನಂಜುಂಡ ಕ
ಠೋರ ಚನ್ನಿಗನೆಂದಳು । ತಾನಾಗಿ ತನ್ನೊಳು ॥
ಹಾರ ಮಣಿ ಕೇಯೂರ ಕಂಕಣ
ದೋರೆ ಮುತ್ತಿನ ಪದಕ ಸರ ಮಂ
ಜೀರ ಶೋಭಾಕಾರದತಿ ವೈ
ಯಾರದಿಂದಲಿ ಮಂದಗಮನದಿ ॥
ಸಾರಿ ಸಾರಿಯಲಿ—ಬರಲಂದು ೩

ದಿಕ್ಕು ದಿಕ್ಪಾಲರ ಮಿಕ್ಕ ಗೀರ್ವಾಣರ
ತಕ್ಕ ತನ್ನಯ ಮನದೊಳು ಸೇರದಿರಲಾಗ
ರಾಕ್ಷಸ ಪಂಕ್ತಿಯನು । ನೋಡದೆ ಮುಂದ
ಕ್ಕಿಕ್ಕಿ ಪಾದಾಬ್ಜವನು । ಇನ್ನಾರೆಂದು
ಚಕ್ರಪಾಣಿಯನು ತಾನು । ಈಕ್ಷಿಸುತಲವನು ॥
ತಕ್ಕವನು ತನಗೊಪ್ಪುವನು ಮನ
ಸಿಕ್ಕಿತಿವನಂಗಧ್ಲೆನುತ ನಸು
ನಕ್ಕು ನಾಚುತಲುಂಗುಟದಿ ನೆಲ
ನೊಕ್ಕಿ ಕಡೆಗಣ್ಣಿನಲಿ ಕಂಡಳು ॥
ರಕ್ಕಸ ವೈರಿಯನು—ಮನಸಾಗಿ ೪

ಸರ್ವಲೋಕೇಶನು ಸರ್ವಸಂಕಾಶನು
ಸರ್ವರಿಗೊಡೆಯನು ಸರ್ವವ ಕೊಡುವನು
ಸರ್ವಾಂತರ್ಯಾಮಿ ತಾನು । ಚರಾಚರ
ಭರಿತನೆಂಬವನೀತನು । ಇಂಗಡಲೊಳ
ಗೊರಗಿಕೊಂಡಿರ್ಪಾತನು । ಪೀತಾಂಬರವನು ॥
ಧರಿಸಿ ಕೌಸ್ತುಭಹಾರ ಪೇರುರ
ದೆರಕವಾಗಿಯೆ ಮೆರೆವಲಂಕೃತ
ಬೆರಲ ಮಣಿಮುದ್ರಿಕೆಯ ಚೆನ್ನಿಗ
ಗರುಡಗಮನ ಮುಕುಂದ ಮುರಹರ ॥
ನರಸಿಯೊಪ್ಪಿದಳು—ಮನದಲ್ಲಿ ೫

ತನಗೆ ತಕ್ಕವಳೆಂದು ತನಗೆ ವಲ್ಲಭೆಯೆಂದು
ತನಗಾಗಿ ಈ ಸಿಂಧುಜನಿತವಾಗಿಹಳೆಂದು
ಮನದಿ ಶ್ರೀಹರಿಯು ತಾನು । ಆಲೋಚಿಸಿ
ವಿನಯದಿ ಕುಳಿತಿಹನು । ಈತನ ಬಿಡ
ಲನುಚಿತವಲ್ಲ ತಾನು । ನೋಡಲಿನ್ನೇನು ॥
ಚಿನುಮಯನು ಜಜ್ಜ್ವಲಜ್ಯೋತಿ ರೂಪನು
ಘನಮಹಾ ವರ ಸುಪ್ರಕಾಶನು
ತನಗೆ ವಲ್ಲಭನೆಂದು ತ್ರಿಜಗ
ಜ್ಜನನಿ ಹೂಮಾಲೆಯನು ಕೊರಲಿಗೆ ॥
ವಿನಯದೊಳಿಕ್ಕಿದಳು—ಹರುಷದಿ ೬

ದೇವತೆಗಳು ಬಂದು ದೇವದುಂದುಭಿಯಿಂದು
ಭಾವಿಸಿ ಮೊಳಗಲು ಭವಮುಖ್ಯರೊಲಿಯಲು
ದೇವಾಧಿದೇವನನು । ಪೊಗಳಿ ಲಕ್ಷ್ಮೀ
ದೇವಿಯ ಹಾರವನು । ಸೌಮಾಂಗಲ್ಯ
ರೀವಿಯಿನ್ನೇನೆಂಬೆನು । ಸಂಭ್ರಮದೊಳಾನು ॥
ಆವ ಪರಿಯ ವಿವಾಹವೆಂಬುದ
ದೇವ ಪಂಚಲಿಂಗೇಶ ಬಲ್ಲನು
ದೇವಿಯರ ಮಹಿಮೆಯನು ಈ ವಾ
ಗ್ದೇವಿಯೊಲವಿನಲೆಂದ ಸುಚರಿತ ॥
ದಾ ವಾರ್ತೆ ಕೇಳಿ—ಜನರೆಲ್ಲ ೭

## 65. ಧಾರೆ ಎರೆದದ್ದು

ಭಾರತಿ ಗಜಮುಖರನು ಪ್ರಾರ್ಥಿಸುತ
ವಾರಿಜಭವ ಹರಿ ಹರಗೊಂದಿಸುತ
ವಾರಿಧಿವಾಸಗೆ ಲಕ್ಷ್ಮಿಯ ಕ್ರಮದಲಿ
ಧಾರೆಯನೆರೆದುದನಂತದೊಳಗೆ ವಿ ॥
ಸ್ತಾರವನು ಪೇಳಿ—ಪೊಗಳುವೆ ೧

ವರವಲ್ಮಿಕಜನಿಗೆರಗುತಲಂದು
ಒರೆದರು ಹಿಂದಣ ಕತೆಗಳನಿಂದು
ವರದೆ ದಯಾನಿಧಿ ಜನನಿ ವಿವಾಹದ
ಪರಿಯನು ಪೇಳಲು ತರಳರಿಗಾಗಲೆ ॥
ಒರೆದ ತಾಪಸನು—ಕ್ರಮದಿಂದ ೨

ಭವಚಾಪವ ತಂದಿರಿಸುತಲಂದು
ಜವದಿಂದೆತ್ತಿದರಿಗೆ ತಾನಿಂದು
ತವಕದಿ ತನುಜೆಯನೀವೆನೆನಲು ಈ
ಭುವನೇಶ್ವರಗೊರೆದಾಗಲೆ ಕೇಳುತ ॥
ತವ ಪಿತನೆತ್ತಲಿಕೆ—ಮದುವಾಗೆ ೩

ಬುಧಗುರುಗಳು ಪುಣ್ಯಾಹವ ಮಾಡಿ
ವಿಧವಿಧ ಬಾಂಧವ ಜನರನು ಕೂಡಿ
ವಧುವರರನು ತಂಡುಲ ಪುಂಜೀಲದಿ
ಇದಿರಿದಿರ್ ನಿಲಿಸುತ ಮಂಟಪ ಮಧ್ಯದಿ ॥
ಚದುರಾದಂಬರವ—ಪಿಡಿದರು ೪

ರಾಘವ ಜಾನಕಿಯರ ಕೈಯೊಳಗೆ
ಪೂಗ ಸುಮದ ಮಾಲೆಯ ಕೊಡಲಾಗ
ಯೋಗಿಗಳರ್ಥವಿದೆನುತಿರೆ ಸರವನು
ಬೇಗದಿ ರಘುಜನ ಕಂಠದೊಳಿಕ್ಕಲು ॥
ಆಗ ಧಾತ್ರಿಜೆಗೆ—ತೊಡಿಸಲು ೫

ಸುರರು ದುಂದುಭಿ ಮೊಳಗುತಲಿರಲಿತ್ತ
ನರ ಲೌಕಿಕದಿ ಕುಳ್ಳಿರಿಸುತ್ತ
ಹರಿರಮೆಯರ ಕರತಳವನೆ ಜೋಡಿಸಿ
ಗುರುನೇಮದಿ ಅಭಿಘಾರವ ಮಾಡುತ ॥
ಹರಿದ್ರಾ ತಂಡುಲವ—ಇಡಿಸ್ಯಾರು ೬

ಹೇಮಕಮಂಡಲದೊಳು ಜಾಹ್ನವಿಯ
ತಾಮಸವಿಲ್ಲದೆ ತುಂಬಿ ತುಳಸಿಯ
ತಾಮರಸಾಂಬಕಿ ಕೈಯೊಳಗಿರಿಸಲು
ರಾಮಗೆ ಜನಕನು ಕಾಮಿಸಿ ಸಹಿತಲೆ ॥
ಪ್ರೇಮದಿ ಧಾರೆಗಳ—ಎರೆದನು ೭

ವರ ನವರತ್ನ ಖಚಿತವಾಗಿರುವ
ಪರಮ ಮಂಟಪ ಬೆಂಗಡೆಯೊಳಗಿರುವ
ಸುರರರ್ಧಾಂಗಿಯರೊರೆವ ಶೋಭಾನದಿ
ಧರೆ ತುಂಬಲು ಮಿಥಿಳೇಂದ್ರನ ಬಲದಲಿ ॥
ತರುಣಿಯನು ಧಾರೆಯೆರೆದರು ೮

ಕಿನ್ನರ ಕಿಂಪುರುಷಾಮರರೆಲ್ಲ
ಸ್ವರ್ಣಸುಪಕ್ಷಕರೀಕ್ಷಕರೆಲ್ಲ
ಉನ್ನತ ನಿಶಿಚರ ದಿಕ್ಪಾಲಕರವರ್
ಕನ್ನೆಯರ್ ಸಹಿತಲೆ ನೆರೆದಿಹ ಸಭೆಯಲಿ ॥
ಮುನ್ನ ಧಾರೆಗಳನೆರೆದರು ೯

ಸನಕಾದ್ಯರು ಮುನಿವರರುಗಳಿರಲು
ನೆರೆದ ಗೃಹವು ಭೋರಿಡುವ ತೆರದೊಳು
ವನಜೋದ್ಭವ ಸಹ ವೇದವುಚ್ಚರಿಸಲು
ಜನಪಾಲರ ಸಭೆ ಮಧ್ಯದಿ ಜನಕನು ॥
ವಿನಯದಿ ಧಾರೆಗಳನೆರೆದನು ೧೦

ಈ ತೆರ ಧಾರೆಯ ಮಾಡುತ ಸೆರಗ
ಪ್ರೀತಿಯೊಳ್ ಬಂಧಿಸಿ ಬಲದೊಳಗಾಗ
ರೀತಿಯೊಳ್ ಸಪ್ತತಂಡುಲ ಪುಂಜೀಲವ
ರೀತಿಯೊಳಿಕ್ಕಲು ಮೆಟ್ಟುತ ಬಂದಾ ॥
ಪ್ರೀತನ ಸಹವಾಗಿ—ಕುಳಿತರು ೧೧

ಪಂಚಮವಾದ್ಯ ದುಂದುಭಿ ಭೇರಿಗಳು
ಚಂಚಲವಿಲ್ಲದೆ ಮೊಳಗುತಲಿರಲು
ಪಂಚಶರನ ಪೆತ್ತವಳನು ಕ್ರಮದಿ ಪು
ಳುಂಚೇಶ್ವರಿ ಸಖಿ ಸಖನಿಗೆ ಕ್ರಮದಲಿ ॥
ವಾಂಛಿತ ಪತ್ರವನೆ—ಎಸಗ್ಯಾರು ೧೨

## 66. ಸಪ್ತಪದಿ—1

ಶೋಭಾನವೆನ್ನಿರೆ ಸೆರಗ ಗಂಟಿಕ್ಕಿರೆ
ನೆಲನೆ ತಲ್ಲಣಿಸೆ ನಡೆದರು—ಜ್ಯೋತಿಯ
ಎರಡೊಂದ ಮಾಡಿ—ಶುಭದಿಂದ[1] ೧

ಪಟ್ಟೆಯ ಸೀರೆಗೆ ಪುಟ್ಟ ಗಂಟನ್ನಿಕ್ಕಿ
ಮಿತ್ರೆಯನು ಹಿಡಿದು ಬಲಗೈಲಿ—ಹಿಡಕೊಂಡು
ಮದುವಣ್ಣ ಸಪ್ತಪದ—ನಡೆದನು ೨

ಸಂಪಗೆ ಹೂವೆಂದ ಎಂಟುನೂರೆಸಳೆಂದ
ನಿಂತಲ್ಲಿಗೆ ಬಾರೆ ಸತಿಯೆಂದ—ಮದುವಣ್ಣ
ಅರ್ಥಿಲಿ ಸಪ್ತಪದ—ನಡೆದನು ೩

ಮುತ್ತಿನ ಮಂಟಪ ಎಪ್ಪತ್ತು ಗಾವುದ
ಮಿತ್ರೆಯನು ತನ್ನ ಬಲಗೈಲಿ ಹಿಡಕೊಂಡು
ಮದುವಣ್ಣ ಸಪ್ತಪದ—ನಡೆದನು ೪

ನಡಿನಡಿಯೆಂದರೆ ನಡಿಲೊಲ್ಲಳು ತಂಗವ್ವ
ನಡೆವ ವೇಳೆಯೊಳು ಸೆರೆಹೊನ್ನ—ಇಟ್ಟರೆ
ನಡೆವಳು ಏಳು—ಹೆಜೆಗಳ

ಸಂಪಗೆ ವನದೊಳು ಕೆಂಚಿ ನಿನ್ನನು ಕಂಡೆ
ನಿಂತು ಮಾತಾಡಲನುವಿಲ್ಲ—ಸಂಪಗೆಯ
ವನವ ಹೊಕ್ಕಷ್ಟು—ತಣಿವಾದ

1 'ಸತಿಯರು'

ಬಾಳೆಯ ವನದೊಳು ಬಾಲೆ ನಿನ್ನನು ಕಂಡೆ
ಬಂದು ಮಾತಾಡಲನುವಿಲ್ಲೆ—ಬಾಳೆಯ
ವನವ ಹೊಕ್ಕಷ್ಟೇ—ತಣಿವಾದ ೭

## 67. ಸಪ್ತಪದಿ—2 (ಒಂದುಗೂಡಿಸಿದ್ದು)

ಶೋಭಾನವೆನ್ನಿರೆ ಸೆರಗ ಗಂಟಿಕ್ಕಿರೆ
ನೆಲಪವಡಿಸಿ ನೆಲಕೆ ಬಿಗಿದರು[1]—ಜ್ಯೋತಿಯ
ಎರಡೊಂದು ಮಾಡಿ—ಸತಿಯರು[2] ೧

ಪಟ್ಟೆಯ ಸೆರಗಿಗೆ ಮುತ್ತುರತ್ನವ ಕಟ್ಟಿ
ಇತ್ತ ಬಾ ಮಡದಿ ಎನ್ನುತಲೆ—ತಮ್ಮಯ್ಯ
ಮಿತ್ರೆ ಕೈಹಿಡಿದ—ಸಭೆಯಲಿ ೨

ಸಾಲಿಯ ಸೆರಗಿಗೆ ಹೂವು ರತ್ನವ ಕಟ್ಟಿ
ಹೀಗೆ ಬಾ ಮಡದಿ ಎನುತಲೆ—ತಮ್ಮಯ್ಯ
ನಾರಿ ಕೈಹಿಡಿದ—ಸಭೆಯಲಿ ೩

ಏಳು ಏಳೆಂದರೆ ಏಳಳೆನ್ನ ಮಡದಿ
ಎದ್ದಲ್ಲಿಗೆ ಹೊನ್ನ ಹೊಯ್ಯುವೆ—ಎಂದರೆ
ಎದ್ದಾಳು ಏಳು—ಹಜೆಗಳ ೪

ನಡೆನಡೆ ಎಂದರೆ ನಡೆಯಳೆನ್ನ ಮಡದಿ
ನಡೆವಲ್ಲಿ ಹೊನ್ನ ಹೊಯ್ಯುವೆ—ಎಂದರೆ
ನಡೆದಾಳು ಏಳು—ಹಜೆಗಳ ೫

ಸಂಪಗೆ ವನದಲ್ಲಿ ಕೆಂಚೆ ನಿನ್ನ ಕಂಡೆನು
ನಿಂತು ಮಾತಾಡಲನುವಿಲ್ಲೆ—ಸಂಪಗೆಯ
ವನವ ಹೊಕ್ಕಷ್ಟು—ತಣುವಾದ[3] ೬

1 ಇರಿಸೋರು 2 ಇಡುವರು 3 ತಣುವು—ತಣಿವು; ತೃಪ್ತಿ ಆದ—ಆಯಿತು

ಮಲ್ಲಿಗೆ ವನವಲ್ಲಿ ನಲ್ಲೆ ನಿನ್ನ ಕಂಡೆನು
ಒಂದು ಮಾತಾಡಲನುವಿಲ್ಲೆ—ಮಲ್ಲಿಗೆಯ
ವನವ ಹೊಕ್ಕಷ್ಟು—ತಣುವಾದ ೭

ನಾಲಿ ಸೀರೆಯನುಟ್ಟು ನಾರಿಕೇಳೆ ಸತಿಯೆ
ನಿಂತು ಮಾತಾಡಲನುವಿಲ್ಲೆ—ಮಲ್ಲಿಗೆಯ
ವನವ ಹೊಕ್ಕಷ್ಟು—ತಣುವಾದ ೮

ಮಿತ್ರೆ ನಿನ್ನ ಕಂಡರೆ ತುಪ್ಪೋಗರವುಂಡಂತೆ
ಪಟ್ಟೆ ಮಂಚದಲಿ ಒರಗಿದಂತಾಯಿತು
ಮಿತ್ರೆ ನಿನ್ನ ಕಂಡ—ಗಳಿಗೆಲಿ ೯

ಹತ್ತು ವರುಷದಿಂದ ಕಷ್ಟಪಟ್ಟೆನು ಮಡದಿ
ಸೇರಿತೆನಗೊಂದು ನವರತ್ನ—ಕೇದಗೆಯ
ವನವ ಹೊಕ್ಕಷ್ಟು—ತಣುವಾದ ೧೦

ನಾರಿ ನಿನ್ನ ಕಂಡರೆ ಹಾಲೋಗರವುಂಡಂತೆ
ಉಂಡು ಮಂಚದಲಿ ಒರಗಿದಂತಾಯಿತು
ನಾರಿ ನಿನ್ನ ಕಂಡ—ಗಳಿಗೆಲಿ ೧೧

ಮುತ್ತು ಕೈಸೇರಿತು ರತ್ನ ಕೈಸೇರಿತು
ಮುತ್ತಿನ ಮಣಿಯಂಥ ಮಡದಿ ಕೈಸೇರಿತು
ಹೆತ್ತಮ್ಮಗೆ ಹೇಳಿ—ಒಸಗೆಯ ೧೨

ಪಟ್ಟೆ ಸೀರೆಯನುಟ್ಟು ಇತ್ತ ಕೇಳೆ ಸತಿಯೆ[1]
ಹೂವಿನ ಮಣಿಯಂಥ ಮಡದಿ ಕೈ ಸೇರಿತು
ತಾಯಮ್ಮಗೆ ಹೇಳಿ—ಒಸಗೆಯ ೧೩

ಹೂವು ಕೈ ಸೇರಿತು ಹೊನ್ನು ಕೈ ಸೇರಿತು
ರನ್ನದ ಮಣಿಯಂಥ ಮಡದಿ ಕೈ ಸೇರಿತು
ತಾಯಮ್ಮಗೆ ಹೇಳಿ[2]—ಒಸಗೆಯ ೧೪

---

1 ಅಕ್ಕ   2 ಒಂದು ಗಳಿಗೆಯಲಿ

ಆರು ರುದ್ರಾಕ್ಷಿಯ ಆಯಕೆ ಧರಿಸಿಕೊಂಡು
ಆನೆಯ ಮೇಲೆ ಶಿವ ಬಂದ—ಧಾರೆಯೆರೆದ
ಬಾಲೆ ನೀ ನೋತ ಕೊಡು ಕೈಯ—ಮುತ್ತಿನ ಮಣಿಯ
ಬಾಲೆ ನೀ ಗೆದ್ದೆ—ನಡ ಮುಂದೆ ೧೫

ಪತ್ತು ರುದ್ರಾಕ್ಷಿಯ ಒಪ್ಪಕೆ ಧರಿಸಿಕೊಂಡು
ಸತ್ತಿಗೆಯ ಮೇಲ ಶಿವ ಬಂದ—ಧಾರೆಯೆರೆದ
ಪುತ್ರೆ ನೀ ಸೋತೆ ಕೊಡು ಕೈಯ—ಮುತ್ತಿನ ಮಣಿಯ
ಪುತ್ರನ ನೀ ಗೆದ್ದೆ—ನಡೆ ಮುಂದೆ ೧೬

## 68. ದಕ್ಷಿಣೆ ಹಚ್ಚಿದ್ದು (ಮುಹೂರ್ತ ದಕ್ಷಿಣೆ)

ಶ್ರೀರಮೆಯರಸನ ಚರಣವ ನೆನೆದು
ವಾರಿಜನೇತ್ರನ ಪಾದವ ನೆನೆದು
ಶ್ರೀರಘುರಾಮನ ಮದುವೆಗೆ ದಶರಥ
ಭೂರಿದಕ್ಷಿಣೆಯನು ಕೊಡಿಸಿದ ಬಲು ವಿ ||
ಸ್ತಾರವನೆ ಪೇಳಿ—ಪೊಗಳುವೆ ೧

ಧಾರೆಯನೆರೆದು ಬೀಯಗರು ಸಂತಸದಿ
ಸಾರಿ ಮುಹೂರ್ತ ದಕ್ಷಿಣೆಯಿತ್ತು ಮುದದಿ
ಬೇರೆ ಬೇರುಭಯ ದಕ್ಷಿಣೆಯಿತ್ತು ಮಾಣಿಕ
ದೋರಣ ಹರಿವಾಣಂಗಳ ತರಿಸಿ ವಿ ||
ಚಾರಿಸಿ ದಕ್ಷಿಣೆಯ—ಕೊಡಿಸಿದ ೨

ವರ ಸಭಾ(ಹಿ)[1] ತರವಧಾನಿಗಳಿವರು
ನೆರೆ ಪೌರಾಣಿಕರು ಜೋಯಿಸರಿವರು
ಗುರು ಮಾಡಿದವರಿವರಿಬ್ಬರುಪಾಧ್ಯರೆಂ
ದಿರದುಪಚರಿಸುತ ಪಾಡಿ ಹೊಂದಕ್ಷಿಣೆ ||
ದೊರೆರಾಯ ತಾನೇ—ಕೊಡಿಸಿದ ೩

1 ಯಿ

ಗಂಗಾಸ್ನಾನವ ಗೈದವರಿವರು
ಸಂಗೀತವ ನುಡಿಸುವ ಕೋವಿದರು
ಇಂ ಗಡ ನೋಡಿ ಪುರೋಹಿತರೆನ್ನುತ
ಸಂಗಡ ಗೂಡಿ ವಸಿಷ್ಠರಪ್ಪಣೆಯಿಂದ ॥
ಪಿಂಗಡಿಂಗಡಿಸಿ—ಕೊಡಿಸಿದ ೪

ಯಾರ್ಗೈ ದೇಶಾವರದಿ ಬಂದವರು
ಯಾರ್ಗೈ ದಕ್ಷಿಣೆಯಾಗದ ಜನರು
ಯಾರಿನ್ನಾಗದವರು ಎಂದೆನುತಲಿ
ಧಾರಿಣೀವತಿ ದಶರಥ ಭೂಪಾಲನು ॥
ಬೇರೆ ಬೇರೆಲ್ಲ—ಕೊಡಿಸಿದ ೫

ಯಾರ್ಗೈ ಸಣ್ಣ ಕುಮಾರಕ ನೀನು
ಬಾರಿಲ್ಲಿಗೆ ತೆಗೆದುಕೊ ದಕ್ಷಿಣೆಯನು
ಯಾರಿನ್ನಾಗದವರು ಎಂದೆನುತಲಿ
ಧಾರಿಣೀಪತಿ ದಶರಥ ಭೂಪಾಲನು ॥
ಬೇರೆ ಬೇರೆಲ್ಲ—ಕೊಡಿಸಿದ ೬

ಜನಕರಾಯನ ಅರಮನೆಯೊಳಗಿಂತು
ಮನು ಮುನಿ ನಿಕರವು ಸಭೆಯೊಳು ನಿಂತು
ಚಿನುಮಯರೂಪ ರಾಘವನ ವಿವಾಹದಿ
ಜನಪತಿ ದಶರಥ ಭೂಪನೀ ಪರಿಯಲಿ ॥
ಜನರಿಗೆ ದಕ್ಷಿಣೆಯ—ಕೊಡಿಸಿದ ೭

ಚಂಚಲವಿಲ್ಲದೆ ಸಕಲ ಸಂಭ್ರಮದಿ
ವಾಂಛಿತವಾಯಿತ್ತೆಲ್ಲಿಯೀ ದಿನದಿ
ಪಂಚಲಿಂಗನ ಸಖಿಗರ್ಪಿತವೆನುತಲೆ
ಕಾಂಚನ ಹಿಡಿಹೊನ್ನ ದಕ್ಷಿಣೆಯನ್ನು ॥
ವಂಚಿಸದೆಲ್ಲರಿಗೆ—ಕೊಡಿಸಿದ ೮

## 69. ಕಂಠಸೂತ್ರ ಕಟ್ಟುವದು (ಸರಳಾರ)

ಪೇಳುವೆ ನಾ ನಿಜ ಹರುಷದಲಿ । ಸಿರಿ
ಲೋಲನಿತ್ತ ಮಂಗಲಸರವ ಪ

ಉಮೆಯೊಳು ಮತಿಯನು ಪಡದು ವಾಣಿಯ ಪದ
ಕಮಲಕೊಂದಿಸಿ ಗಣಪತಿಗೆರಗಿ
ರಮೆಗೆ ಸುಮಂಗಲ ಕಂಠಸೂತ್ರವನಂದು
ಕಮಲಲೋಚನ ಬಂಧಿಸಿದನೆಂದು ೧

ಪಟ್ಟೆಯ ಬಿಡುನೂಲನೆ ನೇಯ್ದಿಟ್ಟದ
ಮುಟ್ಟಿ ಚಿನ್ನದ ಬೊಟ್ಟದಕಿರಿಸಿ
ತಟ್ಟನೆ ಅರಿಸಿನ ಪೂಸಿ ಕೈಯಲಿ ಕೊಂಡು
ಪಟ್ಟದ ಸತಿಗಳಕೊಂದಿಸಿದ ೨

ಆ ಕಂಬುಕಂಠದೊಳಿಟ್ಟು ವಿನೋದದಿ
ಶ್ರೀಕಾಂತನತಿ ಸಂಭ್ರಮದಿಂದ
ತಾ ಕೂಡೆ ಕಮಲ ಮುದ್ರೆಯ ಮಾಡಿ ಕಟ್ಟಿದ
ರಾಕೇಂದುವದನೆಗೆ ಶುಭಕರದಿ ೩

ನಳಿತೋಳಿನೊಳು ತಾನೆ ಬಂಧಿಸಿ ಕರುಣದಿ
ಒಲಿದು ಮಂಗಲ ಸೂಕ್ತವನೆ ಪಾಡಿ
ಲಲನೆಯ ಮುಖಕಮಲವ ತಾನೀಕ್ಷಿಸಿ
ಸುಲಲಿತ ವದನನು ಹರುಷಿಸಿದ ೪

ಚದುರೆಯ ಪೀನ ಪಯೋಧರ ಮಧ್ಯದಿ
ಪುದುಗಿಸಿ ತಾ ಕಂಠಸೂತ್ರಾಗ್ರ
ಮದನಜನನಿಯತಿ ಬೆಡಗಿನೊಳ್ ಮೆರೆದಳು
ಯದುಕುಲ ತಿಲಕನ ಮೇಳದಲಿ ೫

## 70. ಕನ್ಯಾದಾನ

ದಾನವ ಮಾಡಿದನು । ಜನಕ ಕನ್ಯಾ
ದಾನವ ಮಾಡಿದನು ಪ

ದಾನವ ಮಾಡಿದ ಮಾನಿನಿ[1] ಸೀತೆಯ
ದಾನವಾಂತಕ ಶ್ರೀರಾಮಗೆ ಮುದದೊಳು ೧

ಉನ್ನತ ಪ್ರೇಮದ ತನ್ನಯ ಕುವರಿಯ
ಚಿನ್ನ ವಸ್ತ್ರಗಳಿಂದಲಂಕರಿಸುತಲಾಗ ೨

ಮುತ್ತು ರತ್ನಗಳನ್ನು ನತ್ತು ಹಾರಗಳನ್ನು
ಪುತ್ರಿಗೆ ಪ್ರೇಮದೊಳಿತ್ತು ಸಂಭ್ರಮದೊಳು ೩

ರಘುವರನಿಗೆ ಒಳ್ಳೇ ಜಗಜಗಿಸುತಲಿಹ
ಬಗೆಬಗೆ ವಸನಾಭರಣವ ಕೊಡುತಲಿ[2] ೪

ಹಿಂದಿನ [3]ಮುಂದಿನ ಕುಲಕೋಟಿಗಳೆಲ್ಲ[3]
ಹೊಂದುವುದುನ್ನತ ಸ್ಥಾನವೆಂದೆನುತಲಿ ೫

ಸುರರು ಭೂಸುರರೆಲ್ಲ ಹರುಷವ ಹೊಂದುವ
ನಿರತಿಶಯದ[4] ಸುಖ ದೊರಕುವಂತಹ ಮಹಾ ೬

## 71. ಗಿರಿಜಾ ಕಲ್ಯಾಣ

ಗಣಪ ವಾಗ್ದೇವಿಯರಡಿಗೆ ವಂದಿಸುತ
ಫಣಿಶಯನನ ಪದವನಜಕೆರಗುತ
ತ್ರಿಣಯಗೊಂದಿಸಿ ಗುರುವರನ ಧ್ಯಾನಿಸುತ
ಗುಣನಿಧಿ ಮಹಾಮಾಯೆಯ ಪ್ರಾರ್ಥಿಸುತ ॥
ಗಿರಿಜಾ ಕಲ್ಯಾಣವ—ನೊರೆವೆನು ೧

---

1 ಭಾಮಿನಿ 2 ಭರಣಗಳಿಡುತಲಿ 3 ಇನಕುಲಕೋಟಿಗಳೆಲ್ಲವು 4 ನಿರತಾಕ್ಷಯದ

ಶ್ರೀಮದ್ಭಾಗವತವ ಶುಕ ಪರೀಕ್ಷಿತಗೆ
ಪ್ರೇಮದಿಂದರುಹಲು ಕೇಳ್ದು ತನ್ಮುನಿಗೆ
ಕಾಮಿತ ಕಲ್ಪದ್ರುಮವಿದು ಧರಣಿಗೆ
ಸೋಮಶೇಖರನೆಂತೊಲಿದನು ಗಿರಿಜೆಗೆ ॥
ಆ ಮಹಾಕಥೆಯ—ನುಡಿಯೆಂದ ೨

ಚಿತ್ತೈಸು ನೃಪಕುಲರತ್ನ ನೀನೊಲಿದು
ಕೃತ್ತಿವಾಸನ ಗಿರಿಜೆಯು ತಪಗೈದು
ಪತ್ನಿ ತಾನಾಗಿಯೆ ಮರವ ಸತ್ಕಥನವ
ವಿಸ್ತರಿಸುವ ಪಾರ್ವತಿ ಪರಿಣಯುವ ॥
ಚಿತ್ತವಿಟ್ಟಿವನು—ಲಾಲಿಸೆಂದ ೩

ಗಿರಿರಾಜನರಸಿ ಮೇನಕೆಯು ಪೂರ್ವದೊಳು
ಮೆರೆವ ಶಂಕರಿಯ ಮೆಚ್ಚಿಸೆ ತಪಸ್ಸಿನೊಳು
ತರಣಿ ಪ್ರಕಾಶದಿ ತೋರಿದಳಿದಿರೊಳು
ಚರಣಾಬ್ಜಕೆರಗಿ ಬೇಡಿದಳು ಬೇಗದೊಳು ॥
ಕರುಣಿಸು ನಿನ್ನಂಥ—ಕುವರಿಯ ೪

ಎನ್ನ ರೂಪನು ಪೋಲ್ವ ಹೆಣ್ಣಾಗಿ ಜಗದಿ
ಕನ್ನೆ ನಾನುದಿಸುವೆ ನಿನ್ನ ಜಠರದಿ
ಭಿನ್ನವಾಗದು ಎನ್ನ ನುಡಿ ನಂಬು ದೃಢದಿ
ಸನ್ನುತೆಯೆನಿಸಿದೆ ನೀ ತ್ರೈಜಗದಿ ॥
ಪನ್ನಂಗವೇಣಿ—ಕೀರವಾಣಿ ೫

ಇಂತೆಂದುಮೆ ನಿಲಲಂತರ್ಧಾನದಲಿ
ಹಿಂತಿರುಗಲು ಮೇನಕೆಯ ಗರ್ಭದಲಿ
ಅಂತರಾತ್ಮಕಿ ಬಂದು ವಾಸವಾಗುತಲಿ
ಸಂತೋಷಗೊಂಡರು ಸುರರು ನಾಕದಲಿ ॥
ನಿಂತು ಪೂಮಳೆಯ—ಕರೆದರು ೬

ತುಂಬಿತು ನವಮಾಸವಂಬುಜಮುಖಿಗೆ
ಅಂಬೆ ಪುಟ್ಟಿದಳ್ ಬಲು ಶುಭಲಗ್ನದೊಳಗೆ
ಸಂಭ್ರಮಿಸಿದ ಗಿರಿವರ ಮನದೊಳಗೆ

ಅಂಬರದೊಳು ಸುರದುಂದುಭಿ ಮೊಳಗೆ ॥
ತುಂಬುರು ನಾರದರು—ಸಲಿದಾಪ ೭

ವರುಷದ ಸಲದಿನವೆನಿಸಿ ಕಾಣಸುತ
ಸರಸಿಶು ನಾಟಕಂಗಳನು ತೋರಿಸುತ
ಸರಸಿಜಾಂಬಕಿಗೆ ಯೌವನ ತಲೆದೋರುತ
ಹರುಷದಿ ಗಿರಿವರ ಸುತೆಯುಳ ನೋಡುತ ॥
ಹರನ ಶ್ರೀಪದವ—ನೆನೆವಸು ೮

ಮೆರೆವ ಮುಖವು ಪೂರ್ಣಚಂದ್ರನಂತಿರಲು
ಸರಸಿಜನಾಳವಂತೆನೆವ ಬಾಹುಗಳು
ಉರಗರಾಜನ ಪೆಡೆಯಂತಿಹವೆದೆಯೊಳು
ಮೆರೆವ ಕಮಲಮೊಗ್ಗೆಯಂಥ ಕುಚಗಳು ॥
ನಡು ಸಿಂಹದಂತೆ—ಎಸೆದಿರೆ ೯

ಜಂಘೆ ಜಾನೂರುಗಳು ರಂಭೆಯಂತಿರಲು
ಭೃಂಗಕುಂತಳೆ ಪೋಲ್ವ ಸೋಗೆಗಣ್ಣುಗಳು
ಅಂಗಜನೆಸೆವ ಬಿಲ್ಲಂಥ ಪುರ್ಬುಗಳು
ಮಂಗಲೆ ಹಂಸಾಕೃತಿಯ ಪಾದಗಳು ॥
ಶೃಂಗಾರದ ನಾರಿ—ಸುಕುಮಾರಿ ೧೦

ತೊಟ್ಟ ಆಭರಣವು ಜಗಜಗಿಸುತಲಿ
ಉಟ್ಟ ದಿವ್ಯಾಂಬರ ಹೊಳೆಯೆ ಸುಶೀಲೆ
ಬಿಟ್ಟ ಮಲ್ಲಿಗೆ ಝಲ್ಲಿ ತುರುಬಿನ ಮೇಲೆ
ಇಟ್ಟ ಕಮಲಗಳು ಪರಿಮಳಿಸುತಲೆ ॥
ಸೃಷ್ಟಿ ಮೋಹನ್ನೆ—ಗುಣರನ್ನೆ ೧೧

ಮೂರು ಲೋಕದ ಸೊಬಗಿನ ತವರ್ಮನೆಯು
ಚಾರು ಮೋಹನ ವದನದ ದೇವತೆಯು
ಮಾರನ ಕೈಯೊಳು ಮೆರೆವ ಕಠಾರಿಯು
ಭೂರಿ ಸೌಂದರ್ಯಾಮೃತ ವಾರಿಧಿಯು ॥
ವಾರಿಜನೇತ್ರೇ—ಶುಭಗಾತ್ರೆ ೧೨

ಗಿರಿಜೆಯೀ ಪರಿಯೊಳು ಮೆರೆವ ವೇಳೆಯೊಳು
ಹರಿನಾಮಗಳನು ಕೀರ್ತಿಸುತ ವೀಣೆಯೊಳು
ಸುರಮುನಿಪನು ಬರಲಿದ್ದತಿ ಭರದಲಿ
ಎರಗಿ ಕುಳ್ಳಿರಿಸಿ ನರೇಂದ್ರ ಪೀಠದಲಿ ॥
ಚರಣವ ಪೂಜಿಸುತ—ನುಡಿದನು ೧೩

ಎರಗಿಸುವೆನು ಚೆಲ್ವ ನಾರೀಮಣಿಯನು
ಬರೆದನದಾರಿಗೆ ಕಮಲಸಂಭವನು
ಎರಕವಾಗುವಳಾರಿಗೆಯೆಂದರಿಯೆನು
ಕರುಣಾನಿಧಿಯೆ ಕರುಣಿಸು ಎನಗದನು ॥
ವರ ನಾರದಮುನಿಯೇ—ಗುಣಾಬ್ಧಿಯೆ ೧೪

ಆ ಸಮಯದೊಳುಮೆ ಸುರಮುನೀಶ್ವರನ
ತೋಷದಿ ಕಾಣಬೇಕೆನುತ ಪಾವನನ
ತಾಮರಸಾಂಬಕಿ ಬರಲು ಕಿತ್ತಡಿಯೆದ್ದು
ಕೋಮಲದಡಿದಾವರೆಯೊಳು ಬಿದ್ದು ॥
ಸೋಮನಿಭ ಮುಖಿಯಾ—ನುತಿಸಿದ ೧೫

ದಕ್ಷನಂದನೆಯಾಗಿ ಜನಿಸಿ ಪೂರ್ವದೊಳು
ತ್ರ್ಯಕ್ಷನ ಸೇರಿಯೆ ಮೆರೆವ ವೇಳ್ಯದೊಳು
ಪಕ್ಷಪಾತವ ಗೈದನು ತನ್ನ ಪಿತನೆಂದು
ಸಾಕ್ಷಿಯಗ್ನಿಯೊಳ್ ತಾನು ದಹಿಸಿದಳೆಂದು ॥
ತಕ್ಷಕವೇಣಿ—ಗುಣಶ್ರೇಣಿ ೧೬

ಮರಳಿ ನಿಮ್ಮುದರದಿ ಪುಟ್ಟಿದಳುಮೆಯು
ಹರನ ಪಟ್ಟದ ರಾಣಿ ಸರ್ವಮಂಗಳೆಯು
ಪರರ್ಗೆ ಸೇರುವಳಲ್ಲ ನಿನ್ನ ಕುಮಾರಿಯು
ವರ ತಪದೊಳಗೆ ಮೆರೆವ ತ್ರಿಪುರಾರಿಯು
ಮರೆಯದಿರಿನ್ನು—ತೆರಳ್ವೆನು ೧೭

ಇಂತೆಂದು ನಾರದ ತೆರಳಲಂಬಿಕೆಗೆ
ಚಿಂತಾಗ್ನಿಯೇರಲು ದಿನದಿನದೊಳಗೆ
ನಿಂತಲ್ಲಿ ನಿಲ್ಲಲಾರದೆ ತನ್ನ ಜನಕಗೆ

ಅಂತರಂಗದ ವ್ಯಥೆ ತಿಳಿಸಲು ಸುತೆಯಳ ॥
ಸಂತಯಿಸಿ ತಪಕೆ—ಕಳುಹಿದ ೧೮

ಮಿಂದು ವಲ್ಕಲವುಟ್ಟು ಭಸ್ಮವ ಧರಿಸಿ
ಕುಂದದೆ ಮುಡಿಗಳ ಜಡೆಯುಳವಡಿಸಿ
ಚೆಂದದಿ ರುದ್ರಾಕ್ಷಗಳನು ತೊಡಿಸಿ
ಇಂದುಕಲಾಧರನಡಿಯನು ಧ್ಯಾನಿಸಿ ॥
ಸಿಂಧುರಯಾನೆ—ಸುಪ್ರವೀಣೆ ೧೯

ಆಸ್ನೋದಕವ ಬಿಟ್ಟು ಕಂದಮೂಲಗಳ
ತಿನ್ನುತ ಕಳಿದಳು ಹಲವು ಮಾಸಗಳ
ಪರ್ಣ ಸಲಿಲ ವಾಯುವಾಹಾರಗಳಲಿ
ಮನ್ನಿಸಿದಳು ಶಿವನನೇಕೋಧ್ಯಾನದಲಿ ॥
ಚೆನ್ನರ ಚೆಲ್ವೆ—ಸುರಸೇವ್ಯೆ ೨೦

ಬಲಿದು ಆಸನವನ್ನು ಮೇಲ್ಯೋಗವೆನಿಸಿ
ಮಲಿನ ಮಾಯಾ ವಿಷಯಗಳನು ತ್ಯಜಿಸಿ
ಚಲಿಸುವ ಪವನೇಂದ್ರಿಯಗಳ ಬಂಧಿಸಿ
ತಿಳಿದು ನಿಜಾನಂದ ಪದದೊಳು ವೆರಸಿ ॥
ಜಲಜಾಕ್ಷಿ ತನುವ—ಮರೆದಳು ೨೧

ಹರಗಿರಿಜೆಯರಿಂತು ತಪದೊಳಗಿರಲು
ದುರುಳ ತಾರಕ ದೈತ್ಯನುದಿಸಿ ಬ್ರಹ್ಮನೊಳ
ವರಗಳ ಪಡೆದತಿ ಭುಜಬಲ ಧೈರ್ಯದಿ
ಸುರರ ನಿರ್ಬಾಧಿಸೆ ತೆರಳಿದರ್ ಭರದಿ ॥
ಸರಸಿಜೋದ್ಭವಗೆ—ನುಡಿಯಲು ೨೨

ಅಂಜದಿರಮರರು ಬಂದ ಕಾರ್ಯಗಳ
ರಂಜಿತದಿಂದ ನಾ ತಿಳಿದೆ ದುಃಖಗಳ
ಕುಂಜಧ ಖಳಮರ್ದಗುದಿಸಿದಾತ್ಮಜನು
ಭಂಜಿಸಿ ದೈತ್ಯನ ನಿಮ್ಮ ಕಾಯುವನು ॥
ಕಂಜಶರನನ್ನು—ಕಳುಹಿಸೆ ೨೩

ಉಮೆಯನು ಮರೆದು ಶ್ರೀಶಿವ ತಪವಿಹನು
ಭ್ರಮೆಗೊಳಿಸಲು ಎದ್ದು ಮದುವೆಯಾಗುವನು
ಕುಮಾರದೇವನು ಪುಟ್ಟಿ ತಾರಕ ದೈತ್ಯನ
ಸಮರದಿ ಮರ್ದಿಸಿ ಪೊರೆವ ತ್ರಿಜಗವನು ॥
ಕ್ಷಮಿಸಿ ಕ್ಲೇಶವನು—ಗಮಿಸಿನ್ನು ೨೪

ಎಂದಜನಾಡಿದ ನುಡಿಗೆ ನಿರ್ಜರರು
ಬಂದು ಬೃಹಸ್ಪತಿಗಿದನರುಹಿದರು
ಸಂದೇಹವಿಲ್ಲದೆ ಬಂದು ಕಾಮನ ಗುರು
ಇಂದುಶೇಖರನಿಪ್ಪ ಗಿರಿಯನು ಸೇರು ॥
ಎಂದಾಗ ಸ್ಮರನು—ನುಡಿದನು ೨೫

ಗುರು ನಿರೂಪವ ಮೀರಲಳವಲ್ಲ ಶಿವನೇ
ಉರಿಗಣ್ಣನೆದುರಿಗೆ ಹೋಗಿ ಜೀವಿಪೆನೇ
ಸುರರ ಕಾರ್ಯವಿದೆಂದು ನಡೆದ ಕೈಲಾಸಕೆ
ಭರದಿಂದ ಶರವೆಚ್ಚ ಹರನ ಶ್ರೀ ಉರಕೆ ॥
ಪರಮೇಶ ಸಿದ್ಧನುರಿದೆದ್ದ ೨೬

ಹರನು ಫಾಲಾಗ್ನಿಯೊಳ್ ಸ್ಮರನ ದಹಿಸಲು
ಹೊರಳಿದಳಾ ರತಿದೇವಿ ದುಃಖದೊಳು
ಮರುಗಬೇಡೆಲೆ ನೀರೆ ನಿನಗೆ ಮಾಂಗಲ್ಯವು
ನಿರತವಾಗಲಿ ಎನ್ನ ವಾಕ್ಯವು ದಿಟವೆಂದು ॥
ಗಿರಿಜಾ ಕಟಾಕ್ಷಿ—ನುಡಿದಳು ೨೭

ಮಂದಗಮನೆ ಮತ್ತೆ ತಪದೊಳಗಿರಲು
ಬೆಂದವು ಮರಗಳು ಗಿಡಬಳ್ಳಿಗಳು
ಬಂದನು ಶಿವ ಚೆಲ್ವ ಭೂಸುರಾಕೃತಿಯೊಳು
ಸಂದರ್ಶನದಿಂದಾನಂದವಾಗಿರಲು ॥
ವಂದಿಸುತ ದ್ವಿಜಗೆ—ನುಡಿದಳು ೨೮

ಯಾಕಿಲ್ಲಿಗೈತಂದೆ ಭೂಸುರೋತ್ತಮನೆ
ಬೇಕಾದ ನಗರ ಗ್ರಾಮವ ಬಿಟ್ಟೋಡುವನೆ
ಈ ಕಾಡಿನೊಳು ನಿನಗೇನುಂಟು ಕಾರ್ಯವು

ನೀ ಕರುಣಿಸು ಬೇಗ ಗೈವೆನು ತಪವ ॥
ಗೋಪತಿವಾಹನನ—ಭಜಿಸುವೆ ೨೯

ಎಂದಮಾತಿಗೆ ವಿಪ್ರ ನಸುನಗುತೆಂದ
ತಂದೆತಾಯಿಗಳಾರು ಪೆಸರ ಪೇಳೆಂದ
ನಿಂದ್ಯವಾಯಿತು ನಿನ್ನ ಪ್ರೀಯಕೆ ತಪದಿಂದ
ಚೆಂದವಹುದೆ ಕಳೇವರಕೆ ನಿರ್ಬಂಧ ॥
ತಂದುದೇಕೆನಲು—ನುಡಿದಳು ೩೦

ಎನಲಾ ಮಾತನು ಕೇಳುತ್ತೈದೆ ಭೂಸುರಗೆ
ವಿನಮಿತಳಾಗಿ ಪೇಳ್ದಳು ನಗೆ ಬೆಳಗೆ
ಜನಕನು ಗಿರಿರಾಜೇಂದ್ರ ಮೇನಕೆಯೆನ್ನ
ಜನನಿ ಪಾರ್ವತಿಯೆಂದು ಕರೆವರು ಮುನ್ನ ॥
ಸುರ ಮುನೀಶ್ವರರು—ಮನುಜರು ೩೧

ಕುಕ್ಷಿಗಿಲ್ಲದೆ ಬಹುದೇಶವ ತೊಳಲಿ
ರಕ್ಷಿಪರನು ಕಾಣೆ ಎನ್ನವನಿಯಲಿ
ಭಿಕ್ಷಕ್ಕೋಸುಗ ಬಂದೆ ಕುಕ್ಷಿಪೀಡೆಗಳಲ್ಲಿ
ಅಕ್ಷಿಗೋಚರವಾಯ್ತು ನಿನ್ನನೀ ದಿನದಿ ॥
ಅಕ್ಷಯವಹುದು—ಮೆರೆವುದು ೩೨

ಭೂಸುರೋತ್ತಮ ಕೇಳು ವಿಪಿನ ದೇಶದೊಳು
ಆಸರು ಕ್ಷುಧೆಗೇನನೀವೆನು ಹೇಳು
ಏಸು ಬೇಕಾದರು ಎಮ್ಮರಮನೆಯೊಳು
ತೋಷದಿಂದಲಿ ಕೊಡುವನು ಮತ್ಪಿತನೊಳು ॥
ನೀ ಹಸುತೃಷೆಯಾ—ತಣಿಸಿಕೊ ೩೩

ಧನವಿರ್ದ ಮನುಜಗೆ ಮನವಿಲ್ಲ ನೀರೆ
ಧನಮನವಿದ್ದರೆ ವನಿತೆ ಕಠೋರೆ
ಕನಸಿನ ಸುಖದಂತೆ ಮೆರೆವ ಸೌಭಾಗ್ಯವು
ದಿನಕರ ಸುತನಿಗ ಕೃಪೆಯಿಲ್ಲ ವೃಥಾವು ॥
ದಣಿಸಿ ನೀನೆನ್ನ—ಫಲವೇನು ೩೪

ಅನ್ನವರ್ಜಿತಳಾಗಿ ಏಕೋಧ್ಯಾನದಲಿ
ಪನ್ನಂಗಶಯನನ ಭಜಿಸುವಳಲ್ಲಿ
ಉಣ್ಣುವ ಸಾಧನ ಕೆಲವು ದಿನಗಳಲ್ಲಿ
ಕಣ್ಣಿಲಿ ಕಂಡಿಲ್ಲ ಬರಿಯ ಸುಡಿಯಲಿ ॥
ಮನ್ನಿಸುವಂತು—ವಿಧಿಯಿಂತು ೩೫

ಯಾವ ದೇವನು ನಿನಗಾರುಪದೇಶ
ಯಾವಕೋಸುಗ ಬಂದೆ ಯಾಕಿಂತಭ್ಯಾಸ
ಭಾವಕಿ ಕೇಳೆನಗಿದೆ ಜಗದೀಶ
ಸೇವೆಯ ಮಾಡುವೆಯೆನ್ನನುದಿವಸ ॥
ಕಾವ ತಾನವನು—ನುಡಿ ನೀನು ೩೬

ಭೂದೇವ ಕೇಳೆನ್ನ ಮನದ ಕಾಮಿತವ
ವಾದಿಸದಿರ್ದಡೆ ಪೇಳುವೆ ದೃಢವ
ಆದಿಮಹೇಶನಲ್ಲಿರ್ದ ಶರೀರವ
ಸಾಧಿಸಿ ಪಡೆವೆನೆಂದೆನುತಲಿ ತಪವ ॥
ವೇದವೇದ್ಯನನು—ಭಜಿಪೆನು ೩೭

ಎಂದ ಮಾತಿಗೆ ವಿಪ್ರ ಗಹಗಹಿಸಿದನು
ಇಂದು ನಾ ಕೇಳಿದೆ ಪೊಸ ವಾರ್ತೆಯನು
ಎಂದಿಗಾದರು ಮನ ನಾರೀ ಜನರನು
ಬಂದು ಕೂಡುವನೆ ಸಾಕ್ಷಾತ ಚಿನ್ಮಯನು ॥
ಹೊಂದದ ಕಾರ್ಯ—ಬಯಸಿದೆ ೩೮

ಮಾವ ದಕ್ಷನೊಳಗೆ ಕಲಹವ ಬಯಸಿ
ಭಾವಕಿಯಳ ಮಹಾಧ್ವರಕೆ ಕಳುಹಿಸಿ
ಕೇವಲ ಕೆಡಿಸಿದ ತನ್ನ ವಲ್ಲಭೆಯನು
ಯಾವ ಕಾರ್ಯಕೆ ಮನವಾತನ ಮೇಲಿನ್ನು ॥
ಕೋವಿದೆ ಮದ್ದಾನೆ—ನಿಭಯಾನೆ ೩೯

ಮೂರು ಲೋಕದಿ ಹೆಣ್ಣ ಕೊಡುವರಿಲ್ಲವಗೆ
ಊರು ಮನೇ ಮನೆ ತಿರುಗುವಾತನಿಗೆ
ನಾರಿ ನೀನೊರ್ವಳೆ ಭ್ರಮಿಸಿದಲ್ಲವೆ ಹೀಗೆ

ವಾರಿಜಭವನ ಶಿರವ ಕಿತ್ತುವಗೆ ॥
ಮಾರನರಗಿಣಿಯೇ—ಶಿಖಾಮಣಿಯೆ ೪೦

ಅಶನ ವಸನ ನಿದ್ರಾ ವ್ಯಸನವರ್ಜಿತನ
ಮಸಣ ಭೂಮಿಯೊಳಗೆ ಕುಣಿದಾಡುವನ
ವಿಷಧರ ಕುಲಗಳ ಹಣಿದು ಶೋಭಿಪನ
ಹಸಿದೊಗಲುಡಿಗೆಯ ವೃಷಭವಾಹನನ ॥
ಹಸಿದಡೇನುಂಬೆ—ಪ್ರತಿಬಿಂಬೆ ೪೧

ಭೂತ ಪಿಶಾಚ ಭೇತಾಳರು ಜತೆಗೆ
ದೂತರು ವೀರಭದ್ರ ಭೈರವರವಗೆ
ಜಾತಿ ಗೋತ್ರಗಳಣುಮಾತ್ರವಿಲ್ಲವಗೆ
ಪ್ರೀತಿಯೊಳ್ ದೈತ್ಯನ ಮನೆಕಾಯುವಗೆ ॥
ಯಾತಕೆ ತಪಗೈವೆ—ಬಿಸುಸುಯ್ವೆ ೪೨

ಚಿನ್ನದಿ ರಚಿಸಿದ ಬೊಂಬೆಯಂತಿರುವೆ
ಹಣ್ಣು ಮುದುಕಗೆಂತು ಸೇರಿ ನೀ ಮೆರೆವೆ
ಹುಣ್ಣಿಮೆ ಶಶಿಯಂತೆ ನೀ ತಳತಳಿಸುವೆ
ಉಣ್ಣದ ನರನಂತೆ ಶಿವನಿಹ ತರವೆ ॥
ಕನ್ಯಾಕುಲರನ್ನೆ—ಸುಪ್ರಸನ್ನೆ ೪೩

ಹೆತ್ತವ್ವೆ ತಂಗಿಯಗ್ರಜರಿಲ್ಲದವಗೆ
ಅತ್ತೆ ಅತ್ತಿಗೆಯರ ಗೊತ್ತಿಲ್ಲದವಗೆ
ಹೊತ್ತು ಹೊತ್ತಿಗೆ ಕೂಳನೀವರಾರ್ ನಿನಗೆ
ವ್ಯರ್ಥ ನೀ ಕೆಡಿಸಿದೆ ತನು ತಪದೊಳಗೆ ॥
ಕರ್ತವ್ಯವೇನೇ—ಹಂಸೀಯಾನೆ ೪೪

ಸಾಕುಸಾಕಿನ್ನು ಮಹೇಶನ ವ್ರತವ
ನಾ ಕರುಣಿಸುವೆನು ಮನದಭಿಮತವ
ರಾಕೇಂದುಮುಖಿ ಬಾರೆಂದು ಕೈವಿಡಿದೊಯ್ವ
ಭೂಸುರೋತ್ತಮನಿಗೆ ಹಲವು ದುರ್ನುಡಿಯ ॥
ಲೋಕನಾಯಕಿಯು—ನುಡಿದಳು ೪೫

ಮುಟ್ಟದಿರೆಲೊ ಎನ್ನ ಕೆಟ್ಟ ಹಾರುವನೆ
ಮುಟ್ಟುವುದುಚಿತವೆ ಪರವಧುಗಳನೆ
ತಟ್ಟದೆ ಘೋರ ಪಾತಕ ಕೃತಕವನೆ
ಕಟ್ಟೊಡೆಯನು ಜಗದೀಶ ಮುನಿಯನೆ ॥
ನಿಷ್ಠೂರ ಬೇಡ—ನಡೆ ಗಾಢ ೪೬

ನರರ ಗಾವಳಿಯ ಸಂಹರಿಸುವ ಬಗೆಗೆ
ಹರನು ಶ್ಮಶಾನದಿ ಕುಣಿದಾಡೆ ನಿನಗೆ
ಒರೆದವರಾರು ದುರಾಚರಣೆಯದೆಂದು
ಧರೆಯುಮರನೆ ಎನ್ನದಿರೊಳು ನಿಂದು ॥
ದುರಿತವೆನ್ನದಿರು—ಕಡೆ ಸಾರು ೪೭

ಗಂಧರ್ವರೊಳು ದಿವ್ಯ ಜ್ಞಾನಮೂರ್ತಿಗಳು
ಚಂದದೊಳುರಗರ ಗೀತಸ್ವಂಗದೊಳು
ಬಂದು ನೆಲಸಿ ನಿತ್ಯಾನಂದದ ಗಾನದಿ
ವಂದನೆಗೈವರು ಶಿವನ ಸಂತಸದಿ ॥
ನಿಂದ್ಯವೆ ವಿಪ್ರ—ನುಡಿ ಕ್ಷಿಪ್ರ ೪೮

ಭೂತ ಪಿಶಾಚರ ಮೇಳವಾಗಿಹನ
ಮಾತು ಮಾತುಗಳೆಲ್ಲ ಶ್ರುತಿಶಾಸ್ತ್ರವಚನ
ಜಾತಿ ಗೋತ್ರಗಳೆಂತು ಭವಭಯದೂರಗೆ
ಮಾತೆ ಸೋದರಿಯುಂಟೆ ಚೇತನಾತ್ಮಕಗೆ ॥
ನೀತಿಯ ನುಡಿ ನುಡೀ—ನಡಿ ನಡಿ ೪೯

ಉಟ್ಟ ಚರ್ಮವು ಕೋಟಿ ಸೂರ್ಯಪ್ರಕಾಶ
ಒಟ್ಟಾಗಿರುವ ವೀರಭದ್ರ ಭೃಂಗೀಶ
ಅಷ್ಟಭೈರವರೆಲ್ಲ ಜಗಕತಿಲೇಸ
ಕೊಟ್ಟು ರಕ್ಷಿಸುವರು ನಿನಗೇನು ದ್ವೇಷ ॥
ಭ್ರಷ್ಟ ಮಾತೇಕೆ—ಬಲು ಜೋಕೆ ೫೦

ಕುಕ್ಷಿಗಿಲ್ಲದೆಯೆ ನಿನ್ನಂತೆ ಲೋಕದಲಿ
ಭಿಕ್ಷೆಗೈವವನಲ್ಲ ಶಿವನವನಿಯಲಿ
ಮೋಕ್ಷಾರ್ಥಿಗೆ ಮೋಕ್ಷವೀವೆನೆಂದೆನುತಲಿ

ತ್ರ್ಯಕ್ಷನು ಸಂಚರಿಸುವ ಕರುಣದಲಿ ॥
ಯಕ್ಷೇಶ ಮಿತ್ರ—ಸುಚರಿತ್ರ ೫೧

ಶಿವನ ನಿಂದಿಸಿದವ ನರಕದೊಳಿಳಿವ
ಶಿವನ ವಂದಿಸಿದವ ವೈಕುಂಠ ಪಡೆವ
ಶಿವಕೃಪೆಯುಳ್ಳವ ಭವದೊಳು ಮೆರೆವ
ಶಿವವಿರೋಧಿಯು ಘೋರ ದುರಿತವನುಣುವ ॥
ಶಿವನೇಕದೈವ—ಮಹಾದೇವ ೫೨

ಮಿಗಿಲು ವಿಪ್ರರು ನಾಲ್ಕು ವಿಧ ವರ್ಣದೊಳು
ಮಿಗಿಲು ಹಾರುವರಿಂದ ಸುರರು ನಾಕದೊಳು
ಮಿಗಿಲು ನಿರ್ಜರರಿಂದ ಸನಕಯೋಗೀಂದ್ರರು
ಮಿಗಿಲು ವಿಶ್ವದೊಳಿಲ್ಲ ಹರಿಕಮಲಜರು ॥
ಮಿಗಿಲವರೊಳಿಲ್ಲ—ಶಿವ ತಾನು ೫೩

ಯಾಕೆ ಬಂದನು ವಿಪ್ರ ದೈವನಿಂದಕನು
ಯಾಕೆ ಮಾತಾಡಿಸಿದೆನು ಈತನನು
ಯಾಕೀ ವರೆಗೆ ಕಾಣಿಸಿಕೊಳ್ಳ ಶಿವನು
ಯಾಕೆನ್ನ ಪಣೆಯೊಳು ಬರೆದ ಲೋಕೇಶನು ॥
ಯಾಕೆ ನಾ ತಪವ—ತೊರೆದೆನು ೫೪

ಜಯ ಜಯ ಗಂಗಾಧರ ಮಹಾದೇವ
ಜಯ ಜಯ ನಂಬಿದ ಶರಣರ ಕಾವ
ಜಯ ಜಯ ಸಚ್ಚಿದಾನಂದ ಸದಾಶಿವ
ಜಯ ಜಯ ಹರಿಕಮಲಜರಿಷ್ಟವೀವ ॥
ಜಯ ವಿಶ್ವನಾಥ—ಸುರಪ್ರೀತ ೫೫

ಇವಳೀಗ ಸಾಕ್ಷಾತ ಮುನಿಮನೋವಂದ್ಯೆ
ಇವಳೀಗ ನಿಗಮಾರ್ಚಿತೆ ಸದಾ ರಮ್ಯೆ
ಇವಳೀಗ ಸುರಸಂಕುಲ ಸಾರ್ವಭೌಮ್ಯೆ
ಇವಳೀಗ ಭಕ್ತಹೃತ್ಕಮಲ ವಿರಮ್ಯೆ ॥
ಇವಳಾದಿ ಮಾಯೆ—ಶುಭಕಾಯೆ ೫೬

ಇಂತೆಂದು ಹರ ತನ್ನ ನಿಜವ ತೋರಿಸುತ
ದಂತಿಗಾಮಿನಿ ಶ್ರೀಚರಣಕೆರಗುತ
ಸಂತತ ಸುಖಿಯಾಗೆಂದಭಯವ ನೀಡುತ
ಸಂತೋಷವಾಗಿಯೆ ಉಮೆಯು ತಾನಿರುತ ॥
ಅಂತಕಾಂತಕನು—ಮೆರೆದನು ೪೭

ಚಂದ್ರಾಗ್ನಿ ಭಾಸ್ಕರ ಕೋಟಿ ಪ್ರಕಾಶ
ಇಂದ್ರ ದಿಕ್ಪಾಲರು ಎಡಬಲವಾಸ
ನಂದಿ ಗಣಪ ಮುಖ್ಯ ಪ್ರಮಥ ವಿಲಾಸ
ಚಂದದಿಂದೊಪ್ಪುವ ಪ್ರತಿ ಕೈಲಾಸ ॥
ವೃಂದಾರಕರೆಲ್ಲ—ನೆರೆದರು ೪೮

ಪರಮ ಯೋಗೀಂದ್ರರು ನಿಗಮ ನಾರಿಯರು
ಹರಿಯು ಶ್ರೀದೇವಿ ಸಮೇತದಿ ಬರಲು
ಸರಸಿಜಭವ ಶಾರದೆ ಮೈದೋರಲು
ಭರದಿಂದ ಭೂಸುರವರರೈತರಲು ॥
ಗಿರಿರಾಜನೆರಗಿ—ಇದಿರ್ಗೊಂಡ ೪೯

ಮದುವೆಯ ಮಾಳ್ಪುದು ಒದಗಿ ನೀವೆಲ್ಲ
ಪದುಮಲೋಚನೆ ದಣದುದ ಶಿವ ಬಲ್ಲ
ಮದುಮಗ ಶಿವನಾಗಲಿ ತಡವಿಲ್ಲ
ಚದುರೆಯರೆಲ್ಲರು ಶೃಂಗರಿಸಲಿ ಚೆಲ್ವ ॥
ಮಧುರ ಭಾಷಿಣಿಯ—ತನುಜೆಯ ೫೦

ರಮೆಯು ವಾಗ್ದೇವಿಯು ಶಚಿ ಮುಂತಾದವರು
ಉಮೆಯ ಮಜ್ಜನಗೈಸಿ ಶೃಂಗರಿಸಿದರು
ಅಮರಲೋಕದ ದಿವ್ಯಾಭರಣಂಗಳ ತಂದು
ವಿಮಲ ಚರಿತ್ರೆಗೆ ತೊಡಿಸಿದರಂದು ॥
ಸುಮಶರಸತಿಯನೊಡಗೂಡಿ ೫೧

ಕೊಪ್ಪು ಮೂಗುತಿಯೋಲೆಯೆಸೆವ ಬಾವುಲಿಯು
ಒಪ್ಪುವ ಸರಪಣಿಗಳು ಬಾಲಸರವು
ತಪ್ಪದೆ ಜಡಿವ ಚಳಕಿಯು ವೈಡೂರ್ಯವು

ಕರ್ಪೂರಗಂಧಿಗೆ ಕರ್ಣಾಭರಣವು ||
ಸರ್ವನಾರಿಯರು—ತೊಡಿಸಲು ೭೨

ಬಿಂದಿಕಾಯ್ ತಾಳಿಯು ಚಿಂತಾಕುಗಳ
ಚಂದದಿ ತಾಲೀಮಣಿ ಹವಳ ಸರವ
ಗಂಧ ಕಸ್ತೂರಿ ಕಮ್ಮಣ್ಣ ಜವಾದಿಯ
ಕಂದದೆ ಮರೆವ ಕೇದಗೆ ಸಂಪಗೆಯ ||
ಇಂದ್ರನರ್ಧಾಂಗಿ—ತೊಡಿಸಲು ೭೩

ಚಂದ್ರಸರವು ಮೋಹನ ಮಾಲೆಗಳು
ಚಿಕ್ಕ ಚಿಕ್ಕೆಸಳಿನ ಹೊಳೆವ ಮುಂದಲೆಯು
ಅರ್ಥಿಯೊಳಗೆ ಚಕ್ರಸರದ ಮಾಲೆಗಳು
ಪುಷ್ಕರನೇತ್ರೆ ಮಹಾಲಕ್ಷ್ಮಿ ತೊಡಿಸಲು ||
ಮುಕ್ಕಣ್ಣೀಶ್ವರನ—ಮಡದಿಗೆ ೭೪

ಕಡಗ ಹಿಂಬಳೆ ಚಳಕಿ ಹಸ್ತದೋರೆಗಳು
ನಡುವಿಗೆ ಮೆರೆವ ಕಾಂಚೀದಾಮಗಳು
ಬೆಡಗಿನ ತೋಳರಕ್ಷೆ ಧೀರಮುದ್ರಿಕೆಗಳು
ಜಡಜಜ ಪಿತರಾಣಿ ತಂದು ತೊಡಿಸಲು ||
ಮಡದಿ ಕುಲಮಣಿಗೆ—ಗಿರಿಜೆಗೆ ೭೫

ಕಣ್ಣಿಗೆ ಕಜ್ಜಳವನು ಕೊಡಿಸುತಲೆ
ಸಣ್ಣ ಮಲ್ಲಿಗೆಗಳು ತುರುಬಿನ ಮೇಲೆ
ಚಿನ್ನ ರಾಕುಟಿ ಜಡೆಗೊಂಡೆ ಹೊಳೆಯುತಲೆ
ಚೆನ್ನರ ಚೆಲುವೆಯ ಶೃಂಗರಿಸುತಲೆ ||
ಕನ್ನೆಯರ ವೃಂದ—ಮುದದಿಂದ ೭೬

ಹಣೆಗೆ ಕುಂಕುಮವನು ತಿಲಕವ ರಚಿಸಿ
ಕನಕಾಂಬರವನು ನೆರಿಹಿಡಿದುಡಿಸಿ
ಮನಕೊಪ್ಪುವ ದಿವ್ಯ ರವಕೆಯ ತೊಡಿಸಿ
ಜನಕ ಜನನಿಯರ ಪದಕಭಿನಮಿಸಿ ||
ಸನಕ ಸನಂದನೆಯು—ಮೆರೆದಳು ೭೭

ಮಕುಟ ಕಂಕಣ ದಿವ್ಯ ರತ್ನ ಹಾರಗಳು
ಮಕರ ಕುಂಡಲ ಮುತ್ತಿನ ಮಾಲೆಗಳು
ವಿಕಸಿತಾಂಬುಜನೇತ್ರೆ ಭವನಲಂಕರಿಸಲು
ಸಕಲ ಮುನೀಂದ್ರರು ಸುಮುಹೂರ್ತವೆನಲು ॥
ಅಖಿಳೇಶ ರುದ್ರ—ಭವ ಛಿದ್ರ ೭೮

ಅಂಬುಜಭವ ಚತುರ್ಮುಖದಿ ವೇದಗಳ
ಬೆಂಬಿಡದೋದಲು ಮಂತ್ರ ಘೋಷಗಳ
ತುಂಬುರು ನಾರದರು ಗೀತವ ಪಾಡಲು
ಕೊಂಬು ಕೊಳಲು ವಾದ್ಯ ದುಂದುಭಿ ಮೊಳಗುತ ॥
ಶಂಭು ಗೌರಿಯರು—ಮುರದರು ೭೯

ಅತ್ಯಂತ ಶುಭವಾದ ವರಲಗ್ನದೊಳಗೆ
ಇತ್ತನು ಮಗಳ ಗಿರೀಂದ್ರನು ಶಿವಗೆ
ಉತ್ತರೋತ್ತರವಾಯ್ತು ಮೂಲೋಕದೊಳಗೆ
ಮತ್ತಕಾಶಿನಿಯರಾರತಿಗಳ ಬೆಳಗೆ ॥
ಮೃತ್ಯುಂಜಯ ಶಿವಗೆ—ಜಯವೆಂದು ೭೦

ಮಂಗಲಂ ಪುರಹರ ಪರಮಪಾವನಗೆ
ಮಂಗಲಂ ಮೆರೆವ ಗಿರೀಂದ್ರ ಸಂಭವೆಗೆ
ಮಂಗಲಂ ಹಾಲಾಹಲವನುಂಡವಗೆ
ಮಂಗಲಂ ಶ್ರೀನಿತ್ಯ ಸರ್ವಮಂಗಲೆಗೆ ॥
ಮಂಗಳಾರತಿಯಾ—ಬೆಳಗಿರೆ ೭೧

ಸುರರು ಕಿನ್ನರರು ಭೂಸುರರು ಯೋಗಿಗಳು
ನರಹರಿ ಲಕ್ಷ್ಮೀ ದಿವ್ಯಮೂರ್ತಿಗಳು
ಸರಸಿಜಭವ ವಾಣಿಯಷ್ಟವಸುಗಳು
ತೆರಳಿದರ್ ನಿಜವಾಸಕೆ ವಿಭವದೊಳು ॥
ನೆರೆದವರೆಲ್ಲ—ಮುದದಿಂದ ೭೨

ಹರನು ಪಾರ್ವತಿಯರು ಪರಮ ವೈಭವದಿ
ಮೆರೆವ ಕೈಲಾಸಾದ್ರಿಯ ಮಂದಿರದಿ
ತೆರಳಿ ವಿಲಾಸದೊಳಿರ್ದರು ಸುಖದಿ

ಶರಜನ್ಮ ಪುಟ್ಟಿ ತಾರಕನನಾಹವದಿ ।
ಶಿರವ ಚೆಂಡಾಡಿ—ಪೊರೆದನು ೭೩

ಇಳೆಯೊಳುತ್ತಮ ಪಂಜವೆಂಬ ಪಟ್ಟಣದಿ
ನೆಲಸಿ ಮೆರೆವ ಸದಾಶಿವನನುಗ್ರಹದಿ
ಲಲಿತ ಕನ್ನಡ ಭಾಷಾಕೃತಿಯೊಳೀ ಕಥೆಯನು
ನಲವಿಂದ ರಚಿಸಿದಾನಂದ ರಾಜೇಂದ್ರನು ॥
ಒಲಿದು ಸಜ್ಜನರು—ಮೆರಸುವುದು ೭೪

ಈ ರೀತಿಯಲಿ ಗಿರಿಜಾಪರಿಣಯವ
ನೂತನದಲಿ ಬರೆದೋದಿ ವರ್ಣಿಸುವ
ನೀತಿಯುತ್ತಮರಾದ ನಾರೀ ಪುರುಷರನ್ನು
ಧಾತ್ರಿಗುತ್ತಮ ಕಣ್ವಪುರದ ಗೋಪಾಲನು ॥
ಪ್ರೀತಿಯೊಳೆಡೆಬಿಡದೆ—ಪೊರೆವನು ೭೫

## 72. ಮಂತ್ರಾಕ್ಷತೆ

ಶ್ರೀಗಿರಿಜೆಯ ಶಶಿಧರನು
ರಾಗರಸದಿ ವರಿಸಿದನು
ಆಗಮೋಕ್ತವಾಗಿ ಮದುವೆ
ಯಾಗಿ ವೇದಘೋಷದಿ
ಆಗ ಯೋಗಿ ಯೋಗ ವಿಪ್ರ
ಸಾಗರ ವಿಲಾಸದಿ
ಭೋಗಿ ಭೂಷನಾಗಿ ಮೆರೆವ
ನಾಗಚರ್ಮಾಂಬರಗೆ ಶಿವಗೆ ॥
ಬೇಗ ಮಂತ್ರಾಕ್ಷತೆಯ—ತಳಿದರು ೧

ನಗಧರನಾಪ್ತನೆಂದೆನಿಸಿ
ಸುಗುಣಚರಿತ ಭವನೆನಿಸಿ
ನಿಗಮಾಳಿಗಳ ಬಗೆಯದಾತ
ಮೃಗವೀರಾಸನಸ್ಥನು
ಜಗದೊಳಗಲದಗಣಿತದ

ಚರಿಸುವ ಮೃಗಯಾವಿಹಾರವ ಬಯಸಿ
ಸರಸಿಜನೇತ್ರೆಯ ಖಳ ಕೊಂಡೊಯ್ಯಲು
ಕುರುಹನರಿತು ವಿಹಗೇಂದ್ರಗೆ ಮುಕ್ತಿಯ
ನಿತ್ತ । ಪ್ರಾಣಾತ್ಮಜನಿಗೆ ನಿಜ
ತೆತ್ತ । ಇನಸಂಜಾತಗೆ ಗುಣ
ವಿತ್ತ । ಶ್ರೀ ಸೀತಾರಾಮಗೆ ॥
ಸರಸಿಜದಾರತಿಯಾ—ಬಳಗಿರೆ ೨

ಇನಜನಿಗಾಗಿ ವಾಲಿಯ ಕೊಂದವಗೆ
ವನಧಿಯ ಕಪಿಸೇನೆಯಿಂದ ಕಟ್ಟಿದಗೆ
ಹನುಮನೊಡನೆ ಖಳಪುರವನು ದಹಿಸಿ
ದನುಜ ದಶಾನನನನ್ನು ನಿಗ್ರಹಿಸಿ
ಮುನಿದಾ ಕುಂಭಶ್ರವಣನ ಮರ್ದಿಸಿ
ವಿನಯದಿ ಶರಣನ ಕುವಲಯ ಪಟ್ಟದೊ
ಳಿರಿಸಿ । ಭೂಧಿಸುತಾ ಸೀತೆಯ
ವೆರಸಿ । ಅಯೋಧ್ಯಾವನಿಯೊಳು
ನೆಲಸಿ । ಇಹ ಸೀತಾರಾಮಗೆ
ವನಜದಾರತಿಯಾ—ಬೆಳಗಿರೆ ೩

ಭಕ್ತವತ್ಸಲ ಭವಭಯ ವಿನಾಶನಿಗೆ
ಮುಕ್ತಿದಾಯಕ ಪರವಸ್ತುರೂಪನಿಗೆ
ನಿತ್ಯನಿರಂಜನ ನಿಜವೆಂಬವಗೆ
ಉತ್ತಮಪುರುಷರ ವೇಷನಾದವಗೆ
ನಿತ್ಯಾತ್ಮಕ ನಿರ್ಮಲ ನಿಶ್ಚಿಂತಗೆ
ಪ್ರತ್ಯಗಾತುಮ ಪರಮಾತ್ಮನೆನ್ನಿಸುವಾ
ನಂದ । ಸಚರಾಚರದೊಡೆಯಾ
ನಂದ । ಸದ್ಗುಣಗಣ ಭರಿತಾ
ನಂದ । ಸತಿ ಸಹಿತಗೆ ಪೊಗಳುತ
ಮುತ್ತಿನಾರತಿಯಾ—ಬೆಳಗಿರೆ ೪

ಕುಂದ ಕುಟ್ಮಲರದನೇಂದು ರುಚಿರಗೆ
ಇಂದಿರೆಯರಸ ಮುಕುಂದನಾದವಗೆ
ಮಂದಗಮನೆಯರು ಪಾಡುತ್ತ ಪೊಗಳಿ
ಮಂದಸ್ಮಿತ ವದನನೆನ್ನುತ ಪೇಳಿ
ಸುಂದರೆಯಿಂದಿರೆ ಸೌಂದರೆ ಸೀತೆಗೆ
ಚಂದದಿ ಪೊಗಳುತ ಬಂದು ಸತಿಯರು
ಸಿಂದು । ಸೇಸೆಯನಾಗಳೆ ತಳಿ
ದಂದು । ಬಲು ವಾದ್ಯದ ಘೋಷದೊ
ಳಿಂದು । ಗುರು ಪಂಚಲಿಂಗೇಶಗೆ ॥
ಚಂದದೊಳಾರತಿಯಾ—ಬೆಳಗಿರೆ ೫

## 74. ಮಂಟಪದಿಂದ ತೆರಳುವದು (ಧಾರೆಯಾಗಿ ವಧುವರರು ಒಳಗೆ ಹೋಗುವದು)

ಶ್ರೀರಮಣನ ವಸುದೇವ ಕೈವಿಡಿದು
ಶ್ರೀರಮಣಿಯು ಸೆರಗನು ಕೈಯೊಳ್ ಪಿಡಿದು
ಚಾರು ಮಂಟಪದಿಂದ ತೆರಳುವ ವಿಭವವ
ನಾರು ಬಣ್ಣಿಸುವರೊ ಕೋರಯಿಸಲು ಕಣ್ಗೆ ॥
ಭೂರಿ ವಾದ್ಯಗಳ—ವಿಭವದಿ ೧

ಮುತ್ತಿನ ರಝಲ್ಲರಿ ಚಿತ್ರದಂಬರವು
ಚಿತ್ರವಿಚಿತ್ರದಿ ಕಾಣಲು ಹೊಳವು
ಮುತ್ತೈದೆಯರಾಡುವ ಮಧುರೋಕ್ತಿಯೊ
ಳರ್ಥಿಯನಾಲಿಸುತೊಯ್ಯನೆ ವಧುವರ ॥
ರಿತ್ತ ಮಂದಿರಕೆ—ತೆರಳಲು ೨

ಕನ್ನೆಯ ಸೆರಗನು ಮಲ್ಲಿಗೆ ಮುಡಿಯ
ಕನ್ನಡಿ ಕದಪಿನ ಕಮಲಲೋಚನೆಯ
ತನ್ನೆಡಗೈಯಲಿ ಛತ್ರ ಫಲಂಗಳ
ಕನ್ನೆಯರೆಡಬಲದಲಿ ಸಮಧರಿಸುತ ॥
ತನ್ನ ಮಂದಿರಕೆ—ಸರಿಯಲು ೩

ಕರ್ಣದ ಬಾವುಲಿ ಚಿನ್ನದುಂಗುರವ
ಕನ್ನಡಿ ಕಂಕಣವೆಸೆವ ಮೂಗುತಿಯು
ಮನ್ನಣೆಯಿಂದಲಿ ಮನ್ನಿಸಿ ನೋಡುತ
ಕರ್ಣಕುಂಡಲದೊಲಪಿನ ಪರಿಚರ್ಯದಿ ॥
ಚಿನ್ಮಯನ್ಯೆದಿವನು—ಮುದದಿಂದ ೪

ಅಂಬರಕಾಯಸು ಸಂಭ್ರಮದಿಂದ
ತುಂಬುರ ಮಸು ಮುನಿ ಮಂತ್ರಗಳಿಂದ
ಕೊಂಬು ಕೊಳಲು ನಾನಾ ರವದಿಂದಲಿ
ಅಂಬುಜನೇತ್ರನು ಗುರು ಪಂಚಲಿಂಗನ ॥
ಬೆಂಬಿಡದೆ ಪೊಗಳೆ—ಸರಿದನು ೫

## 75. ಅರಳಿಕ್ಕುವುದು (ಲಾಜಹೋಮ)

ಶ್ರೀಗುರುವಿನ ಪದಕಮಲವ ನೆನೆದು
ನಾಗಶಯನ ಕೃಷ್ಣರೂಪವ ತಳೆದು
ಆಗಮವಿಧಿವಿಹಿತದ ವೈದಿಕದಿ
ನಾಗವೇಣಿಯ ರುಕ್ಮಿಣಿಯ ವೈಭವದಿ
ಯೋಗಮೂರುತಿ ಪೌರೋಹಿತಮತದೊಳ
ಗಾಗಳೆ ಲಾಜಸುಹೋಮ ಮುಹೂರ್ತದಿ ॥
ಬೇಗ ಬಂಧುಗಳು—ಮುದದಿಂದ ೧

ಕನ್ನೆಯ ಕರಕಮಲಂಗಳ ನೋಡಿ
ತನ್ನ ಸಹೋದರ ರುಕ್ಮಿ ಕೈನೀಡಿ
ಮನ್ನಿಸಿ ಮನ್ನಣೆಗಳ ಮತಿಗೂಡಿ
ಉನ್ನತ ಹರುಷಾನಂದದೊಳಾಡಿ
ಕನ್ಯಾಮಣಿಯು ಕರಾಂಬುಜದೆಡೆಯಲಿ
ನಣ್ಣ ಕಲಮಲಾಜಂಗಳ ಹಾಯ್ಕಿದ ॥
ನುನ್ನತ ವಿಭವದಲಿ—ಸೊಬಗಿಲಿ ೨

ವಾರಿಜಲೋಚನ ಕಾರಣವರಿದು
ನಾರಿಯ ಕರಕಮಲಂಗಳ ಪಿಡಿದು
ತಾರೆನ್ನುತಲಿ ಸುವರ್ಣದ ತಳಿಗೆಯ
ಪೇರಿಸಿ ಲಾಜವ ವೈದಿಕ ವಿಧಿಯ
ಸಾರದಿ ಹೋಮಿಸಿಯುಡುಗೊರೆ ಸಹಜನಿ
ಗೇರಿಸಿ ಶ್ರೀಗುರು ಪಂಚಲಿಂಗೇಶನ ॥
ಸಾರಿ ಪೊಗಳಿದರು—ಸುಜನರು ೩

## 76. ಊಟಕ್ಕೆ ಕರೆದದ್ದು

ಬನ್ನಿರಿ ಬನ್ನಿರಿ ಬೀಯಗರೆಲ್ಲರು
ಇನ್ನು ಊಟದ ಗೃಹಕೆ
ಮುನ್ನವೆ ಸಿದ್ಧತೆಗೊಳಿಸುತಲೆಲ್ಲವ
ಬನ್ನಿರೆಂದೆನ್ನುತಲಿಹರು ಪ

ಮಡಿಯೆನ್ನುವವರಿಗೆ ಬಿಡದಿಯು ಬೇರಿದೆ[1]
ಸಡಗರದೊಳು ಬನ್ನಿ
ನಡುವಿನ ವಸ್ತ್ರವ ಸಡಿಲಿಸಲಾರದ
ಕಡು ಬೆಡಗಿನವರಿಗೆಡೆಯಿದೆ ಬನ್ನಿ ೧

ಬುಧಜನರಿಗೆ ಬೇರೆ ಸುದತಿಯರಿಗೆ ಬೇರೆ
ಮುದುಕರಿಗಿದೆ ಬೇರೆ
ಒದಗಿದ ಬಾಲ ಬಾಲಕಿಯರ ಸ್ಥಳಗಳು
ಮೊದಲಿಗೆಲ್ಲವನೇರ್ಪಡಿಸಿಹೆವು ೨

ಸಾಲುಮಣೆಯನಿಟ್ಟು ಸಾಲು ತಂಬಿಗೆಯ್ಹಿಟ್ಟು
ಜಲವನು ತುಂಬಿಟ್ಟು
ಶೀಲೆಯರ್ ನಲಿಯುತ ಹಾಲು ತುಪ್ಪಗಳನ್ನು
ಮೇಲೆ ಮೇಲೆ ತಂದು ಬಡಿಸುವರು ೩

1 ಬೇರಿದೆ—ಬೇರೆ ಸ್ಥಳವಿದೆ

ಉಪ್ಪು ಉಪ್ಪಿನಕಾಯಿ ಹಪ್ಪಳ ಸೆಂಡಗೆ
ಒಪ್ಪುವ ಅನ್ನಗಳು
ಒಪ್ಪವಾಗಿಹ ಹುಳಿ ಪಲ್ಯಗಳೆಲ್ಲವ
ತಪ್ಪದೆ ಕ್ರಮದೊಳು ಬಡಿಸುತಲಿಹರು ೪

ಕೇಸರಿ ಕರೆಗಳು ಬಾಸುಂಡಿ ಪುರಿಗಳು
ಬೇಸಿನುಂಡೆಯು ಸೆಂಡಿಗೆ
ಕಾಸಿ ಸೋಸಿರುವ ಬಿಸಿನೀರುಗಳನ್ನು
ಆ ಶಶಿವದನೆಯರ್ ಕೇಳುತಲಿಹರು ೫

ಮಾಡಿದಡಿಗೆಯೊಳು ನೋಡಿ ಬೇಕಾದುದ
ಗಾಢದಿ ತರಿಸುವೆವು
ಕೂಡಿ ನೀವೆಲ್ಲರು ಸುಖದೊಳು ಭೋಜನ
ಮಾಡಿರಿ ಸಂತಸದೊಳಗೆ । ಬೀಯಗರೇ ೬

## 77. ಎಡೆ ಮಾಡುವದು

ವರವಿವಾಹ ರಚಿತ ರತ್ನ
ದೆರಕದ ಮಂಟಪಕೆ ಗಿಂಡಿ
ಕರದಿ ಪಿಡಿದು ಪೌರೋಹಿತರ
ವೆರಸಿ ಬಂದು ನಿಂದು ಸಭೆಗೆ
ಕರವ ಮುಗಿದು ಸರ್ವರು ಶ್ರೀ
ಚರಣ ತೊಳೆದು ಮಡಿಯನುಡಿರೆಂ ॥
ದೊರೆದು ಪೊರವಂಟ—ಸಭೆಗಂದು ೧

ನೆಲನ ಸಾರಿಸುತ್ತ ಹೊನ್ನ
ಕಲಶವನ್ನೆಲ್ಲವರಿಗಿತ್ತು
ನಲವಿನಿಂದಾಸನವನಿರಿಸಿ
ಒಲಿದು ಬಾಡಿಸಿಟ್ಟು ಬಾಳೆ
ಯೆಲೆಯಿಡುತ್ತ ಶುದ್ಧ ಜಲದಿ
ತೊಳೆದು ಕುಳ್ಳಿರೆನುತ ಹರುಷ
ತಳೆದು ನಡೆತಂದ—ಸಭೆಯಲ್ಲಿ ೨

ಮಾಂಗಲ್ಯ ಮೂರ್ತಿಯನು ವಿಪ್ರ
ಪುಂಗವರಿಗಾವಾಹಿಸುತ್ತ
ಪೊಂಗಳಸವ ಹರಿವಣವ
ಸಂಗಡವೆ ಜೋಡಿಸುತ ಕರದಿ
ಮಂಗಲಾಕ್ಷತೆಯ ನೀಡಿ
ಸಂಗಡ ಅಭಿಘಾರ ಮಾಡಿ
ಹಿಂಗದೆ ಬಡಿಸಲಿಕೆ—ನೆರೆದರು ೩

ಅಲ್ಲಲ್ಲಿಗೆ ತಕ್ಕ ಜನರ
ಅಲ್ಲಲ್ಲಿಗೆ ಬರಿಸಿ ಇರಿಸಿ
ಎಳ್ಳಿನಷ್ಟು ವಾದ ಭೇದ
ವಿಲ್ಲದಿಂದು ಇಕ್ಕಿರೆಂದು
ಬಲ್ಲಿದ ಸ್ನೇಹಿತರು ಕೂಡು
ತಲ್ಲಲ್ಲಿಗೆ ಜೋಡುಗೂಡಿ ॥
ನಿಲ್ಲದೆ ಬಡಿಸಿದರು—ಸಭೆಯಲ್ಲಿ ೪

ಸಾರವಾದ ಪಾಯಸವು
ಖಾರದುಪ್ಪಿನ ಕಾಯಿ ನೀ
ರೂರಿಪ ಕೋಸಂಬರಿ ಹದಿ
ನಾರು ಬಗೆಯ ತಾಳಿಲು ವಿ
ಸ್ತಾರದ ಚಿತ್ರಾನ್ನ ಸಹಿತ
ನಾರಿ ಪುರುಷರು ಶಾಲ್ಯನ್ನವ ॥
ಭೂರಿ ಸಭೆಗೆಲ್ಲ—ಬಡಿಸ್ಯಾರು ೫

ತೋವೆ ತುಪ್ಪ ಸೆಂಡಿಗೆಯು
ಮಾವಿನುಪ್ಪಿನ ಕಾಯಿಯು
ತೀವಿದ ತಾಳಿಲು ಪಳದ್ಯ
ತೀವಿ ಶಾಕ ನೈವೇದ್ಯವು
ಭಾವಿಸುತ್ತ ಸಭೆಗೆ ತಂದು
ಸಾವಧಾನವಾಯಿತೆಂದು ॥
ಸೇವಕರ್ಳೈತಂದು—ನುಡಿದರೆ ೬

ಬಾಳೆದೊನ್ನೆ ಮೇಲೆ ಜೇನು
ಹಾಲು ತುಪ್ಪ ಇಕ್ಕಿರೆಂದು
ಬಾಲಕರುಬ್ಬುತ್ತಲಂದು
ಚಾಲುವರಿದು ಪೇಳಿರೆಂದು
ಸಾಲು ಸಾಲು ಮೇಲು ಮೇಲು
ತೋಲು ತೋಲು ಭಕ್ಷ್ಯಗಳನು ॥
ಸಾಲದೊ ಬೇಕೇಂದು—ಬಡಿಸ್ಯಾರು ೭

ಸಣ್ಣಕ್ಕಿ ಅನ್ನಕ್ಕೆ ನೀರ
ಚೆನ್ನಾಗಿ ಪ್ರೋಕ್ಷಣೆಯ ಮಾಡಿ
ತನ್ನ ಕರದೊಳವರ ಕೈಯ
ಸನ್ನಿದು ನಗುತ್ತ ನೋಡಿ
ಮುನ್ನ ಪರಿಷಿಂಚನೆಯ ಮಾಡಿ
ಚೆನ್ನಾಗಿ ಸಂಭ್ರಮದಿ ನೋಡಿ ॥
ಅನ್ನಸೂಕ್ತಗಳ—ಜಪಿಸ್ಯಾರು ೮

ಹುರಿದ ಹಪ್ಪಳ ಸೆಂಡಿಗೆಯು
ಪರಡಿ ಪಾಯಸ ಕಜ್ಜಾಯವು
ಸರಸದ ಹೋಳಿಗೆ ಕಡುಬು
ತರಿಸಿ ತರಿಸಿ ಹೆಡಗೆ ಹೆಡಗೆ
ಇರಿಸಿ ಇರಿಸಿ ಪಂಕ್ತಿ ಪಂಕ್ತಿ
ಗೆರಕವಾಗಿ ಸಮಧರಿಸಿ ॥
ಹರುಷದಿ ಮಂಟಪಕೆ—ನಡೆದರು ೯

ಚಿನ್ನದ ಹರಿವಾಣ ಹರವಿ
ಯನ್ನು ಕರದಿ ಪಿಡಿದು ನೆರೆದು
ಸಣ್ಣಕ್ಕಿ ಶಾಲ್ಯನ್ನವಿಕ್ಕಿ
ಚೆನ್ನಾಗಿ ಬಡಿಸುತ್ತ ಸಭೆಗೆ
ಬನ್ನಿ ಬೇಗ ತನ್ನಿರೆಂದು
ಇನ್ನು ಜಾಪ್ಯವಾಗದೆಂದು ॥
ಮನ್ನಿಸುತಲೊದಗಿ—ಬಡಿಸ್ಯಾರು ೧೦

ತರತರದ ಶಾಕಪಾಕ
ಪರಿಪರಿ ಸೀಕರಣೆ ಭಕ್ಷ್ಯ
ಪಿರದೆ ಸಭೆಗೆ ತರಿಸಿಕೊಂಡು
ಪರಿತೋಷದಿ ಬಡಿಸಿರೆಂದು
ನೆರೆದೊಂದುಗೂಡಿ ಜನರು
ಕರೆದು ಒರೆದು ಸಮುಧರಿಸಿ ॥
ಹರುಷದಿ ಬಡಿಸಿದರು—ಸಭೆಗೆಲ್ಲ ೧೧

ಗೋಧಿ ಮಧು ಗೋರಸ ಸಕ್ಕರೆಯೊ
ಳಾದ ಹಲವು ಭಕ್ಷ್ಯಗಳನು
ಸಾದರದಿ ತಂದು ನಿಂದು
ಸ್ವಾದು ನೋಡಿರೆಂದು ಒರೆದು
ಭೇದವಿಲ್ಲದಿಕ್ಕಿರೆಂದು
ವಾದಗುಟ್ಟಬೇಡಿರೆಂದು ವಿ ॥
ನೋದದಿಂದೊಲಿದು—ಬಡಿಸ್ಯಾರು ೧೨

ಸಾರು ಅಪ್ಪ ಕಚ್ಚಾಯ
ಗಾರಿಗೆ ಸುಕ್ಕಿನುಂಡೆಯು
ಬೇರೆ ಕದಳಿ ಕರ್ಜೂರಗಳ
ಭೂರಿ ಸಭೆಗೆ ತಂದು ನೆರೆದು
ಬೇರೆ ಬೇರೆ ಸರ್ವತ್ರಕೆ
ತೋರಿ ತೋರಿ ಇಕ್ಕಿರೆಂದು ॥
ಸಾರಿಸಿ ಬಡಿಸಿದರು—ಸಭೆಯಲ್ಲಿ ೧೩

ಏಕೋ ವಿಷ್ಣು ಏಕೋ ಮೂರ್ತಿ
ಆಕಾಶೋದಾರ ಕೀರ್ತಿ
ಲೋಕಕಾನಂದ ಕೈವರ್ತಿ
ಲೋಕಾಲೋಕ ಸಂಪೂರ್ತಿ
ಲೋಕದ ಜನಕೆಲ್ಲ ತೃಪ್ತಿ
ಯಾಕಾರದ ಪ್ರಕೃತಿಯಾಯ್ತು ॥
ಲೋಕದ ಜನಕೆಂದು—ಪೊಗಳ್ಯಾರು ೧೪

ಪಂಚಭಕ್ಷ್ಯ ಷಡ್ರಸಾನ್ನ
ವಂಚಿಸದೆಡೆಯೊಳಗಿಕ್ಕಿ
ಪಂಚಲಿಂಗಾರ್ಪಿತವಿದೆಂದು
ಪಂಚಬ್ರಹ್ಮಾರ್ಪಣವ ಗೈದು
ಪಂಚಪ್ರಾಣಾಹುತಿಯ ಕೊಂಡು
ಮುಂಚಿತಾದುವಚರಣೆಯಿಂದ ॥
ಕಿಂಚಿತ ಜಲವೆಡೆಗೆ—ತಳಿದರು ೧೫

ಉತ್ತಮರು ಬಹಳ ದಯೆ
ಯಿತ್ತು ಬನ್ನಿರೆಂಬ ಮಾತು
ಹೊತ್ತು ಬಹಳವಾಯಿತೆಂದು
ಚಿತ್ತದಲ್ಲಿ ಗ್ರಹಿಸದಿಂದು
ಕರ್ತೃ ಪಂಚಲಿಂಗ ಮೂರ್ತಿ
ಗಿತ್ತು ಸಾರನ್ನದಲಿ ತೃಪ್ತಿ ॥
ಯಿತ್ತು ಸಮಾಧಾನವಾಗಬೇಕು ೧೬

## 78. ವರಪೂಜೆ

ವರನ ಪೂಜೆಯ ಗೈದನು । ಜನಕ ರಘು
ವರನ ಪೂಜೆಯ ಗೈದನು ಪ
ಧರಣಿ ಜಾತೆಯ ಸೌಭಾಗ್ಯ ಸುಮಂಗಲ
ಪರಮ ಪವಿತ್ರ ಪಾದವನತಿ ಪ್ರೇಮದಿ ಅ ಪ

ಪಕ್ಷಿವಾಹನನೆ ನಿನ್ನ । ಆಗಮನವ
ಈಕ್ಷಿಸುತಿರುವೆ ಮುನ್ನ
ಈ ಕ್ಷಿತಿಯೊಳು ನಮ್ಮ ಕುವರಿಯ ನಿನಗಿತ್ತು
ಅಕ್ಷತವಿಡಿಸುತ ಅಕ್ಷಯಾತ್ಮಕನನ್ನು ೧

ಪದುಮನಾಭನ ಪಾದವ । ಕರದೊಳಗೆತ್ತಿ
ದಧಿ ಮಧು ಕ್ಷೀರಗಳ
ಮುದದೊಳು ಗಂಧಪುಷ್ಪಾಕ್ಷತೆಗಳನಿತ್ತು
ಮಧುಪರ್ಕಗಳನು ಸಂತೋಷದಿ ಕೊಡುತಲಿ ೨

ಗಂಗೆ ಭಾಗೀರಥಿಯ । ನಿರ್ಮಲವಾದ
ಸಂಗಮ ಕಾವೇರಿಯ
ಮಂಗಲಾಂಗಿಯರು ತಂದಿತ್ತರು ಶೀಘ್ರದಿ
ಮಂಗಲ ಮೂರ್ತಿಗೆ ಶೃಂಗಾರದಿಂದಲಿ ೩

ಬೆಳ್ಳಿಯ ಕುಂಭದೊಳು । ಮಂತ್ರಗಳಿಂದ
ಒಳ್ಳೆ ಗಂಗೋದಕವ
ಎಲ್ಲರ ಮನಕೆ ಉಲ್ಲಾಸವ ತೋರುತ್ತ
ಫುಲ್ಲನಾಭನ ಪಾದ ಕಮಲವ ತೊಳೆಯುತ ೪

ಮುತ್ತು ಮಾಣಿಕ ಮಕುಟ । ದಾರಂಗಳು
ಕೆತ್ತಿದುಂಗುರ ಪದಕ
ಸುತ್ತಿದ ಚೀನ ಪೀತಾಂಬರ ಶಾಲನು
ಸತ್ಯಮೂರುತಿ ಶ್ರೀರಾಮಚಂದ್ರನಿಗಿತ್ತು ೫

## 79. ಉದಯಕಾಲದ ಶೋಭಾನೆ (ದಶಾವತಾರ, ತ್ರಿಪದಿ)

ಶ್ರೀ ಗುರುಗಣಪರ ಈಗ ನಾ ನೆನೆಯುತ್ತ
ವಾಗ್ದೇವಿಯ ಪಾದಕ್ಕೆರಗುತ—ಬಲಗೊಂಬೆ
ನಾಗಭೂಷಣನ—ಮುದದಿಂದ ೧

ವೇದವ ಖಳ ತಮನಾದಿಯೊಳೊಯ್ಯಲು
ಸಾಧಿಸಿಯವನ ತರಿಯುತ್ತ—ಜಗಕಿತ್ತ
ಆದಿ ಮತ್ಸ್ಯನಿಗೆ—ಶರಣೆಂಬೆ ೨

ಸುರರಸುರರು ಕೂಡಿ ಶರಧಿಯ ಮಥಿಸಲು
ಗಿರಿಯ ಬೆನ್ನಿನಲಿ ಕರುಣದಿ—ಪೊತ್ತಿಹ
ವರ ಕೂರ್ಮರೂಪ—ಶರಣೆಂಬೆ ೩

ಕ್ಷೋಣಿಯನೊಯ್ದಿಹ ದಾನವನ ಸಂಹರಿಸಿ
ತಾನೆಳೆದು ತಂದು ಸಲಹಿದ—ವರಾಹಗೆ
ನಾನೆರಗಿ ಮತಿಯ—ಪಡೆಯುವೆ ೪

ಅಣುಗ ಪ್ರಹ್ಲಾದನ ಕನಕಕಶಿಪು ಬಹು
ದಣಿಸಲು ಭಕ್ತಗೊಲಿಯುತ್ತ—ಸಲಹಿದ
ಗುಣನಿಧಿ ಶರಣು—ನರಹರಿ ೫

ಬಲಿಯು ದಾನವ ಬೇಡಿ ಇಳೆಯನೀರಡಿ ಮಾಡಿ
ತಲೆಯೊಳೊಂದಡಿಯ ಅಳೆದೆಯೊ—ವಾಮನ
ತಲೆಬಾಗಿ ಮಣಿವೆ—ಚರಣಕ್ಕೆ ೬

ಕೃತವೀರ್ಯನಣುಗನು ಯತಿಯ ಧೇನುವನೊಯ್ಯೆ
ಸುತನನು ಕರೆಯಲ್ಕೆತಂದು—ನೃಪನನು
ಹತಿಸಿದ ಭೃಗುರಾಮ—ಶರಣೆಂಬೆ ೭

ಶಶಿಮುಖಿ ಸೀತೆಯ ದಶಶಿರನೊಯ್ಯಲು
ಅಸುರನ ಸಂಹರಿಸಿ ಮುದದಿಂದರಸಿ ತಂದ
ದಶರಥಸುತ ರಾಮ—ಶರಣೆಂಬೆ ೮

ಶಿಶುಪಾಲನನು ಕೊಂದು ವಸುಧೆ ಭಾರವ ಕಳೆದು
ಕುಶಲದಿ ದ್ವಾರಕಿಗೆ ತೆರಳಿದ—ಚಿನ್ಮಯ
ವಸುದೇವ ಕೃಷ್ಣ—ಶರಣೆಂಬೆ ೯

ಸಿದ್ಧಾರ್ಥನಾಮದೊಳಿದ್ದು ವೈರಾಗ್ಯವ
ಸಿದ್ಧಿಸಿ ಹಿಂಸೆಗಳ ನಶಿಸಿದ—ಶುದ್ಧಾತ್ಮ
ಬುದ್ಧಗೌತಮನೇ—ಶರಣೆಂಬೆ ೧೦

ಕುದುರೆಯನೇರಿ ಬಂದೊದಗಿ ಮ್ಲೇಂಛರನೆಲ್ಲ
ಸದೆದು ಭಕ್ತರನು ಸಲಹುವ—ಕಲ್ಕ್ಯನ
ಪದಯುಗಕೆರಗಿ—ಶರಣೆಂಬೆ ೧೧

ವಸುದೇವನಿಗೆ ಮುದ್ದು ಶಿಶುವಾಗಿ ದೇವಕಿ
ಬಸಿರೊಳೆಂಟನೆಯ ಸುತನಾಗಿ—ಜನಿಸಿದ
ಅಸುರಮರ್ದನನೆ—ಸಲಹೆಮ್ಮ ೧೨

ಶ್ರಾವಣ ಬಹುಳದಿ ದೇವ ನೀ ನಡುವಿರುಳು
ಕಾವಲರ ನಿದ್ದೆ ಮಿಗಿಲಾಗೆ—ಜನಿಸಿದೆ
ದೇವ ರೋಹಿಣಿಯ—ದಿನದಲ್ಲಿ ೧೩

ತಂದೆಗಭಯವಿತ್ತು ನಂದಗೋಕುಲಕೈದಿ
ನಂದಗೋಪನಿಗೆ ಮಗನಾಗಿ—ಶ್ರೀಕೃಷ್ಣ
ನಂದನ ನೀನೆಂದು—ಸಲಹಿದೆ ೧೪

ಹುಟ್ಟಿದೇಳನೆ[1] ದಿನ ದುಷ್ಟ ಪೂತನಿ ಕೊಂದೆ
ದುಷ್ಟ ಧೇನುಕನ ಮಡುಹಿದೆ—ಶಕಟನ
ಮೆಟ್ಟಿ ಸಂಹರಿಸಿ—ಮೆರೆದೆಯ ೧೫

ನೆರೆಮನೆ ಹೊರಮನೆ ತುರುಗಾವರೊಡಗೂಡಿ
ಮುರಲಿಯ ಕರದಿ ಧರಿಸುತ್ತ—ನುಡಿಸುತ್ತ
ಹರುಷದಿ ಪಶುಗಳನು—ಸಲಹಿದೆ ೧೬

ಬಾಲೆ ಯಶೋದೆಗೆ ಲೀಲೆಯ ತೋರಿದೆ
ನೀಲನಿಭಾಂಗ ದಯಾಸಿಂಧು—ರಾಧೆಯ
ಲೋಲ ನೀನಾಗಿ—ಮೆರೆದೆಯ ೧೭

ಹದಿನಾರು ಸಾವಿರ ಸುದತಿಯರ ಮೋಹಿಸಿ
ಮುದವ ಬೀರಿದೆಯೋ ಜಗಕೆಲ್ಲ—ಕರುಣದಿ
ಮಧುರೆಯಾಳಿದನ—ಕರೆವಿಗೆ ೧೮

ಯಾದವಾಗ್ರಣಿ ಭಕ್ತನಾದ ಅಕ್ರೂರನ
ಆದರದಿ ರಾಮನೊಡಗೊಂಡು—ಮಥುರೆಗೆ
ನೀ ದಯೆಮಾಡಿ—ಮುದದಿಂದ ೧೯

ಹಂಸ ಡಿಬಿಕರ ಕೊಂದು ಸಂಶಯವಿಲ್ಲದೆ ಬಂದು
ಕಂಸನೋಲಗದ ಹೊರಗಿಂದ—ತಡೆದವರ
ಧ್ವಂಸವ ಮಾಡಿ—ನಲಿದಾಡಿ ೨೦

ಚಾಣೂರ ಮುಷ್ಟಿಕ ದಾನವರ ಸಂಹರಿಸಿ
ಆನೆಯ ಮಸ್ತಕವ ತುಳಿಯುತ್ತ—ಎಳೆದೆಯೋ
ನೀನೆರಡು ಶೃಂಗವದರೊಳು ೨೧

---

1 ಹುಟ್ಟಿದೈದನೆ

ಅಣ್ಣ ನೊಳೊಂದಿ ತನ್ನೊಳು ಹರುಷವನಾಂತು
ಸಣ್ಣ ಬಾಲಕರು ನಡೆತಂದು—ಕಂಸನ
ಮಣ್ಣ ಕೂಡಿಸಿದೆ—ಕರುಣಾಳು ೨೨

ಕ್ಷೋಣಿಯಧಿಪ ಉಗ್ರಸೇನನಿಗೆ ಮಧುರೆಯ
ನೀನೊಲಿದು ಕೊಟ್ಟೆ ದಯಾಸಿಂಧು—ಮಾಗಧ
ದಾನವನ ತರಿದೆ—ಮುದದಿಂದ ೨೩

ಧಾರಿಣಿಯೊಳಗುಳ್ಳ ಕ್ರೂರ ಶಿಶುಪಾಲಾದಿ
ಘೋರ ರಾಕ್ಷಸರ ಮಡುಹಿದೆ—ಶ್ರೀಕೃಷ್ಣ
ನಾರಿ ದ್ರೌಪದಿಗೆ—ಕರುಣದಿ ೨೪

ಸೀರೆಗಕ್ಷಯವಿತ್ತು ಸಾರಥಿ ಅರ್ಜುನಗಾಂತು
ಕ್ರೂರ ಕೌರವರ ಮಡುಹಿದೆ—ಕರುಣದಿ
ಧಾರಿಣಿಯಿತ್ತೆ—ಯಮಜಗೆ ೨೫

ಸತ್ಯಭಾಮೆಯು ನಿನ್ನ ಇತ್ತಳು ಋಷಿಗೆ ದಾನ
ಮತ್ತೆ ನಾರಿಯರು ಜರೆಯಲು—ಚಿಂತಿಸ
ಲತ್ತ ರುಕ್ಮಿಣಿಯು—ಮುದದಿಂದ ೨೬

ದ್ವಾರಕಿಯೊಳು ಹದಿನಾರು ಸಾವಿರದಷ್ಟು
ನಾರಿಯರನೆಲ್ಲ ಸುಖದೋರಿಸಿದ ಯದು
ವೀರ ಕಣ್ವೇಶ—ಸಲಹೆಂಬೆ ೨೭

## 80. ದಿಬ್ಬಣಿಗರು ಹೊರಡುವುದು

ಸುಂದರವದನೆ ಬಂಧುಗಳೊಡನೆ
ಚೆಂದದಿ ಹೊರಟೆವು ನಾವೀಗ
ಮಂದರಗಿರಿಯ ಕಂದರ[1] ದಾಟಿ
ಮಂದಿರ ಕಡೆಗೆ ಬಹು ಬೇಗ ಪ

1 ಕಂದರ—ಕಣಿವೆ

ಆನೆಗಳಿಲ್ಲ ಕುದುರೆಗಳಿಲ್ಲ
ನಡೆಯುತ ಹೊರಟೆವು ನಾವೀಗ
ಮೇನೆಗಳಿಲ್ಲ ತೇರುಗಳಿಲ್ಲ
ತುಳಿಯುತ ಹಾದಿಯ ನಾವೆಲ್ಲ ೧

ಹೊಳೆಗಳ ದಾಟಿ ಗಿರಿಗಳ ದಾಟಿ
ಮುಂದಡಿಯಿಡುತ ಬಹುದೂರ
ವೇಳೆಯ ಕಳೆಯಲು ಸಮಯವೆ ಇಲ್ಲ
ನಮ್ಮಯ ಊರು ಅತಿದೂರ ೨

ನಮ್ಮಯ ಸಂಗಡ ಎಲ್ಲಿಯು ತನಕ
ಸುಮ್ಮನೆ ಬರುವೆ ನಡೆ ನಡೆ ನೀ
ನಿಮ್ಮಯ ಮಾತನು ಬೇಗನೆ ಮುಗಿಸಿ
ನಮ್ಮನು ಹೋಗಲು ಬಿಡು ಬಿಡು ನೀ ೩

ಮನೆಯಲಿ ಕೆಲಸವ ಮಾಡುವರಿಲ್ಲ
ಆಕಳ ಕರೆವರು ಮೊದಲಿಲ್ಲ
ಸನುಮತದಿಂದಲಿ ನೀ ನಮಗೆಲ್ಲ
ಅನುಮತಿಯನು ಕೊಡು ಹೋಗುವೆವು ೪

ಬಲ್ಲಿದ ನೀ ನಮಗೆಲ್ಲರು ಹೋಗಲು
ನಿಲ್ಲದೆ ಒಪ್ಪಿಗೆಯನ್ನು ಕೊಡು
ನಿಲ್ಲಲು ನಮಗೆ ಸಮಯವೆ ಇಲ್ಲ
ಬೇಗನೆ ಹೋಗಲು ಬಿಡು ಬಿಡು ನೀ ೫

ನಿಮ್ಮಯ ಮನವೇ ನಮ್ಮಯ ಘನವು
ಸಮ್ಮತಿಸಿರಿ ಬರುವೆವು ನಾವು
ನಿಮ್ಮಯ ಉಪಚಾರವ ನಾವು ಕೊಳ್ಳುತ
ಘಮ್ಮನೆ ಹೋಗುವೆವೈ ಬೇಗ ೬

## 81. ಬೀಯಗರನ್ನು ನಿಲ್ಲಲು ಒತ್ತಾಯಿಸುವುದು

ಉಳಿಯಿರಿ ಈದಿನ ನಳಿನಾಕ್ಷಿಯರೆ
ವೇಳೆಗಳಾದವು ಚಲಮಾಡಬೇಡಿ ಪ

ಇಳಿಯುತ್ತ ಬಂದನು ಕೆಳಗೆ ಪಶ್ಚಿಮದಿ
ಮುಳುಗುವ ಸೂರ್ಯನೀಗಲೆ ರಥದಿಯಲಿ ೧

ಅವಸರವೇತಕೆ ನವಮೋಹನಾಂಗಿ
ಅವಕಾಶದಲೆ ಹೋಗುವಿರಂತೆ ನಾಳೆ ೨

ಅಕ್ಕರೆಯಿಂದಲಿ ಚಕ್ಕಂದವಾಡುತ
ನಕ್ಕು ನಲಿವ ಆಯತಾಕ್ಷಿಯರಿಂದು ೩

ಯಾವುದಾದರು ಸುಳ್ಳು ನೆವ ಹೇಳಬೇಡಿ
ನೋವಾಗುವುದೆನ್ನ ಜೀವಕೆ ಕಾಣೆ ೪

ಸರಿಯಾಗಿ ನಿಮಗುಪಚರಿಸಿಲ್ಲವೇನು
ಅರುಹಿರಿ ಹಾಗಾದ್ರೆ ಬೀಗರೆ ನೀವು ೫

ಹೆಚ್ಚು ಹೇಳೆನು ನಿಮ್ಮ ಇಚ್ಛೆಯ ಇನ್ನು
ಸ್ವಚ್ಛ ಹೇಳುವೆ ಎನ್ನ ಬಿಚ್ಚಿ ಮನವನು ೬

ದಾಕ್ಷಿಣ್ಯಗಳನು ಅಪೇಕ್ಷಿಸಿ ಇಂದು
ಮೋಕ್ಷದಾಯಕನ ಭಕ್ತರೆ ನೀವು ೭

## 82. ಚತುರ್ಥಿಗೆ ಹೇಳಿಕೆ ಕೊಡುವುದು

ಮಿತ್ರೆಯರೆ ಚತುರ್ಥಿಗೇ ಸಮಸ್ತರ್ ಬನ್ನಿರಿ
ಪುತ್ರಿ ವಧುವ ಅತ್ತೆ ಸಹಿತ ಇತ್ತಲೊದಗಿರಿ ಪ

ಅತ್ತೆ ಮಾವ ಅತ್ತಿಗೆ ನೀವರ್ಥಿಯಿಂದಲಿ
ಪುತ್ರ ಪೌತ್ರ ಮಿತ್ರ ಮೊತ್ತವೆತ್ತು ಸೊಬಗಿಲಿ ೧

ಮದುಮಗನಿಗೆ ಉದಾಸಿನಗಳು ಒದಗದಂದದಿ
ಮುದದಿ ಲೀಲೆಗೊದಗುತೋರ್ವ ಚದುರ ನಿಲ್ಲಲಿ ೨

ಕಾಲಕಾಲಕೆ ಹಾಲು ತುಪ್ಪದಿ ಬಾಲರುಣುತಲಿ
ಮೇಲೆ ಕಾಫಿ ಶೀಲರ್ಗಿತ್ತು ಪಾಲಿಪೆವಿಲ್ಲಿ ೩

ಸುಂದರಿಯರೆ ಮುಂದೇನೊರೆಯಲಿಂದು ನಿಮ್ಮಲಿ
ಚಂದದಿಂದ ನಂದಿಕೇಶ ಮುಂದೆ ನಡೆಸಲಿ ೪

## 83. ದಿಬ್ಬಣಿಗರು ಮದುಮಗನಿಗೆ ಹೇಳುವುದು

ಶ್ರೀಸುಕುಮಾರ ಶಿಖಾಮಣಿ ಮಗನೆ
ತೋಷದೊಳೊರೆವೆವು ಕೇಳು ಚೆನ್ನಿಗನೆ
ಕ್ಲೇಶವಿಡದೆ ನೀ ಮನದಿ ಸುಗುಣನೆ
ಲೇಸಿನೊಳಿರು ನಿನ್ನಯ ಸತಿಯೊಡನೆ
ಈ ಸಮಯದಿ ನಾವು ಪೋಗಿ ಬರುವೆವು ವಿ ॥
ಲಾಸದಿ ನಾಲ್ಕನೆಯ—ದಿನದಲ್ಲಿ ೧

ಅತ್ತೆ ಮಾವಂದಿರೊಳುತ್ತರ ಕೊಡದೆ
ಮತ್ತತಿಶಯ ಸಂಪ್ರೀತಿಯ ಬಿಡದೆ
ಉತ್ತಮನೆನಿಸಿಕೊಂಡಿರು ಧೃತಿಗೆಡದೆ
ಅತ್ತಿಗೆ ನಾದಿನಿಯರ ಭ್ರಮೆಪಡಿಸದೆ
ಮಿತ್ರರೊಳಧಿಕ ಸಲ್ಲಾಪದಿ ದಿನಗಳೆ ॥
ಯುತ್ತ ಸಂತಸದೊ—ಳಿರು ನೀನು ೨

ಸರಸ ವಿನೋದಂಗಳ ತರವರಿತು
ವಿರಸಗೊಳಿಸದಿರು ಮನದೊಳಗನಿತು
ನೆರೆ ಸಂವಾದಾನುಭವದೊಳು ಸೋತು
ಭರಿಸದಿರಪಹಾಸ್ಯಹ ನೀನೆಲ್ಲವ ॥
ಏರಕದೊಳಿರು ಮಗನೆ—ಸುಖದಿಂದ ೩

ವೇದ ಪುರಾಣಾದಿಗಳರ್ಥದಲಿ
ವಾದವನುಳಿದು ಗುಣದಿ ನಿತ್ಯದಲಿ
ಭೇದಾಭೇದವನರಿತು ಮನದಲಿ
ಸಾದರದಲಿ ವಿನಯವ ಹಿರಿಯರಲಿ
ಮೋದದೊಳಾಪ್ತ ಜನರಿಗತಿ ಹಿತವೆನಿ ॥
ಸಾದಿಮೂರುತಿಯ—ಬಲದಿಂದ ೯

ಧೀರನೆನಿಸಿಕೊಂಡಧಿಕಾನಂದ
ಸಾರಿ ಬಹೆವು ನಾಲ್ಕನೆ ದಿನದಿಂದ
ಮೀರದೆ ಮನದೊಳಗಧಿಕಾನಂದ
ಸೇರಿಸಲೆಮಗೆ ಮನೋಭೀಷ್ಟವ ಕೊ ॥
ಲ್ಲೂರಿನ ಪುರದೊಡತಿ—ದಯೆಯಿಂದ ೫೦

## 84. ನಕ್ಷತ್ರ ನೋಡುವದು

ಶ್ರೀ ಕೈಲಾಸ ಗಿರೀಶ್ವರನ । ಕರು
ಣಾಕರ ವರದ ಶಿವಶಂಕರನ
ಲೋಕದೊಡೆಯನ । ಲಕ್ಷ್ಮೀಪತಿ ಸಖನ ।
ಆ ಕಮಲಾಸನೆ ಪಾರ್ವತೀಶ ಶುಭ ॥
ದಾಕೆಯರುಂಧತಿಯ—ನೆನೆದರು ೧

ಚಂದ್ರನ ಶಿರದಿ ಧರಿಸಿದವನು । ಸುರ
ವೃಂದ ವಿನುತನಾಗೆಸೆದವನು
ನಂದಿವಾಹನನು । ನತಪಾಲಕನು ।
ಚಂದದಿ ವಿಧಿಜನ ಸತಿಯ ನಿರೀಕ್ಷಿಸಿ ॥
ಬಂದು ಸಲಹುವನು—ಮುದದಿಂದ ೨

ವರ ಕೊಲ್ಲೂರ ಪುರದಿ ಮೆರೆವ । ಸಿರಿ
ಯರಸನ ಸಖನೆಲ್ಲರ ಪೊರೆವ
ಶರಣವತ್ಸಲನು । ಸತಿ ಸಹಿತವನು ।
ಹರುಷದೊಳಗೆ ನಕ್ಷತ್ರ ನವೋ ಎಂ ॥
ದೆರಗಿ ಮಾನಸದಿ—ನುತಿಸ್ಯಾರು ೩

## 85. ಗಂಡನ ಪಾದ ತೊಳೆಯುವುದು[1]

ಬನ್ನಿ ಬನ್ನಿರೀ । ನೀವು । ಬೇಗ ಬನ್ನಿರಿ ।
ಪತಿಯೇ ನಿಮ್ಮ ಪಾದವ ತೊಳೆದು ಧನ್ಯಳಾಗುವೆನು ಪ

ಮುತ್ತಿನ ಹರಿವಾಣ । ಅದರಲಿ ನಿಮ್ಮ । ಪಾದವ ನೀಡಿರಿ
ನಿರ್ಮಲವಾದ ಜಲವನು ತಂದು ಪಾದ ತೊಳೆಯುವೆನು ೧

ಚಿನ್ನದ ಹರಿವಾಣ । ಅದರಲಿ ನಿಮ್ಮ । ಪಾದವ ನೀಡಿರಿ
ಶುದ್ಧವಾದ ಉದಕವ ತಂದು । ಪಾದ ತೊಳೆಯುವೆನು ೨

ಹೂವಿನ ಹರಿವಾಣ । ಅದರಲಿ ನಿಮ್ಮ । ಪಾದವ ನೀಡಿರಿ
ಪಾವನವಾದ ಗಂಗೆಯ ತಂದು । ಪಾದ ತೊಳೆಯುವೆನು ೩

## 86. ಗಂಧ ಹಚ್ಚಿದ್ದು

ಗಂಧ ಹಚ್ಚಿದಳು ರಾಧಾ ಮಂದರಾದ್ರಿಧರನಿಗೆ
ಇಂದುವದನೆ ಮಂದಗಮನೆ ದೇವಕಿಯ ತನಯಗೆ ಪ

ಮುತ್ತಿನಾ ಮಂಟಪಕೆ ಬಂದು ರತ್ನದಾ ಮಣೆಯ ಮೇಲೆ
ಹಸ್ತದಿ ಪನ್ನೀರ ಹಿಡಿದು ಅಚ್ಯುತನ ಚರಣ ತೊಳೆದು ೧

ರಜತ ಪಾತ್ರೆಯೊಳಗೆ ಇರಿಸಿ ಭರಿತ ಮಂಗಲಾಕ್ಷತೆಯ
ಸರಸಿಜಾಕ್ಷಿ ತನ್ನ ಪ್ರಿಯನ ಪಣೆಯ ಮೇಲೆ ತಳಿಯುತ ೨

ಸುರಗಿ ಸೇವಂತಿಗೆಯ ಪರಿಮಳಿಸುವ ಮಲ್ಲಿಗೆಯ
ಸರಸಿಜಾಕ್ಷಿ ತನ್ನ ಪ್ರಿಯನ ಮಿರುಗುವಂಥ ಕೊರಳಿಗೆ ೩

ಇಂದುಧರನ ಪ್ರಿಯನಾದ ಇಂದಿರೆಯ ರಮಣಗೆ
ಇಂದ್ರಲೋಕದಲ್ಲಿರುವ ಪಾರಿಜಾತ ತಂದಗೇ ೪

---

1 ಮದುವೆಯ ಮರುದಿನದಿಂದ ಪ್ರಾರಂಭಿಸಿ, ವಧುವು ವರನ ಪಾದ ತೊಳೆದು ಗಂಧ ಹಚ್ಚಿ ಪೂಜಿಸುವುದು ಹವ್ಯಕರ ಸಂಪ್ರದಾಯ. ಇದು ಉತ್ತರ ಕನ್ನಡ ಜಿಲ್ಲೆಯಲ್ಲಿ ರೂಢಿಯಲ್ಲಿದೆ. ನಿತ್ಯವೂ ಮಾಡತಕ್ಕ ಈ ಭಕ್ತಿಪೂಜೆ ಪ್ರಚಲಿತವಾಗಿ ನಾಲ್ಕು ದಿನ ಮಾತ್ರ (ಚತುರ್ಥಿಯ ವರೆಗೆ) ನಡೆಸಲಾಗುತ್ತದೆ. ಸತಿಗೆ ಪತಿಯೇ ದೇವರೆಂಬುದು ಇದರ ಸಂಕೇತವಿರಬಹುದು.

ನಿಚ್ಚಳದ ಗಿಂಡಿಯೊಳು ಸ್ವಚ್ಛವಾದ ನೀರ ತಂದು
ಇಚ್ಛೆಯಿಂದ ತೊಳೆದಳು ಅಚ್ಯುತನ ಪಾದವ ೫

ಇಂದಿರೇಶ ಮಂದಹಾಸ ಸುಂದರನ ಪಾದಕೆ ಆ
ನಂದದಿಂದ ಸಲಿಯುತ ಪರಿಮಳದ ಗಂಧವ ೬

## 87. ಮದುಮಕ್ಕಳು ಹಂದರಿಗೆ ಹೋಗುವದು

ಸುಂದರಾಗ ಸುಂದರಿಯರೊಂದುಗೂಡುತ
ಬಂಪರಾಗ ಹಂದರಿಗಾನಂದ ಬೀರುತ ಪ

ಹರಿಯು ನೆರಗ ಸಿರಿಯು ಪಿಡಿದು ಸರಸವಾಡುತ
ಬರುತ ಬರುತ ಉರಗಶಯನ ತಿರುಗಿ ನೋಡುತ ೧

ಮುದ್ದು ಮೊಗದ ಬಾಲೆ ಸನಗೆ ಬುದ್ಧಿ ತಿಳಿಯದು
ಎದ್ದು ಸಭೆಗೆ ಬರಲು ಕಡೆಗೆ ಸಿದ್ದ ತಿಳಿಯದು ೨

ನಾಚಿಕೆಯಲಿ ಧರೆಯನಿವಳು ಗೀಚುತಿರುವಳು
ಈ ಚರಾಚರವರಿಯದೆ ಯೋಚಿಸುವಳು ೩

ಲಕ್ಷ್ಮೀರಮಣರಿಂತು ನಟಿಸಿ ಪಕ್ಷಿಯಡರುತ
ಪಕ್ಷದವರ ಕೂಡಿ ನಡೆದ ವೆಂಕಟ್ರಮಣ ತಾ ೪

## 88. ಉರುಟಣೆ ಹಾಡು

ಕರಿಮುಖನಂಘ್ರಿ ಸರೋಜವನು
ಮನದೊಳು ಧ್ಯಾನಿಸಿ ಪೇಳುವೆನು
ಹರಿಯು ರುಕ್ಮಿಣಿಯ ವಿವಾಹದ ವೇಳ್ಯದಿ
ಉರುಟಣೆ ಗೈದಿಹ ಉರು ಸಂತೋಷದಿ
ಪರಿಪರಿ ಸಂಭ್ರಮದಿ—ಇರಲಂದು ೧

ವರ ಅರುಂಧತಿ ಮೊದಲಾದವರು
ವರ ಅನಸೂಯೆ ಮುಂತಾದವರು
ಅರಸಿನೆಣ್ಣೆಯ ಮಾಡಿ ಕರಕೆ ಅಕ್ಷತೆ ಕೊಟ್ಟು
ಅರಸಿ ರುಕ್ಮಿಣಿಯೊಡನತಿ ಸಂಭ್ರಮದೊಳು ॥
ನಗುತ ಉಸುರಿದರು—ನಲವಿಂದ ೨

ವರಕೋಕಿಲ ವಾಣಿಯೆ ನೀ ಬಾರೆ
ವರಮ ಕಲ್ಯಾಣಿಯೆ ನೀ ಬಾರೆ
ಸರಸಿಜ ನಯನೆಯೆ ಬಾರೆಂದೆನುತಲಿ
ವರ ಪಾರ್ವತಿದೇವಿಯು ಸಂತೋಷದಿ ॥
ರುಕುಮಿಣಿಯೊಡನೆ—ನುಡಿದಳೆ ೩

ರಮಣನ ಹೆಸರನು ನೀ ಹೇಳೆಂದು
ಕುಮುದಾಕ್ಷಿಯರೊಡನೈತಂದು
ಅಮಿತ ಮಹಾಮಹಿಮನ ಹೆಸರನ್ನು
ಸುಮನದಿ ನೀನುಸುರಲೆ ಬೇಕೆನಲು ॥
ಕ್ರಮದಿಂದ ದೇವಿ—ನುಡಿದಳೆ ೪

ಆದಿ ಮದ್ಯಾಂತರಹಿತ ದೇವ
ಮೇದಿನಿಗಧಿಪತಿ ಮಹಾದೇವ
ಸೋದರಮಾವನ ಮಥುರೆಯೊಳ್ ಮಡುಹಿದ
ಮಾಧವನೆಂದೆನುತಲೆ ರುಕ್ಮಿಣಿ ಸು ॥
ಪ್ರೇಮದಿಂದಾಗ—ನುಡಿದಳೆ ೫

ಆ ಮಹಾಸಭೆ ಜನರೆಲ್ಲವರು
ಸ್ವಾಮಿ ಶ್ರೀಹರಿಯೊಡನುಸುರಿದರು
ಈ ಮಹಾಸಭೆಯೊಳು ಶ್ರೀಮಹಾಲಕ್ಷ್ಮಿಯ
ನಾಮವ ಹೇಳೆಂದೆನುತಲೆ ಪೇಳಲು ॥
ಸ್ವಾಮಿ ಶ್ರೀಹರಿಯು—ನುಡಿದನೆ ೬

ರುಗುಮಾಂಗದನನುಜೆಯು ಇವಳು
ಮುಗುದೆಯರೊಳು ಮಿಗಿಲೆನಿಸುವಳು
ರುಗುಮಿಣಿ ಎನ್ನುತ ನಗುತಲೆ ಪೇಳಲು
ಸೊಗಯಿಸುವಾರತಿ ಕರತಂದೆತ್ತಲು ॥
ಬಗೆಬಗೆ ಸಂಭ್ರಮದಿ—ಪೊಗಳುತ್ತ ೭

## 89. ಅರಿಸಿನೆಣ್ಣೆ ಹಚ್ಚುವದು (ಸರಳಾರ)

ತುಂದಿಲೋದರ ಪಾದಕಮಲಕೆ ವಂದಿಸಿ
ತಂದೆತಾಯ್ಗಳ ಮನದೊಳು ಭಜಿಸಿ
ಸಿಂಧುಶಯನ ರುಕ್ಮಿಣಿಯ ವಿವಾಹವ
ಹೊಂದಿರ ಬಳಿಕಲೀ ಕೃತಿ ಹೇಳ್ವೆ
ಜಯ ಜಯ ಕೃಷ್ಣ ಜಯ ಜಯ ೧

ಚಪ್ಪರ ಮಧ್ಯದೊಳೊಪ್ಪುವ ಮದುವೆಯು
ಚಪ್ಪರ ಮಧ್ಯದಿ ಸುದತಿಯರು
ಒಪ್ಪುವ ಹಸಮಣೆಗಳನು ತಂದಿರಿಸುತೆ
ಸರ್ಪಶಾಯಿಯ ಬರಹೇಳಿದರು
ಜಯ ಜಯ ಕೃಷ್ಣ ಜಯ ಜಯ ೨

ಮದುವೆಯು ತೀರಿದ ಮರುದಿನಮುದಯದಿ
ಸುದತಿಯರೆಲ್ಲರು ತೋಷದಲಿ
ಮುದದಿಂದ ಮಜ್ಜನ ಸ್ನಾನವ ತೀರಿಸಿ
ಸುದತಿಯರೆಲ್ಲರು ವಿಭವದಲಿ
ಜಯ ಜಯ ಕೃಷ್ಣ ಜಯ ಜಯ ೩

ಶಶಿರವಿಯಂದದಿ ಹಸೆಮಣೆ ಮಧ್ಯದಿ
ಪಶುಪತಿಪ್ರಿಯ ಸಮೇತದೊಳು
ಶಶಿಮುಖಿ ರುಕ್ಮಿಣಿ ಸಹ ಇರೆ ಕಾಣುತ
ಕುಶಲದಿ ನೆರೆದಿಹ ನಾರಿಯರು
ಜಯ ಜಯ ಕೃಷ್ಣ ಜಯ ಜಯ ೪

ಮಲಯಜ ತೈಲದಿ ಹಳದಿಯ ಕಲಸುತ
ಲಲನೆಯರೆಲ್ಲರು ಪೆಕ್ಕಣವ[1]
ಜಲಜನಾಭನ ನಾನಾ ಗುಣ ಪೊಗಳುತ
ಹಲವು ಹಾಡುಗಳಲಿ ಸಂಭ್ರಮದಿ
ಜಯ ಜಯ ಕೃಷ್ಣ ಜಯ ಜಯ ೫

---

1 ಪೆಕ್ಕಣ—ಪ್ರೇಕ್ಷಣ'; ನೋಟ

ಯೋಗಿ ಜನರಿಗೆಲ್ಲ ಗೋಚರನಾಗಿಹ
ಸಾಗರಶಯನಗೆ ಪ್ರೀತಿಯೊಳು
ನಾಗವೇಣಿಯರೆಲ್ಲ ಕೂಡುತರಸಿನೆಣ್ಣೆ
ಗಾಗಿಯೆ ಸಕಲ ಶೃಂಗಾರವಾದರು
ಜಯ ಜಯ ಕೃಷ್ಣ ಜಯ ಜಯ ೬

ಅಂಗನೆ ದೇವಿ ಯಶೋದೆ ದೇವಕಿಯರು
ಮಂಗಳೆ ಚಂದ್ರಾನನೆ ಸಹಿತ
ಸಂಗರ[1] ಶೂರ ರಾಮನ ಸತಿ ರೇವತಿ
ಮಂಗಲ ಕಾರ್ಯಕೆ ನಡೆತಂದರು
ಜಯ ಜಯ ಕೃಷ್ಣ ಜಯ ಜಯ ೭

ಹರಿರುಕ್ಮಿಣಿಯರ ಅರಸಿನೆಣ್ಣೆಯ ನೋಳ್ಪ
ಹರುಷದಿ ಬಹ ಸತಿ ನಿಕುರುಂಬ
ಕರದೊಳಾರತಿಗಳ ಹಿಡಿಯುತ ಬಂದರು
ಬರುತ ಬರುತ ಪಂಥಗಳಿಂದ
ಜಯ ಜಯ ಕೃಷ್ಣ ಜಯ ಜಯ ೮

ವೇದ ಬೀಜನ ಸತಿಯಾಗಲಿ ನಡೆತಂದು
ವೇದಗೇಹನನಿದಿರೊಳು ನಿಂದು
ವೇದೋದ್ಧಾರಗೆ ಯಾದವರೊಡೆಯಗೆ
ಮೋದದಿ ಸಲಹೆಂದೆತ್ತಿದಳು
ಜಯ ಜಯ ಕೃಷ್ಣ ಜಯ ಜಯ ೯

ಅಣ್ಣನ ನುಡಿಯನು ಗಣ್ಯಕ್ಕೆ ತಾರದೆ
ಕನ್ಯಾಮಣಿಯೆನ್ನಯ ಮುಖದಿ
ತನ್ನ ಪುರುಷನನು ಕರೆದು ಒಲಿಸಿಕೊಂಡ
ಕನ್ನೆಗೆ ತೈಲವ ಪೂಸಿದರು
ಜಯ ಜಯ ಕೃಷ್ಣ ಜಯ ಜಯ ೧೦

1 ಶೃಂಗಾರ

## 92. ಚೆಂಡಾಡಿದ್ದು

ಚೆಂಡನಾಡುತ ಬಂದನೆ । ವೆಂಕಟಪತಿ
ರಂಭೆ ಪದ್ಮಿನಿ ಸಹಿತ ಪ

ಚೆಂಡನಾಡುತ ಬಂದ ಚಂದ್ರಮೌಳಿಯ ಪ್ರಿಯ
ರಂಭೆ ಪದ್ಮಿನಿಗೆ ಆನಂದವ ತೋರುತ್ತ ಅಪ

ಸೊಂಡಿಲ [1]ಗಣಪತಿಯು । ಶೀಘ್ರಾದಿ ಬಲ
ಗೊಂಡು ಬೇಡುವೆ ಮತಿಯು[1]
ಇಂದಿರೆ ರಮಣನು ರಂಭೆ ಪದ್ಮಿನಿ ಕೂಡೆ
ಚೆಂಡನಾಡಿದ ಆನಂದವ ತೋರುತ್ತ ೧

ರಂಭೆ[2] ಪದ್ಮಿನೀದೇವಿಯು । ಸ್ತ್ರೀಯರ ಕೂಡೆ
ಒಂದಾಗಿಯೆ ಬರಲು[3]
ಉತ್ತಮ ವನದಲ್ಲಿ ಪುಷ್ಪವ ಕೊಯ್ವಾಗ
ಮತ್ತೆ ವೆಂಕಟಪತಿ ತೆರಳಿದನಲ್ಲಿಗೆ ೨

ತರಳೆ ಪದ್ಮಿನಿ ದೇವಿಯು । ಸ್ತ್ರೀಯರ ಕೂಡಿ
ಬರಲು ಚಂದದೊಳವಳು
ಉತ್ತಮ ವನದಲ್ಲಿ ಪುಷ್ಪವ ಕೊಯ್ವಾಗ
ಭಕ್ತವತ್ಸಲ ಹರಿ[4] ತೆರಳಿದನಲ್ಲಿಗೆ ೩

ಮರುಗ ಮಲ್ಲಿಗೆ ಜಾಜಿಯ । ಮುಡಿವಾಳವು[5]
ಸುರಗಿ ಸೇವಂತಿಗೆಯ
ಪರಿಪರಿ ಮಂದಾರ[6] ಪುಷ್ಪವ ಕೊಯ್ವಾಗ
ಗಿರಿಯ ವೆಂಕಟಪತಿ ತೋರಿದ ನಿಜರೂಪ ೪

---

1 ಗಣಪತಿಗೆ । ಉಂಡಲಿಗೆಯಿ ಖಂಡಸಕ್ಕರೆಯೀವೆನು (ಉ) 2 ತರಳೆ (ಉ) 3 ಒಟ್ಟಾಗಿ ಇರ್ದ:ತಿರಲು (ಉ) 4 ಗಿರಿಯ ವೆಂಕಟಪತಿ (ಶಿ) 5 ಅಲ್ಲರಳುವ (ಶಿ) 6 ವನದಲ್ಲಿ (ಶಿ)

ಜಾಣ ರಾವುತರಾಯನು । ನೂರಾರು ಕಾ
ಲಾಳನೆ ಕರೆಸಿದನು[1]
ಏರಿ ಕುದುರೆಯನ್ನು[2] ಮದಗಜ ಬೆನ್ನಟ್ಟಿ
ನಾರಿಯರಿರುವ ಅರಣ್ಯಕ್ಕೆ ಬಂದನು[3] ೬

ಮದಗಜವನು ಕಾಣುತ । ನಾರಿಯರೆಲ್ಲ
ಬೆದರಿ ತಾವೋಡಿದರು
ಪದುಮಿನಿ ದೇವಿಯು ತೆರಳಿ ವೃಕ್ಷದ [4]ಮೇಲೆ
ಅಡಗಲು[4] ವೆಂಕಟರಮಣನು ನೋಡುತ ೭

ತರಳೆ ನೀನಾರೆನುತ । ಇಲ್ಲಿಗೆ ಬಂದ
ಪರಿಯನು ಪೇಳೆನುತ
ತರಳೆ ನಿನ್ನಯ ನಿಜ ನಾಮವ ಪೇಳೆಂದು
ಗಿರಿಯ ವೆಂಕಟಪತಿ ಕೇಳಿದ ಹರುಷದಿ ೮

ಧೀರ ನೀನಾರೆನುತ । ಇಲ್ಲಿಗೆ ಬಂದ
ಕಾರಣ ಪೇಳೆನುತ[5]
ಧೀರ ನಿನ್ನಯ ನಿಜನಾಮವ ಪೇಳೆಂದು
ಗಿರಿಯ ವೆಂಕಟಪತಿ ಕೇಳಿದ[6] ಹರುಷದಿ ೯

ಪಡೆದ[7] ತಂದೆಯ ಹೆಸರು । ಆಕಾಶ ಭೂ
ಪಾಲನೆಂದೆನ್ನುವರು
ಪೊಡವಿದೇವಿಯ ಮಗಳೆಂಬ[8] ಕಾರಣದಿಂದ
ತರಳೆ ಪದ್ಮಿನಿಯೆಂದೆಂಬರು ಸರ್ವರು ೯

ರಾಮ ನೀನಾರೆನುತ । ಇಲ್ಲಿಗೆ ಬಂದ
ಕಾರಣವೇನೆನುತ
ರಾಮ ನಿನ್ನಯ ನಿಜ ನಾಮವ ಪೇಳೆಂದು
ತರಳೆ [9]ಪದ್ಮಿನಿ ದೇವಿ ಕೇಳ್ದಳು ಹರುಷದಿ[9] ೧೦

---

1 ಕಾಲಾಳಾನೆ ತರಿಸಿದನು (ಉ) ಕಾಡಾನೆಯ ತರಿಸಿದನು, ಕಾಲಾಳನೆ ಕಳುಹಿದನು (ಶಿ)
2 ಆನೆಯ ಮೇಲೇರಿ (ಉ) 3 ತೆರಳಿದ (ಉ) 4 ಹಿಂದೆ ಮರೆಯಾಗಿ (ಉ)
5 ವೇನೆನುತ (ಶಿ) 6 ತರಳೆ ಪದ್ಮಿನಿಯು ಕೇಳಿದಳ್ (ಶಿ) 7 ಹೆತ್ತ 8 ಮಗಳಾದ
9 ಪದ್ಮಿನಿಯೆಂದು ಕರೆದರು ಸರ್ವರು (ಉ)

ವೆಂಕಟಾಚಲ ಪತಿಯು । ಅರಣ್ಯದಿ
ರಂಭೆ ಪದ್ಮಿನಿ ದೇವಿಗೆ
ಶಂಖ ಚಕ್ರ ಗದೆ ಪದ್ಮವ ಧರಿಸಿ ನಿ
ಶ್ಯಂಕೆಯಿಂ ತೋರಿದ ನಿಜರೂಪವನು ೧೧

ಶ್ರೀಗಿರಿ ವೆಂಕಟನು । ಅರಣ್ಯದಿ
ಮೋಹಿಸಿ ತರಳೆಯನು
ಹೀಗೆ ತರಳೆ ಪದ್ಮಿನಿ ನೀ ಬಾರೆಂದು
ಹೂವಿನ ಚೆಂಡನ್ನೆ ಆಡುತ್ತ ಪಾಡುತ್ತ ೧೨

ವೆಂಕಟಾಚಲಪತಿಯು । ಚೆಂಡನು ಆಡಿ
ಸಾಕಾಗಿ ಬಂದಿರಲು
ಅವನತ್ತೆ ಅದ ತಿಳಿದು ಮಣೆಹಾಕಿ ಕುಳ್ಳಿರಿಸಿ
ಹಾಲು ತುಪ್ಪವ ಕೊಟ್ಟು ಬಾಸಿಗ ಬಿಚ್ಚಿದಳು ೧೩

## 93. ಲೆತ್ತವಾಡಿದ್ದು (ಹಸೆಗೆ ಕರೆದದ್ದು)

ಶ್ರೀಗಣನಾಥನ ಪಾದಕೆ ವಂದಿಸಿ
ಬೇಡುವೆ ವರಗಳನು । ಸದ್ಗುರುವಿಗೆ
ಬಾಗುವೆ ಶಿರಗಳನು । ಹರಿನಾಭಿಯೊ
ಳಾಗಿ ಹುಟ್ಟಿರುವಜನ । ಸತಿ ಸರಸ್ವತಿ
ಪಾಲಿಸು ವರಗಳನು । ಶ್ರೀಕೃಷ್ಣನ
ಲೀಲಾ ವಿನೋದವನು । ನಾ ರಚಿಸುವೆ ॥
ಕೇಳಿ ಸಜ್ಜನರು—ಕಿವಿಗೊಟ್ಟು ೧

ಕೃಷ್ಣ ರುಕ್ಮಿಣಿಯರು ಲೆತ್ತವನಾಡುವುದ
ರರ್ಥವ ಪೇಳುವೆನು । ಸದ್ಭಕ್ತರು
ಚಿತ್ತದೊಳಗೆ ತಿಳಿದು । ತಪ್ಪಿದ್ದರೆ
ಮತ್ತೆ ತಿದ್ದುವದಿದನು । ಪಾಲಿಪುದೆಂದು
ಹಸ್ತವ ಮುಗಿಯುವೆನು । ನಾ ವಿಧಚಿಸಿ
ಭಕ್ತಿಯಿಂ ನಿಮಗೀವೆನು । ಸಜ್ಜನರೆಲ್ಲ ॥
ಚಿತ್ತಶಾಂತಿಯಲಿ—ಕಿವಿಗೊಡಿ ೨

ಲೆತ್ತವನಾಡಬೇಕೆನುತಲಿ ತನಗಿಂದು
ಹುಟ್ಟಿತು ಮನಸ್ಸೆನುತ । ಲೆತ್ತದ ಕಾಯ
ನಿತ್ತ ತಂದಿರಿಸೆನುತ । ಕೆಂಪಿನ ಜೋಡೆ
ಸತ್ತೆಂಪು ಮಾತಾಡುತ । ರುಕ್ಮಿಣಿಯ ನೀ
ವಿತ್ತಲು ಕರೆಸೆನ್ನುತ । ಸಂತೋಷದಿ
ವಟ್ಟಿ ಮಂಚವನೇರಿದ । ಶ್ರೀಕೃಷ್ಣನ ॥
ಮಿತ್ರೆಯರು ಹಸೆಗೆ—ಕರೆದರು ೩

ಮೃಷ್ಟಾನ್ನವನು ಭೋಜನ ಮಾಡಿಯೆ ಕೃಷ್ಣ
ನಟ್ಟಿದ ದಾಸಿಯರು । ರುಕ್ಮಿಣಿಯನು
ಲೆತ್ತವನಾಡುವಲೆ । ಸದ್ಭಕ್ತರು
ಮತ್ತೆ ಕರೆದರೆನ್ನಲು । ಮಾತಿಗೆ ನಕ್ಕು
ಅಷ್ಟಮ ಸ್ತ್ರೀಯರ ಕರೆಸು । ಬೇಗದೊಳು ನೀ
ವೆಂದು ರುಕ್ಮಿಣಿ ನುಡಿಯಲು । ವಿನೋದದಿ ॥
ಮಿತ್ರೆಯರು ಹಸೆಗೆ—ಕರೆದರು ೪

ಎಂದ ಮಾತನು ಕೇಳಿ ಬಂದ ದಾಸಿಯರಾಗ
ವಂದಿಸಿ ಕೃಷ್ಣನಿಗೆ । ಪೇಳ್ದರು ಆಕೆ
ಯಿಂದ ಸೀನರಿಯೆನುತ । ರುಕ್ಮಿಣಿ ನಿಮಗೆ
ಕುಂದನಾಡಿದಳೆನುತ । ಆ ಮಾತಿಗೆ
ಸಂಭ್ರಮದಿಂ ನಗುತ । ಶ್ರೀಕೃಷ್ಣನ
ಮಡದಿಯ ಮಂದಿರಕೆ । ನಡೆದ ಶ್ರೀಕೃಷ್ಣನ ॥
ಬಾರೆಂದು[1] ಹಸೆಗೆ—ಕರೆದರು ೫

ಬರವ ಕಾಣುತ ರುಕ್ಮಿಣಿಯೆದ್ದು ಕೃಷ್ಣನ
ಚರಣಕೆ ಎರಗಿದಳು । ಗದ್ದಿಗೆಯಿಟ್ಟು
ಕರೆದು ಕುಳ್ಳಿರಿಸಿದಳು । ನಾನಾ ವಿಧ
ಪರಮಾನ್ನ ಭಕ್ಷ್ಯಗಳ । ಆ ವಿಧದಿಂದ
ಎಡೆಮಾಡಿ ಬಡಿಸಿದಳು । ಅಷ್ಟರ ಮೇಲೆ
ಮಡಿದೆಲೆಯನು ಕೊಡುತ । ಇರುತ್ತಿದ್ದ ॥
ರುಕ್ಮಿಣಿದೇವಿ—ಹಸೆಗೇಳು ೬

---
1 ರಂಭೆಯರು

ಹಾಸಂಗಿಯನೆ ಹಾಸುತಲೆ ಶ್ರೀಕೃಷ್ಣನಿಗೆ
ಪೂಸುತ್ತ ಶ್ರೀಗಂಧವ । ದಣಿದನೆಂದು
ಬೀಸಣಿಗೆಯ ಬೀಸುತ । ಹಳದಿ ಜೋಡು
ತನಗೆಂದು ಮಾತಾಡುತ । ಹಾಸ್ಯಗಳಿಂದ
ಲಾಡುತ್ತ ಲೆತ್ತವನು । ಹಾಗಿರುತಿರೆ ॥
ಸ್ವಾಮಿನಿ ರುಕ್ಮಿಣಿಯೇ—ಹಸೆಗೇಳು ೭

ರಾಧಾದೇವಿ ನೀಲಾದೇವಿ ಸತ್ಯಭಾಮೆ
ಕ್ರೋಧಮಾಡ್ಯಾರೆನ್ನುತ । ಇಲ್ಲಿಗೆ ಬಂದು
ಬಹಳ ಹೊತ್ತಾಯ್ತೆನ್ನುತ । ಈ ಆಟವ
ಬೇಗನೆ ಮುಗಿಸೆನುತ । ಹಾಸ್ಯಗಳಿಂದ
ಲಾಡುತ್ತ ಲೆತ್ತವನು । ಹಾಗಿರುತಿರೆ ॥
ಸ್ವಾಮಿನಿ ರುಕ್ಮಿಣಿಯೇ—ಹಸೆಗೇಳು ೮

ತರಳ ಕರೆಯೆ ಕಂಬದಲುದ್ಭವಿಸಿದ
ದುರುಳ ನೀ ಹೌದೆನುತ । ಕರುಳ ಮಾಲೆ
ಧರಿಸಿಕೊಂಡವನೆನುತ । ಕಂಡರೆ ಬಲು
ಹೆದರಿಕೆ ತನಗೆನುತ । ಸಂತೋಷದಿ
ಲೆತ್ತವನಾಡುತಿದ್ದ । ರುಕ್ಮಿಣಿಯನು ॥
ಮಿತ್ರೆಯರು ಹಸೆಗೆ—ಕರೆದರು ೯

ಅಣ್ಣನ ವಂಚಿಸಿ ಎನ್ನನು ಕರೆಸಿದ
ಹೆಣ್ಣು ನೀ ಹೌದೆನುತ । ಮಾತಿಲಿ ಬಹು
ಬಣ್ಣಗಾರಿಕೆಯೆನುತ । ನಿನ್ನಂಥವಳ
ಇನ್ನೆಲ್ಲು[1] ಕಾಣೆನುತ । ನಿನ್ನಲಿ ಬಲು
ಅನ್ಯಾಯಗಳೆನುತ । ಸಂತೋಷದಿ
ದಾಯವನಾಡುತಿದ್ದ । ಶ್ರೀಕೃಷ್ಣನ ॥
ನಾರಿಯರು ಹಸೆಗೆ—ಕರೆದರು ೧೦

1 ನಾನೆಲ್ಲೂ

ಅಷ್ಟಮ ಸ್ತ್ರೀಯರ ಬಿಟ್ಟು ನೀನಿಲ್ಲಿಗೆ
ಮತ್ತೇಕೆ ಬಂದೆನುತ । ಸ್ನೇಹಗಳಲ್ಲಿ
ತಕ್ಕು ನಿನ್ನದು ಎನುತ । ಈ ಆಟವ
ಬಿಟ್ಟು ನೀ ಹೋಗೆನುತ । ಬಲು ಸಿಟ್ಟಲಿ
ಆಡುತ್ತ ಲೆತ್ತವನು । ಆ ಕ್ಷಣದಲಿ
ಪಟ್ಟೆ ಮಂಚವನಿಳಿದ । ಹಾಗಿರುತಿರೆ ॥
ಸ್ವಾಮಿನಿ ರುಕ್ಮಿಣಿಯೇ—ಹಸೆಗೇಳು ೧೧

ಸಿಟ್ಟುಮಾಡಲು ಬೇಡ ಸುಗುಣ ಸಂಪನ್ನೆ ನೀ
ನಿತ್ತಿತ್ತ ಬಾರೆನುತ । ಗಲ್ಲಕೆ ಮುತ್ತ
ಒಪ್ಪದಿಂದಲೆ ಕೊಡುತ । ಪುಷ್ಪಗಳನ್ನು
ಅರ್ಥಿಯಿಂದಲೆ ಮುಡಿಸುತ । ಹಾಸ್ಯಗಳಿಂದ
ಲಾಡುತ್ತ ಲೆತ್ತವನು । ಹಾಗಿರುತಿರೆ ॥
ಸ್ವಾಮಿನಿ ರುಕ್ಮಿಣಿಯೇ—ಹಸೆಗೇಳು ೧೨

ಏಳು ಹೆಡೆಯ ಸರ್ಪನ ಮೇಲೆ ಮಲಗಿದ
ಕಾರಣವೇನೆನುತ । ಪೂತನಿಯನು
ಹೇಗೆ ಹೀರ್ದವನೆನುತ । ಕಂಸನ ಕೂಡೆ
ಕಾದಿ ಗೆದ್ದವನೆನುತ । ನಿನ್ನಂಥವನ
ನಾನೆಲ್ಲೂ ಕಾಣೆನುತ । ಹಾಸ್ಯಗಳಿಂದ
ಲಾಡುತ್ತ ಲೆತ್ತವನು । ಹೀಗಿರುತಿರೆ ॥
ಸ್ವಾಮಿನಿ ರುಕ್ಮಿಣಿಯೆ—ಹಸೆಗೇಳು ೧೩

ಪುಟ್ಟತನದಿ ಕಾಲ್ಗಳ ಕಟ್ಟಿಸಿಕೊಂಡ
ದಿಟ್ಟ ನೀ ಹೌದೆನುತ । ಬೆಟ್ಟದನ್ನವ
ಅಷ್ಟು ಉಂಡವನೆನುತ । ನಿನಗೆ ಬಲು
ಹೊಟ್ಟೆ ದೊಡ್ಡದು ಎನುತ । ನಿನ್ನಂಥವನ
ನಾನೆಲ್ಲು ಕಾಣೆನುತ । ಹಾಸ್ಯಗಳಿಂದ
ಲಾಡುತ್ತ ಲೆತ್ತವನು । ಹೀಗಿರುತಿರೆ ॥
ಸ್ವಾಮಿನಿ ರುಕ್ಮಿಣಿಯೇ—ಹಸೆಗೇಳು ೧೪

ಹೊನ್ನುಗಳುಳ್ಳ ಹೊಲೆಯನಾದರು ಸಂ
ಪನ್ನನೆನಿಸಿಕೊಂಬನು । ನಿನ್ನಲಿ ಬಹು
ಅನ್ಯಾಯಗಳೆಸುತ । ನಿನ್ನಂಥವನ
ನಾನೆಲ್ಲು ಕಾಣೆನುತ । ನಿನ್ನೊಡನೀಗ
ಲಾಡುವಂತಾಯ್ತೆನುತ । ಹಾಸ್ಯಗಳಿಂದ
ಲಾಡುತ್ತ ಲೆತ್ತವನು । ಹೀಗಿರುತಿರೆ ॥
ಸ್ವಾಮಿನಿ ರುಕ್ಮಿಣಿಯೇ—ಹಸೆಗೇಳು ೧೫

ಕೃಷ್ಣ ರುಕ್ಮಿಣಿಯು ಲೆತ್ತವನಾಡಿಕೊಂಡಿಂತು
ಪಟ್ಟೆಮಂಚದೊಳಿರಲು । ಅಂಬರದಲಿ
ಮಂದಾರದ ಮಳೆಯು । ಸುರಿಯಲಾಗ
ದುಂದುಭಿ ವಾದ್ಯಗಳು । ಘೋರೆಂದಲ್ಲಿ
ಯೊಂದಾಗಿ ಮೊಳಗಿದವು । ನಾರಿಯರಲ್ಲಿ
ತಂದರಾರತಿಗಳನು । ಹರಿಲಕ್ಷ್ಮಿಗೆ ॥
ಕುಂದಣದಾರತಿಯಾ—ಬೆಳಗಿರೆ ೧೬

## ಚತುರ್ಥಿಯ ಹಾಡುಗಳು

### 94. ಚತುರ್ಥಿ ದಿಬ್ಬಣದವರು ಹೇಳುವದು

ಶ್ರೀಮತಿಯರಿರ ಕೇಳಿರೆಮ್ಮಯ । ಮೋಹನದ ಕಣಿಯ
ಕೋಮಲಾಂಗ ಸುಶೀಲ ಶ್ರೀಹರಿಯ
ಈ ಮಹಾಸಭೆಯಲ್ಲಿ ಜಿತ ಸ
ತ್ಕಾಮ ತನ್ನುದರಾಬ್ಧಿ ಚಂದ್ರನ
ಪ್ರೇಮದಿಂದಲೆ ಕಾಣದೆಯೆ ಮನ
ಸಾಮಧಾನವಗೊಳ್ಳಲರಿದಿಂ
ದೆತ್ತಲು । ಹುಡುಕಿದರು ತೋರನು
ಸುತ್ತಲು । ಮೋಹಿಸಿದಿರೇಯೆಂ
ದೆತ್ತಲು । ನಿಜ ಬಾಲಕನನೆ
ತ್ತೆತ್ತಲು । ಅರಸುತ್ತಲು

ಕಾಮಿನಿಯರೊಗ್ಗಿಸಲಿ ದೇವಕಿ
ಶ್ರೀಮನೋಹರಗರಸಿ ಒಳಲಿದು
ಕಾಮನಯ್ಯನ ನೆನೆದು ನೆರೆದಿಹ
ಸೋಮಮುಖಿಯರ ಮರಳಿ ನೋಡುತ ॥
ಪ್ರೇಮದಿ ಕೃಷ್ಣನನು—ತೋರಿರಮ್ಮ ೧

ಎತ್ತ ಪೋದನೋ ಮುದ್ದುಬಾಲಕನು । ಬಲು ಸುಂದರಾಂಗನು
ಇತ್ತ ಕಾಣದೆ ತೋಷವಹುದೇನು
ಎತ್ತ ಚಪ್ಪರವೆತ್ತ ಚಾವಡಿ
ಯೆತ್ತ ಮಂಟಪವೆತ್ತ ಪರಿಕಿಸ
ಲರ್ಥಿಯಿಂ ಮುದವೆತ್ತು ನುಡಿಯುವ
ವತ್ಸನಹ ಪುರುಷೋತ್ತಮನ ನೀವ್
ತೋರಿಸಿ । ಬಲು ದಯವನೆಮ್ಮೊಳು
ತೋರಿಸಿ । ಬಲು ಸಂತಸವ ಪಡಿಪುದು
ಮೀರಿಸಿ । ಬಳಲಿಸುವಿರೇತಕೆ
ಸಾರಿಸಿ । ಸನ್ಮುದದಿ ಬರಿಸಿ
ನಿತ್ಯ ದಧಿ ಘೃತ ಕ್ಷೀರ ಕದಳಿಯ
ನರ್ಥಿಯಿಂ ಮಧು ಬೆಣ್ಣೆ ಸಕ್ಕರೆ
ಯೊತ್ತಿ ಭುಂಜಿಸಿ ಸರಸ ಬೀರುತ
ಮತ್ತಕಾಶಿನಿಗೊಲಿದವನ ಮುದ ॥
ವೆತ್ತು ನೀರೆಯರೇ—ತೋರಿರೀಗ ೨

ಯದುಕುಲಾಂಬುಜ ಭಾನುವೆನಿಸಿದನ । ನೀಲಾಭ್ರಗಾತ್ರನ
ಪದುಮಸಖ ಶತಕೋಟಿ ಸುಪ್ರಭನ
ಚದುರನಾ ಗೋಪಾಲಕೃಷ್ಣನ
ಮೃದುಮಧುರ ವಾಚಕನ ಸುಗುಣನ
ವಿಧುಮುಖಿಯರಿರ ಮಮತೆಯಿಂದಲಿ
ಯೊದಗಿ ತೋರಿಸಿರೆಮಗೆ ಶೀಘ್ರದಿ
ಯೆಂದರು । ದುಗುಡದಲಿ ನೆರೆ ಮನ
ನೊಂದರು । ಬಡನಡುವ ಬಳುಕಿಸಿ
ನಿಂದರು । ವರ ಮಂದಗತಿಯಿಂ
ಸಂದರು । ಮುಂಬರಿದರು

ಒದಲು ನುಡಿಯದೆ ವಿಷ್ಣುಮೂರ್ತಿಯ
ಪದವೆ ಗತಿಯೆಂದೆನುತ ಸಭೆಯಲಿ
ಸದಮಲನ ಧ್ಯಾನಿಸುತ ಸರ್ವರು
ಮುದದಿ ಕುಳಿತರು ವಿಭವದಿಂದಲೆ
ಮದನನಾನೆಯರು—ನಾರಿಯರು ೩

## 95. ಮನೆಯುವರ ಉತ್ತರ

ಶ್ರೀಕರಮುಖಿಯರೆ ಲಾಲಿಸಿ ಮಾತ
ಯಾಕನಿತೆಂಬಿರಿ ಕಳವಳಗೊಳುತ
ಜೋಕೆಯೊಳಡಗಿಸಲೇಕೆ ಶ್ರೀವರನ
ಸೋಕಿದ ಮೋಹವೆ ನುಡಿಯುವದೇನ ॥
ಆ ಕಮಲಾಂಬಕ ಶ್ರೀವಧುವಿನ ಮುಖಾ
ಲೋಕನದಿಂದಲಿ ನಸುನಗೆ ಬೀರುತ
ನೇಕಾಭರಣ ವಿಭೂಷಿಸುತುಜ್ವಲ
ದಾ ಖರಕಾಂತಿಯಿಂ ಸಗಿಸುತ ಮುದದಿಂ ॥
ದೀ ಕಡಗೈತಹನು—ಶ್ರೀಧರನು ೧

ವೇದೋದ್ಧಾರಕ ಗಿರಿಧರ ಪೃಥ್ವೀಧರನು
ಆದಿಮೂರುತಿ ಬಾಲಗೊಲಿದ ಮಹಿಮನು
ಮೇದಿನಿ ಬೇಡಿದು ಪಾದದಿಂದಳೆದ
ಕಾದಿ ಕ್ಷತ್ರಿಯರನು ತರಿದು ನಾಗರದ ॥
ಹಾದಿಯ ಬಂಧಿಸಿ ಖಳರನು ಮಡುಹಿ ಯ
ಶೋದೆಗೆ ಬಾಲಕನಾಗಿದು ಬತ್ತಲೆ
ಯಾದನು ವಾಜಿಯನೇರ್ದನು ಸತ್ಯದಿ
ಸಾಧುಜನೋದ್ಧರನೆನಿಸಿಯೆ ಶೋಭಿಪ ॥
ಮಾಧವನಿದೊ ಬಹನು—ಚದುರನು ೨

ಭ್ರಮರಕುಂತಳ ಶಶಿಮೊಗದ ಬಾಲೆಯರು
ಕಮಲಲೋಚನ ಚೆಲ್ವ ಕುಂದರದನೆಯರು
ವಿಮಲ ಗುಣಾರ್ಣವ ಕಲಶಕುಚದಲಿ

ಸುಮಶರನಾಣೆಯರ್ ಬಳಲಬೇಡಿಲ್ಲಿ ॥
ನಿಮಿಷದಿ ಬಹ ನಿಜರಮಣಿ ಸಮೇತದಿ
ಕಮಲನಾಭನು ನಿಗಮಾಗಮ ವಂದಿತ
ನಮರಪಿಸುತ ಶ್ರೀ ವಿಷ್ಣುವೆಯೆಂಪತಿ
ನಮತೆಯ ಮನ್ನಿಸೆ ಶ್ರೀಸಹ ಸಭೆಗಾ ॥
ಕಮಲಾಕ್ಷ ಬಂದ—ಮುದದಿಂದ ೩

## 96. ಸೊಸೆಯನ್ನು ತೋರಿಸಿದ್ದು

ಬಂದು ನೋಡಿಕೊ ಸೊಸೆಯ । ಕೌಸಲೆ ನೀನು
ಬಂದು ನೋಡಿಕೊ ಸೊಸೆಯ
ಬಂದು ನೋಡಿಕೊ ನಿನ್ನ ಕಂದ ರಾಘವನು ಆ
ನಂದದಿ ಕೈಹಿಡಿದಿಂದುವದನೆಯಳ ಪ

ಸರಸಿಯೊಳುದಿಸಿರುವ । ತಾವರೆಯ
ಪರಿಯೊಳಿರುವ ಮುಖವ
ಸರಸಿಜಾಕ್ಷನೆ ತನ್ನ ಅರಸನೆಂದೆನ್ನುತ
ಕರಪಿಡಿದೊಡಗೂಡಿ ನಡೆದು ಬಂದಿಹಳ ೧

ಮತಿವಂತೆಯಾಗಿಹಳು । ರಾಘವನಿಗೆ
ಜೊತೆಯಾದ ಸತಿಯಿವಳು
ಅತಿ ಹರುಷದಿ ತನ್ನ ಪತಿಯ ನಂಬಿಯೆ ಪರ
ಗತಿಯನು ಪಡೆಯುವ ಪತಿವ್ರತೆಯಿವಳನು ೨

ಅತಿಥಿ ಸತ್ಕಾರವನ್ನು । ಬೇಸರವಿಲ್ಲ
ದತಿ ತೋಷದೊಳಗೆ ಇನ್ನು
ಪತಿಯ ಗೃಹದಿ ಮಾಡಿ ಜೊತೆಜನರೊಡನತಿ
ಹಿತದಿಂದ ನಡೆಯುವ ಮತಿಯುತೆ ಇವಳನು ೩

ಮನುಮಥನರ್ಧಾಂಗಿಯ । ಪೋಲುವ ರೂಪ
ವನು ಮೀರಿಪಂಥ ಕಾಯ
ವಿನಯಶೀಲಳು ಇವಳೀಗ ನಿನ್ನಯ ಮುದ್ದು
ತನಯನ ವರಿಸಿಯೆ ಮನೆಗೆ ಬಂದವಳನು ೪

## 97. ಸೊಸೆ ತೋರಿಸಿದ್ದಕ್ಕೆ ಉತ್ತರ

ಹೊಗಳಿ ತೋರುವದೇನೆ ಸೊಸೆಯ ಗುಣವ ತೋರಿಸೆ ಬೇಗನೆ
ಹಿರಿಯರೊಳು ಬಿರುನುಡಿಯನಾಡದೆ ನಮ್ಮ ಗೃಹದೊಳಗಿರುವಳೆ ಪ

ಗಿರಿಜೆ ತಪವನು ಚರಿಸಿ ವನದೊಳು ಪರಶಿವನ ಪಡೆದಂದದಿ
ಧರೆಯ ಕಾದು ಪ್ರಪಂಚ ನಡೆಸುವ ತರಳೆಯ ಲಕ್ಷಣವನು ೧

ಹಜ್ಜೆಯಿಟ್ಟರೆ ಗೆಜ್ಜೆ ಧ್ವನಿಯು ಸದ್ದು ಮಾಡುವಳಲ್ಲವೆ
ಶ್ರದ್ಧೆಯಿಂದಲಿ ಗೃಹದ ಕೆಲಸಕೆ ಸಿದ್ಧಳಿವಳಾಗಿರುವಳೆ ೨

ಕೊಚ್ಚಿ ಕಡಿದರು ಕಷ್ಟವೆನಿನದೆ ಹೆಚ್ಚು ಬೆಳೆಯನು ಪಾಲಿಸಿ
ರಕ್ಷಿಸುವ ಭೂತಾಯಿಯಂದದಿ ಲಕ್ಷಣವ ತಳೆದಿರುವಳೆ ೩

ಕಪ್ಪಗಿದ್ದಳೊ ಒಪ್ಪಗಿದ್ದಳೊ ಸಿಸ್ತ ನೋಡುವರಲ್ಲದೆ
ತಪ್ಪು ಕೆಲಸವ ಮಾಡದಿರುವಳೆ ಶಿಕ್ಷೆಯೊಳಗಿವಳಿರುವಳೆ ೪

ತೆಳ್ಳಗಿದ್ದಳೊ ಬೆಳ್ಳಗಿದ್ದಳೊ ಅಂದನೋಡುವರಲ್ಲದೆ
ಕುಂದು ತಾರದೆ ನಮ್ಮ ಗೃಹದೊಳು ಒಂದೆಮನದೊಳಗಿರುವಳೆ ೫

ಪತಿವ್ರತೆಯು ಪಾಂಚಾಲಿ ಜಾನಕಿ ಪತಿಯ ಸಂಗಡ ವನದೊಳು
ಪತಿಯ ಕಷ್ಟಕೆ ಭಾಗಿಯಾದರು ಸತಿಯರ ಸುಲಕ್ಷಣವಿದು ೬

ಕೊಟ್ಟ ಭಾಷೆಗೆ ಭ್ರಷ್ಟನಾಗದೆ ಸೃಷ್ಟಿಯೊಳು ಹರಿಶ್ಚಂದ್ರನು
ಮತ್ತೆ ಸತಿ ವಿಕ್ರಯವ ಗೈದರೆ ಭಕ್ತಿಯಿಂ ನಡೆದಿರುವಳು ೭

ಪೂರ್ವದೊಳು ದಮಯಂತಿ ಪತಿಯೊಳು ಸೇರಿ ಕಷ್ಟವನೆಣಿಸದೆ
ಅಶನ ವಸನದ ಆಸೆ ತೋರದ ಸತಿಯು ಸಲ್ಲಕ್ಷಣದಳೆ ೮

ಕುಲವನುದ್ಧರಿಸುವ ಸತಿಯೆ ಇನ್ನಾವ ರೀತಿಯೊಳಿರುವಳೆ
ಪತಿವ್ರತೆಯು ಸಾವಿತ್ರಿಯಂತಹ ಲಕ್ಷಣದಿ ತಾನಿರುವಳೆ ೯

ಹಸಿದು ಬಳಲುತ ಬಂದ ಜನರಿಗೆ ತೃಷೆಯ ಹೊತ್ತಿನೊಳ್ ನೀಡುತ
ಒಸೆದು ಸಮಭಾವನೆಯ ಬೀರುತ ಧರ್ಮರೀತಿಯೊಳಿರುವಳೆ ೧೦

## 98. ಕಾಲುಂಗುರವಿಡುವುದು

ಬಾರೆ ಬಾರೆಲೆ ನಾರಿ ಪತಕೆ ನಾಚುವೆ
ಕಾಲಿಗೆ ಉಂಗುರ ತೊಡಿಸುವೆವು ನಾವು ಪ

ಮಾತೆಯು ಪ್ರೀತಿಯಿಂದಲಿ ತನ್ನ ಸೊಸೆಗೆಂದು
ತಂದ ಉಂಗುರವನ್ನೆ ಇಡುವಳು ಬೇಗದಿ ೧

ಕಂದನ ರಾಣಿಗೆ ಚೆಂದದ ಉಂಗುರ
ಸಂಭ್ರಮದಿಂದಲಿ ಇಟ್ಟಳು ಬೇಗ ೨

ಮಲ್ಲಿಗೆಯರಲಿನ ಮಾಲೆಯ ಮುಡಿಸಿ
ಮೋಹದಿ ತೊಡೆಯೊಳು ಕುಳ್ಳಿರಿಸಿದಳು ೩

## 99. ಚತುರ್ಥಿಗೆ ಅರಿಸಿನೆಣ್ಣೆ

ದ್ವಾರಕಾನಗರದಿ ಯದುಗಳು ಕೂಡಿ
ಭೂರಿ ವೈಭವದಿಂದಲಿರಲು ಮಾತಾಡಿ
ನಾರಿ ರುಕ್ಮಿಣಿ ಶ್ರೀಕೃಷ್ಣನನೊಡಗೂಡಿ
ಚಾರುತರದ ಲಗ್ನ ಕಳೆದು ಚತುರ್ಥಿಯ ॥
ನೋರಂತೆ ರಚಿಸಲೊಲವಿಂದ ೧

ವಸುದೇವ ದೇವಕಿ ಮುಂತಾದವರು
ಒಸಗೆ ಮಿಗಲು ಬಹು ರಸಿಕರೆಲ್ಲವರು
ಕುಶಲದೊಳರಿಸಿನೆಣ್ಣೆಯ ಮಾಡಲವರು
ಮಿಸುನಿಯ ವರ ಮಂಟಪದೊಳಗೆಲ್ಲರು ॥
ಪಸರಿಸಿ ಹಸೆಮಣೆಯ—ಕುಶಲದಿ ೨

ಚಿನ್ನದ ಹರಿವಾಣದೊಳಗರಿಸಿನವ
ಪನ್ನೀರು ಗಂಧ ಕಸ್ತೂರಿ ಕುಂಕುಮವ
ಎಣ್ಣೆಯ ಬೆರಸಿ ಪಾಕವ ಮಾಡಿ ರಸವ
ಕನ್ನೆಯರೆಲ್ಲ ಶೋಭಾನವ ಪಾಡುತ್ತ ॥
ಮನ್ನಣೆಗಳಿಂದ—ಎಸೆದರು ೩

ಭೇರಿ ನಗಾರಿ ತಂಬಟೆ ತಾಳಮೇಳ
ಘೋರೆಂಬ ವಾದ್ಯಘೋಷಗಳು ಮೊರೆಯಲಾ
ಸಾರಿ ಕಹಳೆ ವೀಣಾ ವೇಣು ನುಡಿಸಲಾ
ನಾರಿ ರುಕ್ಮಿಣಿ ಕೃಷ್ಣ ಸಹ ಸೊಬಗಿನಲಾ ॥
ನಾರಿಯರು ಬೇಗ—ಕರೆತಂದು ೪

ಮೇಲುವಸನದಲಿ ಕುಳ್ಳಿರಿಸುತ್ತ
ನೀಲಮೇಘಾಂಗನ ಮನ್ನಿಸಿ ಸುತ್ತ
ಕೋಲಾಹಲದ ವೈಭವದಿ ರಂಜಿಸುತ
ನೀಲಕಂಠನ ಸಖನಿಗೆ ರುಕ್ಮಿಣಿಗೆ ॥
ಬಾಲೆಯರರಿಸಿನವ—ತಿಮಿರಲು ೫

ಗಂಗೋದಕವ ತಂದು ಪಾದವ ತೊಳೆದು
ಮಂಗಲಾಕ್ಷತೆ ಸೇಸೆಗಳನೆ ತಳಿದು
ಮಾಂಗಲ್ಯವಾದ ಪುಷ್ಪಗಳನ್ನೆ ಮುಡಿದು
ರಂಗುಮಯದ ಆಭರಣವ ಮುಡಿದು ॥
ಶೃಂಗಾರವಾಗಿ—ರಚಿಸಲು ೬

ಭೂಸುರರೆಲ್ಲ ವೇದಗಳನು ರಚಿಸೆ
ದೇಶ ದೇಶದ ಜನ ನೆರೆದು ಸಂಭ್ರಮಿಸೆ
ಬಾಸಿಗವನ್ನು ಕೃಷ್ಣನ ತಲೆಗಿರಿಸೆ
ಭಾಸುರ ಮಣಿಗಣಗಳು ರಂಜಿಸುತಿರೆ ॥
ವಾಸವ ವಂದಿತಗೆ—ರಚಿಸಲು ೭

ಅರಿಸಿನೆಣ್ಣೆಯ ರುಕ್ಮಿಣಿ ಕೈಯೊಳಾಗ
ತರುಣಿ ದೇವಕಿ ಕೊಡಲೊಗುಮಿಗೆಯಾಗ
ಸರಸಿಜನೇತ್ರಗೆ ತಿಮಿರಲು ಬೇಗ
ಸುರರು ಪೂಮಳೆಗಳ ಕರೆಯಲು ರಭಸದಿ ॥
ಹರುಷದೊಳೆಲ್ಲ—ಪೊಗಳಲು ೮

ಮುತ್ತೈದೆಯರೆಲ್ಲ ಸುತ್ತಲು ನೆರೆದು
ಕಸ್ತೂರಿಯರಿಸಿನೆಣ್ಣೆಯ ಮೇಲೆ ತೊಡೆದು
ಮುತ್ತು ಮಾಣಿಕಗಳ ಬೇಗ ತಳಿದರಂದು

ಚಿತ್ತಜನಯ್ಯಗೆ ಸತಿಗೆ ಸಹಿತಲಾ ॥
ಪರ್ತಿಸಿ ಆರಿಸಿನವಾ—ತಿಮಿರಲು ೯

ನಂದನಂದನನಿಗೆ ಕುಂಜರೋದ್ಧರಗೆ
ಸಿಂಧುಶಯನ ಗೋವಿಂದ ಮಾಧವಗೆ
ಮಂದರಗಿರಿಧರ ಸುಂದರ ರೂಪಗೆ
ಇಂದುವದನೆಗೆ ರುಕ್ಮಿಣಿಗೆ ಕೃಷ್ಣಗೆ ಸಹ ॥
ಚೆಂದವೋಕರಿಸಿನವ—ತಿಮಿರಲು ೧೦

ಪ್ರತ್ಯಗಾತುಮನಿಗೆ ಪರಮ ಕೃಷ್ಣನಿಗೆ
ಮತ್ತಕಾಶಿನಿಯಾಗಿಹ ರುಕ್ಮಿಣಿಗೆ
ಚಿತ್ತಜನಯ್ಯ ಮುರಾರಿ ಮುಕುಂದಗೆ
ಕೃತ್ತಿವಾಸನ ಮಿತ್ರಗೆ ನಾರಿಗೆ ಸಹ ॥
ಮುತ್ತಿನಾರತಿಯಾ—ಬೆಳಗಿರೆ ೧೧

ಮಂಗಲಂ ನವರತ್ನ ಮಕುಟ ಶೋಭಿತಗೆ
ಮಂಗಲಂ ಮಕರ ಕುಂಡಲ ಭೂಷಣಗೆ
ಮಂಗಲಂ ಶ್ರೀ ರುಕ್ಮಿಣಿ ಮಹಾದೇವಿಗೆ
ಮಂಗಲಂ ಕೋಳ್ಯೂರ ನಗರ ನಿವಾಸಗೆ ॥
ಮಂಗಳಾರತಿಯಾ—ಬೆಳಗಿರೆ ೧೨

## 100. ಹಸೆಗೆ ಕರೆಯುವದು (ಕೃಷ್ಣನ)

ವಾರಿಜಾಕ್ಷ ಬೇಗ । ಬಾರೊ ಹಸೆಗೀಗ
ಭೂರಿ ಸಂತಸವ । ತೋರೊ ಸುಪ್ರಭಾವ ಪ

ಮಂಗಲಾಂಗ ದಯಾ । ಪಾಂಗ ನೀಲ ಕಾಯ
ಅಂಗಜ ಪಿತನೇ । ತುಂಗ ವಿಕ್ರಮನೇ ೧

ಗರುಡವಾಹನ ಶ್ರೀ । ಧರನೆ ಪಾಹಿ ಶೌರಿ
ತರುಣಿ ಸತ್ಯಭಾಮಾ । ವರನೆ ರಂಗಧಾಮ ೨

ಪೂತನಿಯಸುವ । ಘಾತಿಸಿದ ದೇವ
ಖ್ಯಾತ ಯಶೋದೆಯ । ಜಾತ ಕೃಷ್ಣರಾಯ ೩

ಯಾದವೇಂದ್ರ ವೇಣು । ನಾದಪ್ರಿಯ ನೀನು
ಕಾದಿ ಮಾವನನು । ಭೇದಿಸಿದವನು ೪

ಅಂದು ರಾವಣನ । ಕೊಂದ ಧೀರಗುಣ
ನಾಂದ್ರ ರಾಮಚಂದ್ರ । ಇಂದು ಬಾ ಧರೇಂದ್ರ ೫

## 101. ಹಸೆಗೆ ಕರೆಯುವದು

(ಸಂವತ್ಸರ—ದಶಾವತಾರ, ಧವಳಾರ)
(ಸೂ: ಸಂವತ್ಸರಗಳನ್ನು ದಪ್ಪ ಅಕ್ಷರಗಳಲ್ಲಿ ಕೊಡಲಾಗಿದೆ)

ಶ್ರೀಕರ **ಪ್ರಭವ** ಪ್ರಭಾಕರ **ವಿಭವ ಶು**
**ಕ್ಲಾ**ಂಬರ ವರ ನಾಕಾರ । **ಪ್ರಮೋದೂತ**
ಭೀಕರ ಕರುಣಾಕರ । **ಪ್ರಜೋತ್ಪತ್ತ್ಯ**
ದಾ ಕಾರಣಾತ್ಮಾಕಾರ । **ಆಂಗೀರಸ**
ಶ್ರೀಕರ ಮತ್ಸ್ಯಾಕಾರ । ತಾಳ್ದ ಸುವಿಚಾರ ॥
ತಾ ಕರದೊಳಾ ನಿಗಮ ತಸ್ಕರ
ಣಾಕರನ ಸಂಹಾರಗೈದ ಕೃ
ಪಾಕರನೆ [1]ಸತ್ಯವ್ರತಾತ್ಮ ಸು
ಧಾ[1]ಕರವೆ ಬೋಧಿಸಿದ ವರ ಮಕ ॥
ರಾಕರ ನಿವಾಸ—ಹಸೆಗೇಳು (ಮತ್ಸ್ಯಾವತಾರ) ೧

ಭೂರಿನೇತ್ರನು **ಶ್ರೀಮುಖಾ**ರವಿಂದಾಸ್ಯನ
ಕಾರುಣ್ಯದಿಂದಿರಲು । ದೂರ್ವಾಸ ಬರೆ **ಗೋ**
**ತ್ರಾ**ರಿ ಮನ್ನಿಸದಿರಲು । ಕ್ರೂರ **ಭಾವದಿ**
ಮೀರಿ ಶಪಿಸುತ್ತೈದಲು । ಆ ಕ್ಷಣ ದುರುಳ
ರೇರಿ ಸ್ವರ್ಗವನಾಳಲು । ಈ ವಾರ್ತೆಯರುಹಲು ॥

1 ಪ್ರಿಯ ವ್ರತನೆ ಲಾಲಿಪುದಾ

ವಾರಿಜಾಕ್ಷನಭಯವ ಪಾಲಿಸಿ
ನಾರಿ ಮಂದರಗಿರಿಯ ಪಾಲಿನ
ವಾರಿಧಿಯೊಳಿಡೆ ಮುಳುಗೆ **ಯುವ** ಸುರ
ವಾರ **ಧಾತು**ಗೆಡಲ್ಕೆ ನೆಗಹಿದ ॥
ಕೂರುಮ ಬಲು ಮಹಿಮ—ಹಸೆಗೇಳು (ಕೂರ್ಮಾವತಾರ) ೨

ವಸುಧೆಯ ಹಿರಣ್ಯಾಕ್ಷಾಸುರ ಕೊಂಡೊಯ್ಯಲಂ
ದಸಮ ಸಾಹಸದೊಳಂದು । **ಈಶ್ವರ** ಸಖಿ
ನಸುನಗೆ ತಾಳುತಂದು । ಧಾರಿಣೀಚೋರ
ನಸುವ ಹೀರಲು ಬೇಕೆಂದು । ಭೂದಾರನಂ
ತೆಸೆದು ರೋಷದೊಳು ಬಂದು । ದುರುಳನನು ಕೊಂದು
ಪಸರಿಸಿಹ **ಬಹುಧಾನ್ಯ**ದಿಳೆಯನು
ಸಸಿನವಿರಿಸುತ್ತ **ಪ್ರಮಾಥಿ**ಯ
ದೆಸೆಗೆಡಿಸಿ **ವಿಕ್ರಮ**ವ ಮೆರೆಸಿದ
**ವಿಷು** ಪ್ರಭಾವದ **ಚಿತ್ರಭಾನು**ವೆ ॥
ಕುಶಲದಿ ವರಾಹ—ಹಸೆಗೇಳು (ವರಾಹಾವತಾರ) ೩

ದಾನವನಾಥನು ಸೂನು ಭಾನುವಿಗೆ **ಸ್ವ**
**ರ್ಭಾನು**ವಿನಂದದಲಿ । ಬಹಳ ಉಪದ್ರ
ನ್ಯೂನವಿಲ್ಲದೆ ಕೊಡುತಲಿ । ದಿವಿಜರ ಸತ್ವ
ಹೀನಿಸಿ **ತಾರಣ**ದಲಿ । ಸುರೈಶ್ವರ್ಯ
ತಾನಾಳುತಿರೆ ಮುದದಲಿ । **ಪಾರ್ಥಿವ ವ್ಯಯ**ದಲಿ ॥
ಆ ನಿಖಿಳ ಸುರರೊವರೆ ಭಕ್ತಾ
ಧೀನನೆಂದೆಂಬಾ ಬಿರುದ ಸ
ನ್ಮಾನಿಸುತ್ತಲೆ ನರಹರಿಯವೋ
ಲಾ ನಿಶಾಟನ ನಖದಿ ಸೀಳಿದ ॥
ಶ್ರೀ ನರಕೇಸರಿಯೇ—ಹಸೆಗೇಳು (ನೃಸಿಂಹಾವತಾರ) ೪

ದೇವತೆಗಳನಟ್ಟಿ ರೀವಿಯಿಂ ಗೆಲಿದು ಮ
ತ್ತೀ ವಸುಧೆಯನೆಲ್ಲವ । **ಸರ್ವಜಿತು**ವಾಗಿ
ತಾ ವಿರಚಿಸೆ ಯಾಗವ । **ಸರ್ವಧಾರಿ**ಯ

---

ಪ್ರಮಾಥಿ—ಪೀಡಕ. ವಿಷು—ಸಮಾನ, ಹೆಚ್ಚು ಕಡಮೆಯಿಲ್ಲದ. ಚಿತ್ರಭಾನು—ಅಗ್ನಿ, ಸೂರ್ಯ.

ತಾ **ವಿರೋಧಿ**ಸಿ ಕೂಗುವ । ದಿವಿಜರ **ವಿಕೃತಿ**
ಭಾವವರಿತು ಮಾಧವ । ಭಿಕ್ಷುಕದ ವಟುವ ॥
ಭೂವಲಯದೊಳಗಳವಡಿಸಿ ನಡೆ
ದಾ ವಿಕಟ ಬಲಿಯೊಡನೆ ಮೂರಡಿ
ಯೀವುದೆನಲಿತ್ತುದಕೆ ಮೆಚ್ಚುತ
ಕೋವಿದನ ದ್ವಾರದೊಳು ನೆಲಸಿದ ॥
ಪಾವನ ವಾಮನನೆ—ಹಸೆಗೇಳು (ವಾಮನಾವತಾರ) ೫

ಭೃಗುಜಾತ ಜಮದಗ್ನಿ ಸುಗುಣೆ ರೇಣುಕೆಯುರ್ಗೆ
ಮಗನಾಗಿ ಸಂಜನಿಸೆ । **ಖರ** ಕೋಪದಿ
ಭುಗಿಲಿಡುತಲೆ ಬೆಸಸೆ । **ನಂದನ**ನಿಗೆ
ನಗುತ **ಮಾ**ತನು ಪಾಲಿಸೆ । ಪರಶುವಿನೊಳು
ಮಿಗೆ ಜನನಿಯ ಖಂಡಿಸೆ । ತಾಯನುದ್ಧರಿಸೆ ॥
ಅಗಣಿತದ ಕರದವನು ಸುರಭಿಯ
ಬಗೆಗೊಳದೆ ಕೊಂಡೊಯ್ಯಲಾ ಬಾ
ಹುಗಳ ತರಿದು **ವಿಜಯ**ವ ತಾಳುತ
ಜಗದ ನೃಪರನು ಗೆಲಿದ **ಜಯ** ಮುಖ ॥
ವಿಗಡ ಭೃಗುರಾಮ—ಹಸೆಗೇಳು (ಪರಶುರಾಮಾವತಾರ) ೬

ದಿನಕರಾನ್ವಯದೊಳು ಜನಿಸಿ **ಮನ್ಮಥ**ರೂಪ
ನೆನಿಸಿ ಸೀತೆಯನೊಲಿಸಿ । ಪಿತ್ರಾಜ್ಞೆಗೈದಿ
ವನದಿ **ದುರ್ಮುಖಿ** ರಾಕ್ಷಸಿ । ಯನು ಭಂಗಿಸಿ
ವನಿತೆ ಮೃಗವಪೇಕ್ಷಿಸಿ । ಬೇಡೆ **ಹೇ ವಿಳಂ**
**ಬಿ**ನಿ ತಹೆನೆನುತಡೈಸಿ । ಪಿಡಿಯೆ ಯತ್ನಿಸಿ ॥
ಜಿನುಗೆ ಸಮಯ **ವಿಳಂ**ಬಿಸಲು ರಾ
ವಣ **ವಿಕಾರಿ ಶಾರ್ವರಿ**ಯೊಳೊಯ್ಯಲು
ಜನಕಜೆಯನರಸುತ್ತ **ಪ್ಲ**ವಗಗ
ಳನು ನೆರಪಿ ಕೊಲ್ಲುತಲಸುರರ ಶ ॥
ರಣಗೊಲಿದ ಶ್ರೀರಾಮ—ಹಸೆಗೇಳು (ರಾಮಾವತಾರ) ೭

ಸತಿ ದೇವಕಿಗೆ **ಶುಭಕೃತು** ಫಲವೀವಂತೆ
ಸುತನೆನಿಸಿಯೆ ಗೋಕುಲ । ಕೈದಿಯೆ **ಶೋಭ**
**ಕೃತು** ಸಿದ್ಧಿಸಲು ಸುಶೀಲ । **ಕ್ರೋಧಿ**ನಿಯಸುರೆ

ಹತಗ್ಯೈದ ಗೋಪಿ ಬಾಲ । **ವಿಶ್ವಾವ ಸು**
ವತಿಯರೊಡನಾಡಿ ಹಾಲ । **ಬೆಣ್ಣೆ** ಕದಿಯುತಲಾ ॥
ಮಥಿಸಿ ಮಾವನ ಮಾಗಧನಿಗಂ
ಜುತ **ಪರಾಭವ**ದಿಂ **ಪ್ಲವಂಗಾ**
ನ್ವಿತ ಶರಧಿಪುರವೆನಗಿ ಕುಂತೀ
ಸುತರ **ಕೀಲಕ**ದಿಂ ಪೊರೆದ ಶ್ರೀ ॥
ಪತಿ ಕೃಷ್ಣಮೂರ್ತಿ—ಹಸೆಗೇಳು (ಕೃಷ್ಣಾವತಾರ) ೮

ಶುದ್ಧಗುಣಾಚಾರ ಹೊದ್ದಿ ತ್ರಿಪುರರಾಳು
ತಿದ್ದ ಸಾಧ್ವಿಯರನೈದಿ । **ಸೌಮ್ಯಾ**ಕಾರ
ಸಿದ್ಧಿ **ಸಾಧಾರಣ**ದಿ । **ವಿರೋಧಿಕೃತು**ವ
ಗೆದ್ದು ಬರಲು ಕಪಟದಿ । **ಪರಿಧಾವಿ**ಯ
ಸಿದ್ಧಿಸಿ **ಪ್ರಮಾದೀಚ**ದಿ । **ಆನಂದ** ಮುಖದಿ ॥
ಮುದ್ದುಮೋಹನ ಬತ್ತಲೆಯೊಳಾ
ಮುಗ್ಧೆಯರ ವ್ರತವಳಿಸಿ **ರಾಕ್ಷಸ**
ರಿರ್ದ **ನಳ**ನಾಳಿಗಳ **ಪಿಂಗಳ**
ರುದ್ರ **ಕಾಳಯುಕ್ತಿ**ಯೊಳು ಸೇರಿದ ॥
**ಸಿದ್ಧಾರ್ಥಿ**ಯೆ ಬೌದ್ಧ—ಹಸೆಗೇಳು (ಬೌದ್ಧಾವತಾರ) ೯

ಪೊಡವಿಯೊಳಗೆ ಮ್ಲೇಂಛ ಪಡೆ **ರೌದ್ರಿ**ತರು ಕೂಡು
ತೊಡನೆ **ದುರ್ಮತಿ**ಗಳಾಗಿ । ಬಾಧಿಸೆ **ಲೋಕ**
ದೊಡೆಯ **ದುಂದುಭಿ**ಮೊಳಗಿ । **ರುಧಿರೋದ್ಗಾರಿ**
ಯೊಡೆತನದೊಳು ತಾನಾಗಿ । **ರಕ್ತಾಕ್ಷಿ** ಭೋ
ರ್ಗುಡಿಪಶ್ವವೇರಿ ಪೋಗಿ । **ಕ್ರೋಧನ**ದಿ ಕೂಗಿ ॥
ಕಡು ಭಯಂಕೃತಿದೋರೆ ದುರುಳರ
ಮಡುಹಿ ಕಲಿಧರ್ಮವನು **ಕ್ಷಯ**ಗೈ
ದಡಿಗಡಿಗೆ ಸುವಿಲಾಸದಿಂದಲಿ
ಬಿಡದಿಳೆಯ ಸುಮನಸರ ಪೊರೆಯುವ ॥
ಜಡಜಾಂಬಕ ಕಲ್ಕ್ಯ—ಹಸೆಗೇಳು (ಕಲ್ಕ್ಯವತಾರ) ೧೦

ಧಾತ್ರಿಯೊಳಿಂತರುವತ್ತು ಸಂವತ್ಸರ
ಮೂರ್ತಿ ನೀಸೆಂದೆನಿಸಿ । ನಿಗಮವನು ತಂ
ದಿತ್ತು ಮಂದರಧರಿಸಿ । ಧರಣಿಯನೆತ್ತಿ
ಮತ್ತೆ ಮಗುವ ಪಾಲಿಸಿ । ವಸುಧೆಯನಳೆದು
ಹೆತ್ತ ತಾಯನು ಛೇದಿಸಿ । ಶರನಿಧಿಯ ಬಂಧಿಸಿ ॥
ಧೂರ್ತ ಕಂಸನ ಮಡುಹಿ [1]ಯಂಬರ
ಕಿತ್ತೆಸೆದು ಮೆರೆಯುತ್ತ[1] ಕೂರಸಿ
ಯೆತ್ತಿ ದಶಧಾಕೃತಿಯನಳವಡಿ
ಸುತ್ತೆಸೆವ ಕೊಲ್ಲೂರ ಪುರದ ಪ್ರ ॥
ವರ್ತಿತೆಯಗ್ರಜನೆ—ಹಸೆಗೇಳು* ೧೧

## 102. ಮದುಮಗಳ ಹಸೆಗೆ ಕರೆಯುವದು

ಬಾರೆ ದಾಕ್ಷಾಯಣಿ । ತೋರುವ ಹಸೆಗೀಗ
ನೀರಜ ಮುಖಿಯಳೆ । ಬಾರೆ ಮಧ್ಯದಿ ಬೇಗ ಪ

ಪೊಗಳುತಲಿರುವರು । ನಿಗಮ ಪಾರಕರೆಲ್ಲ
ನಗುತ ನಗುತ ಬಾರೆ । ಸೊಗಯಿಪ ಹಸೆಗೀಗ ೧

ಮಣಿಭೂಷಣವ ತೊಟ್ಟು । ಪಣೆಗೆ ಕುಂಕುಮವಿಟ್ಟು
ಮಣಿವರ ಸಲಹುವ । ಗುಣನಿಧಿ ಹಸೆಗೀಗ ೨

ಚರಣಪಲ್ಲವದೊಳು । ಮೆರೆವ ನೂಪುರವಿಟ್ಟು
ಗಿರಪುರ ಮಂದಿರೆ । ಸರಸಿಜಮುಖಿ ಗೌರಿ ೩

---

1 ತ್ರೈಪುರ ಮಿತ್ರಿಯರ ವ್ರತವಳಿಸಿ

* ಕೋಡ್ಲ ಪಾರ್ವತಿಯಜ್ಜಿಯಿಂದ ಹೇಳಿಸಿ ಬರೆದುಕೊಂಡ ಈ ಹಾಡಿನ ಮೊದಲ ಹತ್ತು ಸೊಲ್ಲುಗಳಲ್ಲಿ ಪ್ರಭವ, ವಿಭವಾದಿ ಅರುವತ್ತು ಸಂವತ್ಸರಗಳ ಹೆಸರುಗಳಿವೆ; ಮತ್ತು ವಿಷ್ಣುವಿನ ಮತ್ಸ್ಯ, ಕೂರ್ಮಾದಿ ಹತ್ತು ಅವತಾರ ಕಥನಗಳ ಉಲ್ಲೇಖವು ಒಂದೊಂದಾಗಿ ಬರುತ್ತದೆ ಕೊನೆಯ (ಹನ್ನೊಂದನೆ) ಸೊಲ್ಲಿನಲ್ಲಿ ಪುನಃ ದಶಾವತಾರಗಳ ಉಲ್ಲೇಖವಿದೆ. ಕವಿ ಕೊಲ್ಲೂರ ಮೂಕಾಂಬಿಕೆಯ ಭಕ್ತನಾದ ಅಜ್ಞಾತ ವ್ಯಕ್ತಿ ಈ ಹಾಡನ್ನು ಪದಕಣಿಯಲ್ಲಿ ದೊರೆತ ಇನ್ನೊಂದು ಪ್ರತಿಯ ತಾಳಿಕೆಯಿಂದ ಆದಷ್ಟು ಸರಿಪಡಿಸಲಾಗಿದೆ.

## 103. ಎಲೆ ಸಾಕಿದ್ದು*

ನಾಕಿದರೆಲೆಗಳನು । ದಂಪತಿಗಳು
ನಾಕಿದರೆಲೆಗಳನು
ಹರುಷದಿಂದಲಿ ಬೇಗ ಹಸನಾಗಿ ಗೈದರು ಪ

ಪರಿಮಳಿಸುವ ಕಸ್ತೂರಿಯ ಬೇಗ
ನೊಗನಾಗಿಹ ಜಾಯಿಕಾಯಿ ಪತ್ರೆಗಳ ೧

ಅಚ್ಚ ಕುಸುರಿಸ ಪಚ್ಚೆ ತೆನೆಯವೊಲು
ತಳತಳಿಸುತ್ತಿಹ ವೀಳ್ಯದೆಲೆಗಳನು ೨

ಮಧುರ ಸುಗಂಧದ ಏಲಕ್ಕಿಯನು
ಚೆಲುವಾಗಿರುವ ಲವಂಗವ ತಾರೆ ೩

ನವನೀರದ ಕೋಮಲ ಗಾತ್ರನಿಗೆ
ಸವಿಯುವಲೆ ತಡಮಾಡದೆ ಬೇಗ ೪

ತಾಂಬೂಲವ ಸರಿಗೈಸುವದೀಗ
ಕನಕ ಬಟ್ಟಲವನು ತಾರೆಲೆ ಸಖಿಯೆ ೫

## 104. ಎಲೆ ಬಿಕ್ಕುವದು[1]

ಗುರು ಲಂಬೋದರರಡಿಗೆರಗಿ
ಶ್ರೀ ಶಾರದೆಯರ ಪದಕೆರಗಿ
ಪರಿಣಯವೆಸಗಿ । ನಾಲ್ಕನೆ ದಿನದಿ
ವರ ಚಾತುರ್ಥಿಯುತ್ಸಾಹದಿ ಶ್ರೀಹರಿ ॥
ಸಿರಿದೇವಿ ಸಹಿತ—ಎಸೆದಿರ್ದ ೧

---

* ಶೋಭನ ದಿವಸದ ರಾತ್ರಿ ದಂಪತಿಗಳು ಪಂಥದಿಂದ ವೀಳ್ಯದೆಲೆ ಪೋಣಿಸುವದು ಈ ಹಾಡಿನಲ್ಲಿ ವರ್ಣಿತವಾಗಿದೆ. ಸಾಕು—ಜೋಡಿಸು

1 ಬಿಕ್ಕು—ಹರಡು, ಚೆಲ್ಲು

ವರಸಿಂಹಾಸನ ಮಧ್ಯದೊಳು
ಹರಿ ಸಿರಿಸಹಿತ ಎಸೆದಿರಲು
ಸುರತರುಣಿಯರು । ಸುಮ್ಮಾನದೊಳು
ವರ ತಾಂಬೂಲವ ಚಾರ್ವಾಣಿಸಿ ವಧು ॥
ವರರು ಸೆಳೆದಾಡಿಕೊಳುತಂದು ೨

ರಂಭೆ ಊರ್ವಶಿ ಮೊದಲಾದವರು
ಅಂಬುಜಮುಖಿವ ವಿಲಾಸದವರು
ಸಂಭ್ರಮಪಡುತ । ಸರಸಗೊಳಿಸುತ
ತಾಂಬೂಲವ ಚಾರ್ವಾಣಿಸೆ ವಧುವರ ॥
ರಿಂಬುಗೊಳಿಸದೆ—ಕೊಳುತಂದು ೩

ಫುಲ್ಲಶರನ ಮದದಾನೆಯರು
ಉಲ್ಲಸ ಕೋಕಿಲ ಗಾನೆಯರು
ಫುಲ್ಲಾಕ್ಷಿಯರು । ಸಲ್ಲಲಿತೆಯರು
ಚೆಲ್ವತರದ ನಾಗವಲ್ಲಿ ಚಾರ್ವಾಣಿಸೆ ॥
ಸಲ್ಲಲಿತದಿ ಹರಿಯು—ನಸುನಕ್ಕ ೪

ಚಂಚಲ ನೇತ್ರದ ಬಾಲೆಯರು
ಮಿಂಚಿನೊಡ್ಯಾಣ ವೈಯಾರೆಯರು
ಕಾಂಚನಧರಪಿತ ಪಂಚಲಿಂಗೇಶನ
ವಾಂಛಿತಾರ್ಥವ ನೀಡೆಂದು ಪೊಗಳುತ ಪ ॥
ಳಂಚಿತ ದಯವೆಂದು—ನುತಿಸ್ಯಾರು ೫

## 105. ಹಾಲ್ತುಪ್ಪ ಬಡಿಸುವದು (ವಧುವರರಿಗೆ)

ಕ್ಷೀರಸಾಗರದೊಳಗೆ । ನೆರೆದಿಹ
ನಾರಿಯರಾಯೆಡೆಗೆ
ವಾರಿಜಾಂಬಕಿಯರು ಚಾರು ಚಂದಿರೆಯರು
ನಾರಾಯಣನಿಗು ನಾರಿ ಶ್ರೀಲಕ್ಷ್ಮಿಗು ॥
ಸಾರಿ ಹಾಲ್ತುಪ್ಪ—ಬಡಿಸ್ಯಾರು ೧

ಮೃಗನೇತ್ರಿಯರಂದು । ಪಾಡುತ
ಮುಗುಳುನಗೆಯೊಳಂದು
ಪೊಗಳುತಲಾ ಮತ್ತೊಗುಮಿಗೆಯಿಂದಲಿ
ನಗಧರ ನಾರಾಯಣ ಮಹಾಲಕ್ಷ್ಮಿಗೂ ॥
ಮುಗುದೆಯರ್ ಹಾಲ್ತುಪ್ಪ—ಬಡಿಸ್ಯಾರು ೨

ಮದನ ಕಠಾರಿಯರು । ಸಂಭ್ರಮದೊಳು
ಮದಗಜ ಗಮನೆಯರು
ವಿಧವಿಧ ಹರಿವಾಣದಿ ಪಯೋಘೃತವನು
ಮದನ ಪಿತನಿಗೂ ಚದುರೆ ಶ್ರೀಲಕ್ಷ್ಮಿಗೂ ॥
ಮುದದಿ ಹಾಲ್ತುಪ್ಪ—ಬಡಿಸ್ಯಾರು ೩

ಸುರಮುನಿಗಳು ಸಹಿತ । ವೇದಗಳನು
ವಿರಚಿಸುವರು ನಗುತ
ಶರಧಿ ಘೋಷದಿ ಮೊರೆವ ವಾದ್ಯದ ರವದಲಿ
ಮುರವೈರಿಗು ಮಹಾ ತರುಣಿ ಶ್ರೀ ಲಕ್ಷ್ಮಿಗೂ ॥
ತರುಣಿಯರ್ ಹಾಲ್ತುಪ್ಪ—ಬಡಿಸ್ಯಾರು ೪

ಇಂದುಮುಖಿಯರಾಗ । ಬಹು ನಾರೀ
ವೃಂದವೆರಸಿ ಬೇಗ
ಧಂಧಂ ಧಿಮಿಧಿಮಿರೆಂದು ಕೊಂಡಾಡುತ
ತಂದೆ ಶ್ರೀ ಪಂಚಲಿಂಗೇಶನ ಮಿತ್ರಗೆ ॥
ಚೆಂದದಿ ಹಾಲ್ತುಪ್ಪ—ಬಡಿಸ್ಯಾರು ೫

## 106. ಚಾಪೆ ಹಾಕುವದು (ದಂಪತಿಗಳಿಗೆ)

ಶ್ರೀಗುರುಗಣಪರ ಚರಣಕೆ ವಂದಿಸಿ
ಸಾಗರಾಂಬರೆಯನು ಸಂಸ್ತುತಿಸಿ
ನಾಗಭೂಷಣನಡಿದಾವರೆಗೆರಗುತ
ವಾಗೀಶ್ವರಿಯನು ಸತ್ಕರಿಸಿ
ಸಾಗರಸಂಭವೆ ಸರಸಿಜನೇತ್ರರಿ
ಗಾಗಮೋಕ್ತದಿ ಚಾಪೆ ಹಾಕಿದ ವಿವರವ ॥
ನೀಗ ವರ್ಣಿಸುವೆ—ಒಲವಿಂದ ೧

ಶಶಿನಿಭ ವದನೆಯರೆಲ್ಲರು ಕೂಡುತ
ಪೊಸ ಪೊಂಬಣ್ಣದಿ ರಂಜಿಸುವ
ಮಿಸುನಿಯ ಚಾಪೆಯನಧಿಕ ವಿಲಾಸದಿ
ವಸುಮತಿಯೊಳು ಬಿಡಿಸುತ ಮೆರೆವ
ವಿಶದ ಸುವರ್ಣದ ಜರಿಯ ಪೀತಾಂಬರ
ವಸುಮತಿಯೊಳು ಪಸರಿಸೆ ಬಳಿಕದರೊಳು ||
ಪೊಸ ವಧೂವರರು—ಮಲಗಲು ೨

ಮೇಲಕೆ ಮುತ್ತಿನ ಜೋಲುವ ಜರಿಯನು
ಶಾಲೆಯನಧಿಕ ಸಂತೋಷದೊಳು
ನೀಲಾಳಕೆಯರು ಹೊದಿಸಲು ಸಂತಸ
ತಾಳುತ ಮನದಿ ವಿಶಾಲದೊಳು
ವೇಳುವಡಸದಳವೆನೆ ಕೋಳ್ಯೂರಿನ
ವಾಲಕನಹ ನರಸಿಂಹನು ಸತಿಸಹ ||
ಓಲಯಿಸಿ ಸಿಪ್ದೆ—ಗೈದರು ೩

## 107. ಶಯನಕ್ಕೆ ಕರೆದದ್ದು (ಪ್ರಥಮ ರಾತ್ರಿ)

ಪಚ್ಚೆ ಚೀಣಿ ಸಂಚಿ ಒಪ್ಪವುಳ್ಳಲಿ ವಸ್ತು
ಶುಕ್ರಮ ದೇವರ್ಗ್ಹಾಂಗೆ ಹೊಳೆಯುತ್ತ—ಸುಣ್ಣದ ಕಾಯ
ಅರಸರಿಗೆ ತಂದು—ಎರಗಿದ ೧

ಸಾಲಿ ಚೀಣಿ ಸಂಚಿ ಚಂದವುಳ್ಳಲಿ ವಸ್ತು
ಸೂರ್ಯಮ ದೇವರ್ಗ್ಹಾಂಗೆ ಹೊಳೆಯುತ್ತ—ಸುಣ್ಣದ ಕಾಯ
ಅರಸರಿಗೆ ತಂದು—ಎರಗಿದ ೨

ಇತ್ತ ಬಾರೇ ಸತಿಯೆ ಓಲೆ ಮಾಡಿಸಿ ಕೊಡುವೆ
ಪುತ್ತಳಿ ಸರಕೆ ಕುಳಿಕೆಯ—ಮಾಡಿಸಿ ಕೊಡುವೆ
ಬಾರೆನ್ನ ಸತಿಯೆ—ಸದರಿಗೆ[1] ೩

1 ಸದರು—ಹಾಸಿಗೆ

ಹೀಂಗೆ ಬಾರೆ ಸತಿಯೆ ತಾಳಿ ಮಾಡಿಸಿ ಕೊಡುವೆ
ತಾಳಿಯ ಸರಕೆ ಕುಳಿಕೆಯ—ಮಾಡಿಸಿ ಕೊಡುವೆ
ಬಾರೆನ್ನ ಸತಿಯೆ—ಸದರಿಗೆ ೪

ಹತ್ತು ಖಂಡುಗ ಹೊಲವ ಬಿತ್ತಿ ಸೈರಿಸಲಾರೆ
ಬಿತ್ತಿದ ಬೆಳೆಯ ಕೊಯಿಲಾರೆ—ಕೊಯ್ದು ಸೈರಿಸಲಾರೆ
ಹೆತ್ತಮ್ಮನ ಬಿಟ್ಟು—ಬರಲಾರೆ ೫

ಹತ್ತು ಖಂಡುಗದ್ಹೊಲವ ಬಿತ್ತಿ ಸೈರಿಸಲಕ್ಕು
ಬಿತ್ತಿದ ಬೆಳೆಯ ಕೊಯಿಸಲಕ್ಕು—ಕೊಯ್ದು ಸೈರಿಸಲಕ್ಕು
ಬಾರೆನ್ನ ಸತಿಯೇ—ಸದರಿಗೆ ೬

## 108. ಶಯನ ಮಾಡಿದ್ದು

ಶಯನವ ಮಾಡಿದನೆ । ಲಕ್ಷ್ಮೀಪತಿ
ಶಯನವ ಮಾಡಿದನೆ
ಶ್ರೀದೇವಿ ಭೂದೇವಿ ಪಾದವನರ್ಚಿಸೆ
ಶೇಷನ್ಹಾಸಿಗೆ ಮೇಲೆ ವಾಸುಕಿಶಯನನು ಪ

ಶ್ರೀಗುರು ಗಣಪತಿಯ । ಪಾದಕೆ ತಲೆ
ಬಾಗಿ ಬೇಡುವೆ ಮತಿಯ
ಲಾಲಿಸಿ ಕೇಳಿರಿ ಶ್ರೀಹರಿ ಚರಿತೆಯ
ಲೀಲೆಯಿಂದಲಿ ಗೈವೆ ನಿಮ್ಮಯ ಸ್ತುತಿಯ ೧

ಉಪ್ಪರಿಗೆಯ ಕೋಣೆಲಿ । ನಾರಿಯರೆಲ್ಲ
ಸುತ್ತ ದೀವಿಗೆಯಿರಿಸಿ
ಪಟ್ಟೆಯ ಹಾಸಿಗೆ ರತ್ನದ ತಲೆದಿಂಬು
ಹೋಗಿ ನಾರಿಯರು ಹಸೆಯ ಹಾಸಿದರು ೨

ಪಟ್ಟೆಮಂಚಕೆ ತಕ್ಕ । ನಾರಿಯರೆಲ್ಲ
ಸುಪ್ಪತ್ತಿಗೆಯನಿರಿಸಿ
ಪಟ್ಟೆಯ ಹಾಸಿಗೆ ರತ್ನದ ತಲೆದಿಂಬು
ಹೋಗಿ ನಾರಿಯರು ಹಸೆಯ ಹಾಸಿದರು ೩

ಅಕ್ಕತಂಗಿಯರು ಕೂಡಿ । ಹಾಸಿದ ಪರಿ
ಯೀಕ್ಷಿಸಿ ಹರಿಯು ನೋಡಿ
ವೇಳ್ಯವು ಆಯಿತು ಹಾಸಿಗೆ ಬಿಡಿರೆಂದು
ವಾಸುಕಿ ಶಯನನು ಹಾಸ್ಯದಿ ನುಡಿದನೆ ೪

ಲಕ್ಷ್ಮಿ ನಿನ್ನಯ ಪತಿಗೆ । ಹಾಸಿಗೆಯನ್ನು
ನಾವು ಬಿಡುವವರಲ್ಲ
ತಕ್ಕ ಮರ್‍ಯಾದೆಯ ಕೊಟ್ಟರೆ ಬಿಡುವೆವು
ಅಕ್ಕ ತಂಗಿಯರಿಂತು ಹಾಸ್ಯದಿ ನುಡಿದರು ೫

ಲಕ್ಷ್ಮೀದೇವಿಯೆ ನಿನ್ನ । ಸ್ಮರಿಸುವೆವು
ಅಕ್ಷಯವಾಗಲೆನುತ
ಅಕ್ಷಯವಾಗಲೆಂದಿತ್ತರೆ ವೀಳ್ಯವ
ಆ ಕ್ಷಣದಲಿ ನಾವು ಹಾಸಿಗೆ ಬಿಡುವೆವು ೬

ಕಾಂತೆಯರಿಗೆ ವೀಳ್ಯವ । ಕೊಟ್ಟಳು ಬೇಗ
ಅಕ್ಷಯವಾಗಲೆನುತ
ಕುಕ್ಷಿಯೊಳಗೆ ಲಕ್ಷ್ಮೀಪತಿಯು ನೆನೆವರಿಗೆ
ಅಷ್ಟ ಸೌಭಾಗ್ಯವು ಹೆಚ್ಚುವುದೆನುತಲಿ ೭

## 109. ಚತುರ್ಥಿಯ ಮರುದಿನ ದಿಬ್ಬಣಿಗರು ಹೇಳುವದು

ಶ್ರೀಶ ಗಜಾನನನಾ ಶಾರದೆಯರ
ತೋಷದಿ ಪ್ರಾರ್ಥಿಸುತ । ದೇವಕಿ ಮೃದು
ಭಾಷೆಯರೊಡಗೂಡುತ । ಶ್ರೀಕೃಷ್ಣನಿ
ಗಾ ಸುಕುಂಡಿನಿಯೊಳತ್ತ । ಪೇಳ್ದಳು ಬುದ್ಧಿ
ಮಾಸದೆ ಶೋಭಿಸುತ । ಇಹುದು ಮುದವಾಂತು ॥
ಕ್ಲೇಶವರ್ಜಿಸುತತ್ತೆ ಮಾವನೊ
ಳೋಸರಿಸದಿರು ಭಾವನಂಟರೊ
ಳೈಸೆ ಸರಸದೊಳಾಡುತತ್ತಿಗೆ
ದೂಷಿಸದ ತೆರವೆಸಗುತಿಲ್ಲಿರು ॥
ಈ ಸುಮಗಂಧಿಯೊಳು—ಮುದದೊಳು ೧

ಪರಮ ಸಂಭ್ರಮವಿಹ ಕಿರಿಯಕ್ಕತಂಗಿಯ
ರೆರಕವಿನೋದಕತ್ತ । ನೋಡದೆ ಮಧು
ವರ ಕ್ಷೀರ ದಧಿಗೂಡುತ್ತ । ನವನೀತದಿ
ಹರುಷಿಸುತುಃಖವದಿತ್ತ । ನಾಡಮ ಬಾಂಧ
ವರನೆಲ್ಲ ಕೂಡುತತ್ತ । ಮನೆಗೆ ಬಹುದೆನುತ ॥
ಅರುಪಿ ಸುಮತಿಯ ಮುಗ್ಧೆಯರ ಕರೆ
ಕರೆಮ ವಯಣವ ಗೆಯ್ವುದೆನುತಲಿ
ವೆರಸಿ ಬಹು ವಿಜೃಂಭಣೆಯೊಳವ
ಳಿರದೆ ಅತ್ತಿಗೆ ನಾದಿನೀಯರೊ ॥
ಳೊರೆದಳೀ ತೆರದಿ—ಸರಸದಿ ೨

ಕುಂಜರ ಗಮನೆಯರ್ ನಂಚಿತ ಸುಮನೆಯರ್
ಮಂಜುಳಾಂಗಿಯರು ಮಾತ । ಲಾಲಿಸಿರೆಲ್ಲ
ಕಂಜಾಕ್ಷಿಯರು ಸಹಿತ । ಬಾಂಧವ ಬಂಧು
ಪುಂಜವನೊಡಗೂಡುತ । ದಿಬ್ಬಣ ಘೋಷ
ದಿಂ ಜಯ ವಿಭವದತ್ತ । ವಧುವರರು ಸಹಿತ ॥
ರಂಜಿಸುವ ನಮ್ಮನೆಗೆ ನಾಡದು
ರಂಜನೆಯೊಳೈತಹುದು ಪೋಪೆವು
ಜಂಜಡವ ಬಿಡಿ ವಿಷ್ಣು ಸತಕುಲ
ಸಂಜೀವನು ರಕ್ಷಿಸುವನೆನುತಲಿ ॥
ಮಂಜುಳ ಗಾತ್ರೆಯರು—ಪೊರಟರು ೩

## 110. ಗೃಹಪ್ರವೇಶಕ್ಕೆ ಕರೆದದ್ದು

ಚದುರೆಯರಾಲಿಸಿ ನಮ್ಮಯ ನೊಲ್ಲ
ಸದುಹೃದಯರೆ ಸದ್ಬಂಧುಗಳೆಲ್ಲ
ಸದನಕೆ ಪೋಪೆವು ನಾವಿಂದೆಲ್ಲ
ಮನೆ ಮಕ್ಕಳು ಸಹಿತಾಗಿ ನೀವೆಲ್ಲ
ಮುದದಿಂದಲಿ ನಾಳೆ ದಿಬ್ಬಣ ತೆಗೆಸಿ ಕೊಂ ॥
ಡೊದಗಿ ನಮ್ಮನೆಗೆ—ಬರಬೇಕು ೧

ಅತ್ತಿಗೆ ನಾದಿನಿ ಅಗ್ರಜರುಗಳಿರ
ಮತ್ತೀ ಬಾಂಧವ ನೆರವಿಯ ಜನರ
ಪುತ್ರ ಕಳತ್ರ ಸುಜನರೆಲ್ಲವರ
ಅರ್ಥಿಯಿಂದಲಿ ಬೇಕಾದಂಥವರ
ಉತ್ಸಾಹದಿಂದ ನೀವೆಲ್ಲ ದಿಬ್ಬಣ ಕೂಡಿ ||
ಅರ್ಥಿಯಲಿ ನಾಳೆ—ಬರಬೇಕು ೨

ಕಂದರ್ಪನ ಮುಂಗೈಗಿಣಿಗಳಿರ
ಸುಂದರ ಕರ್ಪೂರಗಂಧಿನಿಯರಿರ
ಚಂದಿರನನು ಪೋಲ್ವಾನನಗಳಿರ
ಇಂದುವದನೆ ಬಹು ಸೌಂದರ್ಯರಿರ
ಬಂದು ನಮ್ಮನೆಗೆ ಗೃಹಪ್ರವೇಶವ ನಾಳೆ ||
ಚಂದದಲಿ ನಡೆಸಿ—ಕೊಡಬೇಕು ೩

ನಿಮ್ಮುಪಚಾರ ಮನ್ನಣೆ ಗುಣಗಳಿಗೆ
ಒಮ್ಮೆ ಊಣೆಯಗಳ ಕಾಣೆವು ಕಡೆಗೆ
ಸುಮ್ಮಾನದಿ ನಾವು ಪೋಪೆವು ಮನೆಗೆ
ಸಮ್ಮತವಾಯಿತು ಸಭ ಸರ್ವರಿಗೆ
ಸನ್ಮತದಿಂದ ನೀವೆಲ್ಲ ದಿಬ್ಬಣಗೂಡಿ ||
ಒಮ್ಮಯಿಸಿ ನಾಳೆ—ಬರಬೇಕು ೪

ಬಡನಡುವಿನ ಬಾಲೆಯರೆಲ್ಲರನು
ಕಡು ಹರುಷದಿ ಬಂಧು ಬಾಂಧವರನ್ನು
ಒಡಗೂಡಿಯೆ ನೀವು ಬರಬೇಕಿನ್ನು
ಕಡು ಬಿಸಿಲಾಯಿತು ಪೇಳಲೇನದನು
ಒಡನೆಲ್ಲರು ಕೂಡಿ ನಡೆತಂದು ನಾಳೆಗೆ ||
ನಡೆಸಿ ಮಾಂಗಲ್ಯ—ಎಸೆದವು ೫

ಎಳೆಮಕ್ಕಳ ಮಾಣಿಕ ಮದೆಮಗನೆ
ನಿಳಯಕೆ ಪೋಪೆವು ನಾವು ಚೆನ್ನಿಗನೆ
ತಳುವದೆ ಸರ್ವರ ಕರಕೊಂಡು ನೀನೇ
ಲಲನೆ ಸಹಿತ ನಾಳೆಗೆ ಬಾ ಮಗನೆ
ಒಲಿದು ಶ್ರೀ ಪಂಚಲಿಂಗೇಶ್ವರ ನಿನ್ನನು ||
ಸಲಹುವನನವರತ—ದಯಮಾಡಿ ೬

## 111. ಮೇಲೋಗರಕ್ಕೆ ಕೊರೆಯುವುದು

ಸಿರಿದೇವಿಯನೊಲಿಸುತ ಮುದದಿ । ಶ್ರೀ
ಧರ ಹರಿಯುತ್ಸ್ಯುಲ್ಲಸದಿ
ಪರಿಪರಿಯೋಕುಳಿಯಾಡುವ ದಿವಸದಿ
ತರತರ ಶಾಕ ಸಾಹಿತ್ಯವ ತರಿಸುತ ॥
ಸಿರಿ ಸಹಿತಾಗಿ—ವಿಭವದಿ ೧

ತಂದ ತಂದವ ಸುಫಲಾದಿಗಳ । ಮುಂ
ಕೊಂಡು ತಂದಿತ್ತ ಮಣಗತ್ತ್ರಿಗಳ
ಕಂಡು ಸಂತೋಷದಿ ಗಂಡ ಹೆಂಡಿರು ಕೂಡಿ
ತೊಂಡೆಕಾಯಿ ಮುಂತಾದ ಸಾಹಿತ್ಯವ ॥
ತುಂಡಿಸಿ ಹಾಕಿದರು—ಒಲವಿಂದ ೨

ಸರನಾಟಕ ಲೌಕಿಕದಿಂದ
ತರುಣಿ ಸಮೇತದೊಳೊಲವಿಂದ
ಪರಿಪರಿ ಎಳೆಮಿಡಿಗಾಯಿ ಪಲ್ಯಂಗಳ
ಸಿರದೆ ಕತ್ತರಿಸುತ ಪರಿಯಸೀಕ್ಷಿಸುತಲಿ ॥
ನೆರೆದ ಜನರೆಲ್ಲ—ಹರುಷದಿ ೩

ಬಾಲಾಟಿಕೆತನದಲಿ ನಲಿದು
ಬಾಲಕರಂದದಿ ತೋಷಿಸಿ ಕುಣಿದು
ಲೀಲೆಯಿಂದಲಿ ಪರಿಹಾಸ್ಯವನಾಡುತ
ಬಾಲಾರ್ಕಾಮಿತ ಭಾಸದಿ ಬೆಳಗುವ ॥
ಶ್ರೀಲೋಲನ ಸ್ತುತಿಸಿ—ಪೊಗಳ್ಯಾರು ೪

ಚೆಂದದಿ ಪಲ್ಯಕೆ ಕತ್ತರಿಸಿ
ಕುಂದದೆ ತೈಲವಂಗಕೆ ಪೂಸಿ
ಇಂದಿರೆ ಸಹಿತೋಕುಳಿಯಾಡುತ ಗುರು
ತಂದೆ ಶ್ರೀ ಪಂಚಲಿಂಗೇಶನ ಸಖ ಗೋ
ವಿಂದನೊಪ್ಪಿರ್ದ—ನಲವಿಂದ ೫

## 112. ಚತುರ್ಥಿಯ ಮರುದಿನ ಕೆರೆ ಮೀಯುವದು (ಓಕುಳಿಯಾಟ)

ಆಡಿದರೋಕುಳಿಯ । ಸೀತಾರಾಮ
ರಾಡಿದರೋಕುಳಿಯ ಪ

ಗಜಮುಖನಿಗೆ ನಮಿಸಿ । ಶಾರದೆಯನು
ನಿಜವಾಗಿ ಮನದಲಿಟ್ಟು
ಅಜನ ಪಿತನ ವಿವಾಹವ ಗೈದೈದನೆ ದಿನ
ಅಗಿಲು ಶ್ರೀಗಂಧದೋಕುಳಿಯನಾಡಿಸಿ ಬೇಗ ೧

ಒಟ್ಟಿಕುಚದ ಬಾಲೆ । ಜಾನಕಿ ದೇವಿ
ಬೆಟ್ಟು ಕಂಕಣವನಿಟ್ಟು
ಪಟ್ಟೆ ಬೆಳ್ಳಿ ಹರಿವಾಣವ ಕರದಲಿ
ಇಟ್ಟು ಸರ್ಪಶಯನನ ವದನಕ್ಕೆ ತಳಿಯುತ ೨

ಬಡನಡುವಿನ ಬಾಲೆ । ಜಾನಕಿ ದೇವಿ
ಎಡ ಎಡಕೊಪ್ಪುವಂಥ
ಸಣ್ಣ ಬೆಳ್ಳಿಯ ಹರಿವಾಣ ಕರದಲಿ ಪಿಡಿದು
ಜಲಜಲೋಚನನ ವದನಕ್ಕೆ ತಳಿಯುತ ೩

ಹೊನ್ನ ಕೊಪ್ಪರಿಗೆಯಲಿ । ಓಕುಳಿಯನ್ನೆ
ಚೆನ್ನಾಗಿ ಕರಡಿದರು
ಚಿನ್ನದ ರಾಮಮುದ್ರಿಕೆಯ ತೆಗೆದಾಡಲು
ಪದುಮಲೋಚನನ ವದನಕ್ಕೆ ತಳಿಯುತ ೪

ಚಿನ್ನದ ಕೊಪ್ಪರಿಗೆಯಲಿ । ಓಕುಳಿಯನು
ಮುನ್ನವೆ ಕರಡಿದರು
ಚೆನ್ನಾದ ರಾಮಮುದ್ರಿಕೆ ತೆಗೆದಾಡಲು
ಪನ್ನಗ ಶಯನನ ವದನಕ್ಕೆ ತಳಿಯುತ ೫

# ಗೃಹಪ್ರವೇಶದ ಹಾಡುಗಳು

## 113. ಮಗಳನ್ನು ಕಳುಹಿಸಿದ್ದು

ಕಾಂತನ ಕೈಹಿಡಿದು ಬಂದಳಾಗ । ಹೆಣ್ಣು
ಜನುಮವೆ ಬಹು ಕಷ್ಟ ಎಂದಳಾಗ
ಎಂದಳಾಗ । ಮನ ನೊಂದಳಾಗ । ಅಲ್ಲಿ
ನೆರೆದ ಆಪ್ತರ ಬೀಳ್ಕೊಂಡಳಾಗ ಪ

ಹೊಸ್ತಿಲೊಳಗೆ ಹಣಯಿಟ್ಟಳಾಗ । ವಧು
ತವರನ್ನು ನೆನೆನೆನೆದತ್ತಳಾಗ
ಅತ್ತಳಾಗ । ಬೇನತ್ತಳಾಗ । ಕೊನೆಗೆ
ಕೊಟ್ಟ ಮನೆಗೆ ಹಣತೊಟ್ಟಳಾಗ ೧

ತಾಯಿ ತಂದೆಗೆ ತಲೆ ಬಾಗಿದಳೆ । ತನ್ನ
ತವರಿಗೆ ಶುಭವನು ಕೋರಿದಳೆ
ಕೋರಿದಳೆ । ಪತಿ ಸೇರಿದಳೆ । ಹೆಣ್ಣು
ಕಣ್ಣೀರ ಹನಿಮುತ್ತ ತೂರಿದಳೆ ೨

ತವರಿನ ಸಿರಿಯ ಕೊಂಡಾಡಿದಳೆ । ಅಲ್ಲಿ
ಸವಿದ ಸುಖವ ನೆನೆದಾಡಿದಳೆ
ಆಡಿದಳೆ । ಧೈರ್ಯ ತಾಳಿದಳೆ । ತನ್ನ
ಮರೆಯಬೇಡಿರಿ ಎಂದು ಬೇಡಿದಳೆ ೩

ಹಿತ್ತಿಲ ಸಸಿಯು ಹೂಬಿಡುವ । ಮುನ್ನ
ಮಗಳು ಮುಡಿದಳೆಂದು ನೆನೆಯಣ್ಣ
ನೆನೆಯಣ್ಣಾ । ನೀ ಕಳುಹೊ ಮುನ್ನ । ನಿನ್ನ
ಭಗಿನಿಯ ಬಯಕೆ ಸಲಿಸೋ ಚೆನ್ನ ೪

ಸ್ಥೈರ್ಯವೃತ್ತಿಗೆ ಹೊರವಟ್ಟಳಾಗ । ತನ್ನ
ಗೆಳತಿಯರಿಗೆ ಮೆಚ್ಚುಕೊಟ್ಟಳಾಗ
ಕೊಟ್ಟಳಾಗ । ತುರುಬಿಟ್ಟಳಾಗ । ವಧು
ಗೃಹಿಣೀ ಕೃತ್ಯಕೆ ಮನಗೊಟ್ಟಳಾಗ ೫

ಪತಿಯೇ ಗತಿಯೆಂದುಕೊಂಡಳಾಗ । ವಧು
ವರನ ಕುಲಕೆ ತಾನು ಸಂದಳಾಗ
ಸಂದಳಾಗ । ಐತಂದಳಾಗ । ಹೆಣ್ಣು
ಕಾಂತನ ಕೈಹಿಡಿದು ಬಂದಳಾಗ ೬

## 114. ಪತಿಗೃಹಕ್ಕೆ ಹೋಗುವುದು

ತಾತ । ಲಾಲಿಸಿ ಕೇಳೆನ್ನ ಮಾತನು ಪ

ಪ್ರೀತಿಯಿಂದಲಿ ನಾನು ಪ್ರೀಯನೊಡನೆ ಪೋಪೆ
ಓತೆನ್ನ ರಮಣನು ಕಾವನು ಅಪ

ಬಂಧು ಬಾಂಧವರಿರ ಇಂದು ದುಃಖಿಪುದೇಕೆ
ಮುಂದೆನ್ನ ರಮಣನು ಕಾವನು ೧

ಅಕ್ಕ ತಂಗಿಯರಿರ ಚಿಕ್ಕತಮ್ಮನೆ ಕೇಳು
ಬ್ರಹ್ಮ ಬರೆಪ ಮೀರ್ವರುಂಟೇನು ೨

ಅಪ್ಪ ನೆರಗಬಿಡೂ ಅಮ್ಮ ಸೆರಗ ಬಿಡೋ
ದಮ್ಮಯ್ಯ ನಾನೀಗ ಪೋಗುವೆ ೩

ಅತ್ತೆ ಮಾವರ ಸೇವೆ ನಿತ್ಯವು ನಡೆನುವೆ
ಚಿತ್ತಜನಯ್ಯನೊಳಿರ್ಪೆನು ೪

## 115. ಹೆಣ್ಣು ಮನೆ ತುಂಬಿದ್ದು

ಶುಕ್ರಗಿರಿ ಪರ್ವತಕೆ ಹೊಕ್ಕನೆ ಆದಿತ್ಯ
ಗುತ್ತಿಂದಲಿತ್ತ ಬೆಳಗಾದೊ—ಜಾವದಲಿ
ಮಿತ್ರೆಯೊಡಗೊಂಡು—ಬರುತಾನೆ ೧

ಸೂರ್ಯಗಿರಿ ಪರ್ವತಕೆ ಹೋದನೆ ಆದಿತ್ಯ
ಗೋವೆಯಿಂದಲಿತ್ತ ಬೆಳಗಾದೊ—ಜಾವದಲಿ
ನಾರಿಯೊಡಗೊಂಡು—ಬರುತಾನೆ ೨

ಗುತ್ತಿಗೂ ಇಲ್ಲಿಗೂ ಒಪ್ಪಿ ಡಂಗುರ ಹೊಯಿಸಿ
ಬಟ್ಟೆಯಲಾರೂ ನಿಲದಿರಿ—ಅಣ್ಣಯ್ಯ
ಮಿತ್ರೆಯೊಡಗೊಂಡು—ಬರುತಾನೆ ೩

ಗೋಪೆಗೂ ಇಲ್ಲಿಗೂ ಹೋಗಿ ಡಂಗುರ ಹೊಯಿಸಿ
ದಾರಿಯಲಾರೂ ನಿಲದಿರಿ—ಅಣ್ಣಯ್ಯ
ನಾರಿಯೊಡಗೊಂಡು—ಬರುತಾನೆ ೪

ಕಗ್ಗಲ್ಲು ಕಡಿದಾದೊ ನುಗ್ಗಲ್ಲು ನುಚ್ಚಾದೊ
ಬಗ್ಗಿದ ಮರವೆ ಚಿಗುರಿದ—ಅಣ್ಣಯ್ಯ
ಮಿತ್ರೆಯೊಡಗೊಂಡು—ಬರುವಾಗ ೫

ಒಪ್ಪವುಳ್ಳವರಿಗೆ ಹತ್ತು ಗೋಳಿ ಕಟ್ಟಿ
ಶುಕ್ರವತಿಯೆಂಬ ಹೊಸಕೆರೆ—ಏರಿಮೇಲೆ
ಮಿತ್ರೆಯೊಡಗೊಂಡು—ಬರುತಾನೆ ೬

ಕಂಟಿಯ ಹಣ್ಣನು ಅಂತರಕೀಡಾಡುತ
ಕುಂಚವ ಕೋಲ ತಿರುಸುತ್ತ—ಅಣ್ಣಯ್ಯ
ಮಿತ್ರೆಯೊಡಗೊಂಡು—ಬರುವಾಗ ೭

ಸತ್ತಿಗೆ ಸತ್ತಿಗೆ ಹಿಂದೆ ಸತ್ತಿಗೆಯ ದಳ ಮುಂದೆ
ಸತ್ತಿಗೆ ಮೇಲ್ ಬರುವ ಮಗ ಹಿಂದೆ—ಸೊಸೆ ಮುಂದೆ
ಸತ್ತಿಗೆಯ ಮೇಲೆ—ಬರುವಾಗ ೮

ಕಾರು ಕಾರಿನ ಹಿಂದೆ ಕಾರಿನ ದಳ ಮುಂದೆ
ಕಾರಿನ ಮೇಲ್ ಬರುವ ಮಗ ಹಿಂದೆ—ಸೊಸೆ ಮುಂದೆ
ಕಾರಿನ ಮೇಲೆ—ಬರುವಾಗ ೯

ಹೊಸ್ತಿಲಿಗೆ ಹಸೆ ಬಂದ ಸುತ್ತೆ ದೀವಿಗೆ ಬಂದ
ಶುಕ್ರಮರು ಹಿಡಿವ ಕೊಡೆ ಬಂದ—ಓಪಾಸನದ
ಪೆಟ್ಟಿಗೆ ಬಂದ—ಬಳಿವಾರಿ ೧೦

ಹೊಸ್ತಿಲಿಗೆ ದೀವಿಗೆಯ ಹಚ್ಚಿರಿಸಿ ಅತ್ತಮ್ಮ
ಮುತ್ತು ತುಂಬಿರಿಸಿ ತಳಿಗೆಲಿ—ನಿನ್ನ ಕುವರ
ಮಿತ್ರೆಯೊಡಗೊಂಡು—ಬರುತಾನೆ ೧೧

ಕಂಚೆ ಕೇಳುವಾಗ ಕಂಚೆಲ್ಲ ಕೀರುಸುಳಿ
ಕಂಚೆಲ್ಲ ಚಿಗುರಿ ಫಲಬಂದ—ನಮ್ಮನೆಯ
ಕೆಂಚೆ ಬಂದೊಳವ—ಹೋಗುವಾಗ ೧೨

ಪೆಬ್ಬಾಗಿಲೊಳಗೆಲ್ಲ ಹಬ್ಬಿದವೆ ರಥಬಳ್ಳಿ
ಗೆಜ್ಜೆಯ ಕಾಲ ಸೊಸೆ ಬಂದು—ಒಳಪೊಗುವಾಗ
ಅಬ್ಬರದಿ ಗೌಳಿ—ನುಡಿದವು ೧೩

ಕಂಚಿಯ ಕುಡಿ ಬಂದು ಮಂಟಪಕೆರಗಿದಂತೆ
ಗೆಜ್ಜೆಯ ಕಾಲ ಸೊಸೆ ಬಂದು—ಒಳಹೊಗುವಾಗ
ಸಡಗರದ ಗೌಳಿ—ನುಡಿದವು ೧೪

ಹಿತ್ತಿಲ ಮುಂದಣ ಹತ್ತು ತೆಂಗಿನ ಮರ
ಬೆಟ್ಟು ಬೆಟ್ಟೊಡೆದು ಫಲಬಂದ—ನಮ್ಮನೆಯ
ಮಿತ್ರೆ ಬಂದೊಳಗೆ—ಹೊಗುವಾಗ ೧೫

## 116. ಗೃಹಪ್ರವೇಶ ದಿಬ್ಬಣ ಬಂದದ್ದು (ಸರಳಾರ)

ಬಂದ ದಿಬ್ಬಣ ನೋಡುವ ಬನ್ನಿರೋ
ನಿಂತು ನೋಡುವ ಬನ್ನಿ ಜನರೆಲ್ಲ ಪ

ಮಥುರಾಪುರದೊಳು ಮಾತೆ ದೇವಕಿಯೊಳು
ಗುಪಿತದ ಯೋಚನೆಯನು ಬೇಗ
ಮಾಡುವ ವೇಳ್ಯದಿ ನಾರದ ಮುನಿ ಬಂದು
ಹೇಳಿದನಾ ಹೊಸ ಸುದ್ದಿಯನು ೧

ನಾರದ ಮುನಿ ಬಂದು ಕ್ಷೀರಸಾಗರದಲಿ
ಲಕ್ಷುಮಿಯಿರುವಳು ನಿನಗಾಗಿ
ಪೋಗಿ ನೀ ಗೆಲು ಎಂದು ಪೇಳಿದ ಮುನಿ ತಾನು
ಶ್ರೀಹರಿಯೊಡನೆ ನಸುನಗುತ[1] ೨

---
1 ನಗುತ ಬೇಗ

ಆಡಿದ ಮಾತನು ಕೇಳಿದ ಶ್ರೀಹರಿ
ಮಾತೆ ಅನುಜೆಯು ಒಡಗೂಡಿ
ಜಾಗ್ರತೆಯಲಿ ಹೋಗಿ ಶುಭ ಮುಹೂರ್ತದಿ ಗೆದ್ದು[1]
ಮುದ್ದು ಬಂದನೆ ತನ್ನಯ ಪುರಕೆ ೩

ಕ್ಷೀರ ಸಾಗರದಲಿ ಲಕ್ಷುಮಿಯನು ಗೆದ್ದು
ಶ್ರೀಹರಿ ಬೇಗ ಬಂದನೆ ನಗುತ
ವಾದ್ಯ ಕಹಳೆಯಿಂದ[2] ಲಕ್ಷ್ಮಿಯನೊಡಗೊಂಡು
ಮುದ್ದು ಬಂದನೆ ತನ್ನಯ ಪುರಕೆ ೪

ಬಾಣ ಬಿರುಸು ಛತ್ರ ಚಾಮರ ಸಹಿತಲೆ
ಗೀತ ನರ್ತನ ಸಂಗೀತದಲಿ
ಚಾರು ವಾದ್ಯಗಳಿಂದ ಪುರಕೆ ಹರಿಯು ಬಂದ
ಪುರದ ಜನರೆ ನೋಡುವ ಬನ್ನಿರೋ ೫

ಕನ್ನಡಿ ಕಲಶವ ಕಾಂತೆಯರ್ ಪಿಡಿದರು
ಅಂಗನೆಯರು ಸಮ್ಮೇಳದಲಿ
ಅಂಗನೆಯರ ಸಮ್ಮೇಳದಿ ರಂಗನು
ಬಂದನು ತನ್ನಯ ಪುರಕೆ ಬೇಗ ೬

## 117. ವಧೂವರರ ಕಾಲು ತೊಳೆದದ್ದು (ಸರಳಾರ)

ಕಾಲ ತೊಳೆದರು ಹರ ಗಿರಿಜೆಯರ
ಲೋಲೆ ಪಾರ್ವತಿ ಈಶ್ವರರ ಬೇಗ ಪ

ಗಜಮುಖ ಗಣಪನ ಚರಣಕ್ಕೆರಗುವೆ
ತರಗು ಚಕ್ಕುಲಿ ಮೋದಕವರ್ಪಿಸಿ
ಹರಗಿರಿಜೆಯರನೆದುಗೊಂಡ ಪದನವ
ಹರುಷದಿಂದಲಿ ನಾ ವಿರಚಿಸುವೆ ೧

---

1 ಶುಭವಾರ್ತೆಯ ಕೇಳಿ 2 ವಾದ್ಯತಾಳಗಳಿಂದ

ಎಸೆವ ಕೈಲಾಸದಿ ಒಸಗೆ ದುಂದುಭಿ ಮೊಳಗೆ
ಪಶುಪತಿ ಶ್ರೀ ಗಿರಿಜೆಯು ಸಹಿತ
ಒಸೆದು ಬರಲು ಇದಿರ್ಗೊಳ್ಳಬೇಕೆನುತಲಿ
ನಾರದ ಮುನಿಪತಿ ತೆರಳಿದನೆ ೨

ಹರನು ಗಿರಿಜೆಯ ಸಹಿತ ಪುರಕೆ ಬಂದನೆ
ಪರಮ ಹರ್ಷದಿ ನಾರದ ನುಡಿಯೆ
ಭರದಿಂದಲೆ ಪೋಗಿ ಇದಿರ್ಗೊಳಬೇಕೆಂದು
ಕರೆದರೆ ತಮ್ಮ ಅರಸಿಯರ ೩

ಪತಿವ್ರತೆಯರು ತಮ್ಮ ಪತಿಯ ವಾಕ್ಯವ ಕೇಳಿ
ಅತಿಶಯೋತ್ಸವ ತಾಳಿ ಮನದೊಳಗೆ
ಸ್ಥಿತಿವಂತೆ ಗಿರಿಜೆಯ ಕಾಲ ತೊಳೆವೆವೆಂದು
ಎಸೆವ ಪೀತಾಂಬರ ನೆರಿದುಟ್ಟರೆ ೪

ನೀಲವರ್ಣದ ಪೀತಾಂಬರ ನೆರಿದುಟ್ಟು
ಓಲೆ ಬುಗುಡಿ ಬಾವುಲಿಯನಿಟ್ಟು
ನೀಲ ಹರಳಿನುಂಗುರವ ಬೆರಲಿಗಿಟ್ಟು
ಶೃಂಗಾರವಾದರು ನಲಿಯುತಲಿ ೫

ಎಸೆವ ಪೀತಾಂಬರವನೆ ನೆರಿದುಟ್ಟರೆ
ಮಿಸುನಿ ಮಾಣಿಕದಾಭರಣವಿಟ್ಟು
ಪಶುಪತಿ ಗಿರಿಜೆಯ ಕಾಲ ತೊಳೆವೆನೆಂದು
ಅನಸೂಯಾದೇವಿ ಶೃಂಗಾರವಾದಳೆ ೬

ಹೊಳೆವ ಪೀತಾಂಬರವನೆ ಸತಿ ನೆರಿದುಟ್ಟು
ತಳತಳಿಸುವ ಆಭರಣವಿಟ್ಟು
ಹರಳಿನ ಓಲೆ ಬುಗುಡಿಯನೆ ಕಿವಿಗಿಟ್ಟು
ಗಿರಿಜೇಶ್ವರರ ಕಾಲ ತೊಳೆವೆನೆಂದು ೭

ಬಡನಡುವಿಗೆ ಪೀತಾಂಬರ ನೆರಿದುಟ್ಟು
ಮುತ್ತು ಮಾಣಿಕದಾಭರಣವಿಟ್ಟು
ಸೃಷ್ಟೀಶ ಪಾರ್ವತಿಯರ ಕಾಲ ತೊಳೆಯಲು
ಅನಸೂಯಾದೇವಿ ಶೃಂಗಾರವಾದಳೆ ೮

ಚಿನ್ನ ತಂಬಿಗೆಯಲಿ ಪನ್ನೀರುದಕ ತುಂಬಿ
ಕನ್ನಡಿ ಕಲಶವ ಕೈಪಿಡಿದು
ಹೊನ್ನ ಮಾಣಿಕದಾ ಬೀಸಣಿಗೆಯ ತಂದು
ಪನ್ನಗಶಯನನಲ್ಲಿಗೆ ಬಂದ ೯

ಶಶಿಧರ ಗಿರಿಜೆ ಕಾಲ್ತೊಳೆಯಬೇಕೆನುತಲಿ
ಹೊಸ ಮುತ್ತಿನ ಹರಿವಾಣದೊಳಗೆ
ಎಸೆವ ಹಾಸವ ತಂದು ಕುಶಲದಿಂದೆರೆದರು
ಶಶಿಧರ ಗಿರಿಜೆಯರೆದುರಿನಲಿ ೧೦

## 118. ಅಣ್ಣ ಅತ್ತಿಗೆಯರ ಪಾದ ತೊಳಿದದ್ದು

ಕೃಷ್ಣ ರುಕ್ಮಿಣಿ ಸಹ ಅರಮನೆಗೆ ಬರುವಾಗ
ಸುರರು ಸೇಸೆಯನೆ ತಳಿದರು—ದೇವಕಿ
ಎದುರು ದೀಪವನೆ—ಹಿಡಿ ಬಾರೆ ೧

ಕೃಷ್ಣನ ಕಾಲನು ಇನ್ನಾರು ತೊಳೆವರು
ಸ್ವಾಮಿಯ ತಂಗಿ ಸೌಭದ್ರೆ—ದೇವಿಯು
ಸ್ವಾಮಿಯ ಕಾಲ—ತೊಳಿಬೇಕು ೨

ರಂಗನ ಕಾಲನು ಮಿತ್ರೇರು ತೊಳಿಬೇಕು
ಸ್ವಾಮಿಯ ತಂಗಿ ಸೌಭದ್ರೆ—ದೇವಿಯು
ಸ್ವಾಮಿಯ ಕಾಲ—ತೊಳಿಬೇಕು ೩

ಸತ್ಯಸಾಗರಕ್ಹೋಗಿ ಲಕ್ಷ್ಮಿಯ ಮದುವೆಯಾಗಿ
ಸತ್ತಿಗೆ ಮೇಲೆ ಹರಿಯು ಬರುತಾನೆ—ಸೌಭದ್ರೆ
ಅಚ್ಯುತನ[1] ಕಾಲ—ತೊಳಿ ಬಾರೆ ೪

ಕ್ಷೀರಸಾಗರಕ್ಹೋಗಿ ಮಾದೇವಿಯ ಮದುವೆಯಾಗಿ
ಆನೆ ಮೇಲೆ ಹರಿಯು ಬರುತಾನೆ—ಸೌಭದ್ರೆ
ಕೃಷ್ಣನ ಕಾಲ—ತೊಳಿ ಬಾರೆ ೫

---

1 ಕೃಷ್ಣನ

ಮಲ್ಲಿಗೆ ಹೂವಿನಂತೆ ಅಂಗಾಲ ಪದುಮವು
ಮುತ್ತಿನ ಗಿಂಡಿಯಲಿ ಉದಕವ—ತೆಕ್ಕೊಂಡು
ಅಚ್ಯುತನ ಕಾಲ—ತೊಳಿ ಬಾರೆ ೬

ಸಂಪಗೆ ಹೂವಿನಂತೆ ಮೇಗಾಲು ಪದುಮವು
ಮುತ್ತಿನ ಗಿಂಡಿಯಲಿ ಉದಕವ—ತೆಕ್ಕೊಂಡು
ವಾರಿಜನ ಕಾಲ—ತೊಳಿ ಬಾರೆ ೭

ಉಪ್ಪರಿಗೆ ಒಳವಿಗೆ ಹೋಗಿ ನಿಂತವಳಾರೆ
ಸ್ವಾಮಿಯ ತಂಗಿ ಸೌಭದ್ರೆ—ಸೌಭದ್ರಾದೇವಿಯೆ
ಸ್ವಾಮಿಯ ಪಾದ—ತೊಳಿ ಬಾರೆ ೮

ಮಾಳಿಗೆ ಒಳವಿಕೆ ಹೋಗಿ ನಿಂತವಳಾರೆ
ಸ್ವಾಮಿಯ ತಂಗಿ ಸೌಭದ್ರೆ—ದೇವಿಯೆ
ಸ್ವಾಮಿಯ ಕಾಲ—ತೊಳಿ ಬಾರೆ ೯

ಚಿನ್ನದ ಗಿಂಡಿಲಿ ಕುಂಕುಮದೋಕುಳಿ ಕರಡಿ[1]
ಸುಪ್ಪಾಣಿಯಂತೆ ಬಳುಕುತ್ತ—ಸೌಭದ್ರೆ
ಮುತ್ತಿನ ಚಪ್ಪರಕೆ—ನಡೆದಳು ೧೦

ಹೂವಿನ ಗಿಂಡಿಲಿ ಭಾಗೀರಥಿಯ ತುಂಬಿ
ಹೂಬಾಳೆಯಂತೆ ಬಳುಕುತ್ತ—ಸೌಭದ್ರೆ
ಹೂವಿನ ಚಪ್ಪರಕೆ—ಇಳಿದಳು ೧೧

ಅಣ್ಣನ[2] ಕಾಲನು ಹೆಮ್ಮೆಯಲಿ[3] ತೊಳೆದೇನು
ಅಣ್ಣನ ಮಡದಿ ರುಕ್ಮಿಣಿ[4]—ಕಾಲನು
ಹೆಣ್ಣು ಕೊಟ್ಟನಕ—ತೊಳಿಲೊಲ್ಲೆ ೧೨

ತಮ್ಮ ನಿನ್ನ ಕಾಲನು ಬೇಗದಲಿ ತೊಳೆದೇನು
ತಮ್ಮ ನೀ ತಂದ ಮಡದಿಯ—ಕಾಲನು
ಮಗಳ ಕೊಟ್ಟನಕ—ತೊಳಿಲೊಲ್ಲೆ ೧೩

1 ಕರಡಿ—ಕವದಿ 2 ಅಣ್ಣ ನಿನ್ನ 3 ನಿತ್ಯದಲಿ 4 ಅಣ್ಣ ನೀ ತಂದ ಮಡದಿಯ

ಕಾಲಿಗೆ ಒಪ್ಪುವ ಕಾಲ ಸರವಳಿ ಕೊಡುವೆ
ಬೋರೆ[1] ಬಿಂದಿಗೆಯ ಸಹಿತಲಿ—ಕೊಡುವೆನು
ಸೌಭದ್ರೆ ಕಾಲ—ತೊಳಿ ಬಾರೆ ೧೪

ಕಾಲಿಗೆ ಒಪ್ಪುವ ಕಾಲ ಸರವಳಿಯುಂಟು
ಬೋರೆ ಬಿಂದಿಗೆಯು ನನಗುಂಟು—ಅಣ್ಣಯ್ಯ
ಮತ್ತೇನು ಕೊಡುವೆ—ಕರುಣಿಸು ೧೫

ಕರಗಳಿಗೊಪ್ಪುವ ಕಡಗ ಹಿಂಬಳೆ ಕೊಡುವೆ
ನಳಿತೋಳ ವಂಕಿ ಸಹಿತಲಿ—ಕೊಡುವೆನು
ಸೌಭದ್ರೆ ಕಾಲ—ತೊಳಿ ಬಾರೆ ೧೬

ಕರಗಳಿಗೊಪ್ಪುವ ಕಡಗ ಹಿಂಬಳೆಯುಂಟು
ನಳಿತೋಳ ವಂಕಿ ನಮಗುಂಟು—ಅಣ್ಣಯ್ಯ
ಮತ್ತೇನು ಕೊಡುವೆ ಕರುಣಿಸು ೧೭

ಕರ್ಣಕ್ಕೆ ಒಪ್ಪುವ ಹರಳಿನೋಲೆಯ ಕೊಡುವೆ
ಮುತ್ತಿನ ಬುಗುಡಿ ಸಹಿತಲೆ—ಕೊಡುವೆನು
ಎನ್ನ ತಂಗಿ ಕಾಲ—ತೊಳಿ ಬಾರೆ ೧೮

ಕರ್ಣಕ್ಕೆ ಒಪ್ಪುವ ಹರಳಿನೋಲೆಗಳುಂಟು
ಮುತ್ತಿನ ಬುಗುಡಿ ನಮಗುಂಟು—ಅಣ್ಣಯ್ಯ
ಮತ್ತೇನ ಕೊಡುವೆ—ಕರುಣಿಸು ೧೯

ಕೊರಳಿಗೆ ಒಪ್ಪುವ ಮುತ್ತಿನ ಸರಕೊಡುವೆ
ಪುತ್ತಳಿ ಸರವ ಸಹಿತಲೆ—ಕೊಡುವೆನು
ಎನ್ನ ತಂಗಿ ಕಾಲ—ತೊಳಿ ಬಾರೆ ೨೦

ಕಂಠಕ್ಕೆ ಒಪ್ಪುವ ಮುತ್ತಿನ ಸರಗಳುಂಟು
ಪದಕದ ಸರವು ನಮಗುಂಟು—ಅಣ್ಣಯ್ಯ
ಇನ್ನೇನು ಕೊಡುವೆ—ಕರುಣಿಸು ೨೧

1 ಚೋರೆ

ಎಪ್ಪತ್ತು ವರಹದ ಪಟ್ಟೆಸೀರೆಯ ಕೊಡುವೆ
ಪುತ್ರನಿಗೇರ್ವುದಕ ಕುದುರೆಯ—ಕೊಡುವೆನು
ಎನ್ನ ತಂಗಿ ಕಾಲ—ತೊಳಿ ಬಾರೆ ೨೨

ಎಪ್ಪತ್ತು ವರಹದ ಪಟ್ಟೆ ಸೀರಗಳುಂಟು
ಪುತ್ರ ಏರ್ವುದಕೆ ಕುದುರೆಯು—ನಮಗುಂಟು
ಇನ್ನೇನು ಕೊಡುವೆ—ಕರುಣಾನು ೨೩

ನಲ್ವತ್ತು ವರಹದ ನಾಲಿ ಸೀರಯ ಕೊಡುವೆ
ಪುತ್ರ ಏರ್ವುದಕ ರಥಗಳ ಕೊಡುವೆನು
ಸೌಭದ್ರೆ ಕಾಲ—ತೊಳಿ ಬಾರೆ ೨೪

ನಲ್ವತ್ತು ವರಹದ ನಾಲಿ ಸೀರೆಗಳುಂಟು
ಬಾಲಗೇರ್ವುದಕೆ ರಥಗಳು—ನಮಗುಂಟು
ಇನ್ನೇನ ಕೊಡುವೆ—ಕರುಣನು ೨೫

ಇನ್ನೇನ ಹೇಳಿದರು ಸಮ್ಮತವು ನಿನಗಿಲ್ಲ
ಚೆನ್ನಾದುದೇನು ನಿನಗಿಲ್ಲೆ—ಸೌಭದ್ರೆ
ಎನ್ನೊಡನೆ ಹೇಳು—ಎನುತಿದ್ದ ೨೬

ಅತ್ತಿಗೆ ಅಣ್ಣ ನಿಮ್ಮ ಚೊಟ್ಟಿಲ ಮಗಳನ್ನು
ಮಿತ್ರೆಯನೆನ್ನ ತನಯಗೆ—ನೇಮಿಸಿದರೆ
ಈ ಕ್ಷಣದಿ ಕಾಲ—ತೊಳೆವೆನು ೨೭

ಪುತ್ರನಾದರೆ ನಿನ್ನ ಸೃಷ್ಟಿಯನಾಳಲಿ
ಮಿತ್ರೆಯಾದರೆನ್ನ ತನಯಗೆ—ನೇಮಿಸಿದರೆ
ಈ ಕ್ಷಣದಿ ಕಾಲ—ತೊಳೆವೇನು ೨೮

ಹತ್ತೆಂಟು ವರುಷಕೆ ಚಿಕ್ಕವಳೆನ್ನ ಮಡದಿ
ಪುತ್ರರ ಫಲವ[1] ಶಿವಬಲ್ಲ—ಸಭೆಮುಂದೆ
ಹೆಣ್ಣೇವೆನೆಂದೆಂತು[2]—ನುಡಿವೆನು ೨೯

1 ಹೆಣ್ಣೆತ್ತಾಳೊ ಹೆರಳೋ. 2 ಹಣ್ಣೇವೆನೆಂದ್ಹೇಗೆ.

ಆರೇಳು ವರುಷದ ಬಾಲೆಯೆನ್ನ ಮಡದಿ
ಬಾಲರ ಫಲವ ಶಿವಬಲ್ಲ—ಸಭೆಮುಂದೆ
ಮಗಳ ಕೊಡುವೆನೆಂದ್ಹೇಗೆ—ನುಡಿಯಲಿ[1] ೩೦

ಅಕ್ಕನ ಮಾತಿಗೆ ಸಿಕ್ಕನೆ ಶ್ರೀಕೃಷ್ಣ
ಪಟ್ಟದ ವಲ್ಲಭಯ ಮುಖನೋಡಿ—ಹೇಳಿದ
ಅಕ್ಕನ ಮಾತೇ—ನಿಜವೆಂದು ೩೧

ತಂಗಿಯ ಮಾತಿಗೆ ಚೆಂದದಿ ಶ್ರೀಕೃಷ್ಣ
ಪ್ರಾಣವಲ್ಲಭೆಯ ಮುಖನೋಡಿ—ಹೇಳಿದ
ತಂಗಿಯ ಮಾತೇ—ನಿಜವೆಂದು ೩೨

ಪಟ್ಟೆ ಸೀರೆಯನುಟ್ಟು ಇತ್ತ ಕೇಳಲೆ ಸತಿಯೆ
[2]ಅಕ್ಕನ ಮಗಂಗೆ ಹೆಣ್ಣ ಕೊಡಬೇಕು—ಕೊಡಿಸದಿದ್ದರೆ ನನ್ನ
ಅಕ್ಕ ನಿಮ್ಮನೆಗೆ—ಬರಲೊಲ್ಲ[2] ೩೩

ನಾಲಿ ಸೀರೆಯನುಟ್ಟು ಓಂಗೆ ಕೇಳಲೆ ಸತಿಯೆ
ತಂಗಿ ಮಗಗೆ ಹೆಣ್ಣ ಕೊಡಬೇಕು—ಕೊಡದಿರೆ
ತಂಗಿ ನಮ್ಮ ಮನೆಗೆ—ಬರಲೊಲ್ಲ ೩೪

ಸಾವಿರ ಕೊಟ್ಟರೂ ಸೋದರದ ಪುದು ಬೇಡ[3]
ಸಾವಿರದ ಮೇಲೆ ಸೆರೆಹೊನ್ನ ಕೊಟ್ಟರೂ
ಸೋದರತ್ತೆಯರ—ಅಲೆ ಬೇಡ[4] ೩೫

ಅಕ್ಕ ಮುನಿದರೆ ನಮ್ಮ ಹೊಸ್ತಿಲಿಗೆ[5] ಬಾರಳು
ಪುತ್ರನಾಡಲಿಕೆ ಕಳುಹಳು—ಎಲೆ ಸತಿಯೆ
ಅಕ್ಕನ ಮಗಗೆ ಹೆಣ್ಣ—ಕೊಡಬೇಕು ೩೬

ಅಕ್ಕ ಬರದಿದ್ದರೆ ಮಿತ್ರೆಯರು ಬರುವರು
ಮತ್ತೆ ನಮ್ಮನೆಯ ಶುಭಕಾರ್ಯ—ನಿಲ್ಲದು
ಅಕ್ಕನ ಮಗಗೆ ನಮ್ಮ ಹೆಣ್ಣ—ಕೊಡಲಾಗ ೩೭

---

1 ನುಡಿವೇನು 2 ಸತ್ತಿಗೆಯ ಮೇಲೆ ತಲೆಬಾಗಿ—ಕುಳಿತ ಮಡದಿ
ಅಕ್ಕನ ಮಗಗ್ಹೆಣ್ಣ ಕೊಡಬೇಕು
3 ಮನೆ ಬೇಡ 4 ಸೋದರಿಕೆಗೆ ಹೆಣ್ಣ ಕೊಡಲಾಗ 5 ಬಾಗಿಲಿಗೆ

ತಂಗಿ ಮುನಿದರೆ ನಮ್ಮ ಅಂಗಳಕೆ ಬಾರಳು
ಬಾಲರಾಡಲಿಕೆ ಕಳುಹಳು—ಎಲೆ ಸತಿಯೆ
ತಂಗಿಯ ಮಗಗೆ—ಕೊಡಬೇಕು ೩೮

ತಂಗಿ ಬರದಿದ್ದರೆ ರಂಭೆಯರು ಬರುವರು
ಮತ್ತೆ ನಮ್ಮನೆಯ ಶುಭಕಾರ್ಯ—ನಿಲ್ಲದು
ತಂಗಿ ಮಗಗೆ ಹೆಣ್ಣ—ಕೊಡಲಾಗ ೩೯

ಅಂದಣವ ಕೊಟ್ಟರೂ ತಂಗಿಯ ಮನೆ ಬೇಡ
ಅಂದಣದ ಮೇಲೆ ಚಾಮರವ—ತುಂಬಿವರು
ತಂಗಿ ಮಗಗೆ ಹೆಣ್ಣ—ಕೊಡಲಾಗ ೪೦

ಅತ್ತಿಗೆ ಕೊಡದಿದ್ದರೆ ಉತ್ತಮರು ಕೊಡುವರು
ಗುತ್ತಿಗೆ ಹೋಗಿ ಮದುವೆಯ—ಮಾಡ್ಕೊಂಡು
ನಿಮ್ಮೂರ ಮೇಲೆ—ಬರುತೇವೆ ೪೧

ಅಣ್ಣ ಕೊಡದಿದ್ದರೆ ತನ್ನಗರು ಕೊಡುವರು
ಹೊನ್ನೂರಿಗ್ಹೋಗಿ ಮದುವೆಯ—ಮಾಡ್ಕೊಂಡು
ನಿಮ್ಮೂರ ಮೇಲೆ—ಬರುವೆನು ೪೨

ಅಕ್ಕ ಮುನಿದಾಳೆಂದು ಅಂಬುಜನಾಭನು[1]
ಚೊಚ್ಚಲ ಹೆಣ್ಣು ಕುವರಿಯು—ಜನಿಸಿದರೆ
ಅಕ್ಕನ ಮಗಗೆ—ಕೊಡುತೇವೆ ೪೩

ತಂಗಿ ಮುನಿದಾಳೆಂದು ಅಂಬುಜನಾಭನು
ಮೊದಲಾಗಿ ಹೆಣ್ಣು ಕುವರಿಯು—ಜನಿಸಿದರೆ
ತಂಗಿಯ ಮಗಗೆ—ಕೊಡುವೆನು ೪೪

ಲಾಲಿಸಿ ಕೇಳೆ ತಂಗಿ ಎನ್ನಯ ಮಾತುಗಳ
ಹೆಣ್ಹೆತ್ತರೆ ನಿನ್ನ ತನಯಗೆ—ಕೊಡುವೆನೆಂದು
ಸ್ವಾಮಿ ನಸುನಗುತ—ನುಡಿದನು ೪೫

---
1 ಅಚ್ಯುತನಾಭನು

ಹೆಣ್ಣು ಕೊಡುತೇನೆಂದು ಅಣ್ಣಯ್ಯ ಹೇಳಿದ
ಮನ್ನಿಸಿ ವೀಳ್ಯ ಕೊಡಿಸಿದ—ಸೌಭದ್ರೆ
ಅಣ್ಣನ ಕಾಲ—ತೊಳಿ ಬಾರೆ ೪೬

ಮಗಳ ಕೊಡುತ್ತೇನೆಂದು ಅತ್ತಿಗೆಗೆ ಹೇಳಿದ
ಸಡಗರದಿ ವೀಳ್ಯ ಕೊಡಿಸಿದ—ಸೌಭದ್ರೆ
ಅತ್ತಿಗೆಯ ಕಾಲ—ತೊಳಿ ಬಾರೆ ೪೭

ಅರಿಸಿನದೋಕುಳಿ ಕರದಿ ಮುತ್ತಿನಗಿಂಡಿಯು ತುಂಬಿ
ಮುತ್ತಿನ ಮಂಟಪವ ಇಳಿದಳು—ಸೌಭದ್ರೆ
ಸೋದರನ ಕಾಲ—ತೊಳೆದಳು ೪೮

ಕುಂಕುಮದೋಕುಳಿ ಕರದಿ ಚಿನ್ನದ ಬಟ್ಟಲು ತುಂಬಿ
ಚಿನ್ನದ ಮಂಟಪವ ಇಳಿದಳು—ಸೌಭದ್ರೆ
ಸೋದರನ ಕಾಲ—ತೊಳೆದಳು ೪೯

ಪಟ್ಟೆವಾಳಿಯನುಟ್ಟು ಬಟ್ಟಮುತ್ತನೆ ಕಟ್ಟಿ
ಅಕ್ಕತಂಗಿಯರ ಒಳಗೊಂಡು—ಸೌಭದ್ರೆ
ಅತ್ತಿಗೆಯ ಕಾಲ—ತೊಳೆದಳು ೫೦

ಸಾರವಾಳಿಯನುಟ್ಟು ಸರದ ಮುತ್ತನೆ ಕಟ್ಟಿ
ನಾರಿಯರನೆಲ್ಲ ಒಡಗೊಂಡು—ಸೌಭದ್ರೆ
ಅತ್ತಿಗೆಯ ಕಾಲ—ತೊಳೆದಳು ೫೧

ಪಟ್ಟೆಯ ಸೀರೆಯ ಪುಟ್ಟ ಗಳಿಗೆ ಮಾಡಿ
ಅಚ್ಚ ಬಿಳಿಯೆಲೆಯ ನಡುವಿಟ್ಟು—ಶ್ರೀಕೃಷ್ಣ
ಅಕ್ಕಗೆ ಕೊಟ್ಟ—ಉಡುಗೊರೆ ೫೨

ಸಾಲಿಯ ಸೀರೆಯ ಸಣ್ಣ ಗಳಿಗೆ ಮಾಡಿ
ಸಾರಿ ಬಿಳಿಯೆಲೆಯ ನಡುವಿಟ್ಟು—ಶ್ರೀಕೃಷ್ಣ
ತಂಗಿಗೆ ಕೊಟ್ಟ—ಉಡುಗೊರೆ ೫೩

ಮುತ್ತಿನ ಹರಿವಾಣದಿ [1]ಪಟ್ಟೆ ಸೀರೆ ತರಿಸಿ
ತಂಗಿ ಸೌಭದ್ರೆಗೆ ಹೊದಿಸಿದ—ವೀಳ್ಯವ ಕೊಡಿಸಿ
ಸ್ವಾಮಿ ದಂಡಿಗೆಯ—ಇಳಿದನು[1] ೫೪

ಪಟ್ಟೆ ಸೀರೆಯ ಹೊದ್ದು ಮುತ್ತಿನಕ್ಷತೆಯಿಡಿಸಿ
ಮುತ್ತಿನಾರತಿಯ ಬೆಳಗಿದ—ಸೌಭದ್ರೆ
ಅಣ್ಣತ್ತಿಗೆ ಕಾಲ—ತೊಳೆದಳು ೫೫

ಬಣ್ಣಸೀರೆಯ ಹೊದ್ದು ಮುತ್ತಿನಕ್ಷತೆ ಇಡಿಸಿ
ಅಣ್ಣ ಅತ್ತಿಗೆಯ ಒಡಗೊಂಡು—ಸೌಭದ್ರೆ
ಹೊಸ್ತಿಲ ಒಳಗೆ—ನಡೆದಳು ೫೬

## 119. ಗೃಹಪ್ರವೇಶದ ದಿಬ್ಬಣಿಗರನ್ನು ಉಪಚರಿಸಿದ್ದು

ಶ್ರೀಗುರುವಿನ ಪದಯುಗಳಕೆ ಮಣಿದು
ನಾಗಾಸ್ಯನ ಕಾರುಣ್ಯವ ಪಡೆದು
ಭೋಗಿಭೂಷಣನ ಮದುವೆ ದಿಬ್ಬಣಿಗರ
ಯೋಗನಾರಿಯರುಪಚರಿಸಿದ ಚರಿತೆಯ ॥
ರಾಗದಲಿ ಪೇಳಿ—ಪೊಗಳುವೆ ೧

ಪರ್ವತನೃಪ ಗಿರಿಋಷಿಗಳ ನೋಡಿ
ಸರ್ವಸಂಪನ್ನ ಸತ್ಪುರುಷರು ಕೂಡಿ
ಸರ್ವವಿಹಿತ ವಧು ಪಾರ್ವತಿ ವರನ
ಸರ್ವರ ಸಹಿತಲೆ ತೆರಳಿಸಿ ದಿಬ್ಬಣ ॥
ಸರ್ವ ಸಂಭ್ರಮದಿ—ಬರಲಂದು ೨

ಹರಿಣಲೋಚನೆ ಸುರ ತರುಣಿಯರಂದು
ಹರುಷದಿ ತನ್ನ ವರನು ಕರಕೊಂಡು
ವರ ಕೈಲಾಸದಿ ನೃಪಋಷಿ ಸರ್ವರ
ಕರೆದು ಮಂಟಪದ ಪೀಠದಲಿ ಕುಳ್ಳಿರಿಸಿಯೆ ॥
ಸರ್ವರಿಗುಪಚಾರ—ಗೈದರು ೩

---

1 ಪಟ್ಟೆವಾಳೀಪಾಸಿರಿಸಿ ಅಚ್ಚಬಿಳಿಯಿಂದಿಯು ನಡುಂಗಿಟ್ಟು ಶ್ರೀಕೃಷ್ಣ ಒಪ್ಪಿ ವೀಳ್ಯವನೇ ಕೊಡಿಸಿದ

ಗಿರಿನೃಪ ವರಗಿರಿಜೆಯರೊಡಗೊಂಡು
ಹರುಷದಲಂಕರಿಸುತ ನಡೆತರಲು
ವರ ಕೈಲಾಸದಿ ನೃಪಋಷಿ ಸರ್ವರ
ಹರುಷದಿಂದಿದಿರ್ಗೊಂಡುಪಚರಿಸಿದ ಘನ ॥
ಚರಿತವನು ಪೇಳಿ—ಪೊಗಳುವೆ ೪

ಬಟ್ಟ ಕುಚದ ಮುದ್ದು ಮೋಹನಾಂಗಿಯರು
ರತ್ನಮಯದೊಳಾಭರಣ ಶೋಭೆಯರು
ಅಷ್ಟೈಶ್ವರ್ಯ ಸಿದ್ಧರ ಸಭೆಯೊಳಗಂದು
ಇಷ್ಟುಪಚಾರವೆಸಗಲೊಂದರಿಯದೆ ॥
ಒಟ್ಟಾಗಿ ಮೃಡನ—ನೆನೆಯುತ್ತ ೫

ಸೀರೆ ನೆರಿಯು ಘನ ಪೀತಾಂಬರವು
ಹಾರ ಪದಕ ಗೆಜ್ಜೆ ಕಡಗ ಕಂಕಣವು
ಸಾರಿ ಒಡಿದು ಸಭೆಯೊಳು ರಾಜಿಸುತಂದು
ಮಾರವೈರಿಯ ಪಟ್ಟದರಸಿಯ ಬಳಗಕೆ ॥
ನಾರಿಯರುಪಚಾರ—ಗೈದರು ೬

ಪರಿಮಳಿಸುವ ಕಸ್ತೂರಿ ಗಂಧದೊಳು
ಸರಸವಾಗಿರುವಕ್ಷತೆ ಪುಷ್ಪಗಳು
ಪರಿಪರಿವಿಧದ ಕಮ್ಮೆಣ್ಣೆಯ ರೋಕುಳಿ
ವೆರಸಿ ತರುಣಿಯರೆಲ್ಲ ನಲಿನಲಿದೈತಂದು ॥
ಗಿರಿಜೆ ಬಂಧುಗಳ—ಸಭೆಯಲ್ಲಿ ೭

ಚಿನ್ನದ ರಚನೆ ವಿಶೇಷ ಚಪ್ಪರದಿ
ರನ್ನಮಯದೊಳಾ ವೀರಾಸನದಿ
ಬನ್ನಿ ಬನ್ನಿರೆನುತಲೆ ಮನ್ನಿಸುತೆಲ್ಲರ
ಧನ್ಯದಿ ಪ್ರಾರ್ಥಿಸುತಿರುತ ಕುಳ್ಳಿರಿಸುತ ॥
ಕನ್ನೆಯರುಪಚಾರ—ಗೈದರು ೮

## 120. ಪನ್ನೀರು ತಳಿಯುವುದು (ಸರಳಾರ)

ಕನ್ನಿಕಾ ಮಣಿಯರು ಹರುಷದಲಿ । ನವ
ಪನ್ನೀರ ಚಿಮುಕಿಸಿದರೊಲಪಿನಲಿ ಪ

ಶ್ರೀಕರದಿಂದ ಶೋಭಿಸುವ ಮಂಟಪದಲಿ
ನಾಕವಂದಿತ ಹರಿ ಸಿರಿ ಸಹಿತ
ಲೋಕಪಾವನ ಹರ ಸುರ ಗಂಧರ್ವರ
ನೇಕರು ನುತಿಸಲು ನಸುನಗುತ ೧

ನಗೆಮೊಗದಿಂ ಹರುಷಾಂಕುರಿಸುತ್ತಿಹ
ಮೃಗಮದ ಗಂಧಿನಿಯರು ಮತ್ತಾ
ನಗರಿಪು ವಂದಿತ ಸುಗುಣ ಜಲಧಿ ಸುತ್ತ
ಬಗೆಯನೀಕ್ಷಿಸುತಲಿ ತೋಷದಲಿ ೨

ಪತ್ತವತಾರದಿ ಬಂದವನೀತನು
ಮತ್ಸ್ಯ ಕೂರ್ಮಗಳಾದವನೀತ
ಮತ್ತೆ ವರಾಹ ನೃಸಿಂಹ ವಾಮನನಿವ
ಪೃಥ್ವಿಯಮರ ಭಾರ್ಗವನೆನುತ ೩

ಭೂವರ ರಾಘವನಾದವನೀತನು
ಗೋವಳರಾಯನೆಂದೆನಿಸುತ್ತ
ಭೂವಳಯದಿ ಬೌದ್ಧಾಕೃತಿಯೀತನು
ದೇವ ಕಲ್ಕ್ಯವತಾರಿಯು ವಿನುತ ೪

ನನ್ನಿಯಿಂದಲಿ ಪೊಸ ಪನ್ನೀರಿನೊಳೆಸೆ
ವುನ್ನತ ಸ್ಫಟಿಕ ಕಲಶ ಪಿಡಿದು
ಪೊನ್ನಾಗವೇಣಿಯರಿಂಗುಸುರಿದ ಸು ॥
ಪರ್ಣಧ್ವಜಗೆ ಶಂಕರ ಸಖಿಗೇ ೫

## 121. ಚಟ್ಟಿ ಹೊಯ್ದದ್ದು

ಪಂಚಮುಖನ ಕುಮಾರಗೆ ವಂದಿಸಿ[1]
ಶಾರದೆಯನು ಸ್ತುತಿಸಿ । ಪೇಳುವೆನೀಗ
ಋಷಿ ಪತ್ನಿಯರು ಕೂಡಿ ಪಂಚವಿಧದ ಚಟ್ಟಿ
ಹದಮಾಡಿ ತಂದಿರಿಸಿ । ಪಾಂಚಾಲಿಯು ಕೊಂಡಾಡುತ
ಪಂಚವಿಧದ ಚಟ್ಟಿ ಹೊಯಿಸಿದ ಪುಣ್ಯದ ॥
ಚರಿತೆಯ ಕೇಳಿ—ಜನರೆಲ್ಲ[2] ೧

ಅಗ್ನಿಯೊಳಗೆ ಹುಟ್ಟಿ ದ್ರುಪದಗೆ ಮಗಳಾದಿ
ಧರ್ಮರಾಯನ ಪಟ್ಟದರಸಿಯಾದಿ
ಪಾಪಿಜನರ ಶಿಕ್ಷಿಸುವ ಕಾಲನಿಗೆ[3]
ಮೋಹದ[4] ಸೊಸೆಯಾದಿ ।
ಮುದ್ದು ದ್ರೌಪದಿ ನಿನ್ನ ಪದ್ಮದ ಹಸ್ತದಿ
ಪದ್ಮದ[5] ಚಟ್ಟಿನು ಹೊಯ್ಸಬೇಕೆನುತಲೆ ॥
ಪದ್ಮಿನಿದೇವಿ[6] ಚಟ್ಟಿ—ಹೊಯಿಸಿದ ೨

ಬಕವೈರಿ ಭೀಮನ ಅತಿಮೋಹದ ರಾಣಿ
ಕೀಚಕ ಕುಲಹಾರಿ
ಜೀವರೂಪಗಳಾದ ವಾಯುದೇವನಿಗತಿ
ಮೋಹದ ಸೊಸೆಯಾದಿ
ಜಾಣೆ ದ್ರೌಪದಿ ನಿನ್ನ ಆಯುಳ್ಳ ಹಸ್ತದಿ
ಸಾದಿನ ಚಟ್ಟಿನು ಹೊಯ್ಸಬೇಕೆನುತಲೆ[7] ॥
ಅಹಲ್ಯಾದೇವಿ ಚಟ್ಟಿ—ಹೊಯಿಸಿದ ೩

ಬಿಲ್ಲನೆತ್ತಿದ ಕಿರೀಟಿಗೆ ಸತಿಯಾದಿ
ಮಲ್ಲಿಗೆ ಮಾಲೆ ಕೊರಳಿಗಿಕ್ಕಿ[8]
ಸುರಲೋಕವನಾಳ್ವ ಪಾಕಶಾಸನಗತಿ
ಮೋಹದ ಸೊಸೆಯಾದಿ

---

1 ಕುಮಾರನ ಭಜಿಸಿ. 2 ಚರಿತೆಯ ಪಾಡಿ ಪೊಗಳುವೆ. 3 ಖಳಾರಿಗೆ. 4 ಪೆಚ್ಚಿನ.
5 ಗಂಧದ. 6 ಸಾವಿತ್ರಿದೇವಿ. 7 ಹೊಯ್ಯುವ್ವ ಎನುತಲಿ. 8 ಕೊರಲೊಳಗಿಕ್ಕಿದೆ.

ಮಡದಿ[1] ದ್ರೌಪದಿ ನಿನ್ನ ಪದುಮದ[2] ಹಸ್ತದಿ
ಅರಿಸಿನದ[3] ಚಟ್ಟನು ಹೊಯ್ಸಬೇಕೆನುತಲೆ ॥
ಅನಸೂಯಾದೇವಿ ಚಟ್ಟ—ಹೊಯಿಸಿದ ೪

ವಿಪುಳ ರಾಕ್ಷಸಹಾರಿ ನಕುಲಗೆ ಸತಿಯಾದಿ
ಲೋಕಕ್ಕೆ ಹೆಸರಾದಿ
ಸಲ್ಲೆಯರೊಳಗೆ ಶಿಖಾಮಣಿ ನೀನಾದಿ
ಮಲ್ಲಿಗೆ ಮಾಲೆ ಕೊರಲೊಳಗಿಕ್ಕಿ
ಸಲ್ಲೆ ದ್ರೌಪದಿ ನಿನ್ನ ಚೆಂದುಳ್ಳ ಹಸ್ತದಿ
ಕುಂಕುಮ ಚಟ್ಟ ಹೊಯ್ಯಬೇಕೆನುತಲೆ ॥
ಲೋಪಾಮುದ್ರ ಚಟ್ಟ—ಹೊಯಿಸಿದ ೫

ಮಾದ್ರಿಕುವರ ಸಹದೇವಗೆ ಸತಿಯಾದಿ
ಕುರುಕುಲಕೆ ಮೃತ್ಯುವಾದಿ
ನಾರಿಯರೊಳಗೆ[4] ಶಿಖಾಮಣಿ ನೀನಾದಿ
[5]ಕೀರ್ತಿಯ ವಶಳಾದಿ[5]
ಕಾಂತೆ ದ್ರೌಪದಿ ನಿನ್ನ ಪೃಥುಳದ ಹಸ್ತದಿ
ಅರಿಸಿನದ[6] ಚಟ್ಟನು ಹೊಯ್ಯಬೇಕೆನುತಲೆ ॥
ಶಾರದಾದೇವಿ[7] ಚಟ್ಟ—ಹೊಯಿಸಿದ ೬

ಅಂದ ಚೆಂದದ ಚಟ್ಟು ಗಂಧಕಸ್ತೂರಿ ಚಟ್ಟು
ಸಾದಿನ ಚಟ್ಟುಗಳನೆ ಹೊಯಿಸಿ[8]
ಅತ್ತೆ ಕುಂತಿಯಳ[9] ಪಟ್ಟೆಯ ಸೆರಗಿಗೆ
ಹಸ್ತಗಳನೆ ಒರೆಸಿ
ಮಿತ್ರೆ ದ್ರೌಪದಿದೇವಿ ನಸುನಗೆ ಬೀರುತ[10]
ಮುತ್ತು ಮಾಣಿಕದ ಹಸೆಮೇಲೆ ಕುಳ್ಳಿರಲು[11] ॥
ಶಶಾಂಕನಂದದಲಿ—ಹೊಳೆದಳು ೭

---

1 ಹರದಿ. 2 ಚೆಂದುಳ್ಳ. 3 ಗಂಧದ. 4 ಸ್ತ್ರೀಯರೊಳಗೆ. 5 ಹೂವಿನ ಮಾಲೆ ಕೊರಲಿಗಿಕ್ಕಿದಿ. 6 ಕುಂಕುಮದ. 7 ಕುಂತೀದೇವಿಯು. 8 ಸಾದು ಕುಂಕುಮದ ಚಟ್ಟುಗಳ್ಹೊಯಿಸಿ. 9 ಕುಂತ್ಯವ್ವನ 10 ನಸುನಗೆಯಾಡುತ 11 ಮಾಣಿಕವುಳ್ಳ ಹಸೆಯೊಳೊಪ್ಪಿರಲು.

ದೇಶದ ಫಲವಸ್ತು ಲೇಸಿನಿಂದಲೆ ತಂದು
ಸಾಸಿರ ನಾಮನ ತಂಗಿ ದ್ರೌಪದಿಗೆ
ಕದಳಿ ಖರ್ಜೂರ ಉತ್ತುತ್ತೆ ಕಲ್ಪದ ಕಾಯ
ನಾರಿಯರೆಲ್ಲ ಉಡಿಲ ತುಂಬಿ
ಷೋಡಶ ಕಳೆಯುಳ್ಳ ನಾರಿಯರೆಲ್ಲರು ॥
ಹರಳಿನಾರತಿ ಪಿಡಿದು ಹರದಿ ದ್ರೌಪದಿಗೆ
ಬೆಳಗಿನಕ್ಷತೆಯ—ತಳಿದರೆ ೮

## 122. ಔಪಾಸನ ಕೊಟ್ಟು ನಮಸ್ಕರಿಸುವದು

ಔಪಾಸನವ ಕೊಟ್ಟು ಪ್ರೀತಿಯಲೆರಗುವಳು
ಅತ್ತೆ ಕೌಸಲೆ ಕೈಕೆ ಸುಮಿತ್ರೆಯರಿಗೆಲ್ಲ ಪ

ಶ್ರೀರಾಮಚಂದ್ರನ ಮಡದಿ ಜಾನಕಿಯು
ನಾರಿಯರೊಡಗೊಂಡು ಸಡಗರದಿಂದ ೧

ಸೃಷ್ಟಿಯನಾಳುವ ಪತಿಯ ಕೈಪಿಡಿದು
ಸೃಷ್ಟಿಜಾತೆಯು ಶ್ರೀಮಾತೆ ಜಾನಕಿಯು ೨

ಕಡಗ ಕಂಕಣವಿಟ್ಟು ಚದುರೆ ಜಾನಕಿಯು
ಕಿರುನಗೆಯಿಂದಲಿ ಪಾಡುತ್ತಲಿರಲು ೩

ಕಾಲಂದುಗೆ ಗೆಜ್ಜೆ ಝಣ ಝಣರೆನಲು
ಜಾಣೆ ಜಾನಕಿಯು ಮುಗುಳುನಗೆಯೊಳು ೪

ಅತ್ತಿಗಕ್ಕಳು ಬನ್ನಿ ಅರ್ಥಿಯಲಿ ಕೊಟ್ಟ
ಔಪಾಸನವ ತೆಕ್ಕೊಂಡು ಮನ್ನಿಸಿರಿ ೫

ಗುರುಹಿರಿಯರೆ ನೀವು ಬನ್ನಿರಿ ಬೇಗ
ಕೊಟ್ಟೌಪಾಸನವ ತೆಕ್ಕೊಂಡು ಮನ್ನಿಸಿರಿ ೬

ಮಿತ್ರೆ ಜಾನಕಿದೇವಿ ಮುತ್ತಿನೌಪಾಸನವ
ಭಕ್ತಿಯಿಂದಲೆ ಕೊಟ್ಟು ತಾನೆರಗುವಳು ೭

## 123. ಹೊಸ್ತಿಲ ಪೂಜೆ

ಗೌರಿಯ ಸುತನ ಪೂಜಿಸಿ ಮುದದಿಂದ
ಭಾವದಿ ನಿರ್ವಿಘ್ನವ ಕೊಡು ಎಂದ
ಕುಲದೇವ ದೇವತೆಗೊಂದಿಸಿ ತವಕದಿ ॥
ಹೊಸ್ತಿಲ ಪೂಜೆ—ತೊಡಗಿದ ೧

ಭಾವೆಯನೊಡಗೊಂಡು ಕುಳ್ಳಿರಲಾಗ
ಆ ವಿಧಾನದಲಿ ವಿಪ್ರರು ಬೇಗ
ಕಾಮಿನಿಯೊಡಗೊಂಡು ಚೆಂದದಿಂದೊಪ್ಪುವ ॥
ಬಾಗಿಲ ಪೂಜೆ—ತೊಡಗಿದ ೨

ಹೇಮ ಕುಂಭದಲಿ ಪನ್ನೀರ ತುಂಬಿರಿಸಿ
ಆ ಮಹಾ ಮೊಲ್ಲೆ ಮಲ್ಲಿಗೆಯ ಮುಂದಿರಿಸಿ
ಕಾಮಿನಿಯೊಡಗೊಂಡು ಕ್ಷೇಮವಾಗಲಿ ಎಂದು ॥
ಬಾಗಿಲ ಪೂಜೆ—ತೊಡಗಿದ ೩

ಉಟ್ಟ ಪಟ್ಟೆಯ ಧೋತ್ರ ಹಚ್ಚಡದಿಂದ
ಇಟ್ಟ ತಿಲಕ ಗಂಧ ಕಸ್ತೂರಿಯಿಂದ
ಮುಷ್ಟಿ ಅಕ್ಷತೆ ತಾಂಬೂಲವ ಪಿಡಿದೆತ್ತಿ ॥
ಹೊಸ್ತಿಲ ಪೂಜೆ—ತೊಡಗಿದ ೪

ಉಪ್ಪರಿಗೆಯೊಳಗೆ ಸುತ್ತ ದೀವಿಗೆ ಹಚ್ಚಿ
ಸಿದ್ದೆಯಲಾ ಹೊನ್ನ ತಂದು ತುಂಬಿರಿಸಿ
ಪುತ್ರೆ ನೀ ಸಿದ್ದೆಯ ಎಡವುತ್ತ ಬಾರೆಂದು ॥
ಅತ್ತೆ ಕೌಸಲೆಯು—ನುಡಿದಳೆ ೫

ಬಂದಳು ಬಲಹಜ್ಜೆಯಿಟ್ಟು ಮಂದಿರಕೆ
ನಿಂದಳು ದೇವರ ಮುಂದಕೆ ನಗುತ
ಎಂದೆಂದಿಗು ಶುಭವಾಗಲಿ ಗೃಹಕೆಂದು ॥
ರಂಭೆ ಕರಗಳನೆ—ಮುಗಿದಳೆ ೬

ಸೊನೆ ಬಂದುದ ನೋಡೆ ನಿನ್ನಯ ಮನೆಗೆ
ಸಂತಸವಾಯಿತೆ ನಿನ್ನ ಪರಿಜನಕೆ
ಕುಸುಮಲೋಚನೆ ಬಂದು ಒಳಹೊಗುವಾಗ ॥
ಸಿದ್ಧಿ ಮಹಾಲಕ್ಷ್ಮಿ—ನೆಲಸಿದ ೭

ಬಂಡಿ ಭಂಡಾರ ತುಂಬಿತು ಮನೆಯೊಳಗೆ
ಹಿಂಡೆಮ್ಮೆ ಕಟ್ಟಿದರಾಚೆಗೆ ನೋಡೆ
ಕಂಡ ಕಂಡವರೆಲ್ಲ ವಿಸ್ಮಯಗೊಂಬರು ॥
ಸೊನೆ ಬಂದುದ ನೋಡೆ—ಮನೆಗಿಂದು ೮

ಜಯವಾಗಲಿ ತನ್ನ ಅತ್ತೆಮಾವರಿಗೆ
ಜಯವಾಗಲಿ ತನ್ನ ಭಾವಮೈದುನಗೆ
ಎಂದೆಂದಿಗು ಜಯವಾಗಲಿ ಗೃಹಕೆಂದು ॥
ರಂಭೆ ಕರಗಳನೆ—ಮುಗಿದಳೆ ೯

ಶುಭವಾಗಲಿ ತನ್ನ ಅತ್ತೆ ಮಾವರಿಗೆ
ಶುಭವಾಗಲಿ ತನ್ನ ತಾಯಿ ಸೋದರಗೆ
ಎಂದೆಂದಿಗು ಶುಭವಾಗಲಿ ಗೃಹಕೆಂದು ॥
ನಾರಿ ಕರಗಳನೆ—ಮುಗಿದಳೆ ೧೦

## 124. ಹೊಸ್ತಿಲ ದಾಟಿದ್ದು

ಹೊಸ್ತಿಲೊಳಗೆ ಬಂದಳು । ಶ್ರೀದೇವಿಯು
ಹೊಸ್ತಿಲೊಳಗೆ ಬಂದಳು ಪ

ಉತ್ತಮವಾಗಿಹ ಹೊತ್ತನ್ನೆ ನೋಡುತ
ಅತ್ತೆಯ ಮನೆಗಾಗಿ ಬಿತ್ತರಿಸುತಲಂದು[1] ೧

ಸುತ್ತ ವಿಪ್ರರು ಸೇರಿ ವೇದಘೋಷಿಸಲಾಗ
ಪುತ್ತಳಿ ರನ್ನೆಯು ಮಿತ್ರೆಯರೊಂದಿಗೆ ೨

1 ಅರ್ಥಿಯಿಂದಲಿ ಶುಭ ಕೋರುತ್ತ ಬಂದಳು

ನಡುಮನೆಯೊಳು ವಾಸ್ತುದೇವರ ಪೂಜಿಸಿ
ಎಡಬಲದೊಳು ನಾಲು ಸಾಲು ದೀವಿಗೆಯಿಟ್ಟು ೩

ಕುಲದೇವರ ವಂದಿಸಿ ಬಲಗಾಲ ಮುಂದಿಟ್ಟು
ಆಲಯದೊಳು ಹೊನ್ನ[1] ಬೀರುತ ಬಂದಳು ೪

ಹಿರಿಯರೆಲ್ಲರ ಸ್ಮರಿಸಿ ಕುಲದೇವರ ವಂದಿಸಿ
ಹರುಷದಿಂದಲಿ ನಲಿದಾಡಿ ಶ್ರೀದೇವಿಯು ೫

ಬರಡು ಹಯನಾದವು ಕೆರೆ ತುಂಬಿ ಹರಿದವು
ಭರಿತ ಬೆಳೆಯು ಬಂದು ತ್ವರಿತದಿ ತುಂಬಲು ೬

ಪಟ್ಟೆ ಸೀರೆಯನುಟ್ಟು ಬಟ್ಟಮುತ್ತನೆ ಕಟ್ಟಿ
ಆಲಯದೊಳು ಹೊನ್ನ ಬೀರುತ ಬಂದಳು ೭

ಸಾಲಿ ಸೀರೆಯನುಟ್ಟು ಸರದೆ ಮುತ್ತನು ಕಟ್ಟಿ
ಆಲಯದೊಳು ಹೊನ್ನ ಬೀರುತ ಬಂದಳು ೮

## 125. ಸಿದ್ದೆ ಒದ್ದದ್ದು

ಮಿತ್ರೆ ತನ್ನ ಸೊಸೆಗೆ ಬೆಟ್ಟುನೊಂದಾವೆಂದು
ಪಟ್ಟೆಹಾಸಿದಳೆ ನಡೆ ಮುಂದೆ—ಅದರ ನಡುಗೆ
ಮುತ್ತ ತುಂಬಿದಳೆ—ಚೌಕದಿ ೧

ಮುತ್ತಿನ ಸಿದ್ದೆಗೆ ರತ್ನಹಳದಿ ತುಂಬಿ
ಮಿತ್ರೆ ತಂಗವ್ವ ಎಡವುತ್ತ—ಬಾರೆಂದು
ಅತ್ತೆ ಕೌಸಲ್ಯೆ—ನುಡಿದಳು ೨

ಪುಟ್ಟ ಚಿನ್ನದ ರಾಣಿ ಮುತ್ತಿನ ಸಿದ್ದೆಯನೆಡವಿ
ಅರ್ಥಿಯಲಿ ತನ್ನ ಬಲಗಾಲಲೊದೆಯುತ್ತ
ಅಚ್ಯುತನ* ಒಳಗೆ—ನಡೆದಳು ೩

---

1 ಹೂವ. * ಅಚ್ಯುತ—ದೇವರ ಕೋಣೆ.

ಪಟ್ಟೆ ಸೀರೆ ಬೆಳಕು ಮುತ್ತಿನೊಡ್ಯಾಣ ಬೆಳಕು
ಕೃಷ್ಣ ಮಹಾಲಕ್ಷ್ಮಿ ನಡೆತಂದು—ಬಂದ ಬೆಳಕು
ತುಂಬಿತು ತಮ್ಮ—ಮನೆಯಲ್ಲಿ ೪

ಪಟ್ಟೆ ಹಚ್ಚಡ ಆಲಿಯುತಲಿ ಮುತ್ತಿನುಂಗುರ ಹೊಳೆಯುತಲಿ
ಕೃಷ್ಣ ಮಹಾಲಕ್ಷ್ಮಿ ಜೊತೆಯಾಗಿ—ನಡೆತಂದು
ದೇವರ ಪದಕೆ—ಎರಗಿದ ೫

## 126. ನೋದಿಲ ಉಡಿಸಿ, ಸೌಟು ಹಿಡಿಸಿದ್ದು

ಗಜವದನನ ಪಾದಯುಗಳವ ನೆನೆದು
ಅಜನರಸಿಯೊಳು ಮತಿಯನ್ನೆ ಪಡೆದು
ತ್ರಿಜಗವಂದಿತೆ ಮಹಾಲಕ್ಷ್ಮಿಗೆ ಸುರಮುನಿ
ದ್ವಿಜಪತ್ನಿಯರು ಮೇಲುವವನ್ನೆ ತೊಡಿಸಿದ ॥
ಅಜಮುಖ್ಯರೊಲಿದು—ಪೊಗಳಲು ೧

ಸುಲಲಿತ ಪೀತಾಂಬರದುಡಿಗೆಯಲಿ
ಜಲತರ ಜಝ್ಝರಿ ತಳಿತಂಗಳಲಿ
ಗಿಲಿಕು ಗಿಲಿಕು ಎಂದದುರುತ ಸೆರಗನು
ಸಲಿತ ಸಂಜಲಿ ಸಜ್ಜಿಗೈದಾ ರಮೆಗೆ ಮೇ ॥
ಗಲ ಸಿಕ್ಕಿಸಿದರು—ಸಭೆಯಲ್ಲಿ ೨

ಪೊಂಗೊಳಲೂದುವ ರಂಗನ ಸತಿಗೆ
ಶೃಂಗಾರದಲಿ ನಿರಿದುಡುಗೆ ಕಂಚುಕಿಗೆ
ತುಂಗಕುಚಗಳ ಬೆಡಂಗಿಲಿ ಮೇಲುದ
ಸಂಗಡಿಸಿದರು ಸುಮಂಗಲ ರಮೆಗೆ ಬೆ ॥
ಡಂಗಿನಲಿ ಸತಿಯು—ಕರೆತಂದು ೩

ಈ ರೀತಿಯಲಿ ಮಹಾಲಕ್ಷ್ಮಿ ಸಂಭ್ರಮದಿ
ದೋರೆ ಕಂಕಣವನ್ನಿಕ್ಕುತ ಮುದದಿ
ಚಾರು ಮಾಣಿಕ ನವರತ್ನ ನಟ್ಟುಗವನ್ನು
ವಾರಿಜನೇತ್ರೆ ಮಹಾಲಕ್ಷ್ಮಿಯ ಕರದೊಳು ॥
ನೀರೆಯರು ತರಿಸಿ—ಕೊಡಿಸ್ಯಾರು ೪

ಕುಂದಣದುರುಳಿಯ ಘೃತವನೆ ತೆಗೆದು
ಚೆಂದದ ಸ್ವರ್ಣದ ಗರುಬಿಯೊಳ್ ಪಿಡಿದು
ಅಂದುಗೆ ರಘುಣರೆನೆ ಮಂದಗಮನೆಯ ರೈ
ತಂದಾ ರಮೆಗೆ ಗೋವಿಂದನ ಪಂಕ್ತಿಗೆ ॥
ತಂದು ಬಡಿಸಿದರು—ಸಭೆಯಲ್ಲಿ ೫

ಹವಳದ ಉರುಳಿಯ ಘೃತವನೆ ತೆಗೆದು
ಯುವತೀಮಣಿ ಕರದೊಳು ತಂದು ಪಿಡಿದು
ನವನೂತನ ಷಡ್ರಸ ಭಕ್ಷ್ಯಂಗಳ
ಭುವನವಂದಿತ ರಂಗಯ್ಯಸಿಗಿಕ್ಕಲು ॥
ತವೆ ಪಂತಿಗೆಲ್ಲ—ಬಡಿಸ್ಯಾರು ೬

ಈ ಪರಿಯಲಿ ಮಹಾಲಕ್ಷ್ಮಿ ಸಂಭ್ರಮದಿ
ತಾ ಪರಿತೋಷದಿ ಮಡುಮಗಳೆನಿಸಿ
ಚಾರು ಸಂಭ್ರಮದಿ ಕೈಸೀಡಿ ಮುಕ್ತ್ರವಳಿ
ತಾಪದೊಡೆಯ ಭೋಜನದೆಡೆಬಳುಸ್ಯಳು ॥
ಶ್ರೀಪಂಚಲಿಂಗ—ದಯೆದೋರು ೭

## 127. ಗಂಡನಿಗೆ ಕೈನೀರು ಹಾಕುವದು

ಶ್ರೀಗುರುವಿನ ಪಾದವ ನೆನೆದು
ಮೋದದೊಳುಸುರುವೆ ಮನವೊಲಿದು
ಭೂದೇವಿಯು ಸುತೆ ಸಾಗರ ಶಯನಗೆ
ಮೋದದಿ ಕರದೊಳು ಜಲವನೆ ತುಂಬಿದ ॥
ಆಗಮವ ಪೇಳಿ—ಪೊಗಳುವೆ ೧

ತಳತಳಿಸುವ ಶೋಭೆಗಳಿಂದ
ಇಳೆಗೆ ಬೀರುವ ಸೊಬಗಿಂದ
ಸೆಳೆನಡು ಬಳುಕುತ ಹೊಳೆವ ಕೈಯಿಂದಲಿ
ನಳಿನಾಕ್ಷಿಯು ತಾ ಗಳಿಲನೆ ಜಲವನು ॥
ನಲಿಯುತ್ತಲಾಗ—ಕೊಡಿಸ್ಯಾಳು ೨

ಚಂದಿರವವನೆಯು ಬೇಗದೊಳು
ಸುಂದರ ಕಾಂತಗೆ ತೋಷದೊಳು
ಅಂದದೊಳಾಗ । ಚಂದದ ಯೋಗ
ನಂದಿಕೇಶ್ವರನ ಸಖಿನರ್ಧಾಂಗಿಯು ॥
ಕುಂದದೆ ಕರನೀರ—ಕೊಡಿನ್ನ್ಯಾಳು ೩

## 128. ಬಡಿಸಿದ್ದು

ಗುರುಗಣಪತಿಯರ ಭಾವಿಸುತ
ವರಶಾರದೆಯರಿಗೊಂದಿಸುತ
ವರಸಿದ್ಧಿ ಗಣಪನ ಪರಿಣಯ ವೇಳ್ಯದಿ
ನೆರೆದ ಸಭೆಯ ಮಧ್ಯದಿ ಪುರಹರ ಗುರು ॥
ವೆರಸಿ ವಿಚಾರ್ಸಿ—ಮುದದಿಂದ ೧

ತೋರುವ ಸಭೆಯ ವಿಚಾರವನು
ಚಾರು ಚರಣಕಮಲಂಗಳನು
ಸಾರಿ ತೊಳೆದು ಮಡಿಹಚ್ಚಿಯೆನುತ್ತಲೆ
ನೀರಸಿರಿಸಿ ಕೈಮುಗಿಯಲು ಹಂತಿಗೆ ॥
ಸಾರಿ ಸಾರಿಯಲಿ—ಸಮನಾಗಿ ೨

ನಿತ್ತಿರಲಲ್ಲಲ್ಲಿಗೆ ನಿರ್ಮಲದಿ
ಮತ್ತೆ ಬಾಡಿಸಿದೆಲೆ ಚೌಕದಲಿ
ಇತ್ತು ಪಂಕ್ತಿಯ ಸಮಧರಿಸುತ ಮಂಡಲ
ವಿಸ್ತರಿಸುತ್ತಭಿಘಾರವ ಶ್ರೀಮಹಾ ॥
ಲಕ್ಷ್ಮೀಶ ಗೈದ—ನಲವಿಂದ ೩

ಸಾರಿ ಸಾರಿಗೆ ತರತರದಿಂದ
ಬೇರೆ ಬೇರೆಲ್ಲರು ಸೊಬಗಿಂದ
ಕಾರಣವರಿದು ವಿಚಾರಿಸಿಯರ್ಚಿಸಿ
ಭೂರಿ ಸಭೆಯೊಳುಪ್ಪುಪ್ಪಿನ ಕಾಯಿಕ್ಕಿ ॥
ಸಾರನಿಕ್ಕಿದರು—ಸಮನಾಗಿ ೪

ಹಸಿಪಲ್ಯವ ಬಿಸಿಪಲ್ಯವನು
ಎಸೆವ ಕೋಸಂಬರಿ ಸಾಲ್ಗಳನು
ನಸುನಗುತೀರಾರು ತೆರದ ತಾಳ್ಳುಗಳನು
ಎಸೆವ ನಾಸಮೆ ಸಂಬಾಂದಿ ಚಿತ್ರಾನ್ನವ ॥
ನಸಮ ಸಂಭ್ರಮದಿ—ಬಳುನ್ಯಾರು ೫

ಮನ್ನಿಸಿ ಬಲು ಮನ್ನಣೆಗಳಲಿ
ಅನ್ನಪೂರ್ಣಾಂಬೆಯ ಭಜಿಸುತಲಿ
ಸನ್ನುತ ಕುಂಕುಮನಾಲೆ ಜೀರಿಗೆನಾಲೆ
ಅನ್ನವ ಚೆನ್ನದ ಹರಿವಾಣಗಳಲಿ ॥
ಮನ್ನಿಸಿ ಬಡಿಸಿದರು—ಸಭೆಗೆಲ್ಲ ೬

ಚಪ್ಪರದೆಡೆಗೆ ವಿನೋದದಲಿ
ಹಪ್ಪಳ ಸಂಡಿಗೆಗಳ ನಯದಿ
ತುಪ್ಪ ಗಾರಿಗೆ ಹೋಳಿಗೆ ಕಜ್ಜಾಯವ
ಸರ್ವಶಯಸಗರ್ಜಿತವೆನುತರ್ಥಿಯೊ ॥
ಒಪ್ಪುತಿಕ್ಕಿದರು—ಸಲಪಿಂದ ೭

ಪಾಡಿನೊಳತಿರಸ ರಸಗಳನು
ಲಾಡು ಗುಂಜಾಲಾಡುಗಳನ್ನು
ಮಾಡಿದ ಭಕ್ಷ್ಯಂಗಳನು ಮನೋಹರ
ಕೂಡಿದ ಸಭೆಗೆ ಸರ್ವತ್ರದಿ ಸಾಲಿಗೆ ॥
ನೋಡಿ ಬಡಿಸಿದರು—ಗುಣದಿಂದ ೮

ಕೋಮಲಾಂಗಿಯರು ವಿನೋದದಲಿ
ಕಾಮಿತ ಘೃತ ತೈಲವನಲ್ಲಿ
ಹೇಮದ ಹರಿವಾಣಂಗಳುದ್ಧರಣೆಯ
ಕಾಮಿಸಿ ಕಂಡಕಂಡೆಡೆಗೆಡೆಗಲ್ಲಿ ಸು ॥
ಕ್ಷೇಮದೊಳನುಗೈದರೊಲವಿಂದ ೯

ಸಾರು ಸೀತಾರು ತಂಬುಳಿಗಳನು
ತೋರುವ ತೋವೆ ಪರಮಾನ್ನವನು
ಚಾರು ಚಪ್ಪರದೆಡೆಗೆಡೆಗತಿ ವಿಭವದಿ

ನಾರಿ ಪುರುಷರೆಲ್ಲವರೊಂದಾಗಿ ವಿ॥
ಚಾರಿಸಿ ಬಡಿಸಿದರು—ಮುದದಿಂದ ೧೦

ಹಾಲು ಜೇನುಗಳನು ಹರದಿಯರು
ಮೇಲು ದೊನ್ನೆಗಳಲಿ ಎರೆದಿರಲು
ಬಾಲಕರುಬ್ಬಲು ತೋಲುತೋಲಾಗಿಯೆ
ನಾಲಿ ಸಕ್ಕರೆ ಖರ್ಜೂರ ಕದಳಿಗಳ
ನಾಳಿಕರಸ[1] ಸಹಿತ—ಬಳುಸ್ಯಾರು ೧೧

ಇಕ್ಕಿದ ನಾಲು ಪಂಕ್ತಿಯು ಪಯದಿ
ಮುಕ್ಕಣ್ಣನು ನೋಪುತ ಮುದದಿ
ಮಕ್ಕಳೊಡನೆ ಸಭೆಗೆಲ್ಲ ನೀರನು ಕುಡಿಸಿ
ಅಕ್ಕರೆಯಿಂ ಪ್ರೋಕ್ಷಣವನು ಮಾಡಿದ ॥
ತಕ್ಕತಕ್ಕೆಲ್ಲ—ಸಭೆಯಲ್ಲಿ ೧೨

ಲೋಕಾನಂದ ಮೂರುತಿಯನ್ನು
ನಾಕೇಶಾರ್ಚಿತನಾಪವನು
ಏಕೋ ವಿಷ್ಣು ವಿಗರ್ಪಿತವೆಂದು
ಶ್ರೀಕರ ಬ್ರಹ್ಮಾರ್ಪಣವನು ಮಾಡಿ ವಿ ॥
ವೇಕದಿ ಕೈಮುಗಿದ—ನಲಪಿಂದ ೧೩

ಹರಿಗರ್ಪಿತವೆಂದಾ ಕ್ಷಣದಿ
ಒರೆದುಪಚಾರಂಗಳ ನಯದಿ
ವರದೇವತೆಯ ಪ್ರಸಾದಕನುಜ್ಞೆಯ
ಎರಗಿ ಭೂಸುರರೊಳು ಬೇಡಲು ಅಮೃತದ ॥
ತೆರದಾಹಾರವನು—ರಚಿಸೆಂದ ೧೪

ಪ್ರತ್ಯುತ್ತರವನು ಕೈಕೊಂಡು
ನಿತ್ಯಾನಂದನು ಮುಂಕೊಂಡು
ನಿತ್ಯತೃಪ್ತ ಗುರು ಪಂಚಲಿಂಗೇಶನು
ಭೃತ್ಯಜನರು ಸಹಿತಾಗಿಯಾರೋಗಣೆ ॥
ಸ್ವಸ್ಥದಲಿ ಗೈದ—ಹರುಷದಿ ೧೫

1 ನಾಳಿಕ—ನಾರಿಕೇಳ, ನಾಳಿಕರಸ—ಕಾಯಿಹಾಲು

## 129. ಓದಿಸಿದ್ದು

ಓದಿಸಿದನು ಗುರುವು । ವಧುವರರಿಗೆ
ಜೀವಾತ್ಮರೂಪರಿಗೆ ॥
ಓದಿಸಿದ ನಲವಿಂದ ನೆರೆದಿಹ
ಮೇದಿನಿಯೊಳು ಶಿಷ್ಯವೃಂದದಿ
ಜೀವ ಭಾವವನಳಿದು ಬ್ರಹ್ಮ
ಜ್ಞಾನ ಹೊಂದುವ ಬೋಧವಸ್ತ್ರವ ೧

ಪರಿಪೂರ್ಣ ಪರಮಾತ್ಮನು । ತ್ರೈಜಗದೊಳು
ಭರಿತವಾಗಿರುತಿಹನು ॥
ಮರವೆ ಮಾಯಗಳಿಲ್ಲವರತು
ಎರಡು ಎಂಬಾ ಭಾವ ಮರೆತು
ನಿರುತ ನಚ್ಚಿದಾನಂದ ರೂಪಿಲಿ
ಬೆರೆತುಕೊಳ್ಳಲು ವಧುವರರಿಗೆ ೨

ಪಂಚ ಭೌತಿಕದ ದೇಹ । ಪ್ರಪಂಚ ವಿ
ರಿಂಚಿಯಿಂದುದಿಸಿಹುದು ॥
ಪಂಚಪ್ರಾಣವು ಪಂಚ ವಿಷಯವು
ಪಂಚಜ್ಞಾನವು ಪಂಚಕರ್ಮವು
ಪಂಚಕೋಶವು ತೋರುತಿಹುದು
ಪಂಚಕರಣವಂಟದಿರಿ ಎಂದು ೩

ನವದ್ವಾರ ಪುರದೊಳಗೆ । ಜೀವಾತ್ಮನು
ರವಿತೇಜದಂತಿರಲು ॥
ಬುಷಿಯೊಳಗೆ ಶ್ರೀಗುರುವು ಶಿಷ್ಯನು
ಪರಸ್ವರೂಪವನರಿತ ಕಾಲದಿ
ನಿರುತ ಬ್ರಹ್ಮವು ನೀನೆ ಎನ್ನುವ
ಪರಮ ತತ್ತ್ವಮಸೀತಿ ವಸ್ತುವ ೪

## 130. ಉಡುಗೊರೆ ಮಾಡಿದ್ದು

ಗುರುವರನನು ಮನದಲಿ ನೆನೆದು
ಕರಿವದನನ ಪಾದಕೆ ಮಣಿದು
ಸರಸದಿ ಸರ್ವರು ನೆರೆದು ವಿನೋದದಿ
ಗಿರಿರಾಜನು ತನ್ನರಸಿ ಸಮೇತದಿ
ವರ ಬಂಧುಬಾಂಧವರೊಡಗೂಡಿ
ಸರಸವಾಡುತ ಸಲಿಸಲಿದಾಡಿ
ದೊರೆದೊರೆಗಳು ಸಹ ಸುರಮುನಿ ಮುಖ್ಯರು
ಹರಗಿರಿಜೆಯರಿಗೆ ಉಡುಗೊರೆ ರಚಿಸಿದ ॥
ಪರಿಯ ಸಂಭ್ರಮವ—ಪೊಗಳುವೆ ೧

ದೆಸೆದೆಸೆಯಲಿ ವಾದ್ಯವು ಮೊಳಗೆ
ಎಸೆವ ಸುಜ್ಯೋತಿ ದೆಸೆಯ ಬೆಳಗೆ
ಕುಶಲದಿ ಸುರ ನರ ಯಕ್ಷೋರಗ ಸಿದ್ಧ
ರೆಸಕದಿ ಗರುಡಗಂಧರ್ವ ಕಿನ್ನರರತಿ
ವಸುಧೆಯಮರರತಿ ಸೊಗಸಿನಲಿ
ವಸುಧೀಶರು ಬಂದೆಸಕದಲಿ
ಬಿಸರುಹಲೋಚನ ಬಿಸರುಹಭವ ಸಹ
ಪೊಸ ಪೊಸ ಸಿಂಹಾಸನದೊಳಗೋಲಗ
ವೆಸೆದುದಲ್ಲಲ್ಲಿ—ಸಭೆಯಲ್ಲಿ ೨

ಸತ್ತಿಗೆ ಚಾಮರ ಛತ್ರಗಳ
ಸುತ್ತಲು ಚಿಮ್ಮುತ ವಿವರಗಳ
ಬಿತ್ತರಿಸಲನಂತಸಿಗಸದಳವೊದ
ವೃತ್ತಗಣಿತ ತಂಬಟೆ ವೌರಿ ಶ್ರುತಿ
ಸುತ್ತಲು ಕೊಂಬು ನಗಾರಿಗಳು
ಮತ್ತೆ ಮೊರೆಯೆ ಘನ ಭೇರಿಗಳು
ವಿಸ್ತರದಿಂದೋಲಾಡುತ ಸಭೆಯೊಳು
ಗೋತ್ರರಾಜನ ಸತಿಸಹಿತುಡುಗೊರೆ ಮಾ ॥
ಡುತ್ತ ಸಭೆಯೊಳಗೆ—ಬರಲಂದು ೩

ಕಾಲಲಂದುಗೆ ಗೆಜ್ಜೆ ಘಿಲಿರೆನುತ
ನೀಲದ ಶಾಲೆಯನಲುಗಿಸುತ
ಮೇಲು ಪೀತಾಂಬರ ತೋಲು ತೋಲಾಗಿಯೆ
ಬಾಲೆ ಭವಾನಿಗೆ ನೀಲಕಂಧರನಿಗೆ
ಮೇಲೆ ಸೇಸೆಯನೆತ್ತಿ ತಳಿಯುತ್ತ
ಶೀಲೆಯರುಡುಗೊರೆ ಮಾಡುತ್ತ
ಓಲಾಡುತ ವಧುವರರನು ಪೊಗಳಿ ವಿ
ಶಾಲದಿ ನಂಟರಿಷ್ಟರು ಬಹುಜನ ಸಂ ||
ಮೇಳದಿ ಉಡುಗರೆಯ—ರಚಿಸ್ಯಾರು ೪

ಧಿಗಿಲೆನ್ನುತಲತಿ ಸೊಗಸಿನಲಿ
ನಗಧರ ನಗುತ ವಿಲಾಸದಲಿ
ಜಗಜಗಿಸುವ ಪಟ್ಟೆ ಪೀತಾಂಬರ ಕರ
ಯುಗಳದಿ ಪಿಡಿತಂದಗಜೆಗೆ ಉಡುಗರೆ
ಬಗೆಬಗೆಯಿಂ ಬಲು ತೆರದಲ್ಲಿ
ಮೃಗಧರನಿಗೆ ಮುರಹರನಲ್ಲಿ
ಸೊಗಸಿನೊಳುಡುಗರೆ ವಿರಚಿಸಿ ತನ್ನಯ
ಮುಗುದೆ ಸಹಿತ ಬಲು ಬಗೆಯೊಳಗುಡುಗರೆ ||
ನಗುತ ರಚಿಸಿದರು—ಸಲಹೆಂದ ೫

ಪುರಹರನಿಗೆ ಸರಸಿಜಭವನು
ತರತರದೊಳಗುಡುಗರೆಗಳನು
ವಿರಚಿಸಿ ಶ್ರೀ ಶಾರದೆ ಸಹಿತಾಗಿಯೆ
ಪರಿಪರಿಯುಡುಗರೆ ತರತರದಿತ್ತರು
ಸರಸವಾಡುತ್ತ ವಿಲಾಸದಲಿ
ಸುರಮುನಿಗಳು ಬಹು ತೋಷದಲಿ
ವರ ನೃತ್ಯದಿ ಸಂಗೀತವ ಪಾಡುತ
ಸುರ ನಾರದ ತುಂಬುರ ಮುನಿಮುಖ್ಯರು ||
ಹರಸಿ ಜಯವೆಂದು—ಪೊಗಳ್ಯಾರು ೬

ಸಿಂಧುರಾಸುರ ಮಥನನಿಗೆ
ಸಿಂಧುರಾನನ ತಾತನಿಗೆ
ಕಂದುಕಂಧರ ಕರುಣಾಕರ ಶಂಕರ

ತಂದೆ ಶ್ರೀ ಪಂಚಲಿಂಗೇಶಗೆ ಗಿರಿಜೆಗೆ
ಚಂದದೊಳುಡುಗರೆ ಮಾಡುತ್ತ
ಮುಂದಗಾಮಿನಿಯರು ಪೊಗಳುತ್ತ
ಸುಂದರಾಂಗಿನಿಯರು ಸುರರಂಗನೆಯರು
ಇಂದುಶೇಖರನಿಗೆ ಗಿರಿಜಾತೆಗೆ ಸಹ ||
ಕುಂದಣದಾರತಿಯ—ಬೆಳಗಿದರು ೭

## 131. ಹರಸಿದ್ದು (ವಧುವರರಿಗೆ)

ಗುರು ಪರಮೇಶ್ವರನೆಂದು ನಾನೆರಗುವೆ
ಗುರು ಗಣಪತಿ ಶಾರದೆಗೆರಗುವೆನು[1]
ಧರೆಯೊಳು ವಧುವರರುತ್ಸವ ಕಾಲದಿ
ಸುರರು ಭೂಸುರರೆಲ್ಲ ನೆರೆದಾಶೀರ್ವದಿಸಿದ[2] ||
ಪರಿಯ ಪೇಳುವೆನು—ಮುದದಿಂದ ೧

ಪಂಚವರ್ಣದ ಹಸೆಮಣೆಯನೆ ಬರೆದು
ಮಿಂಚುವ ಜಗಜ್ಯೋತಿಗಳ ತಂದಿರಿಸಿ
ದಂಪತಿಗಳ ಹಸೆಮಣೆ ಮೇಲೆ ಕುಳ್ಳಿರಿಸಿ
ಕುಂಕುಮದಾರತಿಯೆತ್ತಲು ವಿಪ್ರರು ||
ಮಂತ್ರದಕ್ಷತೆಯ—ತಳಿದರು ೨

ಅತ್ರಿಸತಿಯು ಸತ್ಯವನು ಪರೀಕ್ಷಿಸಿ
ತಟ್ಟನೆ ಜನಿಸುತ ಮೂವರೊಂದಾಗಿ
ದತ್ತಾತ್ರೇಯನೆಂದು ಪೃಥ್ವಿಯ ಪಾಲಿಪ
ಶ್ರೇಷ್ಠ ಸದ್ಗುರುವಿನ ಕೃಪೆಯಿಂದನುದಿನ[3] ||
ತತ್ತ್ವವ[4] ತಿಳಿದು—ಸುಖಿಯಾಗು ೩

ಬಾಗುತ ಗುರುಗಳ ಪದಯುಗಕೆರಗಿ
ವೇದ ವೇದಾಂತ ಪುರಾಣವ ತಿಳಿದು
ಆದಿ ಅಂತ್ಯವರಿದು ಭೇದ ಮೂಲವ ತಿಳಿದು[5]

1 ಅಜನರಸಿಗ ಕೈಮುಗಿದು ವಂದಿಸುವೆ. 2 ನೆರೆದು ಹರಸಿದ. 3 ಕೃಪೆಯಿಂದ ತಮ್ಮಯ್ಯ.
4 ಜ್ಞಾನವನೆ. 5 ಕಳೆದು

ವೋದದಿ[1] ಶ್ರೀಗುರುಕೃಪೆಯಿಂದ ಅನುದಿನ[2] ॥
ಜ್ಞಾನವನೆ ತಿಳಿದು—ಸುಖಿಯಾಗು ೪

ಸತ್ವಗುಣದೊಳು ವಿಷ್ಣು ತಾನೆನಿಸಿ
ರಾಜಸ ಗುಣದೊಳು ಅಜನೆಂದೆನಿಸಿ
ತಾಮಸ ಗುಣದಿ ಮಹೇಶನೆಂದನಿಸಿದ
ತ್ರೈಮೂರ್ತಿಗಳ ಕೃಪೆಯಿಂ ಅನುದಿನ
ಜ್ಞಾನವನೆ ತಿಳಿದು[3]—ಸುಖಿಯಾಗು ೫

ಹೆತ್ತ ತಾಯ್ತಂದೆಯು ರಕ್ಷಣೆ ಮಾಡು
ಅತ್ತೆ ಮಾವರ ಕೈಯ ರತ್ನವೆಂದೆನಿಸು
ಅಕ್ಕ ತಂಗಿಯರಿಗೆ ಶತ್ರುವೆಂದೆನಿಸದ
ವೃದ್ಧಿಯನಾಕುತ ಸುಖದಿಂದ ಅನುದಿನ ॥
ಪತ್ನಿ ಸಹಿತಾಗಿ—ಸುಖಿಯಾಗು ೬

ವರವಸ್ತುವೊಡವೆಗೆ ಕುರುಡನಂದದಲಿರು
ಪರಸತಿಯರ ಸೀ ಮಾತೆಯಂದದಿ ನೋಡು
ಒಡಹುಟ್ಟಿದ್ದ ತಮ್ಮಂದಿರ ಸಲಹು
ಮನೆದೇವ ಅಖಿಳಾಂಡೇಶನ ದಯೆಯಿಂದ ॥
ಚಿರಂಜೀವಿಯಾಗಿ—ಸುಖಿ ಬಾಳು ೭

ಕ್ಷೀರಸಾಗರನಿಗೆ ಸುತೆಯಾಗಿ ಜನಿಸಿ
ಆದಿನಾರಾಯಣನರಸಿಯೆಂದನಿಸಿ
ಮೂಲೋಕದ ಜನರನು ಪರಿಪಾಲಿಪ
ಶ್ರೀಲಕ್ಷ್ಮೀದೇವಿಯ ಕೃಪೆಯಿಂದ ತಂಗವ್ವ ॥
ಬಾಲರನೆ ಪಡೆದು—ಸುಖಿಯಾಗು ೮

ಕರದಲಿ ಪುಸ್ತಕ ವೀಣೆಯ ಪಿಡಿದು
ಗುರುಶಂಕರಾರ್ಯರ ಮಾತಿಗೆ ಒಲಿದು
ನಿರುತ ಶೃಂಗೇರಿಯ ಪುರದಲಿ ನೆಲಸಿದ
ವರ ಶಾರದಾಂಬೆಯ ಕೃಪೆಯಿಂದ ತಂಗವ್ವ ॥
ಸ್ಥಿರಜೀವಿಯಾಗಿ—ಸುಖಿ ಬಾಳು ೯

1 ಬೇಗದಿ. 2 ತಮ್ಮಯ್ಯ. 3 ಬಾಲರನೆ ಪಡೆದು

ಗಜವದನನ ಮಾತೆ ತ್ರಿಜಗದಿ ಪೂಜಿತೆ
ಭುಜಗಭೂಷಣನ ಅರಸಿ ಪ್ರಖ್ಯಾತೆ
ರಜತಾದ್ರಿವಾಸೆ ಸುಜನ ಸಂಸೇವಿತೆ
ವರ ಮಂಗಳಗೌರಿ ದೇವಿಯ ಕೃಪೆದಯಿಂ ॥
ಸ್ಥಿರ ಮಂಗಲೆಯಾಗಿ—ಸುಖಿ ಬಾಳು ೧೦

ಮಾತೃಪಿತೃಗಳತ್ತೆ ಮಾವನ ಸೇವಿಸಿ
ಪ್ರೀತಿಯೊಳತಿಥಿಗಳನು ಸತ್ಕರಿಸಿ
ಕೋಪ ತಾಪವ ಬಿಟ್ಟು ಪತಿಯೊಳು ಸುಖಿಯಾಗಿ
ನೀತಿವಂತಳು ಎಂದೆನಿಸುತ ಚಿರಕಾಲ ॥
ಖ್ಯಾತಿಯ ಪಡೆದು—ಸುಖಿಯಾಗು ೧೧

ಅನ್ನದಾನವ ಮಾಡು ಜಾತಿಭೇದವ ಬಿಡು
ನಿನ್ನೊಳು ನೀನೇ ಯಾರೆಂದು ನೋಡು
ಭಿನ್ನ ಭಾವನೆಯ ಮಾಡದೆ ಬ್ರಹ್ಮಜ್ಞಾನವ[1]
ಚೆನ್ನಾಗಿ [2]ಪೊಂದಿ ನೀ ಗುರುಕೃಪೆಯಿಂದ[2]
ಪುಣ್ಯಾತ್ಮನಾಗಿ—ಸುಖಿ ಬಾಳು ೧೨

## 132. ವಧುವರರಿಗೆ ಆರತಿ—1

ಶ್ರೀರಾಮನು ಚೆಲ್ವ ನಾರೀಮಣಿಯು ಸಹ
ಚಾರು ಮಂಟಪದ ವಿಸ್ತಾರದಿ
ಭೂರಿ ಸಭೆಯ ಶೃಂಗಾರದಿ
ತೋರಿ ರಂಜಿಸಿ ವೈಯಾರದಿ
ಮಾರನ ರತಿಯು ಶೃಂಗಾರದಿ ಮೆರೆಯುವ
ನಾರಿಯರಿರ್ವರು ಭೋರನೆ ಒಳಗಿಂ ॥
ದಾರತಿ ತರಲೆಂದು—ಮನವಿತ್ತು ೧

1 ಭಿನ್ನಭಾವನೆಯನು ಮಾಡದೆ ತಂಗಪ್ಪ. 2 ಬ್ರಹ್ಮಜ್ಞಾನವ ಪೊಂದಿ ಕೃಪೆಯಿಂದ.

ಹೊಂಗಳಸದ ಕುಚ ಕಂಗೊಳಿಸುವ ಉ
ತ್ತುಂಗ ಶೃಂಗಾರವ ಗೈಯುತ
ಸಂಗಡ ತಾವು ಮಾತಾಡುತ
ಹಿಂಗದಾಭರಣವ ನೋಡುತ
ರಂಗು ಮಾಣಿಕ ನವರತ್ನದ ವರಪ್ರ
ಷ್ಪಂಗಳ ಶಿರ ಚೆಲುವಂಗಳ ಧರಿಸುತ ॥
ಮಂಗಲಾಂಗಿಯರು—ತರಲಂದು ೨

ಚೆಲ್ವೆಯರೀವರಿ ಪ್ರಜ್ವಲಿವಾರತಿ
ನಿಲ್ಲದೆ ಪಿಡಿದೆತ್ತಿ ಬೇಗದಿ
ಮೆಲ್ಲಡಿಯಿಡುತ ಸರಾಗದಿ
ಫುಲ್ಲಗಂಧಿಯರು ವಿನೋದದಿ
ಕೊಲ್ಲೂರಲಿಪ ಶ್ರೀಮೂಕಾಂಬಿಕೆಯನು ಮನ ॥
ದಲ್ಲಿ ಸ್ತುತಿಸಿದರು—ಸಭೆಯಲ್ಲಿ ೩

## 133. ವಧುವರರಿಗೆ ಆರತಿ—2

ಶ್ರೀ ವಸುದೇವ ದೇವಕಿದೇವಿಯರಿಗೆ
ಶ್ರೀವಾಸುದೇವಗೆ ದೇವಿ ರುಕ್ಮಿಣಿಗೆ
ಭಾವಜನರಗಿಣಯುಂದದ ಸತಿಯರು
ರೀವಿಯೊಳಗೆ ಶೋಭಾನವ ಪಾಡುತ
ಹೂವಿನಾರತಿಯ—ಬೆಳಗಿರೆ ೧

ಚಿತ್ತಜನಯ್ಯಗೆ ಚೆಲುವೆ ರುಕ್ಮಿಣಿಗೆ
ಮಿತ್ರೆ ಶ್ರೀ ಜಾಂಬವಂತೆಗೆ ಜಗನ್ಮಯಗೆ
ಸತ್ಯಭಾಮಾದೇವಿಯರಿಗೆ ಶ್ರೀಹರಿಗೆ
ವೃತ್ತಕುಚೆಯರು ಶೋಭಾನವ ಪಾಡುತ
ಮುತ್ತಿನಾರತಿಯ—ಬೆಳಗಿರೆ ೨

ನೀರೆ ಕಾಳಿಂದಿಗೆ ನೀರಜಾಂಬಕಗೆ
ನಾರಿ ಮಿತ್ರಾದೇವಿಗೆ ಯದುವರಗೆ

ವಾರಿಜಮುಖಿಯರು ಓಲೈಸುತ ವೈ
ಯಾರದಿಂದಲಿ ಶೋಭಾನವ ಪಾಡುತ
ಮೇರುವೆಯಾರತಿಯಾ—ಬೆಳಗಿರೆ ೩

ಇಂದ್ರಾದೇವಿಗೆ ಚೆಲ್ವ ಮುದ್ದುಮಾನವಗೆ
ಸದ್ಗುಣವಂತೆ ಲಕ್ಷ್ಮಣೆಗೆ ಶ್ರೀಹರಿಗೆ
ಮುದ್ದುಮುಖಕೆ ಚೆಲ್ವ ತಿದ್ದಿ ತಿಲಕವಿಟ್ಟು
ಪದ್ಮಮುಖಿಯರು ಪಾಡುತ ಪೊಗಳುತ ಶುಕ್ತಿ
*ಸದ್ಮದಾರತಿಯ—ಬೆಳಗಿರೆ ೪

## 134. ಹೆಣ್ಣೊಪ್ಪಿಸುವುದು

ಶ್ರೀರಾಮ ಶಿಲೆಯನುದ್ಧರಿಸಿ
ಭೂರಿ ಸಂಭ್ರಮದೊಳೈತರಲು ॥
ಆದವು[1] ಲಗ್ನವು ಶುಭಮುಹೂರ್ತದಲಿ
ರಾಮ[2] ಜಾನಕಿಯ ಕಲ್ಯಾಣದುತ್ಸವದಿ
ಊರ್ಮಿಳೆ ಮಾಂಡವಿ ಶ್ರುತಕೀರ್ತಿಗೆ ಹೊನ್ನ ॥
ಹಾರವನಿತ್ತ—ಜನಕೇಂದ್ರ ೧

ಕಲ್ಯಾಣೋತ್ಸವದ ಕಾಲದಲಿ[3]
ವಧುವರರಿರಲು ಸಂಭ್ರಮದಿ ॥
ನಂದನೆಯನು ತನ್ನ ತೊಡೆಯ ಮೇಲಿರಿಸಿ[4]
ಕಂಜದಳಾಕ್ಷ ನೀ ಸಲಹಬೇಕೆನುತಲಿ
ಕಂಬನಿದುಂಬುತ ಕಮಲಾಕ್ಷಿಯ[5] ರಘು
ನಂದನಗೊಪ್ಪಿಸಿದ—ಜನಕೇಂದ್ರ ೨

ಭಾವದೊಳಗೆ ದುಃಖಿಸುತ
ಬಾರೆಂದು ಕರೆದು ಮುದ್ದಿಸುತ ॥
ವಾರಿಜಾಕ್ಷನ ಸೇವೆಗನುವಾಗೆನುತ

---

1 ಆಯಿತು 2 ನಾರಿ. 3 ಮಧ್ಯದಲಿ, ಮುಹೂರ್ತದಲಿ 4 ತೊಡೆಯೊಳಗಿಟ್ಟು.
5 ಕಮಲಾಸ್ಯೆಯ * ಶುಕ್ತಿಸದ್ಮ—ಮುತ್ತು

ತಾಯಿ ತಂದೆಗೆ ಕೀರ್ತಿಯ ತಾರೆನುತ
ಭಾವ ಮೈದುನ ಅತ್ತೆ ಮಾವರ ಸೇವೆ ಸ ॥
ದ್ಭಾವದಲಿ ಮಾಡಿರೆನುತಿದ್ದ ೩

ಜಾನಕಿಯ ತೊಡೆಯ ಮೇಲಿರಿಸಿ[1]
ಬಾರೆಂದು ಕರೆದು ತಕ್ಕಯಿಸಿ[2] ॥
ಊರ್ಮಿಳೆ ಮಾಂಡವಿ ಬಾರೆಂದೆನುತ
ಹೇಳಿದ ಶ್ರುತಕೀರ್ತಿಗೆ ನೀತಿ ಮಾತ
ಧಾರಿಣಿಯಲಿ ಜನಕಜೆಯೆಂಬ ಕೀರ್ತಿಯು ॥
ಬೀರಬೇಕೆಂದು—ನುಡಿದನು ೪

ಒಡನಡುವಿನ ಚೆಲುವೆಯನು[3]
ಕರೆದು ಬುದ್ಧಿಯ ಪೇಳಿದನು ॥
ಪೊಡವಿಗೊಡೆಯನಾಜ್ಞೆ ಮೀರದಿರೆನುತ
ಪಡೆದವರಿಗೆ ಕೀರ್ತಿಯ ತರಿಸೆನುತ
ಧರೆಯ ಭಾರವನಿಳುಹಿದ ಮಹಿಮಗೆ ತನ್ನ ॥
ಮಗಳನೊಪ್ಪಿಸಿದ—ಜನಕೇಂಪ್ರ ೫

ತೊತ್ತಿ ಸೇವಕರ ದೂಷಿಸದೆ[4]
ದುಃಖಪಡುವರ ನಿಂದಿಸದೆ ॥
ಅತ್ತೆಮಾವನಿಗಪಕೀರ್ತಿಯ ತಾರದೆ
ಕರ್ತೃ ಪತಿಯ ಮಾತಿಂಗೆರಡೆನ್ನದೆ
ಚಿತ್ತವಲ್ಲಭನ ನೀನಗಲದಿರೆಂದು [5]ಕರ ॥
ವೆತ್ತಿ ಕೈಯೊಳಗೆ—ಕೊಡಬಂದ[5] ೬

ಸತಿಯರು ತಾವು ಬಾಲ್ಯದಲಿ
ಪಿತನ ಆಜ್ಞೆಯ ಒಳಗಿಹುದು ॥
ಯೌವನದಲಿ ಪತಿಯಾಜ್ಞೆಯಲಿಹುದು
ಅತಿ ವೃದ್ಧೆಯರು ಸುತರಾಜ್ಞೆಯಲಿಹುದು
ಸ್ವತಂತ್ರ ತಾವಾಗಿರಬಾರದೆನುತಲೆ ॥
ಸುತೆಯೊಡನೆ ಜನಕ—ನುಡಿದನೆ ೭

1 ತೊಡೆಯಲ್ಲಿಡುತ. 2 ಮುದ್ದಿಸುತ. 3 ಭಾವಕಿಗೆ. 4 ಶಿಕ್ಷಿಸದೆ. 5 ಜಾನಕಿಯೊಡನೆ ನುಡಿದನೆ.

ಅರಿಯಳು ಪಾಪಪುಣ್ಯಗಳ
ತಿಳಿಯಳು ಮನದ ದೋಷಗಳ[1] ||
ಅರಿಯಳು ಗುರುಹಿರಿಯರ ಭಾವಗಳ
ತಿಳಿಯಳು ಗುಣದೋಷದ ವಾರ್ತೆಗಳ
ಸರ್ವಾಪರಾಧವ ಕ್ಷಮಿಸಬೇಕೆನುತಲೆ ||
ರಘುರಾಮನೊಡನೆ—ನುಡಿದನು ೮

ಕೀರ್ತ್ಯಪಕೀರ್ತಿಯೆಂಬಂಥ
ವಾರ್ತೆಯನರಿಯಳಂಗನೆಯು ||
ಮಾತುಮಾತಿಗೆ ಕಲಹವು ಕಡುಕೋಪ
ಭೂತದಯಾದಿಗಳಿಲ್ಲವು ಸತಿಯರ್ಗೆ
ಕೋಟ್ಯಪರಾಧವ ಕ್ಷಮಿಸಬೇಕೆನುತಲೆ ||
ಸೀತಾಪತಿಯೊಡನೆ—ನುಡಿದನು ೯

ಪತಿಯ ಸುಖವೆ ತನ್ನ ಸುಖವು
ಪತಿಯ ದುಃಖವೆ ತನಗೆನುತ[2] ||
ಪತಿಯಿಂದ ಹಿತರಿಲ್ಲವು ಸತಿಯರಿಗೆ
ಪತಿಯ ಬಿಟ್ಟರೆ ಪರದೈವವ ಕಾಣೆ
ಪತಿಯೇ ಗತಿಯೆಂದಿರಬೇಕೆನುತಲೆ ||
ಸುತೆಯೊಡನೆ ಜನಕ—ನುಡಿದನು ೧೦

ಪತಿಭಕ್ತಿ ಪತಿಯ ಸೇವೆಗಳು
ಪತಿಯೆ ಸದ್ಗುರು ಮಹೇಶ್ವರರು ||
ಪತಿಯುಂಡ ಮೇಲುಂಬುದು ಶೇಷವನು
ಪತಿ ಪವಡಿಸಿದ ಬಳಿಕ ಪವಡಿಪುದು
ಪತಿಯೇ ಗತಿಯೆಂದಿರಬೇಕೆನುತಲೆ ||
ಸುತೆಯೊಡನೆ ಜನಕ—ನುಡಿದನೆ ೧೧

ಅಂಬರೀಶನ ಅಜಾಮಿಳನ
ಗಜೇಂದ್ರ ವಿಭೀಷಣ ಶುಕನ ||
ಮಂಗಲ ಮಹಿಮನೆ ಮನ್ಮಥ ಪಿತನೆ

---

1 ಗುಣದೋಷಗಳ. 2 ತನ್ನದೆನಲು ; ತನಗೆನಲು

ಮಂಗಲ ಮಹಿಮನೆ ಮಧುಸೂದನನೆ
ಮಂಗಲ ಮಹಿಮನೆ ಮಗಳು ಜಾನಕಿಯ ॥
ಚಂದದಲಿ ನೋಡಿ—ಸಲಹೆಂದ ೧೨

ಕರುಣಾಸಾಗರ ಕರುಣನಿಧಿಯೆ
ಕರುಣಿಸಿ ಸಲಹೆನ್ನ ಮಗಳ ॥
ಹೃದಯದೊಳಗೆ ಹದಿನಾಲ್ಕು ಲೋಕವನಿಟ್ಟ
ಪ್ರಳಯ ಕಾಲದೊಳಾಲದೆಲೆ ಮೇಲೆ ಪವಡಿಸಿ
ಕರುಣದಿ ರಕ್ಷಿಸುವಾದಿ ಮೂರುತಿ ಮಹಾ ॥
ವಿಷ್ಣುವೆ ಸಲಹೆನ್ನ—ಮಗಳನ್ನು ೧೩

ಹತ್ತವತಾರದಿ ಜನಿಸಿ
ದುಷ್ಟರನೆಲ್ಲ ಸಂಹರಿಸಿ ॥
ಭಕ್ತರಭೀಷ್ಟವ ಸಲಿಸಬೇಕೆನುತ
ಹೆತ್ತವರಿಗೆ ಕೀರ್ತಿಯ ನಡಸೆನುತ
ರಕ್ಕಸ ಬಾಧೆಯ ಹರಿಸೆ ಜನಿಸಿದ ಪುರು ॥
ಷೋತ್ತಮ ಸಲಹೆನ್ನ—ಮಗಳನ್ನು ೧೪

ಸೃಷ್ಟಿತೂಕದ ಧನುವಿರಿಸಿ
ಎತ್ತೆಂದೆನ್ನನು ಶ್ರಮಪಡಿಸಿ ನಿ ॥
ನ್ನಪ್ಪ ಮಾಡಿದನಪರಾಧವನೆನುತ
ಮಿತ್ರೆಗೆ ಮನನೊಂದು ನುಡಿಯಬಾರದು ಎಂದು
ಲಕ್ಷಾಪರಾಧವ ಕ್ಷಮಿಸಬೇಕೆನುತಲಿ ॥
ಲಕ್ಷ್ಮೀಪತಿಯೊಡನೆ—ನುಡಿದನು ೧೫

ಭೂಮಿ ತೂಕದ ಧನುವನಿರಿಸಿ
ನೆಗಹೆಂದೆನ್ನನು ಶ್ರಮಪಡಿಸಿ ॥
ನಿನ್ನ ತಂದೆ ಗೈದನಪರಾಧವನೆನುತ
ಸೀತೆಗೆ ಮನನೊಂದು ನುಡಿಯಬಾರದು ಎಂದು
ಸರ್ವಾಪರಾಧವ ಕ್ಷಮಿಸಬೇಕೆನುತಲಿ ॥
ರಘುರಾಮನೊಡನೆ—ನುಡಿದನು ೧೬

ಯೋಚಿಸದಿರು ಮನದೊಳಗೆ
ಏಕಪತ್ನಿಯ ವ್ರತ ತನಗೆ ॥
ನಂಬು ನೀನೆನ್ನ ಮಾತಿಂಗೆರಡಿಲ್ಲ
ಅಂಗನೆ ಗುಣದೋಷದ ಕೊರತೆಯಿಲ್ಲ
ನಿನ್ನ ಮಗಳಿಗರ್ಧಾಂಗನಾಗಿಹನೆಂದು
ನಂಬುಗೆಯನಿತ್ತ—ರಘುರಾಮ

## 135. ಬಳಿವಾರಿ ಕೊಟ್ಟದ್ದು

ಹಸ್ತಿವದನಗೆ ಮಸ್ತಕವನತಿ
ಭಕ್ತಿಯಿಂದಲಿ ಬಾಗುವೆ
ಚಿತ್ತಜನ ಪಿತ ಚಿನ್ಮಯಾತ್ಮನ
ನಿತ್ಯದಲಿ ಕೊಂಡಾಡುವೆ
ಗೋತ್ರಧರನು ಕಳತ್ರ ಮೇನಕಿ
ಪುತ್ರಿಪಾರ್ವತಿಗೊಲಿದು ನಾನಾ
ವಸ್ತುವಾಹನ ಪ್ರೈಯ ಭೂಷಣ
ಮುತ್ತು ಮಾಣಿಕ ರತ್ನ ಬಳಿವರಿ ॥
ಯಿತ್ತ ಸಂಭ್ರಮವ—ಪೊಗಳುವೆ ೧

ಚಂದ್ರಗಾವಿಯ ಶಾಲೆಯನು ತೆಗೆ
ತಂದು ಮಗಳಿಗೆ ಕೊಡಿಸುತ
ಅಂದಣಂಗಳನೇಕ ತುರಗದ
ಸಂದಣಿಯ ತಾ ತರಿಸುತ
ಗಂಧ ಕಸ್ತುರಿ ಪುಣುಗು ಮಲ್ಲಿಗೆ
ಮಂದಜವು[1] ಪನ್ನೀರು[2] ಬಕುಳವು
ಚಂದ್ರಕಾಂತಿಯ ಮಣಿಗಳಗಣಿತ
ತಂದು ಸರ್ವಾಭರಣನರಸಿಗೆ ॥
ಚಂದದಿ ಮೇನಕಿಯು—ತೊಡಿಸ್ಯಾಳೆ ೨

---

1 ಮಂದಜ—ತಾವರೆ. 2 ಪನ್ನೀರು—ಗುಲಾಭಿ

ಸರಸಿಜಾನನೆಗಂದು ಕರಿರಥ
ವರ ಪದಾತಿಯ ಕೊಡಿಸುತ
ಬಿರಿಮುಗುಳು ಸೇವಂತಿಕಾ ಸುಮ
ಹೊರೆಹೊರೆಯ ತಂದಿರಿಸುತ
ಪರಿಪರಿಯ ನವರತ್ನ ಪದಲಸು
ಮೆರೆವ ಚಿನ್ನದ ಕೇದಗೆಗಳನು
ತಿರುಪಿನಾ ಸುಮಗೊಂಡೆ ನಾನಾ
ತೆರದಿ ಬಹು ಮಾಂಗಲ್ಯ ಕರದೊಳು ॥
ಹೊರಿಸಿ ಕೊಡಿಸಿದರು—ಭರದಿಂದ ೩

ಹತ್ತು ಸಾವಿರ ಚಿನ್ನದೆರಕದ
ಸತ್ತಿಗೆಯ ತಾ ತರಿಸುತ
ತೆತ್ತಿಸಿದ ಮಾಣಿಕ್ಯ ಮಣಿಸರ
ಕೊತ್ತಿ ವಜ್ರವನಿರಿಸುತ
ಚಿತ್ರ ಕನ್ನಡಿ ಕನಕ ಕಲಶವ
ನಿತ್ತು ನಾನಾ ಪರಿಯ ಗಂಗಳ
ವಿತ್ತು ಸೌವರ್ಣದೊಳು ರಚಿಸಿದ
ತೆತ್ತಿಗೆಯ ಕವಚೆಗಳ ಕಡುಗವ ॥
ನಿತ್ತು ಮನ್ನಿಸುತ—ಪೊಗಳ್ಯಾರು ೪

ಸೂರ್ಯತೇಜದ ಬಾಲೆಯನು ವೈ
ಯಾರದಿಂದಲಿ ಕಾಣುತ
ಚಾರುಪದಕವನಿತ್ತು ಬಳಿಕ ಮ
ನೋರಥವ ತಂದಿರಿಸುತ
ಧಾರಿಣೀಧರನಧಿಕ ಹರುಷದಿ
ನಾರಿ ಮೇನಕಿ ಸಹಿತ ತನ್ನ ಕು
ಮಾರಿ ಬಲು ವೈಯಾರಿ ಶೃಂಗರ
ಧಾರಿ ಕರುಣಾವಾರಿ ಸಿಗಮ ವಿ ॥
ಚಾರಿ ಪಾರ್ವತಿಗೆ—ಕೊಡಿಸಿದ ೫

ಬಾಲೆ ಪರಶಿವಲೋಲೆ ಸಜ್ಜನ
ಪಾಲೆ ವಿದ್ಯಾಲೋಲೆಗೆ
ಮೇಲು ನವರತ್ನಂಗಳಾಕರ

ಕಾಲ ಕಡಗ ವಿಶಾಲೆಗೆ
ತೋಳ ಸರಪಣಿ ತೋಳ ಕಂಕಣ
ತೋಳ ಹಿಂಬಳೆ ತೋಳ ಮುದ್ರಿಕೆ
ತೋಳ ಕವಚವು ತೋಳಿಸಂಗುಲಿ
ಗಾ ಲಲಿತ ತಾಟಂಕ ಮೌಕ್ತಿಕ ॥
ಶಾಲೆ ಸಹಿತಾಗಿ—ಕೊಡಿಸಿದ ೬

ಭೋಗಿ ಭೂಷಣಸರಸಿಗೊಲಿದು ಸ
ರಾಗದಿಂದಲಿ ಭೂಧರ
ಸಾಗಿಸುತ ಕೊಡಿಸಿದನು ಸರ್ವವ
ನಾಗವೇಣಿಗೆ ಗಿರಿಧರ
ಶ್ರೀಗೌರಿ ಸಿತಗಳೆ ಕೃಪಾನಿಧಿ
ಯೋಗಿ ಜನ ಹೃತ್ಕಮಲವಾಸಿನಿ
ಸೋಗೆಗಣ್ಣನ ಸರ್ವಮಂಗಲೆ
ಗಾಗ ಸಂತೋಷದಲಿ ಕೊಡಿಸುತ ॥
ಸೋಗ ನೋಡಿದನು—ಗಿರಿರಾಯ ೭

ನಿತ್ಯಮಂಗಲೆ ನಿರ್ವಿಕಾರಿಣಿ
ಮಿತ್ರರಾಜ ಕಲಾಧರೆ
ಪೃಥ್ವಿಧರಸುತೆ ಯತ್ರಿಭವ ಮುಖಿ
ಯುತ್ತಮಾಂಗಿ ಕೃಪಾಕರೆ
ಉತ್ತಮೋತ್ತಮ ಮಹಿಮೆ ನಿತ್ಯಾ
ನಿತ್ಯ ಕಲ್ಯಾಣಿ ಸ್ವರೂಪಿಣಿ
ಕೃತ್ತಿವಾಸ ಮನೋಹರೆಗೆ ತ್ರೈ
ಮೂರ್ತಿ ರೂಪಿಣಿಗೊಲಿದು ಬಳಿವರಿ ॥
ಯಿತ್ತು ಮನ್ನಿಸಿದ—ಗಿರಿರಾಯ ೮

ಕಂದು ಕಂಧರನರಸಿ ಸುರಮುನಿ
ವೃಂದಸೇವಿತೆ ಪರಶಿವೆ
ಬಂದ ಭವಭಯನಾಶೆ ಸನಕಸ
ನಂದನಾರ್ಚಿತೆ ಶ್ರೀಶಿವೆ

ಸುಂದರಾಂಗಿ ಸುಶೀಲೆ ನಿತ್ಯಾ
ನಂದಗತಿಶಯವಾಗಿ ಭೂಧರ
ನಂದು ಬಳಿವರಿಯನ್ನು ಕೊಡಿಸುತ
ತಂದೆ ಶ್ರೀಗುರು ಪಂಚಲಿಂಗನ ॥
ಚಂದದಿ ಮನ್ನಿಸುತ—ಪೊಗಳ್ಯಾರು ೯

## 136. ಬಾಗಿಲ ತಡೆಯುವುದು

ಶ್ರೀರಮಣಿಯನೊಡಗೊಂಡು ಶ್ರೀಕೃಷ್ಣನು
ದ್ವಾರಕಿಗೈತರಲು । ವಾರ್ತೆಯ ಕೇಳಿ
ದೂರಜ ತೋಷದೊಳು । ಪಟ್ಟಣವ ಶೃಂ
ಗಾರವ ಗೈಸುತಲು । ಸಕಲ ವಿಭವದೊಳು ॥
ನಾರಿಯರ ಕರಕಲಶ ಕನ್ನಡಿ
ಭೂರಿ ಮಂಗಲ ವಾದ್ಯರವದಲಿ
ಪೌರ ಪರಿಜನ ಸಹಿತದಿದುಗೊಂ
ಡೋರಣದಿ ನಿಜಮಂದಿರಕೆ ವಿ ॥
ಸ್ತಾರ ವೈಭವದಿ—ನಡೆತಂದ ೧

ಬೀಗರ ಬರಿಸುತ್ತಲಾಗ ಚತುರ್ಥಿಯ
ನಾಗವಲ್ಲಿಯು ರಚಿಸಿ । ಉತ್ಸವವನಂ
ದಾಗವೋಕ್ತದಿ ಸಲಿಸಿ । ಭೂಸುರರ ಸ
ಮಾಗಮವನು ಪೂಜಿಸಿ । ದಕ್ಷಿಣೆಯ ಕೊಡಿಸಿ ॥
ಬೇಗದಿಂ ವಧುವರರಿಗೊಸಗೆಗ
ಳಾಗೆ ನಿಜಸತಿ ಸಹಿತ ಮಂದಿರ
ಕಾಗಿ ನಡತರುತಿರಲು ಕಾಣುತ
ಬೇಗದಲಿ ಸೌಭದ್ರೆ ನಗುತಲಿ ॥
ಬಾಗಿಲ ಬಂದು—ತಡೆದಳು ೨

ತಡೆದ ತಂಗಿಯ ಕಾಣುತ್ತೊಡನೆ ಶ್ರೀಗೋವಿಂದ
ನುಡಿದ ತೋಷದಲಿ ತಾನು । ಯಾಕಮ್ಮ ನೀ
ತಡೆದಿರ್ಪೆ ಬಾಗಿಲನು । ಸೌಭದ್ರೆ ನೀ
ನುಡಿಯಮ್ಮ ಬೇಗದನು । ಮನದ ಬಯಕೆಯನು ॥

ಕೊಡುವೆ ನೀ ಬೇಡಿದುದ ವಂಚನೆ
ಯಿಡದೆ ಉಸುರೆಂದೆನಲು ಕೇಳುತ
ಜಲಜಲೋಚನೆ ಕಾಮಸರಗಿಣಿ
ಕಡುಚೆಲುವೆ ಕಲಹಂಸಗಾಮಿನಿ ॥
ನುಡಿದಳಗ್ರಜಗೆ—ಸಲಹಿಂದ ೩

ಚಿತ್ತಜನಯ್ಯ ನೀನಿತ್ತ ಸೌಭಾಗ್ಯ ಸಂ
ಪತ್ತು ಸಾಮ್ರಾಜ್ಯಗಳು । ಉಂಟೆನಗೆ ನಿ
ನ್ನುತ್ತಮ ಕರುಣದೊಳು । ಬೇಡಿಹುದೆನ್ನ
ಚಿತ್ತದ ಕಾಂಕ್ಷಗಳು । ಬಿನ್ನಪಿಪೆ ಕೇಳು ॥
ಅತ್ತಿಗೆಯು ನೀ ಸಹಿತಲಿರ್ವರು
ಚಿತ್ತಪಲ್ಲಟವಾಗದೊಂದೇ
ಚಿತ್ತದಲಿ ನಾ ಬೇಡಿದಿಷ್ಟವ
ನಿತ್ತಪೆವು ಎಂದೆನುತ ನಂಬುಗೆ ॥
ಯಿತ್ತರೆ ಮನದೊಲವನುಸುರುವೆ ೪

ರಾಕೇಂದು ವದನೆ ಸುಕೋಕಿಲ ಗಾನೆ ಇ
ಷ್ಟೇಕಮ್ಮ ಬಹುಯೋಚನೆ । ನಿನಗೆ ಪೇಳ್ದ
ವಾಕ್ಯನೊಳಗೆ ವಂಚನೆ । ಬಾರದು ಮನೋ
ವ್ಯಾಕುಲ ಬಿಡು ಸುಮ್ಮನೆ । ಮನದ ಬಯಕೆಯನೆ ॥
ನೀ ಕುರಿತು ಪೇಳೆನಗೆ ಮುದದಲಿ
ಬೇಕೆನುತ ಬೇಡಿದ್ದ ಬಯಕೆಯ
ನಾ ಕೊಡುವೆ ಪುಸಿಯಲ್ಲ ಪೇಳು ಪಿ
ನಾಕಿಯಂಘ್ರಿಗಳಾಣೆ ಬಿಡು ಬಿಡು ॥
ನೀ ಕದವನು ತಂಗಿ—ಮೋಹನಾಂಗಿ ೫

ಅಣ್ಣಯ್ಯ ಕೇಳು ಮುಕ್ಕಣ್ಣನ ಸಾಕ್ಷಿಗೆ
ಇನ್ನು ನಾ ಬಿಡುವಳಲ್ಲ । ಅತ್ತಿಗೆಯೆನ್ನ
ಗಣ್ಯಕ್ಕೆ ತರುವಳಲ್ಲ । ಆಕೆಯ ಚಿತ್ತ
ನಿರ್ಣಯ ತಿಳಿಯಲಿಲ್ಲ । ನೀ ನುಡಿಸು ಸೊಲ್ಲ ॥
ಎನ್ನ ಪುಣ್ಯೋದಯದ ಭಾಗ್ಯದಿ
ಅಣ್ಣ ಕೇಳ್ ನಿನ್ನರಸಿಯುದರದಿ

ಹೆಣ್ಣು ಶಿಶು ಜನಿಸಿದರೆ ಎನ್ನಯ
ಚೆಣ್ಣಗೀವೆನೆನುತ್ತಲತ್ತಿಗೆ ॥
ಎನ್ನೊಳು ಸಂಬುಗೆಯ—ಕೊಡಬೇಕು ೬

ಎನುವ ಮಾತನು ಕೇಳಿ ವನರುಹಾಂಬಕ ತನ್ನ
ವನಿತೆಯ ಮೊಗವ ನೋಡಿ । ರುಕ್ಮಿಣಿಗೆಂದ
ಅನುಜೆ ಸೌಭದ್ರೆಯಾಡಿ । ದಂದವ ನಿನ್ನ
ಮನದಲ್ಲಿ ಗ್ರಹಿಸಿ ನೋಡಿ । ಅನುನಯವ ಕೂಡಿ ॥
ಕ್ಷಣದೆ ಸಂಬುಗೆಯಿತ್ತು ತಂಗಿಯ
ಮನವ ಪಡೆ ಬೇಗದಲಿ ನಿನ್ನಯ
ಮನಸಿಗಂಜುವಳಲ್ಲ ಬಾಗಿಲೊ
ಳಿನಿತು ದಿನ ನೀ ನಿಂತಲೆನುತಲೆ ॥
ದನುಜದಲ್ಲಣನು—ನಸುನಕ್ಕ ೭

ಎಂದ ಮಾತನು ಕೇಳುತಂದು ರುಕ್ಮಿಣಿ ಲಜ್ಜೆ
ಯಿಂದ ಮೌನದೋರಲು । ಸೌಭದ್ರ ತಾ
ನಂದು ಹಾಸ್ಯದೊಳು । ವೈದರ್ಭಿಯೊ
ಳೆಂದಳು ನರಸದೊಳು । ಅತ್ತಿಗೆ ನೀ ಕೇಳು ॥
ಎಂದ ಮಾತಿಂಗುತ್ತರವ ಮುದ
ದಿಂದ ನೀ ಕೊಡದನಕ ಬಾಗಿಲ
ನೆಂದಿಗೆಯು ನಾ ಬಿಡನು ಮೌನವ
ನಿಂದು ಬಿಟ್ಟುಸುರುಸುರು ಭಾಮಿನಿ ॥
ಸುಂದರಾಪಾಂಗಿ—ಮೋಹನಾಂಗಿ ೮

ತಂಗಿ ಸೌಭದ್ರೆ ಕೇಳಂಗನೆ ರುಕ್ಮಿಣಿ
ಯಿಂಗಿತವರಿತೆ ನಾನು । ನಿನ್ನಯ ಕುವ
ರಂಗೆ ಕುಮಾರಿಯನು । ತಾ ಕೊಡುವೆ ಮಾ
ತಿಂಗಿಲ್ಲ ಕಪಟವೇನು । ಎಂಬ ನಿಜವನ್ನು ॥
ಅಂಗನಾಮಣಿಯೆನ್ನೊಳಂತ
ರಂಗವಲಿ ಸೂಚಿಸಿದಳೀ ಮಾ
ತಿಂಗಿನಿತು ಸಂದೇಹ ಬೇಡ ಕು
ರಂಗಲೋಚನೆ ಭೃಂಗಕುಂತಳೆ ॥
ತಂಗಿ ಬಾಗಿಲನು—ಬಿಡು ಬೇಗ ೯

ಲಕ್ಷ ಹೊನ್ನಿತ್ತರೆನ್ನತ್ತಿಗೆ ಬಾಯ್ಬಿಟ್ಟೊಂ
ದಕ್ಷರ ನುಡಿವಳಲ್ಲ । ಪೇಳಿದಳೆಂದು
ಸಾಕ್ಷಿಯ ನುಡಿದಿರಲ್ಲ । ನೀವಾಕೆಯ
ಪಕ್ಷಕ್ಕೆ ನೇರ್ದಿರಲ್ಲ । ನಾನರಿತೆನೆಲ್ಲ ॥
ಪಕ್ಷಿವಾಹನ ನಿಮಗೆ ಮಡದಿಯ
ಪಕ್ಷಪಾತವು ಬಹಳ ಶ್ರೀಗುರು
ಲಕ್ಷ್ಮಿವೆಂಕಟ ನಿಮ್ಮ ಕಾರು
ಣ್ಯೇಕ್ಷಣವೆ ನಾಕೆಸುತ ಕದ ಬಿ ॥
ಟ್ಟಾಕ್ಷಣ ಚರಣದಲಿ—ಮಣಿದಳು

## 137. ಒಸಗೆ ಆಗಿ ಒಳಗೆ ಹೋಗುವದು

ಗುರುಗಣಪತಿಯರ ಚರಣಕ್ಕೆ ಮಣಿದು
ಸರಸಿಜೋದ್ಭವನರಸಿಯ ಸ್ತುತಿಗೈದು
ವರ ರಘುರಾಮ ಸೀತೆಯ ಸಹ ದಶರಥ
ಹರುಷದಿಂದುಡುಗೊರೆಗೈದು ವೊಳಗೆ ಮತ್ತೆ
ತೆರಳಿದ ಸತ್ಕಥೆಯ—ಪೊಗಳುವೆ

ಮುತ್ತಿನ ಮಂಟಪದಿಂದ ಸಂತಸದಿ
ಮಿತ್ರೆ ಜಾನಕಿ ಸೆರಗ ಹಿಡಿಕೊಂಡು ಕರದಿ
ಪುತ್ರನ ಕೈ ಹಿಡಿಯುತ್ತಲೆ ದಶರಥ
ಮತ್ತಕಾಶಿನಿಯರು ಶೋಭನ ಪಾಡುತ
ಆರ್ಥಿಯಲಿ ನಡೆದರೊಲವಿಂದ

ಕೊಂಬು ತಂಬಟೆ ವಾದ್ಯದಿಂದ ವೈಭವದಿ
ಕುಂಭಕುಚೆಯರೆಲ್ಲರೊಂದಾಗಿ ಕರದಿ
ನಂಬಿ ಶ್ರೀವೆಂಚಲಿಂಗನ ನೆನೆಯುತ್ತಶಿ
ಸಂಭ್ರಮದಿಂದೆಲ್ಲರು ಆನಂದದಿ
ಬೆಂಬಿಡದೆ ಒಳಗೆ—ನಡೆತಂದ

## 138. ಸೊಸೆ ಮೆಚ್ಚಿಕೆ ಕೇಳುವದು

ಸೊಸೆ ನಿಮ್ಮ ಮನಸ್ಸಿಗೆ ಬಂತೋ । ನೀವ್ ಸಂ
ತಸಗೊಳ್ಳಿರೀಗಲೆ ಬಳಗ ಬಂಧುಗಳೆ ಪ

ನಂದಗೋಪಿಯ ಕಂದನಿವನು । ಬಂದು
ವೃಂದಾವನದೊಳು ನಲಿಯುತಲಿಹನು
ನಂದಗೋಪಿಯರಿರ ನೀವು । ಇಂದು
ಬಂದ ಸೊಸೆಯ ಗುಣದಂದವ ನೋಡಿ ೧

ವಿದ್ಯಾಶಾಸ್ತ್ರದೊಳತಿ ನಿಪುಣೆ । ಒಳ್ಳೆ
ಬುದ್ಧಿವಂತೆಯಾಗಿ ಬಂದಳು ಬಾಗಿಲಿಗೆ
ಮುದ್ದು ನಿಮ್ಮ ಮಗನಿಗೆ ತಕ್ಕ । ಒಳ್ಳೆ
ವರಣವಾಗಿರುವಂಥ ಪುತ್ರಿಯ ನೋಡೆ ೨

ಈಶ್ವರನಿಗೆ ಪತ್ರೆ ಶ್ರೇಷ್ಠ । ಮಹಾ
ವಿಷ್ಣುದೇವರಿಗೆ ತುಳಸಿಯೆ ಶ್ರೇಷ್ಠ
ಬ್ರಹ್ಮನಿಗೆ ಜಾಜಿಯೆ ಒಳಿತು । ನಿಮ್ಮ
ಪುತ್ರಗೆ ವರಣಾದ ಪುತ್ರಿಯೆ ಶ್ರೇಷ್ಠ ೩

## 139. ಸಂತೋಷ ಕೇಳುವದು (ಜನಕನಲ್ಲಿ)

ಸಂತೋಷ ಘನವಾಯಿತೋ । ಜನಕೇಂದ್ರ ನಿನ್ನ
ಚಿಂತೆ ಪರಿಹಾರವಾಯಿತೋ ಪ
ಅಂಥಿಂಥ ಅಳಿಯನಲ್ಲ ಅರಗಿಳಿಯಂಥ ಅಳಿಯ ಬಂದು
ಮಂಟಪದಲ್ಲಿ ಕುಳಿತು ಮಗಳ ಕೈಯ ಹಿಡಿದ ಮೇಲೆ ಅ ಪ

ರವಿಕೋಟಿ ಉದ್ಧಾರಿ । ಜನಕೇಂದ್ರ ನಿನ್ನ
ಜನ್ಮ ಸಾಫಲ್ಯವಾಗಿ
ಸನಕಾದಿ ವಂದ್ಯಳಂತೆ ಕನಕಾದಿ ತೇಜಳಂತೆ
ಕನಕದ ಗೊಂಬೆಯಂತೆ ಸದಾಶಿವ ಪ್ರಿಯಳಂತೆ ೧

ಮಗಳಿಗೆ ಪತಿಯಾದ । ಆರಸನು
ಮುಗುಡಗೊಳ್ಳಲಿ ಬೇಡ
ಸುಗುಣ ತಾಸವನೊಬ್ಬ ಬೇರೆ ಬೇರಿನ್ನಾರು
ರಘುವೀರ ವೀರ ಬಂದು ಮಗಳ ಕೈಯ ಹಿಡಿದ ಮೇಲೆ ೨

ಕಂಡಿರೆ ಜನಕೇಂದ್ರನ । ಸೀತೆಯು ಗೆದ್ದ
ಭೂಪರ ನಾ ಕಾಣೆ
ಸೀತೆಗೊಪ್ಪುವ ಪತಿ ಈತನೆ ರಘುಪತಿ
ಗೋಕುಲಕಧಿಪತಿ ಖ್ಯಾತಳು ಇವಳೆಂದು ೩

## 140. ಮರುಮಂಗಲ ಕೊಡುವದು

ಬಾರೋ ಶ್ರೀ ಗಣನಾಥ ಮನದೊಳಗಾಡುತ
ಬೇಡಿದ ವರವ ಕೊಡುವಾಥ—ಗಣಪತಿ
ಪಗಳೂ ನಿನ್ನ—ಬಲಗೊಂಬೆ ೧

ಸಾಗರ ಮಧ್ಯದಿ ನಾಗಶಯನ ಸ್ವಾಮಿ
ಯಾವ ಪರಿಯೊಳಗೆ ಸೊಬಗಿನ—ಮರುಮಂಗಲವ
ಕೊಡುತೇವೆ ನಿಮ್ಮ—ಮಗಳಿಗೆ ೨

ಸಿಂಧುಸಾಗರದಲ್ಲಿ ರಂಭೆ ಲಕ್ಷುಮಿದೇವಿ
ಸಂಭ್ರಮದಿಂದ ಇರುವಳು—ಮಾಲಕ್ಷ್ಮಿಗೆ
ಚಂದದ ಮಂಗಲವ—ಕೊಡುತೇವೆ ೩

ಕ್ಷೀರಸಾಗರದಲ್ಲಿ ನಾರಿ ಲಕ್ಷುಮಿದೇವಿ
ಚಾರು ಸೊಬಗಿನಲಿ ಇರುವಳು—ಲಕ್ಷ್ಮಿಗೆ
ಕೊಡುತೇವೆ ಬನ್ನಿ—ಜನರೆಲ್ಲ ೪

ಉಪ್ಪರಿಗೆ ಒಳವಿಕೆ ತೆಗೆದಿಟ್ಟ ಮಂಗಲಕೆ
ಮುತ್ತ ತೆತ್ತಿಸಿದ ಸೆರಗಿನ—ಮರುಮಂಗಲವ
ಕೊಡುತೇವೆ ನಿಮ್ಮ—ಮಗಳಿಗೆ ೫

ಮಾಳಿಗೆ ಒಳವಿಕೆ ತೆಗೆದಿಟ್ಟ ಮಂಗಲಕೆ
ಹೂವ ತೆತ್ತಿಸಿದ ಸೆರಗಿನ—ಮರುಮಂಗಲವ
ತಂದೇವೆ ನಿಮ್ಮ—ಮಗಳಿಗೆ ೬

ಸೋಗೆಗುರುಳಿನ ಬಾಲೆ ತಾವರೆಯಂಥ ಮುಖ
ಚಂದ್ರಮಂಡಲದ ಹರಿವಾಣ—ಹಿಡಿ ಬಾಲೆ
ಬೇಗದಿ ಮಂಗಲವ—ಕೊಡುತೇವೆ ೭

ತುಂಬಿಗುರುಳಿನ ಬಾಲೆ ಚೆಂದುಳ್ಳ ಮುಖಪದ್ಮ
ಸೂರ್ಯಮಂಡಲದ ಹರಿವಾಣ—ಹಿಡಿ ಬಾರೆ
ಚಂದದಿ ಮಂಗಲವ—ಕೊಡುತೇವೆ ೮

ಕನ್ನಡಿ ಕಲಶದಿ ಕಾದಿಟ್ಟ ಮಂಗಲವು
ರೈವ ತೆತ್ತಿಸಿದ ಸೆರಗಿನ—ಮರುಮಂಗಲವ
ಕೊಡುತೇವೆ ನಿಮ್ಮ—ಮಗಳಿಗೆ ೯

ವಜ್ರದ ಕವಾಟಿನ ಕಾದಿಟ್ಟ ಮಂಗಲವ
ಚಿನ್ನ ತೆತ್ತಿಸಿದ ಸೆರಗಿನ—ಮರುಮಂಗಲವ
ಕೊಡುತೇವೆ ನಿಮ್ಮ—ಮಗಳಿಗೆ ೧೦

ವಸುದೇವ ದೇವಕಿ ಬಾಸಿಗ ವಾದ್ಯಗಳಿಂದ
ಎಸೆವ ದುಂದುಭಿಯ ಹೊಯಿಸುತ್ತ—ಮರುಮಂಗಲವ
ಕೊಡುತೇವೆ ನಿಮ್ಮ—ಮಗಳಿಗೆ ೧೧

## 141. ವರಗಾಯಿ ಒಡೆದದ್ದು, ಕೆರೆದದ್ದು

ಪೃಥ್ವಿಪಾಲಿಪ ದಶರಥನು ಶ್ರೀರಾಮ
ಅತಿ ಶೀಘ್ರದಲಿ ಕೌಸಲ್ಯೆಯ ಒಡನೆ
ಕುಶಲದಿ ವರಗಾಯೊಡೆಯಬೇಕೆನುತಲೆ
ರತುನದ ಕಡೆಗೋಲ ತೆಗೆತಾರೆನುತಲೆ ॥
ಸುತ ರಾಮಚಂದ್ರ—ನುಡಿದನೆ* ೧

ಭೂಮಿ ಪಾಲಿಪ ದಶರಥನು ಶ್ರೀರಾಮ
ಜಲಜಲೋಚನೆ ಕೌಸಲ್ಯೆಯ ಒಡನೆ
ವಿನೋದದಿ ವರಗಾಯ ಒಡೆಯಬೇಕೆಂದು

* ರಾಮನು ವರಗಾಯ ಒಡೆಯಬೇಕೆಂದು ದಶರಥನು ಕೌಸಲ್ಯೆಗೆ ನುಡಿದನೆ—ಎಂದು ಅನ್ವಯ.

ನೀಳದ ಕಡೆಗೋಲ ತೆಗೆತಾರೆನುತಲೆ ॥
ಶ್ರೀರಾಮಚಂದ್ರ—ನುಡಿದನು ೨

ಧರಣಿಪಾಲಿವ ದಶರಥನು ಶ್ರೀರಾಮ
ಕಡು ಶೀಘ್ರದಿ ಕೌಸಲ್ಯೆಯ ಒಡನೆ
ಹರುಷದಿ ವರಗಾಯ ಒಡೆಯಬೇಕೆಂದು
ಹರಳಿನ ಕಡಗೋಲ ತೆಗೆತಾರೆನುತಲೆ ॥
ಶ್ರೀರಾಮಚಂದ್ರ—ನುಡಿದನೆ ೩

ಆಗಲಾ ನುಡಿಗಳ ಕೇಳಿ ಕೌಸಲ್ಯೆ
ಬೇಗದಿಂದಲಿ ಒಳಗ್ಹೋಗಿಯಾ ಕ್ಷಣದಿ
ನೀಳದ ಕಡಗೋಲ ತಾ ತಗೆತಂದು
ರಾಮನ ಕೈಯಲಿ ಕೊಡಲಾಕ್ಷಣದಿ ಪಿ॥
ನೋಡದಿ ವರಗಾಯ—ಒಡದನೆ ೪

ಫಲಗಳ ಒಡಮು ತಾ ಕೆಳಗಿಡಲಾಗ
ವಿನಯದಿಂದಲೆ ಪುರೋಹಿತರತಿ ಬೇಗ
ಧರಣಿಜೆ ಸೀತೆ ನೀ ಕೆರೆ ಬಾರೆನುತ
ನುಡಿಯಲಾಕ್ಷಣ ಕೌಸಲ್ಯೆಯು ಹರುಷದಿ ॥
ಕೆರೆಮಣೆಯ ತಂದು—ಕೊಡುವಳು ೫

ಕಾಲಲಂದುಗೆ ಗೆಜ್ಜೆ ಝಣ ಝಣರೆನುತ
ತೋಳ ಬಾಪುರಿ ಕಡಗ ಮೇಲೆ ರಾಜಿಸುತ.
ರಾಮನಾಣಯಲಿ ತಾನತಿ ಬೇಗದಿಂದಲಿ
ನೀಲದ ಮಣೆ ಮೇಲೆ ಕುಳಿತಾಕ್ಷಣದಿ ಪಿ ॥
ನೋಡದಿ ವರಗಾಯ—ಕೆರೆದಳೆ ೬

ಕೆರೆದಿದ್ದ ಸುಳಿಗಳ ಹರಿವಾಣದಲಿ
ಜನಕನ ತನುಜೆ ತಾನತಿ ಹರುಷದಲಿ
ಸಕ್ಕರೆ ಯೇಲಕ್ಕಿ ಪುಡಿಗಳ ಬೆರಸಿಯೆ
ಮತ್ತೆ ಅತ್ತೆಯರಿಗೆ ಜಾನಕಿ ಕೊಡಲಾಗ ॥
ಮಿಕ್ಕ ಸಭೆಗೆಲ್ಲ—ಕೊಡಿಸಿದ ೭

# ವಿವಾಹ ವಿನೋದದ ಶೋಭಾನೆಗಳು

## 142. ದೂರುವದು (ಹಳಿದಾಡುವದು)

(ಹೆಣ್ಣಿನ ಕಡೆಯುವರನ್ನು ಹಳಿಯುವದು—ಮದುವಳ್ತಿ ಕಪ್ಪು)

ಮದುವೆ ಮಂಟಪದಲ್ಲಿ ಮದುವಳಿತಿಯೆ ಕಪ್ಪು
ಮದುವಳ್ತಿ ತಾಯಿ ಮೊದಲೆ ಕಪ್ಪು
ಅವರ ವಂಶವೆ ಕಪ್ಪು ಮೂರು ಜಗಕ್ಕೆ ಸಾಕು
ಚೌಡಿಯ[1] ಕಪ್ಪು ಶೋಭಾನವೇ । ಕಪ್ಪಿನ ಶೋಭಾನವೇ ೧

ಧಾರೆ ಮಂಟಪದಲ್ಲಿ ಮದುವಳಿತಿಯೆ ಕಪ್ಪು
ಮದುವಳ್ತಿ ತಂದೆ ಮೊದಲೆ ಕಪ್ಪು
ಅವರ ವಂಶವೆ ಕಪ್ಪು ಮೂರು ಜಗಕ್ಕೆ ಸಾಕು
ಚೌಡಿಯ ಕಪ್ಪು ಶೋಭಾನವೇ । ಕಪ್ಪಿನ ಶೋಭಾನವೇ ೨

ಮುತ್ತಿನ ಮಂಟಪದಲ್ಲಿ ಮದುವಳಿತಿಯೆ ಕಪ್ಪು
ಮದುವಳ್ತಿ ಮಾವ ಮೊದಲೆ ಕಪ್ಪು
ಅವರ ವಂಶವೆ ಕಪ್ಪು ಮೂರು ಜಗಕ್ಕೆ ಸಾಕು
ಚೌಡಿಯ ಕಪ್ಪು ಶೋಭಾನವೇ । ಕಪ್ಪಿನ ಶೋಭಾನವೇ ೩

## 143. ಹೆಣ್ಣಿನ ಕಡೆಯುವರ ಅತ್ಯಾಶೆ

ಒಂದ್ನೇರು ಬೇಳೆ ತಂದರೆ ಸಾಕು ಅದರೊಳ
ಗಂಜಿಕೆ[2] ಮಾಡನಂತೆ
ಒಂದು ಪಾವು ಸಾರಿಗೆ ಒಂದು ಪಾವು ಹುಳಿಗೆ
ಮರುವಾರಿಗೆ ಮತ್ತಷ್ಟು ಮಿಗಿಸುವನಂತೆ
ಕಂಗೆಡಬೇಡಿ ಗಂಡಗೆ ಧೈರ್ಯವ ಹೇಳಿ
ಕಂಗೆಡಬೇಡಿ ಮಾವನ ಸತಿ ನಿನ್ನಿಂದ
ಹಿತವರು ಯಾರೆಮಗೆ
ತಂದಿದ್ದರೊಳಗಷ್ಟು ಮಿಗಿಸಿ ತೋರೆನುತಲಿ
ಮಾನಾಭಿಮಾನವ ಕಾಯೆಂದನು ೧

---

1. ಚೌಡಿ—ಕ್ಷುದ್ರದೇವತೆ; ಕರಿ ಕಾಳಿ. 2 ಅಂಜಿಕೆ—ಅತ್ಯಾಶೆ.

ಅಚ್ಚೇರು ಗೋಧಿ ತಂಧರೆ ಸಾಕು ಅದರೊಳ
ಗಂಜಿಕೆ ಮಾಡನಂತೆ
ಒಂದು ಪಾವು ಹೋಳಿಗ್ಗೆ ಒಂದು ಪಾವು ಪಾಯಸಕೆ
ಮರುವಾರಿಗೆ ಮತ್ತೊಂದು ಮಿಗಿಸಿದನಂತೆ
ಕಂಗೆಡಬೇಡಿ ಗಂಡಗೆ ಧೈರ್ಯವ ಹೇಳಿ
ಕಂಗೆಡಲೇಕೆ ಮಾವನ ಸತಿಯೆ ನಿನ್ನಿಂದ
ಹಿತವರು ಯಾರೆಮಗೆ
ತಂದಿದ್ದರೊಳಗಷ್ಟು ಮಿಗಿಸಿ ತೋರೆನುತಲಿ
ಮಾನಾಭಿಮಾನವ ಕಾಯೆಂದನು ೨

ಒಂದು ಸೇರು ಬೆಲ್ಲ ತಂದರೆ ಸಾಕು ಅದರೊಳ
ಗಂಜಿಕೆ ಮಾಡನಂತೆ
ಒಂದು ಪಾವು ಹೋಳಿಗ್ಗೆ ಒಂದು ಪಾವು ಪಾಯಸಕೆ
ಮರುವಾರಿಗೊಂದಷ್ಟು ಮಿಗಿಸಿದನಂತೆ
ಕಂಗೆಡಬೇಡಿ ಗಂಡಗೆ ಧೈರ್ಯವ ಹೇಳಿ
ಕಂಗೆಡಲೇಕೆ ಮಾವನ ಸತಿ ನಿನ್ನಿಂದ
ಹಿತವರು ಯಾರೆಮಗೆ
ತಂದಿದ್ದರೊಳಗಿಷ್ಟು ಮಿಗಿಸಿ ತೋರೆನುತಲಿ
ಮಾನಾಭಿಮಾನವ ಕಾಯೆಂದನು ೩

## 144. ನಾವಿದನೆಣಿಸಲಿಲ್ಲ

ನಾವಿದನೆಣಿಸಲಿಲ್ಲ । ಈ ತರಳೆಯ
ದೇವರೆ ಬರೆದನಲ್ಲ
ಈ ವಧುವನು ಕೂಡಿ ಯಾವ ಪರಿಯೊಳಿಮ್ಮ
ಕೋವಿದ ಬಾಲಕ ಜೀವಿಪನನುದಿನ ಪ

ಕಣ್ಣಗೆ ರೂಪವಿಲ್ಲ । ಮೈಯೊಳಗೆಲ್ಲ
ಹುಣ್ಣು ಹತ್ತಿರುವುದಲ್ಲ
ಸಣ್ಣವಳಲ್ಲಮ್ಮ ಚಿಣ್ಣಗೆ ಸರಿಯಲ್ಲ
ಬಣ್ಣಿಸಲೇನಿಂಥ ಹೆಣ್ಣು ದೊರಕಿತಲ್ಲ ೧

ಕೆಲಸವನರಿಯಳಂತೆ । ಹೇಳಿದ ಮಾತ
ತಿಳಿಯದಂತಿಹಳು ಮತ್ತೆ
ಅಲಸದೆ ನೆರೆಮನೆಗಳ ತಿರುಗಿಯೆ ದೊಡ್ಡ
ಕಲಹವನನುದಿನ ಗಳಿಸಿಕೊಂಬವಳಂತೆ ೨

ವರುಷವೆಂಟಾದ ಬಾಲೆ । ಸಣ್ಣವಳೆಂದೇ
ತೋರುವುದು ಶಾಸ್ತ್ರ ಮೇಲೆ
ವರುಷ ಚತುರ್ದಶ ಭರಿತವಾಯಿತು ಕಂಡ
ನರರೆಲ್ಲ ನಗುವಂಥ ಪರಿಯಾಯಿತೀ ದಿನ ೩

ವೇದಶಾಸ್ತ್ರಂಗಳನು । ಪುರಾಣದ
ಭೇದಾಭೇದಂಗಳನು
ಸಾಧು ಗುರುಗಳಿಂದ ಓದಿ ಕಲಿತು ಬಂದ
ಮೋದ ಕುಮಾರನಿಗೀ ವಿಧಿಯಾಯಿತು ೪

ಅತುಳ ಬಾಲಕನೀತನು । ನಮ್ಮಣುಗನು
ರತಿಪತಿ ಸಮರೂಪನು
ಕ್ಷಿತಿಯ ಜನರಿಗೆಲ್ಲ ರತುನವಾಯಿತಲ್ಲ
ಮಿತಿಯಿಲ್ಲದಂಗನೆ ಸತಿಯಾದಳೀ ದಿನ ೫

## 145. ಅಣ್ಣಯ್ಯನಿಗೆ ಏನೂ ಇಲ್ಲ

ಪಟ್ಟೆಯ ಹಚ್ಚಡವಿಲ್ಲ । ಅಣ್ಣಯ್ಯಗೆ
ಮುತ್ತಿನ ಉಂಗುರವೆಯಿಲ್ಲ
ಹತ್ತು ಸಾವಿರ ವರದಕ್ಷಿಣೆ ಕೊಡಲಿಲ್ಲ
ಮಗಳ ಮುಂದಕ್ಕೆ ತಂದು ಧಾರೆಯೆರೆದರಲ್ಲ ೧

ಚಿಂತೆಗಳೆಲ್ಲ ಬಿಟ್ಟಿತೋ । ಭಾವಯ್ಯಗೆ
ಸಂತೋಷ ಘನವಾಯಿತೋ
ಅಂಥಿಂಥ ಅಳಿಯನಲ್ಲ ಅರಗಿಣಿಯಂಥ ಅಳಿಯ
ಮಗಳ ಮುಂದಕ್ಕೆ ತಂದು ಧಾರೆಯನೆರೆದರು ೨

ಬಣ್ಣದ ಹಚ್ಚಡವಿಲ್ಲೆ । ಅಣ್ಣಯ್ಯಗೆ
ಚಿನ್ನದುಂಗುರವಿಲ್ಲೆ
ಮೂರು ಸಾವಿರ ವರದಕ್ಷಿಣೆ ಕೊಡಲಿಲ್ಲ
ಮಗಳ ಮುಂದಕ್ಕೆ ತಂದು ಧಾರೆಯನೆರೆದರು ೩

ಚಿಂತೆಗಳೆಲ್ಲ ಬಿಟ್ಟಿತೋ । ಮಾವಯ್ಯಗೆ
ಸಂತೋಷ ಘನವಾಯಿತೋ
ಅಂಥಿಂಥ ಅಳಿಯನಲ್ಲ ಧರ್ಮಾತ್ಮನಾಗಿರುವ
ಮಗಳ ಮುಂದಕ್ಕೆ ತಂದು ಧಾರೆಯನೆರೆದರು ೪

ಹೂವಿನ ಹಚ್ಚಡವಿಲ್ಲೆ । ನಮ್ಮಣ್ಣಗೆ
ಚಿನ್ನದುಂಗುರವಿಲ್ಲೆ
ಮೂರು ಸಾವಿರ ವರದಕ್ಷಿಣೆ ಕೊಡಲಿಲ್ಲ
ಮಗಳ ಮುಂದಕ್ಕೆ ತಂದು ಧಾರೆಯನೆರೆದರು ೫

ಅತ್ತೆಮ್ಮನ ಮನಸ್ಸಿಗೆ । ಸಂತೋಷ
ಮತ್ತೀಗ ಘನವಾಯಿತೆ
ಅಂಥಿಂಥ ಅಳಿಯನಲ್ಲ ವಿದ್ಯಾಸಮೇತವಿಹ
ಮಗಳ ಮುಂದಕ್ಕೆ ತಂದು ಧಾರೆಯನೆರೆದರು ೬

## 146. ಮಗಳ ತೆಕ್ಕಂಡ್ಹೋಗೆನ್ನುವರು ಮೊದಲಿಲ್ಲ

ಹತ್ತೆಂಟು ಪಾಪಾಸು ಹೊತ್ತಿಗೆ ಹರಿದವು
ಗುತ್ತಿಯ ರಾಜ್ಯ ತಿರುಗಾಡಿ—ಬಂದರು
ಮಗಳ ತೆಕ್ಕೊಂಡ್ಹೋಗೆನ್ನುವರು—ಮೊದಲಿಲ್ಲ ೧

ಆರೇಳು ಪಾಪಾಸು ಆಯಕ್ಕೆ ಹರಿದಾವು
ಗೋವೆಯ ರಾಜ್ಯ ತಿರುಗಾಡಿ—ಬಂದರೂ
ಮಗಳ ಕೊಡುವೆಂಬುವರು—ಮೊದಲಿಲ್ಲ ೨

ಒಂದೆರಡು ಪಾಪಾಸು ಚಂದಕ್ಕೆ ಹರಿದಾವು
ಹೊನ್ನೂರ ನಾಡ ತಿರುಗಾಡಿ ಬಂದರೂ
ಮಗಳ ತೆಕ್ಕೊಂಡ್ಹೋಗೆನ್ನುವರು ಮೊದಲಿಲ್ಲ ೩

## 147. ಬೋಳೆತ್ತಿನ ಮೇಲೆ (ಹೆಣ್ಣಿನವರ ಉತ್ತರ)

ಹತ್ತು ಮಂದಿ ಬಂದರು ಮುತ್ತಿನಂತಹರಿಲ್ಲ
ಶಕ್ತಿಯಲಿ ಎಂಥ ಮುದುಕರೊ—ನಮ್ಮನೆಯ
ಮೆಟ್ಟಿತ್ತಲಾರ—ಇಳಿಲಾರ ೧

ಆನೆ ಬರುತಾವೆಂತ ಆರು ಗೋಣವೆ ಕೊಂಡೆ
ಆನೆಲ್ಲಿ ನಿಮ್ಮ ದಳವೆಲ್ಲಿ—ಬೀಯಗರು
ಬೋಳೆತ್ತಿನ ಮೇಲೆ—ಬರುತಾರೆ ೨

ಒಂಟೆ ಬರುತಾವೆಂತ ಎಂಟು ಗೋಣವೆ ಕೊಂಡೆ
ಒಂಟೆಲ್ಲಿ ನಿಮ್ಮ ದಳವೆಲ್ಲಿ—ಬೀಯುಗರು
ಕುಂಟುಕತ್ತೆ ಮೇಲೆ—ಬರುತಾರೆ ೩

ಎಲ್ಲಿ ಕಟ್ಯಾರೋ ಮಲ್ಲಿಗ್ಹೂವಿನ ದಂಡೆ
ಬೀಗತಿ ಕಟ್ಯಾಳು ಹುಲ್ಲ ಪಿಂಡಿ—ಅವರಣ್ಣ
ಎತ್ತಿಗಿಲ್ಲೆಂದು—ಎಳೆದೊಗೆದ ೪

ಒಬ್ಬರ ಸೀರೆಯ ಇಬ್ಬರುಟ್ಟುಕೊಂಡರು
ಗುದ್ದಾಡುತಾರೆ ಅಗಸನು—ಬೀಗರಿಗೆ
ಇದ್ದಿಲ್ಲವೇನೋ—ಮನೆಯಲಿ ೫

ಬೀಗತಿಯೊಳ್ಳೆಯಳೆಂತ ಅಡಿಗೆಮನೆಯ ಕೊಟ್ಟೆ
ಹೋಳಿಗೆಗಳನು ಬಗಲಲಿ—ಇಟ್ಕೊಂಡು
ಹೇಳದೆ ಹೋದವಳೆ—ಅವಳ ಮನೆಗೆ[1] ೬

## 148. ಒಡವೆಗೆ ಭ್ರಮಿಸಿಲ್ಲ

ಒಡವೆಗೆ ನಾವ್ ಭ್ರಮಿಸಿಲ್ಲ। ನಿಮ್ಮ
ಹುಡುಗನ ರೂಪಕೆ ಮರುಳಾಗಲಿಲ್ಲ
ಕೊಡಬೇಕೆನುತ ಭಾಷೆಯನಿತ್ತುದಕೀಗ ॥
ನುಡಿಗೆ ತಪ್ಪದೆ ಕೊಡುವದ್ಹೊರತು
ಹುಡುಗಿಯನ್ನೀಗಲೆಯೆ ನಾವು ೧

1 ಹೇಳದೆಯೆ ಹೋದಳರವುನೆಗೆ

ಛತ್ರ ಚಾಮರ ಪತಾಕೆಗಳು । ಬೆಳ್ಳಿ
ವಸ್ತು ತಂಬಿಗೆ ಥಾಲಿಗಳು
ಸುತ್ತ ಮಾಳಿಗೆ ಚೌಕಿಗೆ ಮರುಳಾಗದೆ ॥
ಪುತ್ರನಾ ವಿದ್ಯಕ್ಕು ಹಿರಿಯರ
ಅತ್ತೆ ಮಾವನ ಚೆಲ್ವ ಗುಣಕೂ ೨

ದೈವಸಂಕಲ್ಪಗಳನ್ನು । ಮೀರಲು
ದೇವಾದಿಗಳಿಗಸಾಧ್ಯ
ಯುವತಿಮಣಿಗೆ ವಯಸ್ಸಾಗದು ಪಳಿನ್ನು ॥
ಯುವತಿಯರೆ ನೀವ್ ಕೇಳಿದುದಕೆ
ಕುವರಿಯನು ಕೊಡುತಿಹೆವು ಪೊರತು ೩

ಮಮತೆಯೊಳ್ ಸಾಕಿ ನಾವೀಗ । ತಕ್ಕ
ರಮಣಗಲ್ಲದೆ ಕೊಡಬೇಕಿಲ್ಲ
ತಮತಮಗಿಂತ ದೊಡ್ಡೋರವನೀಶರು ॥
ಕಮಲನಾಭನ ಮಾತಿಗಾಗಿಯೆ
ಭ್ರಮರ ಕುಂತಳೆ ಕೊಡಬೇಕಲ್ಲದೆ ೪

ಹಸ್ತಿನಾವತಿ ಬಹುದೂರ । ನಮ್ಮ
ಪುತ್ರಿಯಿತ್ತೆವು ಕೇಳ್ಳೆ ಅವಳ
ಪೆತ್ತತಾಯಿಯ ಮುಖ ನೋಡಲು ಸಿಕ್ಕದೆಂದು ॥
ಅತ್ತು ಸಾವೆವು ನಾವು ಪ್ರತಿದಿನ
ಉತ್ತರೆಯ ಕೊಡಲೆಂತು ಮನದಲಿ ೫

## 149. ಏತಕೆ ದೂರುವಿರಿ

ಏತಕೆ ದೂರುವಿರಿ । ನಾರಿಯರೆಲ್ಲ
ಏತಕೆ ದೂರುವಿರಿ ಪ

ಏತಕೆ ದೂರುವಿರೀ ಶುಭ ಸಮಯದಿ
ಘಾತಿನಿಂ ಘನೆಯನು ಕಟ್ಟುತಲಿರುವಿರಿ ಅ ಪ

ಚಿನ್ನದ ಹರಿವಣದಿ । ಉತ್ತಮವಾದ
ಹಣ್ಣನಿಟ್ಟಿವು ಬೇಗದಿ
ಕಣ್ಣುಮುಚ್ಚಿ ಕುಳಿತಂತೆ ತೋರುವದೆಮ
ಗಿನ್ನಾದರು ಕಣ್ತೆರೆದು ನೋಡಿರಿ ಇತ್ತ ೧

ಕಿತ್ತಳೆ ದಾಳಿಂಬವು । ಖರ್ಜೂರವ
ನಿತ್ತೆವು ಬಟ್ಟಲೊಳು
ಅತ್ತಿತ್ತ ನೋಡುತ್ತ ಕುಳಿತಿರಿಯೇತಕ್ಕೆ
ಚಿತ್ತವೀ ಕಡೆಯೊಳು ಹರಿಸಿರಿ ನೀವೆಲ್ಲ ೨

ಮೂಸಂಬಿ ರಸವನೆಲ್ಲ । ಉತ್ತಮವಾದ
ಗ್ಲಾಸಿನೊಳಿತ್ತೆವಲ್ಲ
ಆಸರನೆಲ್ಲ ಹೋಗಾಡಿಸಿ ನಿಮಗಾದಾ
ಯಾಸವ ಹಿಂಗಿಸಿಕೊಳದೆ ನಮ್ಮನು ನೀವು ೩

ತರತರ ಪುಷ್ಪವನು । ಸೇವಂತಿಗೆ
ಸುರಗಿಯ ದಂಡೆಯನು
ತರುಣಿಯರೆಲ್ಲರು ಮುಡಿದುಕೊಳ್ಳಲಿಯೆಂದು
ಇರಿಸಿರುವದ ನೀವರಿಯದೆ ಈ ಪರಿ ೪

ಮುಂದಿಟ್ಟಿಹುದ ನೋಡದೆ । ಮನಸ್ಸಿನೊಳು
ಬಂದದ್ದೆಲ್ಲವ ಹೇಳ್ವುದೆ
ಇಂದೀ ಸಂತೋಷದ ಕಾಲದೊಳಗೆ ಇಂಥ
ಮಂದಮತಿಗಳಿಂದ ನುಡಿವುದು ಸರಿಯಲ್ಲ ೫

# ಗೃಹಿಣಿಯ ದಿನಚರಿ

## 150. ಹೂ ಕೊಯ್ಯುವುದು

ಶ್ರೀಮಹಾಗಣಪತಿಯ ಚರಣಕ್ಕೆ ವಂದಿಸಿ
ಸ್ವಾಮಿ ಶ್ರೀಹರಿಯ ಅನುಜಾತೆ—ಸೌಭದ್ರೆ
ಪುಷ್ಪವ ಕೊಯ್ದ ಚರಿತೆಯ—ಪೇಳುವೆ
ಕೇಳಿ ಸಜ್ಜನರು—ಕಿವಿಗೊಟ್ಟು ೧

ತಂಗಿ ಸೌಭದ್ರೆಯು ಅರುಣೋದಯದೊಳೆದ್ದು
ಗಂಗೆ ಯಮುನೆಯಲಿ ಮುಖ ತೊಳೆದು—ಕಸ್ತೂರಿ
ಬೊಟ್ಟನೆ ಇಟ್ಟಳನುಜಾತೆ ೨

ಹೊತ್ತಾರೆ ಮುನ್ನೆದ್ದು ಉತ್ತಮ ಗಂಗೆಗೆ ಹೋಗಿ
ಅರ್ಥಿಯಲಿ ನಿನ್ನ ಮುಖ ತೊಳೆದು—ಹರನಿಗೆ
ವಂದಿಸಿ ಬಾರೆಂದೆ—ನುಡಿದನೆ ೩

ಉದಯದ ಮುನ್ನೆದ್ದು ಒಳ್ಳೆಯ ಜಲಧಿಯಲಿ
ಪೋಗಿ ಮುಖ ತೊಳೆದು ಶಿವನಿಗೆ—ಬೇಗನೆ
ವಂದಿಸಿ ಬಾರೆಂದೆ—ನುಡಿದನೆ ೪

ತಂಗಿ ಸೌಭದ್ರೆಗೆ ಹೇಳಿದನಗ್ರಜ
ನಿತ್ಯದಲಿ ಹೋಗಿ ಪರಿಮಳ—ಕುಸುಮವ
ಕೊಯ್ದು ಬಾರೆಂದು—ನುಡಿದನೆ ೫

ಆಡಿದುದನು ಕೇಳಿ ತಂಗಿ ಸೌಭದ್ರೆಯು
ಸುತ್ತಣ ಕೇರಿಗಳ ತೆರಬಿಟ್ಟು—ಬೇಗನೆ
ನಡೆದಳೆ ಪುಷ್ಪವನಕಾಗಿ ೬

ಸುತ್ತಲು ಸುರಗಿಯು ಸುರಪಾರಿಜಾತವು
ಪರಿಮಳಿಸುತಿಹ ಸುರಹೊನ್ನೆಗಳನೆಲ್ಲ
ಕೊಯ್ದಳೆ ಪೂಜೆಗನುವಾಗಿ ೭

ಕೆಂಡ ಸಂಪಗೆ ಜಾಜಿ ಮಲ್ಲಿಗೆ ಮಂದಾರ
ಪರಿಮಳ ಕೇದಗೆಯ ಸಹಿತಲೆ—ಸೌಭದ್ರೆ
ಕೊಯ್ದಳೆ ಪೂಜೆಗನುವಾಗಿ ೮

ದುಂಡು ಮಲ್ಲಿಗೆ ಮುಗುಳು ಸಂಜೆ ಮಲ್ಲಿಗೆ ಹೂವು
ಪರಿಮಳ ಮಲ್ಲಿಗೆಯ ಸಹಿತಲೆ—ಸೌಭದ್ರೆ
ಕೊಯ್ದಳೆ ಪೂಜೆಗನುವಾಗಿ ೯

## 151. ಮಹಾಲಕ್ಷ್ಮಿಯ ಮನೆವಾರ್ತೆ

ಗಜಮುಖ ಗಣಪನ ವಿನಯದಿ ಬಲಗೊಂಡು
ನೆಲಗಡಲೆ ಕಬ್ಬು ಕದಳಿಯ—ತಂಬಿಟ್ಟು
ನೈವೇದ್ಯಕಿಟ್ಟು—ನಮೋ ಎಂಬೆ ೧

ಹಸ್ತಕಡಗದ ಮಿತ್ರೆಯು ಮಾಲಕ್ಷ್ಮಿ
ಒತ್ತುಂಗುರ ಗಮ್ಮಗೈಲೆಂದು—ಮಾಲಕ್ಷ್ಮಿ
ಚಿತ್ತದಿ ಹರಿಯ—ನೆನೆದಳು ೨

ಕೀಲು ಕಡಗದಮ್ಮ ಸಾರಿ ಮಾಲಕ್ಷ್ಮಿಯು
ಕಾಲುಂಗುರ ಗಮ್ಮಗೈಲೆಂದು—ಮಾಲಕ್ಷ್ಮಿ
ಲೋಲ ಶ್ರೀಹರಿಯ—ನೆನೆದಳು ೩

ಹಾಸಿನಿಂದೇಳುತ್ತ ಕೇಶವ ಕುಡುಗುತ್ತ
ಸಾಸಿರ ಮಲ್ಲಿಗೆಯ ಮುಡಿಯುತ್ತ—ಮಾಲಕ್ಷ್ಮಿ
ಪತಿಯ ಪಾದಕ್ಕೆ—ನಮೋ ಎಂದ ೪

ಮಂಚದಿಂದಿಳಿಯುತ್ತ ಮುಡಿಯನೆ ಕಟ್ಟುತ್ತ
ದುಂಡುಮಲ್ಲಿಗೆಯ ಮುಡಿಯುತ್ತ—ಮಾಲಕ್ಷ್ಮಿ
ಕೋಣೆಯ ಕದವ—ತೆಗೆದಳು ೫

ಹೊಸ್ತಿಲೊಳಿರುವಳು ಪ್ರತ್ಯಕ್ಷ ದೇವತೆ
ನೆನೆದವರಿಗೆ ವರವ ಕೊಡುವಳು—ಮಾಲಕ್ಷ್ಮಿ
ಹೊಸ್ತಿಲ ಕದವ—ತೆಗೆದಳು ೬

ಬಾಗಿಲೊಳಿರುವಳು ಭಾಗ್ಯದ ದೇವತೆ
ಬೇಡಿದ ವರವ ಕೊಡುವಳು—ಮಾಲಕ್ಷ್ಮಿ
ಬಾಗಿಲ ಕದವ—ತೆಗೆದಳು ೭

ಸುತ್ತಣ ಕದ ತೆಗೆದು ಮಿತ್ರೆ ಮಾಲಕ್ಷ್ಮಿಯು
ಸೂರ್ಯದೇವರಿಗೆ ನಮೋ ಎಂದು—ಕೈಮುಗಿದು
ಕೊಟ್ಟಿಗೆಯ ಕದವ—ತೆಗೆದಳು ೮

ಕೊಟ್ಟಿಗೆ ಕದತೆಗೆದು ಗೋವಿಗೆ ಹುಲ್ಲನೆ ಹಾಕಿ
ಗೋವಿನ ಶ್ರೀಪಾದಕ್ಕೆರಗಿದ—ನಮೋ ಎಂದು
ಹೋದಳೆ ಹರಿವ—ಜಲಧಿಗೆ ೯

ಕಾಲು ಕೈಗಳ ತೊಳೆದು ಮೋರೆ ಮುಖವ ತೊಳೆದು
ಅರಸಿನವನುದ್ದಿ ಹಣಗ್ಹಚ್ಚಿ—ಮಾಲಕ್ಷ್ಮಿ
ಬಂದು ದೇವರಿಗೆ—ನಮೋ ಎಂದ ೧೦

ಉಪ್ಪರಿಗೆಯೊಳಕ ಹೋದಳೆ ಮಾಲಕ್ಷ್ಮಿ
ಮುತ್ತಿನ ಸಿಬ್ಬಲವ ತೆಗೆದಳು—ಕೈಲ್ಹಿಡಿದು
ಪುಷ್ಪ ಕೊಯ್ಯಲಿಕೆ—ಹೊರಟಳು ೧೧

ಮಾಳಿಗೆ ಒಳವಿಕೆ ಹೋದಳೆ ಮಾಲಕ್ಷ್ಮಿ
ಹೂವಿನ ಸಿಬ್ಬಲವ ತೆಗೆದಳು—ಕೈಲ್ಹಿಡಿದು
ಹೂವ ಕೊಯ್ಯಲಿಕೆ—ಅನುವಾದ ೧೨

ಜಯವಿಷ್ಣು ಜಯ ಕೃಷ್ಣ ಜಯ ಮಧುಸೂದನ
ಜಯ ಜಯ ಮೂರ್ತಿ ಶರಣೆಂದು—ಮಾಲಕ್ಷ್ಮಿ
ಹೂವ ಕೊಯ್ಯಲಿಕೆ—ಹೊರಟಳು ೧೩

ಕಟ್ಟಿಸಿದರಮನೆಯ ಕೆತ್ತಿಸಿದ ನವರತ್ನ
ಸುತ್ತ ಚೆಲುವಾದ ಕದಗಳ—ಮಾಲಕ್ಷ್ಮಿ
ಸಂತೋಷದಿಂದ—ತೆಗೆದಳು ೧೪

ನೆಲವೆಲ್ಲ ಚಿತ್ರವು ಮಳಲೆಲ್ಲ ಮಾಣಿಕ್ಯ
ಸ್ಥಿತಿಯೆಲ್ಲ ಚಿತ್ರ ವಿಚಿತ್ರವು—ವನದಲ್ಲಿ
ತರತರದ ಹೂವ—ಕೊಯ್ದಳು ೧೫

ಹೂವನ್ನು ಕೊಯ್ದಳು ಹರನೆನ್ನು ನೆನೆದಳು
ವಾಸುದೇವನನು ಮನದಲ್ಲಿ—ನೆನೆಯುತ್ತ
ಚಂದನದ ಕದವ—ತೆಗೆದಳು ೧೬

ಕೃಷ್ಣ ಶ್ರೀಕೃಷ್ಣನೆ ಕೃಷ್ಣ ಗೋವಿಂದನೆ
ಕೃಷ್ಣನ ನಾಮ ನೆನೆಯುತ್ತ—ಮಾಲಕ್ಷ್ಮಿ
ಬಂದು ದೇವರಿಗೆ ನಮೋ ಎಂದು—ಕೈಮುಗಿದು
ಮನೆವಾರ್ತೆ ಮಾಡಲಿಕೆ—ನಡೆದಳು ೧೭

ಕಂಚು ತಾಂಬಾಣವು ಮಿಂಚಿನ ಹರಿವಾಣ
ಸಂಕಲ್ಪಕ್ಕೊಂದು ಹರಿವಾಣ—ಮಾಲಕ್ಷ್ಮಿ
ಸಂತೋಷದಿಂದ—ಬೆಳಗಿದ ೧೮

ನೀಡಿ ತಾಂಬೂಲವ ಸುವರ್ಣದ ಹರಿವಾಣ
ಅಭಿಷೇಕಕ್ಕೊಂದು ಹರಿವಾಣ—ಮಾಲಕ್ಷ್ಮಿ
ಸಂತೋಷದಿಂದ—ಬೆಳಗಿದ ೧೯

ತೊಳೆದುಪಕರಣವ ಇಟ್ಟು ದೇವರ ಮುಂದೆ
ಬೆಳಗಿ ದೀಪವನು ಚೆಲ್ವಾಗಿ—ಮಾಲಕ್ಷ್ಮಿ
ಮನೆವಾರ್ತೆ ಮಾಡಲಿಕೆ—ನಡೆದಳು ೨೦

ಪಶುವು ಪಳದ ಮುನ್ನ ಬಿಸಿಯ ಗೋಮಯ ತಂದು
ಹೊಸಿಲವನುದ್ದಿ ಬಳಿದಳು—ಮಾಲಕ್ಷ್ಮಿ
ಸೇಡಿಯ ತಂದು—ಬರೆದಳು ೨೧

ಗೋವು ಏಳದ ಮುನ್ನ ಬಿಸಿಯ ಗೋಮಯ ತಂದು
ಬಾಗಿಲವನುದ್ದಿ ಬಳಿದಳು—ಮಾಲಕ್ಷ್ಮಿ
ಸೇಡಿಯ ತಂದು—ಬಳಿದಳು ೨೨

ಕಸ ಹೊಡೆದು ಜಗಲಿಯ ಹೊಸತಾಗಿ ಸಾರಿಸಿ
ಹೊಸ ಹೂವ ಕೊಯ್ದು ಪೂಜೆಗೆ—ಮಾಲಕ್ಷ್ಮಿ
ಹೊಸ ನೀರು ತಂದು—ಮಡುಗಿದ ೨೩

ಪಶುವು ಪಳದ ಮುನ್ನ ಹೊಸ ಗೋಮಯುವ ತಂದು
ಎಸೆವ ದೇವಾರ ಜಗುಲಿಯ—ಸಾರಿಸಿ
ಅಷ್ಟದಳಗಳನೆ—ಬರೆದಳು ೨೪

ಶ್ರೀಕೃಷ್ಣ ತುಳಸಿಯ ಕಟ್ಟೆಯ ಸಾರಿಸಿ
ಸುತ್ತ ರಂಗವಲಿ ರಚಿಸಿದ—ಮಾಲಕ್ಷ್ಮಿ
ಸಂತೋಷದಿಂದ—ಇರುತಿದ್ದ ೨೫

ರಂಗ ಶ್ರೀತುಳಸಿಯ ಜಗಲಿಯ ಸಾರಿಸಿ
ಶಂಖಚಕ್ರಗಳ ಗದಾಪದ್ಮಗಳನ್ನು
ಸಂತೋಷದಿಂದ—ಬರೆದಳು ೨೬

ಆಕಳ ಕರೆವಾಗ ಕೃಷ್ಣನ ಮನದೊಳು
ಆಕಳ ಕರೆವ ನೊರೆಹಾಲು—ಗೈವಾಗ
ನಾರಾಯಣ ನಾಮ—ಸ್ತುತಿಸಿದ ೨೭

ಎಮ್ಮೆಯ ಕರೆವಾಗ ಹರಿಯನು ನೆನೆದಳು
ಎಮ್ಮೆಯ ಕರೆದ ನೊರೆಹಾಲು—ಗೈವಾಗ
ಶ್ರೀಧರನ ನಾಮ—ಸ್ತುತಿಸಿದ ೨೮

ಮಕ್ಕಳ ಊಟಕ್ಕೆ ಸಣ್ಣಕ್ಕಿ ಅನ್ನವು
ಮತ್ತೆ ಕೆನೆಮೊಸರ ಹದಮಾಡಿ—ತಾರೆಂದು
ಮಕ್ಕಳೂಟವನೆ—ಮುಗಿಸಿದ ೨೯

ಮಕ್ಕಳೂಟವ ಮಾಡಿ ಎಂಜಲು ಕಸತೆಗೆದು
ಎಂಜಲ ತೆಗೆದು ಮಯವುದ್ದಿ—ಮಾಲಕ್ಷ್ಮಿ
ಆಡುವಂಗಳಕೆ ಕಳುಹಿದ ೩೦

ಕೃಷ್ಣನ ಪಂಕ್ತಿಗೆ ತರತರದ ಭಕ್ಷ್ಯವ
ಮತ್ತೆ ನೊರೆಹಾಲ ಹದಮಾಡಿ—ತಾರೆಂದು
ಕೃಷ್ಣನ ಪಂಕ್ತಿ—ಮುಗಿಸಿದ ೩೧

ತಮ್ಮ ಹಂತಿಗಳಿಗೆ ಹೋಳಿಗೆ ಅಂಬೊಡೆ
ಮತ್ತೆ ಹಾಲ್ಕೀರ ಹದಮಾಡಿ—ತಾರೆಂದು
ತಮ್ಮ ಹಂತಿಯನೆ—ಮುಗಿಸಿದ ೩೨

ಎಂಜಲು ಕಸತೆಗೆದು ಮಿಂದು ಮಡಿಯನುಟ್ಟು
ಅರಿಸಿನವನ್ನೆ ಹಣೆಗುದ್ದಿ—ಮಾಲಕ್ಷ್ಮಿ
ಬಂದು ದೇವರಿಗೆ—ನಮೋ ಎಂಧ ೩೩

ಹಸಿರು ಮಡಿಯನುಟ್ಟು ಮಿಸುನಿ ರವಕೆ ತೊಟ್ಟು
ಕುಸುಮನಾಭನನು ಮನದಲ್ಲಿ—ನೆನೆಯುತ್ತ
ನಸುನಗುತ ಮೊಸರ—ಕಡೆದಳು ೩೪

ಬಾಚಿ ಮಂಡೆಯ ಕಟ್ಟಿ ಜಾಜಿ ಮಲ್ಲಿಗೆ ಮುಡಿದು
ನಾರಾಯಣ ನಾಮ ನೆನೆಯುತ್ತ—ಮಾಲಕ್ಷ್ಮಿ
ಅಕ್ಷರದೊಳಗೆ—ನೆಲಸಿದ ೩೫

ಹೇಳಿದನು ಮಕ್ಕಳಿಗೆ ಆಡಲಿಕೆ ಸುಖವಕ್ಕು
ಬುದ್ಧಿಗೆ ಶಾಂತಿ ನಿಜವಕ್ಕು—ಎನಗೊಂದು
ಕೃಷ್ಣರೋಲಗವೆ—ನಿಜವಕ್ಕು ೩೬

ಈ ಹಾಡ ಹೇಳ್ದವರು ಈ ಹಾಡ ಕೇಳ್ದವರು
ಈ ಹಾಡಿನರ್ಥ ತಿಳಿದರ—ಮನದೊಳು
ಮಾಲಕ್ಷ್ಮಿ ಬಂದು—ನೆಲಸುಗು ೩೭

## 152. ಅಡಿಗೆ ಮಾಡಿದ್ದು (ದ್ರೌಪದಿ)

ಪಾಕವ ರಚಿಸಿದಳು । ಪಾಂಚಾಲೆಯು
ಪಾಂಡವರೈವರಿಗೆ
ಸುರರು ಭೂಸುರರೆಲ್ಲ ಉಂಡು ದಣಿಯುವಂತೆ
ಪುಂಡರೀಕಾಕ್ಷನ ತಂಗಿ ದ್ರೌಪದಿಯು ಪ

ಮಿಂದು ಮಡಿಯನುವುಟ್ಟು । ದ್ರೌಪದಿ ದೇವಿ
ಅರಿಸಿನ ಕುಂಕುಮವನಿಟ್ಟು
ಹರುಷದಿ ಪೀತಾಂಬರವನು ನೆರಿದುಟ್ಟು
ಸರಸಿಜನಾಭನ ಮನದಿ ಕೊಂಡಾಡುತ್ತ ೧

ಮುತ್ತಿನ ಕೊಡದೊಳಗೆ । ಗಂಗೆಯ ತಂದು
ಎಸರಿಟ್ಟು ಬೇಗದಲಿ
ಕುಸುಮಾಕ್ಷಿ ದ್ರೌಪದಿ ಅಷ್ಟಗಂಧವ ತೇದು
ಕುಸುಮನಾಭನನು ಮನದಿ ಧ್ಯಾನಿಸುತ ೨

ಹೀರೆ ಹಾಗಲ ಕಾಯ್ಗಳ । ದ್ರೌಪದಿ ದೇವಿ
ತುಂಡುತುಂಡು ಮಾಡುತ
ಸಾಂಬಾರವನು ಬೆರಸಿ ಪಾಂಚಾಲೆ ದ್ರೌಪದಿ
ಮಂದರೋದ್ಧಾರನ ಮನದಿ ಕೊಂಡಾಡುತ ೩

ತೊಂಡ ಬೆಂಡೆ ಕಾಯಿಯ । ದ್ರೌಪದಿ ದೇವಿ
ಹೋಳು ಹೋಳನೆ ಮಾಡುತ
ಇಂಗು ಉಪ್ಪು ಸಾಂಬಾರವ ಬೆರಸಿಯೆ
ಶೇಷ ಶಯನನ ಮನದಿ ಕೊಂಡಾಡುತ ೪

ಎಸರಿಗಕ್ಕಿಯ ಸುರುವಿ । ಪಾಂಚಾಲೆಯು
ಎಸೆದಳೆ ಸಟ್ಟುಗದಿ
ಕುಸುಮನಾಭನ ತನ್ನ ಮನದಲ್ಲಿ ಧ್ಯಾನಿಸಿ
ಈಗ ಪಾಂಡವರಿಗೆ ಲೇಸಾದಡಿಗೆಯು ೫

ಉರಿವ ಅಗ್ನಿಯ ಒಳಗೆ । ತುಪ್ಪದ ಕೊಡ
ಇರಿಸಿದಳೆ ಪಾಂಚಾಲೆ
ಹಪ್ಪಳ ಸೆಂಡಗೆ ಸುಟ್ಟವುಗಳ ಕರಿದು
ಮತ್ತೆ ಪಾಂಡವರಿಗೆ ಲೇಸಾದಡಿಗೆಯು ೬

ಮಾವಿನ ಹಣ್ಣುಗಳ । ಪಾಂಚಾಲೆಯು
ಪಾಕವ ಮಾಡಿದಳೆ
ಏಲಕ್ಕಿ ಲವಂಗ ಬೆರಸಿ ಪಾಂಚಾಲೆಯು
ಈಗ ಪಾಂಡವರಿಗೆ ಲೇಸಾದಡಿಗೆಯು ೭

## 153. ಹೋಳಿಗೆ ಮಾಡಿದ್ದು

ಮುತ್ತಿನ ಮುಡಿಯ ರುಕ್ಮಿಣಿ ಕೇಳ್ದಳು
ತುಪ್ಪ ಹೋಳಿಗೆಯ ಸುಡುವುದಕೆ—ಕಾವಲಿಯ
ಎಲ್ಲಿಂದ ತರಲಿ—ಹೇಳೆಂದು ೧

ಹೂವಿನ ಮುಡಿಯ ರುಕ್ಮಿಣಿ ಕೇಳ್ದಳು
ಹಾಲು ಹೋಳಿಗೆಯ ಸುಡುವುದಕೆ—ಕಾವಲಿಯ
ಎಲ್ಲಿಂದ ತರಲಿ—ಹೇಳೆಂದು ೨

ಮಿತ್ರೆ ಕೇಳೆ ರುಕ್ಮಿಣಿ ತುಪ್ಪಹೋಳಿಗೆ ಸುಡಲು
ಸತ್ಯಭಾಮೆಯಳ ಮನೆಯಿಂದ—ತಂದಾದ್ರು
ಮಾಡು ಹೋಳಿಗೆಯ—ನೀನೆಂದ ೩

ನಾರಿಯೆ ಕೇಳಲೆ ರುಕ್ಮಿಣಿಯೇ ನೀನು
ಹಾಲು ಹೋಳಿಗೆಯ ಸುಡುವುದಕೆ—ಸವತಿಯ
ಮನೆಯಿಂದ ತಂದು—ಮಾಡೆಂದ ೪

ಗುಡುಗುಡುಗುಟ್ಟುತ್ತ ಮುಡಿಯನಲ್ಲಾಡುತ್ತ
ಎಡವಿದ ಬೆಟ್ಟನ್ನರಿಯದೆ—ರುಕ್ಮಿಣಿ
ಸತ್ಯಭಾಮೆ ಮನೆಗೆ—ನಡದಳು ೫

ಎಂದೂ ಬಾರದ ಅಕ್ಕ ಇಂದೇನು ಬಂದೆಯೊ
ಇಂದು ನೀ ಬಂದೆ ಅಪರೂಪ—ಎಂದ್ಹೇಳಿ
ಸತ್ಯಭಾಮೆ ನಗುತ—ನುಡಿದಳು ೬

ಮುಂಜಿಯೊ ಮದುವೆಯೊ ಕಂದನ ಚೌಳಂಗಿಯೊ
ಮಿತ್ರೆ ಋತುವಾದ ಒಸಗೆಯೊ—ಎಂದ್ಹೇಳಿ
ಸತ್ಯಭಾಮೆ ನಗುತ—ನುಡಿದಳು ೭

ಸತ್ಯಭಾಮೆಯೆ ಕೇಳು ಭಕ್ತವತ್ಸಲನಿಗೆ
ತುಪ್ಪ ಹೋಳಿಗೆಯ ಸುಡುವಲೆ—ಸತ್ಯಭಾಮೆ
ನೀನು ಕಾವಲಿಯ—ಕೊಡಬೇಕು ೮

ಕಾವಲಿ ಕೊಟ್ಟರೆ ಗಾರುಮಾಡುವಿರವ್ವ
ನಾನು ಕಾವಲಿಯ ಕೊಡಲೊಲ್ಲೆ—ಎಂದ್ಹೇಳಿ
ಸತ್ಯಭಾಮೆ ನಗುತ—ನುಡಿದಳು ೯

ಎಣ್ಣೆಯನುದ್ದುವೆ ಬೆಣ್ಣೆಯನುದ್ದುವೆ
ಸಣ್ಣ ಬೆಂಕಿಯಲಿ ಇರಿಸುವೆ—ಎಂದ್ಹೇಳಿ
ರುಕ್ಮಿಣಿ ನಗುತ—ನುಡಿದಳು ೧೦

ಎಣ್ಣೆ ಹಚ್ಚಿರು ಕೂಡ ಬೆಣ್ಣೆಯುದ್ದಿರು ಕೂಡ
ಸಣ್ಣ ಬೆಂಕಿಯಲಿ ಇರಿಸಿದ್ರು—ಕೊಡೆನೆಂದು
ಸತ್ಯಭಾಮೆ ಗಜರಿ—ನುಡಿದಳು ೧೧

ಸಿಟಿ ಸಿಟಿಗುಟ್ಟುತ್ತ ಮುಡಿಯಸಲ್ಲಾಡುತ್ತ
ಎಡವಿದ ಬೆಟ್ಟ ಸರಿಯದೆ—ರುಕ್ಮಿಣಿ
ಬಂದಳೆ ತನ್ನ—ಮನೆಗಂದು ೧೨

ಸತ್ಯಭಾಮೆ ಮನೆಗೆ ಹೋದೆನು ನಾನೀಗ
ಸತ್ಯಭಾಮೆ ಕಾವಲಿಯ ಕೊಡಲಿಲ್ಲ—ಎಂದ್ಹೇಳಿ
ಮಿತ್ರೆ ರುಕ್ಮಿಣಿಯು—ನುಡಿದಳು ೧೩

ಎಪ್ಪತ್ತು ಹಣ ಕೊಟ್ಟು ಗುತ್ತಿಗೆ ಕಳುಹಿದ
ಗುತ್ತಿ ಕಾವಲಿಯು ಬರಲೆಂದು—ಶ್ರೀಕೃಷ್ಣ
ಗುತ್ತಿಗೆ ಒಲೆ—ಕಳುಹಿದ ೧೪

ಗುತ್ತಿಂದ ಕಾವಲಿ ಬಂದು ಹೊಸ್ತಿಲೊಳಿಳುಹಿದ
ಕೃಷ್ಣ ತಾ ಹೋಗಿ ಬೆಲೆ ಮಾಡಿ—ತಂದನು
ತುಪ್ಪ ಹೋಳಿಗೆಯು—ಸುಡುವ್ಹೋಲೆ ೧೫

ಅಕ್ಕಗಳೆ ಅಪ್ಪಗಳೆ ಹೋಳಿಗೆ ಸಣ್ಣಕೆ ಮಾಡಿ
ಖರ್ಚು ಬಹು ನಮ್ಮ ಮನೆಯಲ್ಲಿ—ಎಂದ್ಹೇಳಿ
ರುಕ್ಮಿಣಿ ನಗುತ—ನುಡಿದಳು ೧೬

ತಾಯ್ಗಳಿರ ತಂಗಿಗಳಿರ ಹೋಳಿಗೆ ದೊಡ್ಡಕೆ ಮಾಡಿ
ಖರ್ಚಾದರೆ ನಾನು ತರುವನು—ಎಂದ್ಹೇಳಿ
ಶ್ರೀಕೃಷ್ಣ ನಗುತ—ನುಡಿದನು ೧೭

ಕಂದು ಹಸಿಯಾಗದೆ ಮುಂದೆ ಕೆಂಪೆತ್ತದೆ
ಉತ್ತಮರು ಉಂಡು ದಣಿಯದ—ಕಜ್ಜಾಯ
ಇಳಿಸಿ ತುಂಬಿದರೆ—ಹೆಡಗೆಯ ೧೮

ಅಂಚು ಹಸಿಯಾಗದೆ ಕೂಡೆ ಕೆಂಪು ಹತ್ತದೆ
ಮಾರಾಯರು ತಿಂದು ದಣಿಯದ—ಕಜ್ಜಾಯ
ಲೆಕ್ಕಿಸಿ ತುಂಬಿದರೆ—ಹೆಡಗೆಯ ೧೯

## 154. ಕೃಷ್ಣ ಸತ್ಯಭಾಮೆ ಸಂವಾದ (ಬಾಗಿಲು ತಡೆಯುವದು)*

ಒಂದು ದಿನ ನಿಶೆಯೊಳಗೆ ಕೃಷ್ಣನು
ಚಂದ್ರನುದಯವ ಕಂಡು ಹರುಷದಿ
ಮಂದಗಾಮಿನಿ ಸತ್ಯಭಾಮೆಯ ಮನೆಗೆ ನಡೆತರಲು
ಬಂದು ಬಾಗಿಲ ಸೆಡಿಯೆ ಹರುಷಗ
ಳಿಂದಲಂಗುಲಿಯೊಳಗೆ ನಲ್ಲನ
ಅಂದವನು ತಿಳಿದಾಗ ಪೇಳಿದಳರಿಯದವಳಂತೆ ೧

ಸತ್ಯಭಾಮೆ : ಯಾರೆಲೊ ಈಪರಿ ಭೂರಿ ಸಲಿಗೆಯಿಂದ
ದ್ವಾರದಿ ಧ್ವನಿಗೈವ ಮೂಳ[1]
ಪಾರನವ[2] ಕಂಡು ಚೋರ ನಿನ್ನಯ ಕೊಬ್ಬ[3]
ತೀರಿಸುವನು ನಡೆ ಗಾಢ[4] ೨

ಕೃಷ್ಣ : ನಾರೀಮಣಿಯೆ ಕೇಳು ಚೋರನೆಂದೆಣಿಸದಿ
ರೀರೇಳು ಲೋಕವನು
ಓರಣದೊಳು ಪಾಲಿಸಲು ಕರ್ತನಾಗಿಹ
ನಾರಾಯಣನು ನಾ ಕಾಣೆ । ಕೇಳೆಲೆ ಜಾಣೆ
ನಾರಾಯಣನು ನಾ ಕಾಣೆ ೩

ಸ : ಆದರೊಳ್ಳಿತು ಬಂದ ಹಾದಿ ಹಿಡಿದು ಪೋಗು
ಸಾಧಿಸಬೇಡೆನ್ನೊಳ್ ಬರಿದೆ
ಭೇದವಿಲ್ಲದೆ ಪರನಾರಿಯರೊಳಗಿಂತು
ಮೋದದಿ ಮಾತಾಡಬಹುದೆ ೪

ಕೃ : ಕ್ರೋಧಮಾಡುವರೇನೆ ಯಾರೆಂದು ತಿಳಿಯದೆ
ವೇದ ಕದ್ದೊಯ್ದವನ
ಭೇದಿಸಿ[5] ಕೊಂದು ಮೇದಿನಿಯನು ಪೊರೆದಂಥ[6]

---

* ಈ ಹಾಡಿನ ಸೊಲ್ಲುಗಳಲ್ಲಿ ಮೊದಲನೆಯದು ಭಾಮಿನಿ ಷಟ್ಪದಿ. ಮುಂದಿನವುಗಳಲ್ಲಿ ಸತ್ಯಭಾಮೆಯ ಸೊಲ್ಲುಗಳು ಸಾಂಗತ್ಯದಲ್ಲಿವೆ. ಕೃಷ್ಣನವು ಕೇತಾರಗೌಳ ಅಷ್ಟತಾಳ ಗತಿಯಲ್ಲಿದ್ದು ಪರಣ ಆವೃತ್ತಿಗಳಿಂದ ಕೂಡಿದೆ.

1 ಮೂಢ. 2 ಪಾರನವ—ಪಹರೆಯವನು. 3 ನಿನ್ನನು ಕೊಚ್ಚಿ. 4 ಗಾಢ—ಬೇಗ, ಬೇಗ, ಗೊತ್ತಾಯಿತೆ (ಅಂತೆ). 5 ಸಾಧಿಸಿ. 6 ವೇದವನೆಳೆತಂದಂಥ.

ಮತ್ಸ್ಯಾವತಾರಿ ಕಾಣೇ । ಕೇಳೆಲೆ ಜಾಣೆ
ಮತ್ಸ್ಯಾವತಾರಿ ಕಾಣೇ ೫

ಸ ಮತ್ಸ್ಯನಾದರೆ ಬಹು ಸ್ವಚ್ಛದ ನೀರೊಳು
ಇಚ್ಛೆ ಬಂದಂತಿರು ಹೋಗು
ಹೆಚ್ಚು ಮಾತುಗಳಾಡಿ ಶಿಕ್ಷೆಗೊಳ್ಳಲು[1] ಬೇಡ
ಮುಚ್ಚುಮರೆಯ ನುಡಿಯಲ್ಲ ೬

ಕೃ ನಿಶ್ಚಯವರಿಯದೆ ಮನಕೆ ಬಂದಂದದಿ
ತುಚ್ಛಿಸಿ ನುಡಿವೆಯೇನೆ
ಹೆಚ್ಚಿನ ಸತ್ವದಿ ಧರೆಯ ಪೊತ್ತಿರುವಂಥ
ಕಚ್ಛಪರೂಪ ಕಾಣೇ । ಕೇಳೆಲೆ ಜಾಣೆ
ಕಚ್ಛಪರೂಪ ಕಾಣೇ ೭

ಸ ಹರಟಬೇಡೆಲೊ ಕೇಳು[2] ಕೂರ್ಮ ನೀನಾದರೆ
ಭರದೊಳು[3] ಪಾತಾಳಕಿಳಿದು
ಉರಗಗಾಧಾರವಾಗಿಹುದಲ್ಲದೆ ದೊರೆ
ತರುಣಿಯರೊಳು ಕಾರ್ಯವೇನು ೮

ಕೃ ಸರಸಿಜಾನನೆ ಕೇಳು ಪರಿಹಾಸ ಮಾಳ್ಪೆಯ[4]
ಧರೆಯು ಕದ್ದೊಯ್ದವನ
ಹರಿಸಿ ನಾ ಪುನರಪಿ ತಂದು ರಕ್ಷಿಸಿದಂಥ
ವರಾಹಾವತಾರಿ ಕಾಣೇ । ಕೇಳೆಲೆ ಜಾಣೆ
ವರಾಹಾವತಾರಿ ಕಾಣೇ ೯

ಸ ವರಾಹನಾದರೆ ವನಗಳಲಿ ಸಂಚರಿಸದೆ
ಬರಿದೆ ದ್ವಾರದಿ ಕೂಗಲೇಕೆ
ತರವಲ್ಲವಿನಿತು ಸಲಿಗೆ ನೋಡು ನಿನ್ನಯ
ಮರಿಯಾದೆ ಉಳಿಯದು ಜೋಕೆ ೧೦

---

1 ಲಜ್ಜೆ. 2 ಹರಟೆ ಮಾಡಲು ಬೇಡ 3 ಹರುಷದಿ. 4 ಹರಿಣಲೋಚನೆ ಇಂಥ ಬಿರು ನುಡಿಯೇತಕೆ.

ಕೃ : ಹರಿಣಲೋಚನೆ ಇಂಥ ಬಿರುನುಡಿಯೇತಕೆ
ಸ್ಮರಿಸಿದ ತರಳನನು
ಜರೆದು ನಿಂದಿಸಿದಂಥ ದುರುಳನ ಸೀಳಿದ
ನರಸಿಂಹ ನಾನು ಕಾಣೇ । ಕೇಳಲೆ ಜಾಣೆ
ನರಸಿಂಹ ನಾನು ಕಾಣೇ ೧೧

ಸ : ಒಳ್ಳಿತಾಯಿತು ಈಗ ನಿಲ್ಲದೆ ಗಜಗಳ
ಚೆಲ್ಲಬಡಿದು ಕಾನನದಿ
ಎಲ್ಲ ಮೃಗಕು ನೀನೆ ರಾಜನೆಂದೆನಿಸಿಕೊ
ಇಲ್ಲಿ ಪೇಳ್ವುದರಿಂದಲೇನು ೧೨

ಕೃ : ಮಲ್ಲಿಗೆಗಂಧಿನಿ ನಾ ಸುಳ್ಳಾಡುವನಲ್ಲ
ಬಲ್ಲಿದ ದೈತ್ಯನೊಳು
ನಿಲ್ಲದೆ ಮೇದಿನಿ ಬೇಡಿ ಮೂರಡಿಗೈದ
ಚೆಲ್ವ ವಾಮನನು ಕಾಣೇ । ಕೇಳಲೆ ಜಾಣೆ
ಚೆಲ್ವ ವಾಮನನು ಕಾಣೇ ೧೩

ಸ : ಚೆಲ್ವ ವಾಮನ ಬ್ರಹ್ಮಚಾರಿಯಾದರೆ ಗುರು
ವಲ್ಲಿ ಸೇವಿಸಿಕೊಂಡು ವೇದ
ವೆಲ್ಲ ಕಲಿತು ವಿದ್ಯಾವಂತನೆನ್ನಿಸಿಕೊಂಡು
ಸಲ್ಲಿಸು ಗುರುಋಣವನ್ನು[1] ೧೪

ಕೃ : ಜಲಜಮುಖಿಯೆ ಕೇಳು ಹಲವು ಮಾತುಗಳಿಂದ
ಫಲವೇನು ಕ್ಷತ್ರಿಯರ
ಕುಲವ ಸಂಹರಿಸಿಯೆ ಬಲವಂತನೆನಿಸಿದ
ಮುನಿ ಭಾರ್ಗವನು ನಾ ಕಾಣೇ । ಕೇಳಲೆ ಜಾಣೆ
ಮುನಿ ಭಾರ್ಗವನು ನಾ ಕಾಣೇ ೧೫

ಸ : ಮುನಿಪ ನೀನಾದರೆ ರಾತ್ರಿಯೊಳಗೆ ಮನೆ
ಮನೆಗೆ ಸಂಚರಿಸುವದೇನು
ಘನತೆಯಲ್ಲಿದು ಗೆಡ್ಡೆ ಗೆಣಸು ಭಕ್ಷಿಸಿಕೊಂಡು
ವನದಿ ತಪವ ಮಾಡು ಪೋಗು ೧೬

1 ಹಿರಿಯರ ಸೇವೆ ಮಾಡು

ಕೃ : ವನಿತಾಕುಲರತ್ನ ಲಾಲಿಸು ಸುಮ್ಮನೆ
ಬಿನುಗು ನುಡಿಗಳೇತಕೆ
ರಣದಿ ರಾವಣ ಕುಂಭಕರ್ಣರ ಜಯಿಸಿದ
ದಶರಥ ರಾಮ ಕಾಣೇ । ಕೇಳೆಲೆ ಜಾಣೆ
ದಶರಥ ರಾಮ ಕಾಣೇ ೧೭

ಸ : ಶೂರ ನೀನಾದರೆ [1]ದೈತ್ಯರ ಕುಲವ ಸಂ
ಹಾರವ ಮಾಡಿಯೀ ಧರೆಯ
ಭಾರವಿಳುಹಿ ಮತ್ತೆ ಭೂರಿ[1] ಕೀರ್ತಿಯ ಪಡೆ
ಯಾರಿಗೆ ಪೇಳುವದಿಲ್ಲಿ ೧೮

ಕೃ : ಚಾರುಮಂಗಲೆ ಎನ್ನೊಳೀ ರೀತಿಯಾಡದೆ[2]
ಯಾರೆಂದು ತಿಳಿದುಸುರು[3]
ನಾರಿ ಗೋಪಿಗೆ ಮಗನಾಗಿ ಗೋಗಳ ಕಾಯ್ದ
ಧೀರ ಶ್ರೀಕೃಷ್ಣ ಕಾಣೇ । ಕೇಳೆಲೆ ಜಾಣೆ
ಧೀರ ಗೋಪಾಲ ಕಾಣೇ ೧೯

ಸ : ವಿಧವಿಧ ಪೌರುಷವಾಡಲೇತಕೊ ಬಂದು[4]
ಹದನ ತಿಳಿದೆ ನಾನಿಂದು[5]
ಉದಯದಿ ಬಂದರೆ ಚದುರ ತುರುಗಳನ್ನು[6]
ಮುದದಿಂದ ಕಾಯಲುಬಹುದು ೨೦

ಕೃ : ಮದಗಜಗಮನೆ ಈ ಪರಿ ಹಾಸ್ಯವೇತಕೆ
ಹೃದಯದಿ ತಿಳಿದು ನೋಡು
ಸುದತಿಯರ ವ್ರತ ಭಂಗಿಸಿ ಬಂದಂಥ
ಬುದ್ಧಾವತಾರಿ ಕಾಣೇ । ಕೇಳೆಲೆ ಜಾಣೆ
ಬುದ್ಧಾವತಾರಿ ಕಾಣೇ ೨೧

---

1 ದುಷ್ಟರ ಕುಲವನ್ನು ತೀರಿಸಿ ಭೂಭಾರಗಳನು ಭಾರವಿಳುಹಿ ಮುಂದರ. 2 ಯಾತಕೆ. 3 ತಿಳಿಯದೀಗ. 4 ಬಂದ. 5 ತಿಳಿದೆ ಫೋಗು ಫೋಗು. 6 ಉದಯಕಿಲ್ಲಿಗೆ ಬಂದು ಚದುರ ಗೋವುಗಳನು.

ಸ : ನಾನು ಮಾಡುವದೇನು ಬೌದ್ಧ ನೀನಾದರೆ
ಏನನೀವೆನು ನಿಶಿಯೊಳಗೆ
ಭಾನುವುದಯಕಿಲ್ಲಿ ಬಂದೆಯಾದರೆ ವಸ್ತ್ರ
ದಾನವ ಪಾಲಿಪೆ[1] ತೆರಳು ೨೨

ಕೃ : ಜಾಣೆ ನಿನ್ನಯ ಮಾತಿಗಿಳೆಯೊಳು ಜೋಡಿಲ್ಲ
ಮಾನವಂತಳೆ ಲಾಲಿಸು
ಕ್ಷೋಣಿಯೊಳಗೆ ಹಯವೇರಿಯೆ ಕುಣಿದಂಥ[2]
ಜಾಣ ಕಲ್ಕಿಯು ನಾ ಕಾಣೇ । ಕೇಳೆಲೆ ಜಾಣೇ
ಜಾಣ ಕಲ್ಕಿಯು ನಾ ಕಾಣೇ ೨೩

ಸ : ಕಲಿಕಿ ಗಿಲಿಕಿಗಿಲ್ಲಿಯೊಳಗೊಡಲೇತಕೊ[3]
ಬಳಲಿ ನಿಲ್ಲುವೆ ವ್ಯರ್ಥ ನೀನು[4]
ಸಲಿಗೆಯಿಂದಲಿ [5]ಇನ್ನು ಗಳಿಗೆಲಿ ನೋಡಿಕೊ
ಕೆಲಸವಿದ್ದುದ[5] ಸಾರ್ದ ನಾನು ೨೪

ಕೃ : ಸುಲಲಿತಾಭರಣಭೂಷಿತೆ ಕೇಳು ಸುಮ್ಮನೆ
ನಿಲಿಸಲೇತಕೆ ಎನ್ನನು
[6]ಒಲಿದು ಬಂದಾತನಿವನು ನಿನ್ನ ಪ್ರಾಣ ಕಾಂ
ತನು[6] ತೆಗೆ ಬಾಗಿಲನು ೨೫

ಕಾಂತ ನಾನಿಹೆನೆಂದೆನಲಾಗಲಾ ಕ್ಷಣ
ಕಂತುವಿನರಗಿಣಿಯು
ಸಂತಸದಿಂದಲಿ ಬಾಗಿಲ ತೆರೆದಳ
ತ್ಯಂತದ ಸಂಭ್ರಮದಿ ೨೬

ಅಂತಾಗ ಚರಣಕ್ಕೆರಗಿದಾಕ್ಷಣದೊಳ
ಗಂತಕಾಂತಕ ಸಖನು
ಸಂತಸದಿಂದಲಿ ಮೆರೆಯುತಲಿರ್ದನು
ವೆಂಕಟಾಚಲವಾಸನು ೨೭

---

1 ಮಾಳ್ಪೆನು. 2 ಹಯವೇರಿಕೊಂಡಿರುವಂಥ. 3 ಗಿಲ್ಲಿ ಉಳಕೊಳ್ಳಲೇತಕೆ. 4 ನಾನು.
5 ಇಲ್ಲಿ ಇರುಳು ಕಳೆಯುಬೀಗ ಕೆಲಸವಿರ್ಪುದು.
6 ಲಲನೆ ನಿನ್ನಯ ಪ್ರಾಣಕಾಂತನು ನಾನೀಗ ತೆಗೆ.

ಅಧ್ಯಾಯ : 2

## ಜನ್ಮದಿನೋತ್ಸವ (ಪೂರ್ವೋತ್ತರ ಸಹಿತ)

# ದಿಂಡಿನ ಹಾಡುಗಳು

### 155. ಋತುಮತಿಯಾಗುವದು

ಕುಸುಮಗಂಧಿನಿ ತಾನು[1] ನೆರೆದು
ವಿಷಮ ಸಂಭ್ರಮದೊಳು ಮೆರೆದು[2]
ಕುಶಲದಿ ಪೇಳ್ದರು ಭುವನದ ಜನರು
ಶಶಿಮುಖಿ ವಲ್ಲಭೆ ನೆರೆದು ನಿಂತಿಹಳು[3]
ಬಿಸರುಹನೇತ್ರೆಯ ಋತುಚರಿತಾಮೃತ ॥
ವತಿಶಯದಿ[4] ಪೇಳಿ—ಪೊಗಳುವೆ ೧

ಊರ ಹೆಂಗಳು ಬಂದು ಕೂಡಿ
ಸಾರಿ ಮಂಡಲವನ್ನೆ ಮಾಡಿ[5]
ಭೂರಿ ಸಂಭ್ರಮದಲಿ ಶಾಲೆಯನುಡಿಸಿ
ಹಾರ ಕಂಕಣ ಬಳೆ ವಂಕಿಯ ತೊಡಿಸಿ
ವಾರಿಜನೇತ್ರೆಗೆ ನಾನಾ ವಿಧವಲಿ ॥
ನಾರಿಯರು[6] ಹೂಮಾಲೆ—ಮುಡಿಸ್ಯಾರು ೨

ಚಿತ್ರದ ರವಕೆಯ ತೊಡಿಸಿ[7]
ಮತ್ತೆ ಕಮ್ಮೆಣ್ಣೆಯ ಪೂಸಿ
ರತ್ನದ ಡಾಬನು ನಡುವಿಗೆಯಿರಿಸಿ

---

1 ಶಶಿಮುಖಿಗಂಧಿನಿ. 2 ವಿಶೇಷ ಸಂಭ್ರಮದೊಳು ನಿಂದು. 3 ನಿಂದಿರಲು.
4 ಅತಿಹರುಷದಿ. 5 ರಚಿಸಿ. 6 ನೀರೆಯರು. 7 ಪಟ್ಟೆಯ ಶಾಲೆಯು ಉಡಿಸಿ.

ಕತ್ತುರಿ ಕುಂಕುಮ ತಿಲಕವ ರಚಿಸಿ
ಚಿತ್ತಜನಯ್ಯನ ಪತ್ನಿಯ ಕೈಯಲಿ ॥
ಉತ್ತಮ ಫಲಗಳನು—ಕೊಡಿಸ್ಯಾರು ೩

ಜಲಜಗಂಧಿನಿಯಳ ನೋಡಿ
ತಲೆ ಮುಡಿಗಳ ಸುಳಿಮಾಡಿ
ಚೆಲು ಬೆಡಗಿನ ಚೌಲಿಗಳನೆಯಿರಿಸಿ
ಬಲು ಸಿಂಗರಿಸುತ[1] ಸುಮಗಳ ಮುಡಿಸಿ
ಒಲೆಯುವ ರಾಕುಟಿ ಕೇವಗೆಗಳನತಿ ॥
ನಲವಿನೊಳವರು—ಮುಡಿಸ್ಯಾರು ೪

ಹೊಸ್ತು[2] ಸಂಪಗೆ ಮುಡಿವಾಳ
ಮತ್ತೆ ಸಿಂಗಾರದ ಎಳೆಯ
ಸುತ್ತಲು ಮಾಣಿಕ ವಜ್ರದ ಮಾಲೆ
ಚಿತ್ರದಿ ರಂಜಿಪ ಮುಕುರ ಕಪೋಲೆ[3]
ಅತ್ಯಂತ ಬೆಳಗುವ ರಶ್ಮಿಯೊಳಿರುತಿರೆ ॥
ಪ್ರತ್ಯಕ್ಷದ ಬಾಲೆ—ವರಶೀಲೆ ೫

ಕಾಲಿನುಂಗುರ ಕಡಗಗಳು
ಮೇಲೆ ಗೆಜ್ಜೆಯ ಸರಪಣಿಯು
ಓಲೆಯು ಮೇಲೆ ಯೆಲೆ ಬಾವಲಿಯು
ಮೂಲೆಯ ಕೆತ್ತಿದ ಬುಗುಡಿ ಕೊಪ್ಪುಗಳು
ಮೇಲತಿ ಸರಪಣಿ ಚಲತುಂಬಿಟ್ಟು ವಿ ॥
ಶಾಲ ಕಿವಿಗಳಿಗೆ—ಇರಿಸ್ಯಾರು ೬

ವರ ಗಂಗೆ ಯಮುನೆ ಸರಸತಿಯು
ನಿರತ ಸೌಭದ್ರೆ ಪಾರ್ವತಿಯು
ನೆರಿಗಳ ಪಟ್ಟೆಯ ಹೆಗಲೊಳಗಿಟ್ಟು
ವರದ ಕರದೊಳು ಛತ್ರವ ಕೊಟ್ಟು
ತರುಣಿ ಸುಭದ್ರೆ ಮೊದಲಾದೆಲ್ಲರು ॥
ಹರುಷದಿ ಕರೆತಂದು—ಬರಲಂದು ೭

1 ಜಡೆಗೆ ಸಿಂಗರಿಸುವ. 2 ಹೊಸ್ತು—ಹೊಸತು. 3 ಮೂಕುತಿವೋಲೆ.

ನವತರ ಕೋಣೆ ಮಂಡಲದಿ
ನವವಿಧ ಮೇಲ್ಹಾಸಿನಲಿ
ಯುವತಿಯ ಪೂರ್ವಮುಖದಿ ಕುಳ್ಳಿರಿಸಿ
ನವನೀತ ಫಲ ಕುಂಕುಮಗಳ ಕೊಡಿಸಿ
ನವವಚನದೊಳಾ ಭಾವೆಗೆ ಪೇಳುತ[1] ॥
ಸುವಿಧ ಶೋಭಾನ—ಪೊಗಳುತ ೮

ಕುಳಿಸಿದರಲ್ಲಿ ಮಂಡಲದಿ
ಕುಳಿತು ನಾಲ್ಕನೆ ದಿವಸದಲಿ
ಇಳೆಯೊಳಗೆಸೆಯುವ ಕೆಲಸಂಗಳನು
ತಲೆಯೊಳು ಮುಡಿವ ಚೆಲ್ವಾಭರಣವನು
ಹೊಳೆಯೊಳು ನಿಂತು ನಿರ್ಮಾಲ್ಯವ ಹಾಯ್ಕಿಸಿ ॥
ಜಲದೆ ಸ್ನಾನವನು—ಗೈಸಿದ ೯

ಹಿಂಗಾರ ಹೂವನೆ ತರಿಸಿ
ಮಂಗಲೆಯರು ಕೂಡಿ ವೆರಸಿ
ರಂಗವಲ್ಲಿಯದ ಪುಡಿಗಳನೆ ಕಟ್ಟಿಟ್ಟು
ಸಿಂಗರಿಸುವ ನಾಳಿಕೇರವನಿಟ್ಟು
ಕಂಗಳಿಗೆಸೆಯುವ ಮಂಗಲ ಮೂಡೆಗೆ ॥
ಹಿಂಗಾರ ಮೊದಲಾದ—ಹೂವ ಹಾಕಿ ೧೦

ಈ ಪರಿಯಲಿ ರಂಜಿಸಿದ
ಮನೆದೇವರ ಮುಂದಿಡುತ
ಅಪ್ರಮೇಯಾತ್ಮನ ಪ್ರಾರ್ಥನೆ ಗೈದು
ಸುಪ್ರತಿಷ್ಠಿತ ಗಣಪತಿಗೊಲಿದು
ವಿಪ್ರಸಭೆಯೊಳು ಶೃಂಗಾರದ ಹೂ ಕೊಟ್ಟೆ ॥
ಎತ್ತಿ ತಾ ಕೊಂಡು—ಹೊರಟರು ೧೧

ಉತ್ತಮ ಭುಜದ ಮೇಲಿಟ್ಟು
ವಿಸ್ತರದಲಿ ನಡೆತರುತಲೆಯೊಟ್ಟು
ಅರ್ಥಿಯಿಂದಲಿ ತವರ್ಮನೆಗೈತಂದು

1 ಬಾಯೊಳು ಪೊಗಳುತ್ತ.

ಮಾರ್ತಾಂಡನ ಕಿರಣದ ಬೆಳಗೆಂದು
ವಿಸ್ತರವಾಗಿಹ ಹೂವಿನ ಕೊಟ್ಟೆಯ ॥
ಪುತ್ರರನೊಡಗೊಂಡು—ಬರಲಂದು[1] ೧೨

ಮಂಗಲ ಶ್ರೀರುಕ್ಮಿಣಿಗೆ
ಮಂಗಲ ಪದುಮಲೋಚನೆಗೆ
ಮಂಗಲ ಕಾತ್ಯಾಯಿನಿ ಪಾರ್ವತಿಗೆ
ಮಂಗಲ ಕೊಲ್ಲೂರ ಪುರಸ್ಥಿರವಾಸೆಗೆ
ಮಂಗಲವೆನ್ನುತ ಜಯಜಯ ಪಾಡುತ ॥
ಮಂಗಲಾರತಿಯ—ಬೆಳಗಿರೆ ೧೩

## 156. ಋತುಸ್ತ್ರೀಯನ್ನು ಕುಳ್ಳಿಸುವದು

ಶ್ರೀಗುರುವಿನಡಿದಾವರೆಗೆ ತಲೆ
ವಾಗಿ ಸಂಭ್ರಮದಿ । ಪೊಗಳುತ
ನಾಗಶಯನನ ರಾಣಿ ರುಕ್ಮಿಣಿ
ಯೀಗ ಋತುಮತಿಯೆಂದು ತರುಣಿಯ
ರಾಗ ಸಂತೋಷಿಸುತ ಸರ್ವರ
ನಾಗಮೋಕ್ತದಿ ಬರಿಸಿ ಮಜ್ಜನ ॥
ವಾಗಲೆಸಗಿದರು—ಮುದದಿಂದ ೧

ಕನ್ನೆಯರು ಪನ್ನೀರಿನಿಂದ ಪ್ರ
ಸನ್ನೆಯನು ಮಾಡಿ । ಕುಂಕುಮ
ವನ್ನು ಮೃಗಮದ ತಿಲಕಾಲಂಕೃತ
ವನ್ನು ಕೈಗೂಡಿ । ನಾನಾ
ವರ್ಣ ಪೀತ ಸುವರ್ಣ ಶಾಲೆಯ
ಮನ್ನಿಸುತ ಕಜ್ಜಲವು ಕಂಕಣ
ವನ್ನು ಸರ್ವಾಭರಣ ತೊಡಿಸುತ
ಕನ್ನೆಯರು ಕನ್ಯಾಮಣಿಯನುರೆ ॥
ಚೆನ್ನಾಗಿ ನೋಡಿ—ಕುಳಿಸ್ಯಾರು ೨

1 ಇರಿಸ್ಯಾರು

ಅಂಗಜನ ಮುಂಗಯ್ಯ ಗಿಣಿಯನು
ಸಿಂಗರವ ಮಾಡಿ । ಮುದದಲಿ
ರಂಗವಲಿಗಳನಿಕ್ಕಿ ನೋಡಿ ಬೆ
ಡಂಗಿನಲಿ ಪಾಡಿ । ಸುರಮುನಿ
ಯಂಗನೆಯರಂದಲ್ಲಿ ಶೋಭನ
ಪಂಗುರದಿ ಗುರುಹಿರಿಯರಾ ಚರ
ಣಂಗಳಿಂಗೆರಗಿಸುತ ಪೊಗಳುತ
ಮಂಗಳಾಂಗನೆಯನ್ನು ಸೇಸೆಗ ॥
ಳಿಂಗಿತ ವೈಭವದಿ—ಕುಳಿಸ್ಯಾರು ೩

ಫುಲ್ಲನೇತ್ರೆಯರೆಲ್ಲ ನೋಡುತ
ಉಲ್ಲಸವ ಮಾಡಿ । ಮಲ್ಲಿಗೆ
ಝಲ್ಲಿ ಭೃಂಗಾರವದಿ ಘಮ್ಮೆನ
ಲಲ್ಲಿ ನಲಿದಾಡಿ । ತರತರ
ದಲ್ಲಿ ಪುಷ್ಪಗಳಲ್ಲಿ ಗೀತಗ
ಳಲ್ಲಿ ಗಜಗಮನೆಯರು ನಲಿಸಲಿ
ದೆಲ್ಲವರು ನೋಡುತ್ತ ಪಾಡುತ
ಉಲ್ಲಸಿತ ಚಂದ್ರಾನನೆಯ ಮ ॥
ತ್ತಲ್ಲಿ ಕುಳ್ಳಿರಿಸಿ—ಪೊಗಳ್ಯಾರು ೪

ಚಂದನ ಸುಗಂಧಿನಿಯ ಚೆಲುವಿಕೆ
ಯಂದವಿನ್ನೇನು । ಸದ್ಗುಣ
ವೃಂದ ಕಲ್ಲೋಲ್ಲಾಸನದಿ ಕುಳಿ
ತಂದವರದೇನು । ಭಕ್ತರ
ಬಂಧು ಶ್ರೀಗೋವಿಂದನೊಲವಹು
ದೆಂದು ಹರಸುತ ಸತಿಯರೆಲ್ಲರು
ತಂದೆ ಶ್ರೀಗುರು ಪಂಚಲಿಂಗನ
ನಿಂದು ನೀವ್ ಮನದಲ್ಲಿ ಧ್ಯಾನಿಪು ॥
ದೆಂದೆಲ್ಲರಂದು—ಪೊಗಳ್ಯಾರು ೫

## 157. ಋತು ಸ್ತ್ರೀಗೆ ಆರತಿ

ಗುರುವಿನ ಪದಕಮಲವನು
ಎರಗಿ ಕರುಣ ಪಡೆದಿಸ್ನು
ತರುಣಿ ಜಾನಕಿದೇವಿ ಋತುಮತಿಯಾಗಲು
ತರಳೆಯರೆಲ್ಲರು ವರ ಸಂಭ್ರಮದೊಳು ॥
ಕುರುಜಿನಾರತಿಯ—ಬೆಳಗಿರೆ ೧

ಕಡುಬೆಡಗಿನ ನಾರಿಯರೆಲ್ಲ
ನಡು ನಸುಬಳುಕುತ ಪೊಳೆವಲ್ಲ
ತಡಮಾಡದೆಯೇ ಮಿಡಿವೋಲೆಯಬಲೆಯ
ರೊಡಗೂಡುತಲಾ ಜಡಜದಳಾಕ್ಷಿಗೆ ॥
ಜಡಜದಾರತಿಯ—ಬೆಳಗಿರ ೨

ಚೆಂದದ ಗಂಧೆಯರ್ ಕೂಡುತಲಿ
ಚೆಂದದಿ ಸಡಗರ ಬೀರುತಲಿ
ಮುಂದತಿ ಸುಖಿ ಮುದವ್ಯಂದವ ಬೀರುವ
ನಂದಿಕೇಶನ ನೆನೆದೊಂದಿನಿನಗೆಯಲಿ ॥
ಸೌಂದರದಾರತಿಯ—ಬೆಳಗಿರೆ ೩

## 158. ಹೂಕೊಟ್ಟೆ ಕೊಂಡು ಹೋಗುವದು

ಶ್ರೀರಂಗನರಸಿ ರುಕ್ಮಿಣಿಯು
ವಾರಿಜಾಂಬಕಿ ಗುಣಮಣಿಯು
ತೋರಿದಳ್ಳೆ ಋತುಮತಿಯಿವಳೆಂದು
ಕಾರಣವರಿತ್ಯೆಕಂಪೆ ತಾಸಿಂದು
ಚಾರುಗುಣಾನ್ವಿತ ಚತುರೆಗೆ ಒಸಗೆಯ ॥
ಸಾರಿ ಬಂದಿಹೆವು—ಮುದದಿಂದ ೧

ಕನ್ನೆಯರೆಲ್ಲರು ಕೂಡಿ
ಸಣ್ಣಮಲ್ಲಿಗೆ ಸರ ಮಾಡಿ
ರನ್ನ ಸಂಪಗೆ ಹೊನ್ನ ಕೇದಗೆಗಳನು

ಪುನ್ನಾಗವು ಪೂಗಾದಿಗಳನ್ನು
ಮನ್ನಿಸಿ ಕಸ್ತೂರಿ ಕುಂಕುಮ ಯುಕ್ತದಿ ॥
ಸನ್ನುತ ಸಂಭ್ರಮವ—ಪೊಗಳುವೆ ೨

ಮುತ್ತು ಮಾಣಿಕದಲಂಕೃತದಿ
ಮುತ್ತೈದೆಯರ ಶೋಭನದಿ
ನೃತ್ಯ ಸುಗೀತ ವಾದ್ಯಂಗಳ ರವದಿ
ಮತ್ತೆ ಸಹೋದರರತಿ ವೈಭವದಿ
ಮುತ್ತಿನ ಪೂಸರ ಗುರು ಪಂಚಲಿಂಗನ ॥
ಮಿತ್ರನ ಸತಿಗೊಲಿದು—ತಾನು ತಂದು ೩

## 159. ಹೂ ಕೊಟ್ಟೆ ಒಳಗಿಡುವದು

ಭಾರತೀ ಗುರುವನೆ ನೆನೆದು । ವಿಘ್ನಗಳ ನಿ
ವಾರಿಸೆನ್ನುತ ಒಲಿದು । ಗಣಪತಿಯನು
ಸೇರಿ ಸಂಸ್ತುತಿಯ ಗೈದು ॥
ಚಾರು ಸುಗುಣ ವಿಚಾರೆ ಜಾನಕಿ
ನಾರಿ ಋತುಮತಿಯಾಗೆ ಶೋಭನ
ಸಾರ ದಿವಸದಿಯನುಜನಂದಾ
ಭೂರಿ ವಿಭವದಿ ಹೂಫಲವ ತಂದ ॥
ಸಾರವನು ಪೇಳಿ—ಪೊಗಳುವೆ ೧

ಉತ್ತಮ ಜನಕ ತಾನು । ಓಲೆಯ ನೋಡಿ
ಚಿತ್ತ ಸಂತೋಷವನು । ತಾಳುತಲಾಗ
ಮಿತ್ರರ ಕೂಡುತಿನ್ನು ॥
ವಿಸ್ತರಿಸಲೇನಿನ್ನು ದಿಬ್ಬಣ
ವತ್ತ ನಡೆಯಲಿಯೆನುತ ಬೇಗದಿ
ಮತ್ತೆ ತಂಡುಲ ಫಲವು ಪುಷ್ಪವ
ಒತ್ತಿಗತ್ತಿಯ ಕಾಯ ಕೊಂಡತಿ ॥
ಉತ್ತಮ ತೋಷದಲಿ—ನಡೆದರು ೨

ಸುಂದರ ನಾರಿಯರು । ಕೊಡುತ್ತಲಾಗ
ಮುಂದುಭಿ ಘೋಷದೊಳು । ಬೇಗದಿ ನಡೆ
ಯೆಂದತಿ ಭಾಸದೊಳು ॥
ಬಂದು ಲಕ್ಷ್ಮೀನಿಧಿಯು ಹರುಷದಿ
ನಿಂದು ಒಳಗೈತರುತ ತ್ವರಿತದಿ
ನಂದಿಕೇಶನ ಮುಂದೆ ಇಡಲದ
ನೊಂದುಗೂಡುತಲಂದು ವಿಭವದಿ ॥
ಎಂದಿಗೂ ಮುದವ—ಕೊಡಲೆಂದು ೩

## 160. ಹಕ್ಕೆ ಸಾರಿಸಿದ್ದು

ಮಿತ್ರೆ ದೇವಕಿ ತನ್ನ ಸೊನೆಗೆ ಒಪ್ಪದಿಂದಲಿ ಹೇಳಿದಳೆ
ಬಟ್ಟಲ ಮುಖವನ್ನು ತೊಳೆದು ಬಾರೆಂದು ಹೇಳಿದಳೆ ೧

ನಾರಿ ದೇವಕಿ ತನ್ನ ಸೊನೆಗೆ ವೇಗದಿಂದ ಹೇಳಿದಳೆ
ತಾವರೆ ಮುಖವನ್ನು ತೊಳೆದು ಬಾರೆಂದ್ಹೇಳಿದಳೆ ೨

ಅಚ್ಚ ಆಕಳ ಗೋಮಯವ ಮಿತ್ರೆಯರೆ ತೆಗೆತರಲು
ಈರೆಂಟು ಉಂಡೆಯು ಮಾಡಿ ಕೊಟ್ಟರೆ ರುಕ್ಮಿಣಿಗೆ ೩

ಕಾಳಿ ಆಕಳ ಗೋಮಯವ ಶೀಲೆಯರೆ ತೆಗೆತರಲು
ಏಳೆಂಟುಂಡೆಯು ಮಾಡಿ ಕೊಟ್ಟರೆ ರುಕ್ಮಿಣಿಗೆ ೪

ಪಟ್ಟೆವಾಳಿಯು ನೆರಿದುಟ್ಟು ತೊಟ್ಟು ಕುಪ್ಪಸವ ನಡುವಿಗಿಟ್ಟು
ಒಪ್ಪಕ್ಕೆ ಹಕ್ಕೆಯ ಸಾರಿಸಬೇಕೆಂದ್ಹೇಳಿದಳೆ ೫

ಕೃಷ್ಣರಾಯರ ಮನೆ ಮುಂದೆ ಸುಕ್ರಮ್ಮ ಒಲ್ಲುವಂದದಿ
ನೂರೆಂಟು ಚೆಂಬನೆ ಮಿಂದು ಬಾರೆಂದ್ಹೇಳಿದಳೆ ೬

ಬೆಟ್ಟದ ಸೀಗೆಯ ಕಾಯ ಕುಟ್ಟಿ ಹುಡಿಗಳ ಮಾಡಿದರೆ
ಅರಿಸಿನ ಕುಂಕುಮಗಳ ತರಿಸಿ ಕೊಟ್ಟರೆ ರುಕ್ಮಿಣಿಗೆ ೭

ಪಟ್ಟೆಪಾಳಿಯ ನೆರಿ ಉಡಿಸಿ ಬಟ್ಟಮುತ್ತಿನ ಸರವಿಡಿಸಿ
ಕಸ್ತೂರಿಯ ಬೊಟ್ಟಿಟ್ಟು ಶೃಂಗಾರವ ಮಾಡಿದರೆ ೮

ದಂತದ ಹಣಿಗೆಯ ಕೊಂಡು ಕಾಂತೆಯ ಸುರುಳಿ ಬಾಚಿದರೆ
ಕೆಂಡಸಂಪಗೆ ಹೂವುಗಳ ದಂಡೆಯ ಮುಡಿಸಿದರೆ ೯

## 161. ದಿಂಡಿನ ಹೋಮದ ಹಾಡು

ಶ್ರೀಗುರುವಿನಡಿದಾವರೆಗೆ ತಲೆ
ವಾಗಿ ಶಾರದೆಯ । ಕೃಪೆಯನು
ರಾಗದಿಂದಲಿ ಪಡೆದು ಸನ್ನುತ
ವಾಗಿ ಇಂದಿರೆಯ । ಚರಣಕೆ
ಬಾಗಿ ವಂದಿಸಿ ನಾಗವಕ್ತ್ರನ
ಆಗಮೋಕ್ತದಿ ಪೂಜಿಸುತಲಾ
ರಾಘವೇಂದ್ರನಯೋಧ್ಯ ನಗರದಿ
ರಾಗರನ ಭಕ್ತಿಯಲಿ ಯಜ್ಞವ ॥
ಆಗುಮಾಡಿಸಿದ—ನಲವಿಂದ ೧

ಸನಕ ನಾರದ ಶುಕ ವಸಿಷ್ಠರೊ
ಳನುವ ಕೈಕೊಂಡು । ಕಾಶ್ಯಪ
ಮುನಿಪ ಭಾರದ್ವಾಜ ಋತ್ವಿಜ
ರವರನೊಡಗೊಂಡು । ತನ್ನಯ
ಜನನಿಯರು ಮೊದಲಾದ ಬಾಂಧವ
ಜನಸಹಿತ ವಾಲ್ಮೀಕಿ ಮುನಿಪನೊ
ಳನುಮತದಿ ಬಹು ದೇಶದೇಶದ
ಜನವರನುವೊಡಗೂಡಿ ರಾಘವ ॥
ವಿನಯದಿ ಯಜ್ಞವನು—ನಡೆಸಿದ ೨

ವಜ್ರಮಾಣಿಕದಿಂದ ಮಾಡಿದ
ಯಜ್ಞಮಂಟಪವ । ದ್ವಾರವ
ಸಜ್ಜುಮಾಡಿಸಿ ನಾಲ್ಕು ದಿಕ್ಕಿನೊಳ್
ಪ್ರಜ್ವಲಿಸುತಿರುವ । ತೋರಣ

ಕುರ್ಜು ಮೇರುವೆಗಳು ಫಲಾವಳಿ
ಸಜ್ಜುಕದಿ ಮೇಲ್ಕಟ್ಟು ಚಿತ್ರದಿ
ಪ್ರಜ್ವಲಿಪ ನವರತ್ನ ತಿಲಕದಿ
ಪ್ರಾಜ್ಞರೆಲ್ಲರ ವೆರಸಿ ರಘುಪತಿ ॥
ಯಜ್ಞಶಾಲೆಯನೆ—ರಚಿಸಿದ ೩

ರನ್ನಬಣ್ಣದಿ ಮೆರೆವ ಚೌಕದಿ
ಕನ್ನೆ ಜಾನಕಿಯು । ಸಾರಿಸಿ
ಸನ್ನುತದಿ ಪನ್ನೀರ ಚಳೆಯದಿ
ಮುನ್ನ ಶಶಿಮುಖಿಯು । ಬಳಿಕ ಪ್ರ
ಸನ್ನವಾಗಲು ಋತ್ವಿಜರು ಬಹು
ಮನ್ನಿಸುತ ಸಂಭ್ರಮದಿ ನೋಡುತ
ಕನ್ನಿಕಾ ಮೌಕ್ತಿಕ ಶಿರೋಮಣಿ
ಯನ್ನು ಕೊಂಡಾಡುತ ವಿಧ್ಯುಕ್ತದಿ ॥
ಪುಣ್ಯಾಹಾರ್ಚನೆಯ—ರಚಿಸಿದ ೪

ಗುರು ವಸಿಷ್ಠನು ಪಂಚವರ್ಣದ
ಸರಸಿಜದ ತೆರದಿ[1] । ಮಂಡಲ
ವಿರಚಿಸುತ ಮಿಗೆ ಮುತ್ತಿನಕ್ಷತೆ
ಯಿರಿಸಿ[2] ವೈಭವದಿ । ಸ್ವಸ್ತಿಕ
ವಿರಚಿಸುತ್ತಲು ಕಮಲ ದಳಗಳ
ಪರಿಯ ನಿರ್ಮಿಸಿ ಸೂರ್ಯಮಂಡಲ
ಎರಕ ಸರಿಮಿಗಿಲೆಂಬ ತೆರದಲಿ[3]
ಪರಿಕರವ ನಿರ್ಮಿಸುತ ಬೇಗದಿ ॥
ತರತರ ಸಮಿಧೆಗಳ—ತರಿಸಿದ ೫

ತರಿಸಿ ಕುಂದಣದರ್ಘ್ಯಪಾತ್ರವ
ನಿರಿಸಿ ಸಂಭ್ರಮದಿ[4] । ಘೃತ ಚರು
ಪರಿಪರಿಯ ಕುಶ ದರ್ಭೆ ದೂರ್ವಾಂ
ಕುರವ ತರತರದಿ । ನಿರ್ಮಿಸಿ
ವರ ಪುರೋಡಾಶಾಜ್ಯ[5] ಸುಮುಬಂ

1 ತೆರಳಿ. 2 ತರಿಸಿ. 3 ತವಕದಿ. 4 ವೈಭವದಿ. 5 ಪುರೋಡಾಶಾದ್ಯ.

ಧುರ ಸುಗಂಧವಸರಿಸಿ ಸ್ವರ್ಣದ
ಪರಿಕರದಿ ಕಲಶದಿ ಭವಾನಿಯು
ಪರುರಪಿಸಿ ಕಲ್ಪೋಕ್ತ ಫಲವನು ॥
ಇರಿಸಿ [1]ಋತ್ವಿಜರು— ಕುಳಿತರು[1] ೬

ಅತ್ರಿ ಭಾರದ್ವಾಜ ವಿಶ್ವಾ
ಮಿತ್ರರೊಡಗೂಡಿ । ಕಾಶ್ಯಪ
ಯುಕ್ತದಿಂದ ವಸಿಷ್ಠ ಭೃಗುಮುನಿ
ವೋತ್ತಮರು ಕೂಡಿ । ವರ ನಿಗ
ಮೋಕ್ತದಿಂದಲಿ ಮಂತ್ರ ಘೋಷದಿ
ಮತ್ತೆ ಸ್ವರ ಸಂಯುಕ್ತದಿಂದಲಿ
ಪೃಥ್ವಿಪತಿ ರಘುರಾಮಚಂದ್ರನು
ಭಕ್ತಿಯಲಿ ಕೊಂಡಾಡಿ ಪೊಗಳಲು ॥
ಋತ್ವಿಜರು ಸುತ್ತ— ಕುಳಿತರು ೭

ಗುರು ಗಣದ ಹಿರಿಯರಿಗೆ ವಂದಿಸಿ
ಧರಣಿನಂದನೆಯು । ನವರಸ
ಭರಿತದಲಿ ನಡೆತಂದಳಾ ಲ
ಕ್ಷ್ಮಣನ ನಾದಿನಿಯು । ಶೀಘ್ರದಿ
ಸುರುಚಿರದ ನವರತ್ನದೆರಕದ
ಹರಿವಣದೊಳಗ್ನಿಯನು ತುಂಬಿಸಿ
ಮರಕತದ ಬಿಜ್ಜಣಿಗೆ[2] ಯಿಂದಲಿ
ಮರೆವಿಡಿದು ಮಂಡಲದ ಮಧ್ಯಕೆ ॥
ತರುಣಿ ತಂದಿತ್ತಳೊಲವಿಂದ ೮

ಹೊಳೆದು ಮೆರೆವ ಸುವರ್ಣ ಹರಿವಣ
ದೊಳಗೆ ಸಂತಸದಿ[3] । ಜಾನಕಿ
ಕಳವಳಿಸುವಗ್ನಿಯನು ತುಂಬಿಸಿ
ಕೊಳುತ ವೈಭವದಿ । ಮುತ್ತಿನ
ಹಳಕು ಹೊಳಕುವ ಪುಳಕ ತುಳುಕುವ
ಜಳತರದ ಪೊಂಬಣ್ಣ ಶಾಲೆಯ

1 ಮುಹೂರ್ತದಲಿ ಕಲಶವ. 2 ಬೀಸಣಿಗೆ. 3 ಸಂಭ್ರಮದಿ.

ಬೆಳಕು ಬೆಳಗುವ ಕಾಲಲಂದುಗೆ
ಗಲಿಕು ಗಿಲಿಕೆಂದೆನ್ನಲಗ್ನಿಯ ॥
ಗಳಿಲನೆ ತಂದಿತ್ತಳೊಲವಿಂದ ೯

ಪೃಥ್ವಿಪತಿ ರಘುರಾಮಚಂದ್ರನು
ಪೃಥ್ವಿಜಾತೆಯನು । ಮನ್ನಿಸಿ
ಮುತ್ತಿನೇಕಾವಳಿಯ ಸರಗಳ
ನಿತ್ತು ರಘುವರನು । ಸಂತಸ[1]
ಪೆತ್ತು ಸಚರಾಚರಕೆ ತೃಪ್ತಿಯ
ನಿತ್ತು ಯಜ್ಞವ ನಡೆಸಿ ರಘುಪತಿ
ಮತ್ತಕಾಶಿನಿ ಸಹಿತ ಸರ್ವರ[2]
ಕರ್ತೃವೆನಿಸಿದ ಪಂಚಲಿಂಗನ ॥
ಮಿತ್ರನೆ ಶ್ರೀರಾಮ—ಸಲಹೆಮ್ಮ ೧೦

## 162. ಬಾಗಿನ ಕೊಟ್ಟದ್ದು

ಕಮಲನಾಭನ ಪಾದಕಮಲಕ್ಕೆ ವಂದಿಸಿ
ಗುರುಹಿರಿಯರ ಚರಣಕ್ಕೆರಗುವೆ—ಎರಗಿ ನಾ ಬೇಡುವೆ
ಮರೆಯದೆ ಮತಿಯ—ಕರುಣಿಸು ೧

ರಂಗ ಮಾಲಕ್ಷ್ಮಿಗೆ ಮಂಗಲ ಸ್ನಾನ ಮಾಡಿಸಿ
ಬಂಗಾರವಿಡಿಸಿ ಅಲಂಕರಿಸಿ—ಲಕ್ಷ್ಮಿಯ
ಕೂದಲ ಬಾಚತೊಡಗಿದ ೨

ಮಂಚದಿಂದೇಳವ್ವ ಜಡೆಯನ್ನು ಕಟ್ಟವ್ವ
ದುಂಡುಮಲ್ಲಿಗೆಯ ಮುಡಿಯವ್ವ—ತಂಗವ್ವ
ಬಳಗಕೆ ಬಾಗಿನವ—ಕೊಡು ಬಾರೆ ೩

ವಟ್ಟೆಯ ಸೀರೆಯ ಉಡುತ ಸುತ್ತಿಕ್ಕುತ
ಮುತ್ತಿನ ಮಲಕು ಬಿಗಿಯುತ್ತ—ತಂಗವ್ವ
ನಾರಿಯರ ಪಾದಕ್ಕೆರಗಿದ ೪

1 ಸಂಭ್ರಮ. 2 ಮತ್ತಕಾಶಿನಿಯರು ವಿನೋದದಿ. 3 ಸಲಹೆಂದು.

ಪಟ್ಟೆ ಹಚ್ಚಡ ಹೊದ್ದು ಮುತ್ತಿನುಂಗುರವಿಟ್ಟು
ಮಿತ್ರೆಯನು ತನ್ನ ಬಲದಲ್ಲಿಟ್ಟುಕೊಂಡು
ವಿಷ್ಣು ಸಂಕಲ್ಪ—ತೊಡಗಿದ ೫

ಸಾಲಿ ಹಚ್ಚಡ ಹೊದ್ದು ಹೂವಿನುಂಗುರವಿಟ್ಟು
ಹೂವಿನ ಮಾಲೆ ಕೊರಳಲ್ಲಿಟ್ಟುಕೊಂಡು
ಸ್ವಾಮಿ ಸಂಕಲ್ಪ—ತೊಡಗಿದ ೬

ಹತ್ತೆಳೆಯ ಜನಿವಾರ ಹೊಟ್ಟೆ ಮೇಲಲೆಯುತ್ತ
ಇಟ್ಟ ಶ್ರೀಗಂಧ ಬೆವರುತ್ತ—ತಮ್ಮಯ್ಯ
ಮಿತ್ರೆಯರ ಪಾದಕ್ಕೆರಗಿದ ೭

ಎಪ್ಪತ್ತು ವರ್ಷದ ಮುಪ್ಪಿನ ಮುತ್ತೈದೆಯರು
ಮುತ್ತಿನ ಚಿನ್ನೋಲೆ ಕಿವಿಯವರು—ಬಂದೈದಾರೆ
ಮುತ್ತು ಬಾಗಿನವ—ಕೊಡು ಬಾರೆ ೮

ಮಿತ್ರೆ ನಿನ್ನ ತವರಿಂದ ಅಕ್ಕಿಯ ಹೇರು ಬಂದ
ಗುತ್ತಿನಾಡಿಂದ ಬಳಿಯೆಲೆ—ಬಂದೈದಾವೆ
ಮಿತ್ರೆ ಬಾಗಿನವ—ಕೊಡು ಬಾರೆ ೯

ಅಕ್ಕಿ ಫಲದಾನವ ಮತ್ತಾರಿಗೆ ಕೊಡಬೇಕು
ಮಿತ್ರೆ ತಂಗವನ ಹಿರಿಯಮ್ಮ—ಸೋದರತ್ತೆಗೆ
ಅಕ್ಕಿ ಫಲದಾನ—ಕೊಡಬೇಕು ೧೦

## 163. ಉಡಿಲು ತುಂಬುವುದು

ಶ್ರೀಗಣೇಶನ ಶಾರದಾಂಬೆಯು ಪಾದಕಮಲಕೆ ಎರಗುವೆ
ಶ್ರೀಗುರು ಶೃಂಗೇರಿ ಶಂಕರ ಭಾರತಿಗೆ ನಮಸ್ಕರಿಸುವೆ
ಮೋದಕಂಗಳು ಕಬ್ಬು ಕಡಲೆ ನೈವೇದ್ಯಗಳ ತಂದಿರಿಸುವೆ
ಭೂರಿ ವಾಸಂತೋತ್ಸವದಿ ಶ್ರೀ[1] ಶಾರದಾಂಬಿಕೆ ಅಮ್ಮಗೇ । ಸುರ ॥
ನಾರಿಯರ್ ತುಂಬಿದರೆ—ಉಡಿಲನು[1] ೧

---

ಶಾರದಾಂಬಿಕೆಗುಡಿಲ ತುಂಬುವ ಸ್ವಾರವನೆ ಕೇಳಿ—ಜನರೆಲ್ಲ.

ತಾವರೆಯ ಪದಕಮಲದುಂಗುರ ಶೋಭಿಸುವ ರತ್ನದ್ಹಾವಿಗೆ
ಕಾಲಲಂದುಗೆ ಗೆಜ್ಜೆ ಸರಪಳಿ ನೂಪುರವು ವೀರಮುದ್ರಿಕೆ
ಸಾಲು ಮಿಂಚು ಪಿಲ್ಲಿ ವಜ್ರದ ಕೀಲು ವೈಜಣಿ ಮಂಟಿಕೆ
ವೀರಸಿಂಹಾಸನದೊಳೊಪ್ಪುವ ಶಾರದಾಂಬಿಕೆ ಅಮ್ಮಗೆ । ಸುಷ ॥
ಪತ್ನಿಯರ್ ತುಂಬಿದರೆ—ಉಡಿಲನು ೨

ಪಟ್ಟೆ ಪೀತಾಂಬರವು ಜರತಾರಿ ಗಚ್ಚು ನೆರಗಿನ ಕಡ್ಡಿಕೆ
ಅಚ್ಚ ತಂಡಿಲ ಮುತ್ತುಮಾಣಿಕ ರತ್ನದ್ಹರಳಿನ ಕಂಚುಕೆ
ಪುತ್ತಳಿಯ ಸರ ತಾಳಿ ಪದಕವ ಇಟ್ಟುಕೊರಳೊಳು ಮುದ್ರಿಕೆ
ವಸ್ತುಮೂರುತಿ ಶೃಂಗಪುರದ ಶ್ರೀ ಶಾರದಾಂಬಿಕೆ ಅಮ್ಮಗೆ । ಮಪಾ ॥
ದೇವಿಯರ್ ತುಂಬಿದರೆ—ಉಡಿಲನು ೩

ಲಿಂಬೆ ನಾರಂಗಿಗಳು ಮಾದಳ ಚೂತಫಲ ಹಿಂಗಾರವು
ಕುಂದಣದ ಬಿಡುಹೊಲಿಗೆ ಮುತ್ತಿನ ಕಂಚುಕದ ಶೃಂಗಾರವು
ಇಂದ್ರಲೋಕ ಭೂಮಂಡಲದೊಳಗುಳ್ಳ ಫಲ ಹಿಂಗಾರವು
ಮಂಗಳಾಂಗಿನಿ ಶೃಂಗಪುರದ ಶ್ರೀ ಶಾರದಾಂಬಿಕೆ ಅಮ್ಮಗೆ । ಸುರ ॥
ನಾರಿಯರ್ ತುಂಬಿದರೆ—ಉಡಿಲನು ೪

ನಾಳಿಕೇರವು ಕದಳಿಫಲ ದಾಳಿಂಬ ದ್ರಾಕ್ಷೆ ಖರ್ಜೂರವು
ನಾಗವಲ್ಲಿಯು ಚೂರ್ಣಕರ್ಪೂರ ಪೂಗಫಲ ತಾಂಬೂಲವು
ಜಂಬು ಜಂಬಿರ ಬುಗರಿ ಕಪಿತ್ಥ ಉರ್ವದಾರವು ಫಲಗಳು
ವೀಣೆ ಕರಮಂಡಲದಿ ನುಡಿಸಿದ ಶಾರದಾಂಬಿಕೆ ಅಮ್ಮಗೆ । ಸುರ ॥
ನಾರಿಯರ್ ತುಂಬಿದರೆ—ಉಡಿಲನು ೫

ರಾತ್ರಿಯೊಳು ನವರಾತ್ರಿಯುತ್ಸವ ಉಯ್ಯಲುತ್ಸವವೆಸಗುವ
ಭಾರತೀಯೊಳು ವ್ಯಕ್ತಿ ಶಾರದೆ ಪ್ರಾರ್ಥಿಸುತ್ತಿಹ ದೇಶದ
ಸುವಾಸಿನಿಯರೈತಂದು ಪೊಗಳಲು ಕೆಲದೊಳಗೆ ಜಗಜಗಿಸುವ
ಕೀರ್ತಿ ಮೆರೆಯುವ ಶೃಂಗಪುರದ ಶ್ರೀ ಶಾರದಾಂಬಿಕೆ ಅಮ್ಮಗೆ । ಸುರ ॥
ನಾರಿಯರ್ ತುಂಬಿದರೆ—ಉಡಿಲನು ೬

ಅತ್ತೆ ಅತ್ತಿಗೆ ಭಾವ ಮೈದುನಿಯತ್ತಿಗೆಯೊಳತಿ ಭಕ್ತಿಯು
ಅತ್ಯಧಿಕ ಶ್ರೀಪತಿಯ ಸೇವೆಯ ನಿತ್ಯದೊಳು ನಡೆಸುತ್ತಿಹ
ಉತ್ತಮಳು ಸತ್ಪುತ್ರರನು ಪಡೆದಿತ್ತ ದೇವಿಯರ್ ಹರುಷದಿ

ವಸ್ತು ಮೂರುತಿ ಶೃಂಗಪುರದ ಶ್ರೀ ಶಾರದಾಂಬಿಕೆ ಅಮ್ಮಗೆ । ಸುರ ॥
ಪತ್ನಿಯರ್ ತುಂಬಿದರೆ—ಉಡಿಲಸು ೭

ಬಾಲಚಂದ್ರನ ಪ್ರಭೆಯ ಹೋಲಿಪ ಓಲೆಮೂಗುತಿ ಕೊಪ್ಪಿನ
ನಾಲು ಕುಂಕುಮ ಗಂಧ ಚಂದನ ಶೋಭಿಸುವ ಜಗನ್ಮೋಹನ
ಶಾರದಾಂಬಿಕೆಗಕ್ಷತೆಯನಿಟ್ಟು ಮೂಡಲಾ ಗಿರಿ ವೆಂಕಟೇಶನ ॥
ರಾಣಿಯು ತುಂಬಿದಳೇ—ಉಡಿಲನು* ೮

## 164. ಮಡಿಲು ಇಳುಹುವದು

ಶ್ರೀಲಲಿತಾಂಬಕಿಯರು ಕೂಡಿ
ಶೀಲವಂತೆಯರೆಲ್ಲರು ಪಾಡಿ
ಮೇಲು ಮುತ್ತಿನ ಹರಿವಾಣದಿ ಸತಿಯರ
ಜಾಲವೆರಸಿ ಧವಳಾರವ ಪಾಡುತ ॥
ಮೇಲೆ ಮಡಿಲಿಳುಹಿ—ಹರಸ್ಯಾರು ೧

ಕೊಂಬು ಕಹಳೆ ವಾದ್ಯದ ರವದಿ
ತಂಬಟೆ ಶ್ರುತಿ ಮೌರಿಯು ಕರದಿ
ಸಂಭ್ರಮ ಕರದಿ । ಸರಸ ಸಂಯುತದಿ
ಅಂಬುಜಮುಖಿಯರಕ್ಷತೆಗಳ ನೀಡುತ ॥
ಲಿಂಬಾಗಿ ಮಡಿಲನಿಳುಹಿದ ೨

ಮಿತ್ರೆಯರೆಲ್ಲರು ನಸುನಗುತ
ಪುತ್ರವಂತೆಯು ನೀನಾಗೆನುತ
ಮತ್ತಾತಿ ಹೊಗಳುತ ಮಡಿಲನ್ನಿಳುಹುತ
ಕರ್ತೃ ಶ್ರೀಗುರು ಪಂಚಲಿಂಗನ ನೆನೆಯುತ ॥
ಮುತ್ತಿನಕ್ಷತೆಯ—ತಳಿದರು ೩

* ಈ ಸೊಲ್ಲಿನಲ್ಲಿ ಒಂದು ಪಾದ ಲುಪ್ತವಾಗಿದೆ.

## 165. ಸೀತಾದೇವಿಯು ಕೋಣೆಗೆ ಕಳುಹಿದ್ದು

ಶರಣೆಂಬೆನು ರಘುರಾಮನಿಗೆ
ಸೀತಾಂಗನೆಯ ಚರಣಗಳಿಗೆ
ಶರಣೆಂದು ಶ್ರೀಚರಣವನು ಪೇಳುವೆ
ವಿನಯದಿ ಸಂತವಿಸಿ ೧

ಸಾಗರಶಯನ ಶ್ರೀರಾಮನಿಗೆ
ಭೂಮಿಯ ತನುಜೆ ಜಾನಕಿಗೆ
ಮಂಗಲವದನೆಯರು ಮಲಗುವ ಮನೆಗಳ
ಶೃಂಗಾರ ಮಾಡಿದರು ೨

ಕನ್ನಡಿ ಮಾಳಿಗೆ ಮನೆಯೊಳಗೆ
ಸ್ವರ್ಣದ ಗೋಡೆಗಳೆದುರಾಗಿ
ಕರ್ಣೆಯರು ಚಿತ್ರಗಳನೆ ಬರೆದರು
ಚಿನ್ಮಯ ರೂಪನಿಗೆ ೩

ಸೂರ್ಯವಂಶದ ಪತಿಯು ಸತಿಗೆ
ಹೂವಿನ ತಲೆದಿಂಬನೆ ಹಾಕಿ
ಅರಳು ಮಲ್ಲಿಗೆ ದವನ ಪರಿಮಳ ಪಚ್ಚೆಯ
ತೆನೆಯ ತೆರೆಗಳ ಹಾಸಿದರು ೪

ಚಂದ್ರವಂಶದ ಪತಿಯು ಸತಿಗೆ
ಹವಳದ ತಲೆದಿಂಬನೆ ಹಾಕಿ
ಮರುಗ ಮಲ್ಲಿಗೆ ಜಾಜಿ ಸುರಗಿಯ
ಸೇವಂತಿಗೆ ಸರಗಳ ಹಾಸಿದರು ೫

ಕಾದ ಹಾಲು ಖರ್ಜೂರಗಳು ಒಳ್ಳೆ
ಚೀನಿ ಸಕ್ಕರೆಯು ತುಪ್ಪವ ಬೆರಸಿ
ನಾನಾ ಪರಿಯ ಕಾದ ಹಾಲು ಖರ್ಜೂರವ
ನಾರಿಯರು ತಂದಿಡಲು ೬

ಕಡಿಯಡಕೆ ಕಾಡೆಳ್ಳುಂಡೆಗಳು ಒಳ್ಳೆ
ಘನವಾದ ಕರ್ಪೂರ ಬಿಳಿಯೆಲೆಯು
ಮಿಂಚು ಮುತ್ತಿನ ಸಣ್ಣ ಮಿಸುನಿ ತಬಕಿನಲಿ
ಕೆಂಚೆಯರು ತಂದಿಡಲು ೭

ನವರತ್ನದ ಚೆಲ್ವ ಹರಿವಾಣದೊಳಗೆ
ಹಣ್ಣು ತೆಂಗಿನಕಾಯನೆ ತುಂಬಿ
ಮಾರನ ಪಡೆದ ಜನನಿ ಮಹಾಲಕ್ಷ್ಮಿಗೆ
ಗರ್ಭಾಧಾನವ ಕೊಡಿಸಿದರು ೮

ಗಮಗಮಿಸುವ ಸಾಂಬ್ರಾಣಿ ದೀಪ ಒಳ್ಳೆ
ನಗನಗಿಸುವ ಕರ್ಪೂರದ ದೀಪ
ನಿಲುಗನ್ನಡಿಗಳ ನುಡಿವರಗಿಳಿಗಳ
ಮಿತ್ರೆಯರು ತಂದಿಡಲು ೯

ಪರಮಾತ್ಮನಿಗೆ ದಶರಥರಾಯ
ಫಲದಾನವನೆ ಕೊಡಿಸಿದನು
ಹತ್ತು ಸಾವಿರ ಲಕ್ಷ ಜವಳಿಯ
ಘನದಿಂದ ನೆರೆದಿಹ ಸುರರೆಲ್ಲ ೧೦

ಅರುಂಧತಿ ಕೌಸಲೆ ಹರುಷದಿಂದ
ಹವಳದಾರತಿಗಳ ಬೆಳಗಿರಿಸಿ
ಒಡಹುಟ್ಟು ತಾಯಿ ತಂದೆಯರ
ಚರಣಕ್ಕೆರಗಿ ಶ್ರೀರಾಮನು ೧೧

ಚಂದ್ರವದನೆ ಜಾನಕಿಯೆ ಏಳು ರಾಮ
ಚಂದ್ರನೊಡನೆ ಆಲಸ್ಯವು ಬೇಡ
ಹಿಂದೊಬ್ಬಳು ಸತಿಯಳು ಮದುವೆಯಾಗಿ
ಕಂದರ ಹರುಷದಿ ಪಡೆದಿಹಳು ೧೨

ಶೇಷಶಯನ ಶ್ರೀರಾಮ ಕೇಳೊ
ಬೈಯದೆ ಬೆದರಿಸದೆಯೆ ಜಾನಕಿಯ
ಏಕಾಂತ ಗೃಹದಲಿ ಭಾಷೆಗಳಿಂದಲಿ
ಪ್ರೀತಿಲಿ ಸಂತವಿಸು ೧೩

ಇಂತೆಂದು ಕೌಸಲೆ ನಂದನಗೆ ಹೇಳಲು
ಬಂಗಾರದ ಕದಗಳನು ಮುಚ್ಚಿ
ರಂಗುಮಾಣಿಕದ ಚಿಲಕವನೆ ಹಾಕಿ
ಕರ್ಣೆಯರು ಹರುಷದಿಂದ ೧೪

ಚಂದ್ರಮುಖಿಯರು ಕಡು ಭಯದಿಂದ
ಬಾಗಿಲ ಹಿಡಿದು ನಿಂದಿರಲು
ಗರುಡಗಮನ ತನ್ನ ಬೆರಳಲ್ಲಿದ್ದುಂಗುರವ
ಚರಣದಿ ಬೀಳಿಸಿದನು ೧೫

ಅಂದುಗೆ ಮೇಲೆಯೆ ಉಂಗುರ ಬೀಳಲು
ಅಂಗನೆ ರಾಮನ ಮುಖನೋಡೆ
ಕನಕದುಂಗುರವಿಲ್ಲಿ ತಾರೆಂದು ಸತಿಯೊಡನೆ
ಕಣ್ಣ ಸನ್ನೆಯ ಮಾಡಿದನು ೧೬

ಗಡ ಗಡ ಗಡ ನಡುಗುತಲೆ
ಹನಿಮುತ್ತುಗಳಂತೆ ಬೆವರುತಲೆ
ತನ್ನ ವಸ್ತ್ರದಿ ಬೆವರುಗಳನೆ ಉದ್ದಿ
ಕರ್ಣೆಯು ಹರುಷದಿಂದ ೧೭

ಹೆದರಲೇತಕೆ ಜಾನಕಿಯೆ ಕೇಳು
ಕರದಲಿ ತಗುಲಿಸಿದೆನು ನಾನು
ಉರಿವ ಅಗ್ನಿಗೆ ಮಾತ ಮೀರಲಿಲ್ಲವೊ ಎಂದು
ಕಣ್ಣೆತ್ತಿ ನೋಡೆಂದನು ೧೮

ಅಂಜಲೇತಕೆ ಜಾನಕಿಯೆ ನೀನು
ಇಂದಿಗೆ ನೂತನದವಳೆ ನೀನು
ಕಂಡರಿಯೆನೆ ನಾನು ಜನಕನ ಮನೆಯಲಿ
ಧನುವ ಖಂಡಿಸಿದವನು ೧೯

ಕಾದ ಹಾಲು ಖರ್ಜೂರಗಳ ಒಳ್ಳೆ
ಚೀನಿ ಸಕ್ಕರೆಯ ತುಪ್ಪವ ಬೆರಸಿ
ನಾನಾ ಪರಿಯ ಕಾದ ಹಾಲು ಖರ್ಜೂರವ
ನಾರಿಯ ಕೂಡಿಯುಂಡ ೨೦

ಕಡಿಯಡಕೆ ಕಾಡೆಳ್ಳುಂಡೆಗಳು ಒಳ್ಳೆ
ಘನವಾದ ಕರ್ಪೂರ ಬಿಳಿಯೆಲೆಯು
ಮಿಂಚುಮುತ್ತಿನ ಸಣ್ಣ ಮಿಸುನಿ ತಬಕಿನಲಿ
ಕೆಂಚೆಯು ಕೂಡಿಯುಂಡ ೨೦

ಆರೋಗಣೆ ಮಾಡಿ ಕೈತೊಳೆದು ಒಳ್ಳೆ
ತೂಗುಮಂಚದ ಮೇಲೆ ಕುಳಿತಿರಲು
ನಾನಾ ಪರಿ ವಾದ್ಯ ಭೇರಿ ದುಂದುಭಿಗಳು
ಘೋರನೆ ಮೊಳಗಿದವು ೨೧

ತೋರಮುತ್ತಿನ ಹಾರವ ಪಿಡಿದು
ಜಾನಕಿ ಕಂಠದೊಳದನಳವಡಿಸಿ
ಹರದಿಯೆ ಜಾನಕಿ ಹೆದರಬೇಡೆಂದು
ರಾಮ ಕರವನ್ನೆ ಪಿಡಿದನು ೨೩

## 166. ಕಾಯಿ ಇಟ್ಟಿದ್ದು

(ಮದುವೆಯಾಗಿ ಮೊದಲ ದೀಪಾವಳಿ ಹಬ್ಬದ ದಿನ)

ಬಂದ ರಾಮ ಸೀತೆ ಸಹಿತ ಕಾಯನಿಡುವಲಿ
ಇಂದು ತನ್ನ ಬಳಗದವರ ಕೂಡಿ ಮಿಥಿಲೆಗೆ ಪ

ಜನಕ ರಾಯಯೋಧ್ಯಾಪುರಕೆ ಕಳಿಸೆ ಓಲೆಯ
ಬರಬೇಕು ದೀಪಾವಳಿಗೆ ಬಳಗ ಸಹಿತಲಿ ೧

ಓಲೆ ನೋಡಿ ರಾಘವೇಂದ್ರ ಪರಮ ಹರುಷದಿ
ಅನುಜ ಲಕ್ಷ್ಮಣ ಭರತ ಶತ್ರುಘ್ನ ಸಹಿತಲಿ ೨

ಜನಕ ಜನನಿ ಕೌಸಲೆ ಕೈಕೆ ಸುಮಿತ್ರೆ ಸಹಿತಲಿ
ಪುರದ ಜನರನೆಲ್ಲ ಕೂಡಿ ಪೊರಟ ಮಿಥಿಲೆಗೆ ೩

ಆನೆ ಕುದುರೆ ಸೇನೆ ವಾದ್ಯ ಘೋಷದಿಂದಲಿ
ಪ್ರೇಮದಿಂದ ಬಂದ ರಾಮ ಸೀತೆ ಸಹಿತಲಿ ೪

ಹತ್ತು ಸಾವಿರ ತೆಂಗಿನ ಫಲವ ರಥದೊಳಿರಿಸುತ
ಹತ್ತಿ ರಥವ ಸೀತೆ ಸಹಿತ ಬಂದ ಮಿಥಿಲೆಗೆ ೫

ಬಂದ ಜನರ ಮನ್ನಿಸುತ್ತ ಜನಕರಾಜನು
ಸಂಭ್ರಮದಿ ಉಪಚಾರವನ್ನು ಗೈದನು ೬

ಮುತ್ತು ಮಾಣಿಕ್ಯ ಹರಿವಾಣದೊಳಗೆ ಫಲಗಳ
ಪುತ್ರೆ ಕೌಸಲೆ ತುಂಬಿ ಬೇಗ ತಂದಳೊಳವಿಗೆ ೭

ತಂದ ಫಲಗಳಲೆಲ್ಲ ಬಿಡದೆ ಒಳಗೆ ತರಿಸುತ
ಸೀತೆ ಸಹಿತ ದೇವರಿದಿರೊಳಿಟ್ಟು ಫಲಗಳ ೮

ಭಕ್ತಿಭಾವದಿಂದ ರಾಮ ಕರವ ಮುಗಿಯುತ
ಹತ್ತು ಸಾವಿರ ಫಲಗಳನ್ನು ಇಟ್ಟು ಮುದದೊಳು ೯

ಜನಕ ತನ್ನ ಅಳಿಯ ಮಗಳಿಗುಡುಗೊರೆ ಗೈಯಲು
ವನಿತಾಮಣಿಯರೆಲ್ಲ ಕೂಡಿ ಆರತಿಯ ಗೈದರು ೧೦

## 67. ಸೀಮಂತದ ಶೋಭಾನ (ಕೋಡಿ ಹಾಡುಗಳು)

ಶ್ರೀ ಶಂಕರಿ ಶುಭಕರಿಗೆರಗಿ
ವಾಸವ ದಿವಿಜಾವಳಿಗುರೆ ಬಾಗಿ
ಈಶ ಗಣೇಶ ಮಹೇಶರಿಗೆರಗುತ
ಶ್ರೀಶೆಗೆ ಸೀಮಂತವ ಗೈದುದ ನಾ ॥
ಸೀ ಸಮಯದಿ ಪೇಳಿ—ಪೊಗಳುವೆ ೧

ದೀನ ನರರ ದಾರಿದ್ರ್ಯಹಿಪತಿಯು
ವೈನತೇಯಳ ನಕ್ಷತ್ರದ ವರಿಯ
ತಾನೆ ಬುಧರು ಸನ್ಮಾನದಿ ಗುಣಿಸುತ
ದಾನವ ರಿಪುವಿಗೆ ವಾಣಿಯೆನಲು ದಿನ ॥
ಮಾಣದೆ ಮಾಡಿಸಿದ—ಹರುಷದಿ ೨

ಭವಕಾನನ ದಾವಾಗ್ನಿ ರುಕ್ಮಿಣಿಗೆ
ಸವೆಯಿತು ಷಣ್ಮಾಸವು ಮಿಗಿಲಾಗೆ
ಭುವನವಂದಿತ ಶ್ರೀಧವ ಶ್ರೀಕೃಷ್ಣ ಭೂ
ದಿವಿಜರ ಮತದಿ ಸೀಮಂತಕೆ ದಿನವನು ॥
ವಿವರಿಸಿ ಕೇಳಿದನು—ಪೊಸತಾಯ್ತು ೩

ಪುಂಡರೀಕಾಕ್ಷಿಗೆ ಸೀಮಂತವನು
ಪುಂಡರೀಕಾಕ್ಷನು ಮಾಳ್ಪನೆಂಬುದನು
ಕುಂಡಿನೀಪತಿ ಗಜಗಂಡ ಪಂಚಾಸ್ಯಗೆ
ಕೊಂಡಿತ್ತರು ಶ್ರೀಕೃಷ್ಣನ ಪತ್ರಿಕೆ ॥
ಕೊಂಡು ಹರುಷಿಸಿದ—ಸರಸದಿ ೪

ಗುಡಿಯಿದು ವಂಶದ ಲತೆಯಡಿಯಿಟ್ಟು
ಬುಡ ತುದಿ ವರೆಗೂ ಬೆಳೆಯಿತೆಂದಷ್ಟು
ಒಡಲ ಹರ್ಷದ ಕಡು ಜಡಜಕೆ ಭಾಸ್ಕರ
ನೊಡನುದಯಿಸಿದನು ಮಡದಿ ಪುರುಷರಿಗೆ ॥
ಒಡನೊಡನೆ ಒಸಗೆ—ಹರದುದು ೫

ಧಾರಿಣೀಸುರ ಗಾರ್ಗ್ಯನ ದಾರಿದ್ರ್ಯ
ಕಾರಗತ್ತಲೆ ದಿನಪನು ಭೂಪೇಂದ್ರ
ಭೂರಿ ಕನಕಮಣಿ ಸಾರ ಸುವಸ್ತುವ
ಹೇರಿಸಿ ಸಂತೋಷದ ಚಂದ್ರಿಕೆಯೊಳು ॥
ಬೇರೆ ಬೇರಿತ್ತ—ನಲಿಯುತ್ತ ೬

ಭವ ವನ ಘೋರ ಹುತಾಶನ ಹರಿಗೆ
ವಿವರಿಸಿ ತಾವ್ಮೈತಹೆವು ದ್ವಾರಕಿಗೆ
ದಿವಿಜಕುಲಾರ್ಚಿತ ದಯೆಗೈಯುತ ಶ್ರೀ
ಧವ ಶುಭ ವಾಮನ ಮೂರ್ತಿಗೆ ಪೇಳಿರಿ ॥
ವಿವರಿಸಿಯೆನಲು—ನುಡಿದರು ೭

ಧರೆಯಧಿಪನ ಮಾತನು ಮಿಗೆ ಕೇಳಿ
ಧರಣೀಸುರರು ಶ್ರೀಕೃಷ್ಣಗೆ ಪೇಳಿ
ತೆರಳಲು ಬಂಧುಬಾಂಧವರನು ಬರಿಸುತ
ಪರತರರೂಪನು ನರರಂತೆ ನಟಿಸಿದ ॥
ತೆರನ ನಾನೇನ—ಪೊಗಳುವೆ ೮

ಗದ್ದುಗೆಯಿಂದಿಳಿದನು ಭವರಹಿತ
ಉದ್ಧವ ಮೊದಲಾದವರ ಕರೆಸುತ
ಗದ್ದಲವನು ತನಗಿದ್ದವರಿಗೆ ಕರು
ಣಾಪ್ರರ್ಣವನುಸುರಿದ ಚೋದ್ಯವ ಬಣ್ಣಿಪ ॥
ಬುದ್ಧಿಯುತರ ಕಾಣೆ—ಜಗದಲ್ಲಿ ೯

ಬಳಿವಾರದಿ ತನ್ನಯ ಹಿರಿಯರನಿ
ಕಳಕೀರವಾಣಿಗೆ ಶುಭಲಗ್ನವೆರನಿ
ತಿಳಿಯಲು ಸೀಮಂತವ ನಾ ಮಾಡುವೆ
ನೆಲೆ ಶುಭಚರಿತವವಕೆ ನಿಮಗೆಂದೆನು ॥
ಚೆಲುವೆಗೆ ದಯೆಯಿರಲಿ—ನಿಮಗೀಗ ೧೦

ಅಗ್ರಜ ಮೊದಲಾದವರನು ನೋಡಿ
ಉಗ್ರಸೇನಾದ್ಯರ ಬಲಬಂದಾಡಿ
ಶೀಘ್ರದೊಳೀ ಸೀಮಂತಕೆ ಬಲು ಸಾ
ಮಗ್ರಿಗಳನು ಭವನಿಗ್ರಹ ತರಿಸಿದ ॥
ನಾರ್ಗದನೊರೆವೇ—ವಿಭವವ ೧೧

ಜಲಧಿಮಧ್ಯದಿ ನಿರ್ಮಿತವಾಗಿರುವ
ಚೆಲುವಾಗಿಹ ದ್ವಾರಕ ಪುರವರವ
ನೆಲಗಟ್ಟುಗಳಿಂದಲಿ ಶೃಂಗರಿಸುತ
ಬಲರಿಪುವಿನ ಸೊಬಗಳುಕಿಪ ದ್ವಾರಕಿ ॥
ಕೆಲಸದೊಳೇನ—ಪೊಗಳುವೆ ೧೨

ಕೇರಿಕೇರಿಗೆ ನವರತ್ನ ನಿರ್ಮಿತವ
ತೋರಣ ಕುರುಜು ಮೇರುವೆ ಮೊದಲಾದ
ಸಾರಣೆ ಪುಣುಗು ಕಸ್ತೂರಿ ಸೌರಭದಿ ಪು
ರಾರಿಯ ನಖ ಕಂಸಾರಿಯ ನಗರ ವಿ ॥
ಸ್ತಾರವನೇನಾ—ಪೊಗಳಲಿ ೧೩

ಚಪ್ಪರ ಮೇಲ್ಕಟ್ಟುಗಳನು ರಚಿಸಿ
ಉಪ್ಪರಿಗೆಗೆ ರಂಗೋಲೆಯನಿರಿಸಿ
ಪುಷ್ಪಧನ್ವನ ಪಿತ ಸರ್ವಶಯನನಂ
ದೊಪ್ಪುವ ತೆರದಿ ಸಮರ್ಪಿಸಿದರು ಕಂ ||
ಡರ್ಪೊಗಳದುಳಿಗೇನಿದರನು ೧೪

ದೇವಕೀಸತಿ ಗೋಪಿಯರಿದ ನೋಡಿ
ಭಾವಸಂತೋಷದಿ ಮುಳುಗುತಲಾಡಿ
ತಾವೆ ಶೃಂಗರಿಸುತ ಕುಮುದಗಂಧಿನಿ ಸತ್ಯ
ಭಾವೆಯರಿತು ತನಗೀ ವಿಧಿಯೆಂದುಪ ||
ಜೀವನ ಹೇಗೆಂದು—ನುಡಿದಳು ೧೫

ಓರಿಯಳು ನಾನೆಂಬಾ ಮದ ಮೊದಲೇ
ಇರುವುದದಕೆ ಪ್ರಟವಿಕ್ಕಿತು ಬಲ್ಲೆ
ಹರಿಯ ಕರುಣರಸಕೆರಕವಾದಳು ಗಂಡು
ತರಳನುದಿಸಲೆನ್ನ ಪರಿಕಿಸನೆಂದವ ||
ಛೊರೆದಳು ಬಾಯ್ಬಡಿಕತನದಲ್ಲಿ ೧೬

ಆ ಸಮಯದಿ ಸತ್ಯಭಾಮೆಯ ಮನೆಗೆ
ಕೇಶವ ತಾನೈತಂದನು ಬಾಗೆ
ಆ ಸುಗುಣೆಯು ಎಂದಿನಂತುಪಚರಿಸದೆ
ಮಾಸಿದ ನಗೆಯಿಂದಿರೆ ಕರುಣಾರ್ಣವ ||
ನಾ ಸತಿಯೊಳು ನುಡಿದ—ಹರುಷದಿ ೧೭

ಇಕ್ಕೊ ಕೇಳೆಲೆ ಕಾಮಿನಿಮಣಿ ನಿನ್ನ
ಅಕ್ಕ ರುಕ್ಮಿಣಿ ಬಸುರಾದಳು ಚಿನ್ನ
ಮಕ್ಕಳ ದುಃಖಾಬ್ಧಿಕ್ಕರುಣೋದಯು
ವಿಕ್ಕಿದೆ ಯದುವಂಶದ ಕಡಲುಕ್ಕಿತು ||
ಮುಕ್ಕಣ್ಣನ ದಯದಿ—ನಮಗೀಗ ೧೮

ಚಂದ್ರಾನನೆ ಯದುವಂಶದ ನಿಧಿಗೆ
ಚಂದ್ರನುದಯಿಸುವ ಹರ ದಯವಾಗೆ
ಎಂದೆನಲಾ ಗೋವಿಂದನ ಮಾತಿಗೆ
ಮಂದಗಮನೆಯೊಡಬಡದಿರೆ ನೀತಿಯ ॥
ನಂದು ಬೋಧಿಸಿದ—ಹರುಷದಿ ೧೯

ಇತ್ತಲು ರುಕ್ಮಿಣಿಪಿತ ಹರುಷದಲಿ
ಪುತ್ರಿಯ ಶೋಭಾನಕೆ ವಹಿಲದಲಿ
ಪುತ್ರಪುತ್ರಾದಿ ಸಮಸ್ತ ಪರಿವ್ರಜ
ವಿಸ್ತರದಾ ಶುಭಕೃತ್ಯಕೆ ಬರಲೆಂದು ॥
ಪೃಥ್ವಿಪ ಕರೆಸಿದನು—ಬಲು ಬೇಗ ೨೦

ಬಂದವರನು ಕಂಡಂದುಪಚರಿಸಿ
ನಿಂದವರೊಳು ಪ್ರಿಯದಿಂವಲೆ ನುಡಿಸಿ
ಅಂದತಿ ವೈಭವದಿಂದಲೆ ಮನ್ನಿಸಿ
ಮುಂದಹ ಕಾರ್ಯವನಂದುಸುರುತ ದಯ ॥
ದಿಂದೆಲ್ಲ ಕೇಳಿ—ಪೊಗಳ್ದರು ೨೧

ಲಲಿತನಂದನದಲಿ ಸುರತರು ಬೆಳೆದು
ಫಲಿಸಿದಂದದಿ ಬಲು ತೋಷದೊಳೊಲಿದು
ಬೆಳೆದುದರಿಂ ಯದುಕುಲದ ಮಹೋದಯ
ಬಳೆದುದು ಹರಿ ವರನಾದನು ಭಾಗ್ಯಗ ॥
ಳೊಳು ನಿನ್ನ ಭಾಗ್ಯಕ್ಕೆಣೆಯಿಲ್ಲ ೨೨

ಅತ್ತಿತ್ತಲು ಕುಶಲದ ನುಡಿ ನುಡಿದು
ಮತ್ತಾಗುವ ಕಾರ್ಯವ ನೆನೆನೆನೆದು
ಚಿತ್ತಜ ಮಾತೆಯ ದಿಬ್ಬಣಕೆಂದೆ
ನ್ನುತ್ತ ಕರೆಸಿದನು ಚಿತ್ರಕರನು ಧರೆ ॥
ಪೊತ್ತಹಿಪತಿಗುಸುರಲಳವಲ್ಲ ೨೩

ಚಾರು ತುಂಬಿಯು ಗಾನಕೆ ಮನಸೋತು
ವಾರಿಜ ನಸುನಗೆ ನಗುವಂತಾಯ್ತು
ಊರೂರಿನ ಪಾರ್ಥಿವರು ಸಂತೋಷದಿ
ಧಾರಿಣಿಪನ ದಿಬ್ಬಣಕ್ಕೈತಂದರು ॥
ನಾರಿಯರನು ಕೂಡಿ—ತ್ವರಿತದಿ ೨೪

ಅನುದಿನ ಘೋರತಪಸ್ಸಿನೊಳ್ ನಮಗೆ
ಮನ ಕಾಣದ ಪರಬ್ರಹ್ಮ ಕಂಗಳಿಗೆ
ಕ್ಷಣದಿ ಕಂಡೆಮ್ಮಘವನು ಸುಡಲಿಂದೇ
ದಿನವೆಂದೆನುತ ಮಹಾಜನವೈದಿತು ॥
ಜನಪನ ದಿಬ್ಬಣಕೆ—ಬಲು ಬೇಗ ೨೫

ತರಿತರಿಸಿದರರಳಿನ ಮಹಾರಾಶಿ
ಸುರಗಿರಿಗಳೊ ಎಂಬಂತೆ ಕಟ್ಟಿರಿಸಿ
ಸರುವ ಸಂಭ್ರಮದಲಿ ಕದಳೀಪಕ್ವವ
ಕರಿಗಳ ಮೇಲೇರಿಸಿ ಬಹುವಾದ್ಯದಿ ॥
ಸರುವ ಸಂಭ್ರಮದಿ—ನಡೆದರು ೨೬

ಶಕಟದೊಳೇರಿಸಿ ಗುಡ ನಾಳಿಕೇರ
ಸಕಲ ಜನರು ಎದ್ದಾಗವರವರ
ಪ್ರಕಟವಾಹನದಿಂದ ಕುಳಿತರಂದಾಗ
ಒಕವೈರಿಯ ಸಂದರ್ಶನಕೆನ್ನುತ ॥
ಮಖವೈರಿಯ ನೆನೆದು—ನಡೆದರು ೨೭

ಧರೆ ನಡುಗಲು ದಿಕ್ತಟವಾಗಲುಗೆ
ಕರಿ ಹಯ ದಿಬ್ಬಣಿಗರ ಪದಹತಿಗೆ
ಹೊರುವ ಕೆಲಸವೆನಗರಿದೆಂದಹಿಪನು
ಒರಲಿದನೆಣ್ದೆಸೆ ಗಜಗಳು ಬಗ್ಗಿದು ॥
ತಿರುಗಿದವಿನ್ನೇನ—ಪೊಗಳ್ವರೊ ೨೮

ಕ್ಷೀರ ಶರಧಿ ಯಾಕೆದ್ದುದೊ ಬರಿದೆ
ಯಾರಟ್ಟಿದರಿಲ್ಲಿಗೆ ಇರಗೊಡದ
ದ್ವಾರಕಿ ಜನರೀ ಪರಿ ಯೋಚಿಸಿ ಹೆ
ದ್ದಾರಿಯೊಳಗೆ ಬರಲರಿತು ನಿಜವ ಪರಿ ॥
ಚಾರರ ಮುಖದಿಂದ—ಕಡಗಲ್ಲಿ ೨೯

ಎದ್ದು ಶರಧಿ ಭೋರ್ಗರೆದಂತಾಗೆ
ವಾದ್ಯಧ್ವನಿ ನುಡಿ ಕೇಳದ ಹಾಗೆ
ಗದ್ದಲದಿಂದಿರೆ ದ್ವಾರಕಿ ಜನವಿದಿ
ರೆದ್ದು ಬಂದುದು ಇವರಿದ್ದಲ್ಲಿಗೆ ಬಲು ॥
ಚೋದ್ಯವಿನ್ನೇನ—ಪೊಗಳುವೆ ೩೦

ತರತರದಲಿ ಸಿಂಹಾಸನವಿಟ್ಟು
ಕರೆತಂದು ಕುಳ್ಳಿರಿಸುತ್ತಲೆ ಒಟ್ಟು
ಪರಿವಾರಿಯಿಂದುಪಚರಿಸುತಲೆಲ್ಲರ
ನಿರಿಸಿದ ತಾರತಮ್ಯವನರಿತಾಕ್ಷಣ ॥
ವರಮ ಸಂಭ್ರಮದಿ—ಬಲರಾಮ ೩೧

ತಂದ ಸುವಸ್ತುವನೆಲ್ಲವ ತೆಗೆದು
ಬಂದೋವಸ್ತಿನೊಳಿರಿಸಿದರೊಲಿದು
ಇಂದಿರೆಯರಸಗೆ ರುಕ್ಮಿಣಿದೇವಿಗೆ
ಚಂದದಿ ಸೀಮಂತದ ಶುಭ ಹವನವ ॥
ನಂದು ವಿರಚಿಸಿದ—ಬಲು ಬೇಗ ೩೨

ರಾಶಿ ರಾಶಿ ದಕ್ಷಿಣೆಯನೆ ಕೊಡಿಸಿ
ಸಾಸಿರ ಜನರಿಗೆ ಭೋಜನ ಬಡಿಸಿ
ಭೂಸುರರೆಲ್ಲವರಾಶೀರ್ವಾದವ
ವಾಸವನುತ ಸರ್ವೇಶಗೆ ರುಕ್ಮಿಣಿ ॥
ಗಾ ಸಮಯದೆ ಮಾಡಿ—ನಡೆದರು ೩೩

ಮಂಗಲ ನಿಗಮಾಗಮ್ಯ ಮೂರುತಿಗೆ
ಮಂಗಲ ಶ್ರೀಲಕ್ಷ್ಮೀ ವರಪತಿಗೆ
ಮಂಗಲ ಶ್ರೀಮಹಾಲಿಂಗನ ಸಖನಿಗೆ
ಮಂಗಲ ದಾರಿದ್ರ್ಯಾರ್ಣವ ನಾವೆಗೆ ॥
ಮಂಗಲವೆಂದೆನುತ—ನುತಿಸ್ಯಾರು ೩೪

## 168. ಹೊರಿಕೊಂಡು ಹೋಗುವದು

ಶ್ರೀವಾರಣಮುಖನಡಿಯ । ನೆನೆ
ದಾ ವಿಧಿಮುಖನುತ ಹರಿಯ । ಮೃದು
ಭಾವದಿ ನುತಿಸಿಭಪುರಿಯ । ಸರ
ದೇವನರಸಿ ಸೀಮಂತಕೆಯುರಳಿನ ॥
ಭಾವಜ ಪಿತ ತಂದದುಸುರುವೆ ೧

ಉಟ್ಟ ಪೀತಾಂಬರ ಝರಿಯ । ಗಳ
ಕಿಟ್ಟ ಸರದ ಹೊನ ಪರಿಯ । ಅಳ
ವಟ್ಟ ಸೊಬಗ ಶ್ರೀಹರಿಯ । ಬಲು
ಬಟ್ಟಕುಚೆಯರೆವೆಯಿಟ್ಟರಲರಳಿನ ॥
ಕಟ್ಟ ಪಿಡಿದೊಡನೆ—ನಡೆತಂದ ೨

ದಿನಕರ ಕಿರಣವ ಪಳಿವ । ಕನತ್
ಕನಕ ಧವಲ ಲಾಜದ ಭಾವ । ವಂ
ದನುಕರಿಸಿತು ಹರಿಕರವ । ಪಿಡಿ
ದಿನಿತೆನೆ ಜನಮನ ವಿನಯದಿ ವೆಂಕಟ ॥
ಚಿನುಮಯನೈತಂದ ನೊಲವಿಂದ ೩

## 169. ಬಯಕೆ ಹಾಡು

ಗುರುಗಜಮುಖರಂಘ್ರಿಗೆರಗಿ ವಾಗ್ದೇವಿಯ
ಚರಣ ಪಂಕಜಕೆ ತಲೆವಾಗಿ—ರುಕ್ಮಿಣಿ ದೇವಿ
ಚರಿತದ ಬಯಕೆಯನು—ಪೊಗಳುವೆ ೧

ಬಂಧು ಬಾಂಧವ ನಾರೀವೃಂದವೈತಂದಲ್ಲಿ
ಚಂದಿರಮುಖಿಯ ನುಡಿಸುತ್ತ—ನಿನ್ನಯ ಮನದೊ
ಳಿಂದೇನು ಬಯಕೆ—ಉಸುರೀಗ ೨

ಫಣಿವೇಣಿ ಶುಕವಾಣಿ ಮನ್ಮಥನರಗಿಣಿ
ಮನದೊಳಿನ್ನೇನ ನೆನೆದೆಯೊ—ಪೇಳಿದರೀಗ
ವನಿತಾಮಣಿ ನಿನಗೆ—ಕೊಡುವೆವು ೩

ವಾರಿಜಗಂಧಿನಿ ಕೀರಭಾಷಿಣಿ ಮುದ್ದು
ನೀರೆ ಪೇಳ್ಮನದಿ ನೆನೆದುದ—ವೇಳಿದರೀಗ
ನಾರಿ ಕೇಳ್ ನಿನಗೆ—ಕೊಡುವೆವು ೪

ಬಣ್ಣ ಬಂಗಾರದೊಳಿನ್ನೇನ ನೆನವೆಯೊ
ಸಣ್ಣ ಮಲ್ಲಿಗೆಯ ತುರುಬಿಗೆ—ಝಲ್ಲಿಯ
ಬಿಡಬೇಕೆನುತ್ತ—ನೆನೆವೆಯೊ ೫

ತೂಗುಮಂಚದ ಮೇಲೆ ತೂಗಲಪೇಕ್ಷೆಯೊ
ಪೂಗಪುಷ್ಪವನು ನೆನೆವೆಯೊ—ಕೇತಕಿ ಸುಮವ
ನಾಗಾಸನನರಸಿ—ನುಡಿ ಬೇಗ ೬

ಅನ್ನವನುಣ್ಣದೆ ಕಣ್ಣ ನೀ ತೆರೆಯದೆ
ಬಣ್ಣ ಭೂಷಣವ ರಚಿಸದೆ—ಮೌನದೊಳಿರ್ಪು
ದಿನ್ನೇತಕೆಮ್ಮೊಳುಸುರೀಗ ೭

ಬಡನಡುವಿನ ಬಾಲೆ ಕಡಗ ಕಂಕಣವನ್ನು
ಇಡದೇತಕಿಂತು ಮೌನದಿ—ಮಂಚದ ಮೇಲೆ
ಬಡವಾಗುತೇಕೆ—ಮಲಗಿದೆ ೮

ಮಲ್ಲಿಗೆ ಗಂಧಿನಿ ಕೇಳು ಫುಲ್ಲಲೋಚನ ಬರ
ಲಿಲ್ಲವೆಂದೆನುತ ನೆನೆದೆಯೊ—ಮಿಕ್ಕರಸಿಯ
ರಲ್ಲಿರುವನೆಂದು—ಬಳಲ್ವೆಯೊ ೯

ಕಾಳಾಹಿವೇಣಿ ನೀ ಕಾಲಿಗುಂಗುರವನ್ನು
ನೀಲದ ಪದಕ ರವಕೆಯ—ಸರವನ್ನು
ಬಾಲೆ ನೀನೇಕೆ—ತೊಡಲಿಲ್ಲ ೧೦

ಮಾವಿನುಪ್ಪಿನಕಾಯಿ ಸೇವಗೆ ದಧಿ ಘೃತ
ಭಾವಿಸಿ ತಂಡುಲವ ತಿನಲೆಂದು—ಯೋಚಿಸಿದರೆ
ಭಾವಕಿ ನೀನುಸುರು—ನಮಗೀಗ ೧೧

ಶೀತಳೋದಕವನು ಪ್ರೀತಿಯೊಳ್ ನೆನೆವೆಯೊ
ಏತಕಿಂದೆಮ್ಮೊಳುಸುರೆಯೊ—ಮನದೊಳಿದ್ದ
ರೀತಿಯ ಪೇಳು—ನಮಗೀಗ ೧೨

ಸುಳಿಯೆಲೆ ತಿನಲೆಂದು ತಿಳಿದೆಯೊ ಮನದಲ್ಲಿ
ಎಳನೀರ ಕುಡಿಯೆ ನೆನೆವೆಯೊ—ನೇರಳೆ ಹಣ್ಣ
ಮೆಲಲೆಂದು ಭಾವಿಸುತಿಹೆಯೊ ೧೩

ಚೀನಿಕಾಯಿಯ ತಿನಲು ಮಾನಿನಿ ನೆನೆದೆಯೊ
ಚೀನಿ ಸಕ್ಕರೆಯ ಮೆಲಲೆಂದು—ಅಭಿಲಷಿಸಿ
ಕಾನಕಲ್ಲಟೆಯ—ನೆನೆದೆಯೊ ೧೪

ಫುಲ್ಲಲೋಚನೆ ಮನದೊಳ್ಳಿತವ ಮೆಲಲೆಂದು
ಕಲ್ಲುಸಕ್ಕರೆಯ ತಿನಲೆಂದು—ಗುಡ ಪಾಯಸ
ಮೆಲ್ಲಲಿಕೆ ಮನವೋ—ನುಡಿ ಬೇಗ ೧೫

ಕನ್ನೆ ಖರ್ಜೂರದ ಹಣ್ಣ ಬಯಸಿದೆಯೊ
ಚಿನ್ನದೊಳಗೇನ ನೆನೆವೆಯೊ—ಉಸುರಿದರೀಗ
ಚೆನ್ನಾಗಿ ತರಿಸಿ—ಕೊಡುವೆವು ೧೬

ಮತ್ತಕಾಶಿನಿ ಕೇಳು ಹತ್ತು ತಿಂಗಳ ಮೇಲೆ
ಅಸ್ತಮಾನ ಕಾಲದೊಳಗೆಯೆ—ಓರ್ವಳೆ
ಹೊಸ್ತಿಲ ಹೊರಡದಿರು ನೀನು ೧೭

ಭಾರ ಕೈಯಲಿ ಕೊಂಡು ದಾರಿಮೇಲ್ ನಡೆಯದಿರು
ಚಾರು ಮೋಹನ್ನೆ ಗುಣರನ್ನೆ—ಕೇಳ್ ಸುಕು
ಮಾರ ಬಳಲುವನು—ಉದರದಿ ೧೮

ಇನಿತು ಸಂಭ್ರಮದಿಂದ ವನಜಲೋಚನೆಯರು
ವನಿತೆ ರುಕ್ಮಿಣಿಯೊಳುಸುರಿದ—ಚರಿತವನಂತು
ಚಿನುಮಯನರ್ಧಾಂಗಿ—ನುಡಿದಳು ೧೯

ಅರಿತು ನೀವೆನ್ನೊಳೀ ತೆರನೇಕೆ ನುಡಿವಿರಿ
ಅರಿಯೆ ನಾನೇನನುಸುರಲು—ಎನ್ನಯ ಮನದ
ಹರವರಿಕೆಯೇನನೊರೆಯಲಿ ೨೦

ಸರಸಿಜಾಂಬಕ ದಯೆವೆರಸಿ ಮನ್ಮನಸ್ಸಿಗೆ
ಪರಿತೋಷವಿತ್ತು ನಲಹಲಿ—ಶ್ರೀಪಂಚಲಿಂಗ
ಕರುಣದೊಳಿಷ್ಟಾರ್ಥ—ಕೊಡಿಸಲಿ ೨೧

## 170. ಕೋಡಿ ಹೋಮ ಮಾಡಿದ್ದು

(ಈ ಹಾಡು ಎಲ್ಲ ಹವ್ಯಕ ಸೀಮೆಗಳಲ್ಲಿಯೂ ಪ್ರಚಲಿತವಿದೆ. ಇಲ್ಲಿ ಶುದ್ಧಪಾಠವನ್ನು ಆಯ್ದು ಉಳಿದುವನ್ನು ಪಾಠಾಂತರವಾಗಿ ಕೊಟ್ಟಿದೆ )

ಮಾಡಿದ ಹೋಮವನು । ಶ್ರೀಗುರು ತಾನು
ಮಾಡಿದ ಹೋಮವನು ಪ

ಮಾಡಿದ ಹೋಮವ ಕೂಡೆ ಶ್ರೀರಾಘವ
ರೂಢಿಗೊಡೆಯನಾಳೆಂದಾಡುತ್ತಾನಂದದಿ ೧

ಮಂಡಲ ಸಾರಿಸಿ ರಂಗವಲ್ಯವನಿರಿಸಿ
ಇಂದು ಶ್ರೀರಾಮನು ಸಂಭ್ರಮದಿಂದಲಿ ೨

ಸೀತೆ ಸುನೀತೆ ಪುನೀತೆ ಭೂಜಾತೆಯೆ
ಪ್ರೀತಿಯೊಳಗ್ನಿಯ ನೀ ತಾಕೆನ್ನುತ ಬೇಗ ೩

ಅತ್ತಿತ್ತಿ ಶಮಿ ಕುಶ ಉತ್ತರಣೆ ಪಾಲಾಶ[1]
ಉತ್ತಮ ಚರು ಘೃತವಿತ್ತು ಹೋಮವ ಮಾಡಿ[2] ೪

ಆರು ಬೆರಳುಗಳಲಿ ಆಲವ ಮುರಿದನೆ
ಆರು ಆಹುತಿಗಳ ಯಜ್ಞೇಶ್ವರಗಿತ್ತನೆ ೫

ಹತ್ತು ಬೆರಳುಗಳಲಿ ಅತ್ತಿಯ ಮುರಿದನೆ
ಹತ್ತು ಆಹುತಿಗಳ ಯಜ್ಞೇಶ್ವರಗಿತ್ತನೆ ೬

---

1 ಅತಿಥಿ ಶ್ರೀ ಕಾಶ್ಯಪ ಉತ್ತಮ ಫಲ ಸಹ ; ಅತ್ತಿ ಸಮಿತ್ಕುಶ ಉತ್ತರಣೆ ಕಲಶ (ಉಶಿ)
2 ಸ್ನಾನರಸಲಿ,

ಅತ್ರಿ ವಿಶ್ವಾಮಿತ್ರ ಋತ್ವಿಜೋತ್ತಮರು ಕೈ
ಯೆತ್ತಿ ದೀರ್ಘಾಯುಷ್ಯ [1]ಮಸ್ತು ಎಂದುಸುರಲು[1] ೭

ವಿಘ್ನೇಶ್ವರನ[2] ಬೇಡಿ ಅಗ್ನಿಯ ನೆಲೆಮಾಡಿ[3]
ಭರ್ಗಗೆರಗಿ ಮುನಿ ವರ್ಗವ ಕರೆಸುತ[4] ೮

ಪೂಜ್ಯರ ಮತದಿಂದ ಪ್ರಾಜ್ಞ ಕುಲಗುರುವಿಂದ
ಸಾಜ್ಯಾಹುತಿಗಳಿಂದ[5] ಯಜ್ಞ ಪೂರಯಿಸಿದ ೯

ಸುರರು ಹವಿಯನುಂಡು ಪರಮ ಸಂತಸಗೊಂಡು
ಸುರಿಸಲರಳ ಮಳೆ ನೆರೆದ ಸಭೆಗೆ ಬೀಳೆ ೧೦

ಮಂಗಲಂ ರಾಮಗೆ ಮಂಗಲಂ ಸೀತೆಗೆ
ಮಂಗಲಂ ರಘುಕುಲತಿಲಕ ಗೋಪಾಲಗೆ[6] ೧೧

ಪಂಕಜೋದ್ಭವ ಸುರ ಸಂಕುಲಾರ್ಚಿತ ವರ
ಶಂಖಚಕ್ರಾಂಕಿತ ವೆಂಕಟೇಶ್ವರನೇ ೧೨

## 171. ಗರ್ಭಿಣಿಗೆ ಉಡುಗೊರೆ

ಶ್ರೀಗುರು ಗಣಪ ಶಾರದೆಯರಿಗೆ
ಬೇಗದಿ ವಂದಿಸಿ ಮನದೊಳಗೆ
ನಾಗಶಯನ ಸತಿ ರುಕ್ಮಿಣಿ ದೇವಿಗೆ ॥
ಜೋಡಿಸಿ ಪೀತಾಂಬರವನಂದು ॥
ಉಡುಗರೆಮಾಡಿ ಶ್ರೀಹರಿಗಂದು ೧

ಕೂಡಿದ ಸಭೆಯೊಳನುವ ಪಡೆದು
ಗಾಢದೆ ಕೃಷ್ಣನರಸಿಗೊಲಿದು
ರೂಢಿಯೊಳಚ್ಚರಿಯಾಗಿಹ ಪಟ್ಟೆಯ ॥
ಜೋಡಿಸಿ ಪೀತಾಂಬರವನಂದು ॥
ಉಡುಗರೆ ಮಾಡಿ ಶ್ರೀಹರಿಗಂದು ೨

---
1 ಮತ್ತೇನನುಸುರಲು (ದ) 2 ಯಜ್ಞೇಶ್ವರನ (ಉ). 3 ಸ್ತುತಿಮಾಡಿ (ದ).
4 ಮಾರ್ಗವ ತೋರೆಂದು (ದ) ; ವರ್ಗಕೆ ನಮಿಸುತ (ಉ). 5 ಸಜ್ಯವ ತರಿಸುತ (ದ).
6 ರತಿಪತಿಯಂಗಪೋಲುವವಗೆ (ದ).

ಮಂಗಲ ಸೀಮಂತವ ಮಾಡಿ
ತುಂಗಕುಚೆಯರು ಶೋಭಾನವ ಪಾಡಿ
ಹಿಂಗದೆ ಗಜಮುಖನಿಗೆ ವಂದಿಸಿ ಮಹಾ ॥
ಮಂಗಳಾರತಿಯ—ಬೆಳಗಿರೆ ॥
ಉಡುಗರೆ ಮಾಡಿ ಶ್ರೀಹರಿಗಂದು ೩

## 172. ರಾಮ ಸೀತೆಯರಿಗೆ ಆರತಿ

ರಾಜಿಪ ಮಣಿಮಯ ರತ್ನ ಪೀಠದಲಿ
ರಾಜಾಧಿರಾಜ ಶ್ರೀರಾಮ ಕುಳ್ಳಿರಲು
ರಾಜಿಸಿ ಸೀತೆ ಸಹಿತವೊಪ್ಪಿರಲು
ರಾಜವದನೆಯರು ಹರಿವಾಣದೊಳು ವಿ ॥
ರಾಜಿಸುವಾರತಿಯಾ—ಬೆಳಗಿರೆ ೧

ಕನಕಕುಂಡಲ ಕೌಸ್ತುಭಮಣಿಯುತಗೆ
ಕನಕಾಂಬರ ರತ್ನಮಯ ಭೂಷಿತಗೆ
ಕನಕಕಿರೀಟ ಕುಂಡಲಾಲಂಕೃತನಿಗೆ
ಕನಕಾಭರಣದ ಕಮಲನಯನನಿಗೆ ॥
ಕನಕದಾರತಿಯಾ—ಬೆಳಗಿರೆ ೨

ಮುತ್ತಿನೋಲೆಯ ಹಾರ ಪದಕವಿಟ್ಟವಳು
ಮುತ್ತಿನ ಬೊಟ್ಟು ಮೂಗುತಿಯಿಟ್ಟವಳು
ಮುತ್ತಿನ ಕಡಗ ಮುಂಗಯ್ಯೊಳೊಪ್ಪಿರಲು
ಮುತ್ತೈದೆಯರು ರಘೂತ್ತಮ ಸೀತೆಗೆ ॥
ಮುತ್ತಿನಾರತಿಯಾ—ಬೆಳಗಿರೆ ೩

ದಶರಥರಾಯನ ಸುತನೆನಿಸಿದಗೆ
ದಶಶಿರ ಕಂಧರ ಕತ್ತರಿಸಿದಗೆ
ದಶದಿಶೆಯೊಳು ಭುವನವನಾಳಿದಗೆ
ದಶವಿಧದಲಿ ಸೀತಾರಾಮರಿಗೆ ॥
ಕುಶಲದಾರತಿಯಾ—ಬೆಳಗಿರೆ ೪

ನಾರದವಂದ್ಯಗೆ ನಂದಕಂದನಿಗೆ
ನಾರಿ ದ್ರೌಪದಿಗಕ್ಷಯ ವಿತ್ತವಗೆ
ನಾರದ ಮುಖ್ಯರ ರಕ್ಷಿಸಿದವಗೇ
ನಾರಾಯಣ ನಮೋ ನಮೋ ಎಂದು ಸ್ತುತಿಸುತ ॥
ನಾರಿಯರಾರತಿಯಾ—ಬೆಳಗಿರೆ ೫

## 173. ಪುತ್ರೋದಯ—ಜಾತಕ

ಗಂಗಾಧರನ ಕುಮಾರ ಗಣಪನ ಪಾ
ದಾರವಿಂದಕೆ ನಮಿಸಿ । ಶಾರದೆಯನು
ಕೊಂಡಾಡುತ ಭಜಿಸಿ । ಶ್ರೀತತ್ತ್ವವ
ಚೆಂದದಿಂದಲಿ ಸ್ಮರಿಸಿ । ಪಾಲಿಸುವುದು ॥
ಇಂದು ನೀನೊಲಿದು—ಕರುಣದಿ ೧

ಕ್ಷೀರಸಾಗರ ನಡುಗಾಲದೆಲೆಯ ಮೇಲೆ
ಶ್ರೀಲೋಲ ಪವಡಿಸಿರೆ । ಧಾರಿಣೀಸುರ
ಜಾಲ ಪಲ್ಲಿಗೆಯ್ತರೆ । ದಾನವರಿಂದ
ಬಾಧೆಯು ತಮಗೆಂದಿರೆ । ಸಂತೋಷವ ॥
ತಾಳಿದ ಬಂದು—ಮನದೊಳು ೨

ಖೂಳರ ಬಾಧೆಗೆ ಮಥುರಾಪಟ್ಟಣದೊಳು
ದೇವಕಿಯುದರದಲಿ । ನಾರಾಯಣ
ತಾನವತರಿಸುತಲಿ । ಆ ವಸುದೇವ
ನಾಗ ಮರೆಯ ಮಾಡಲು । ಯಮುನೆಯ ದಾಟಿ
ಶ್ರೀಹರಿಯನು ತರಲು । ನಂದಗೋಪಗೆ ॥
ಬಾಲನುದಿಸಿದನೆ—ಹರುಷದಿ ೩

ಶಿಶುತಂದು ವಸುದೇವ ಸೆರೆಮನೆಯೊಳ ಬರೆ
ಅಸುರ ತಾನೆಚ್ಚತ್ತನು । ಖಡ್ಗವ ಪಿಡಿದು
ಅಸಮ ಸಾಹಸ ಪಟ್ಟನು । ಆ ಶಿಶುವನು
ಕರದಿಂದಪ್ಪಳಿಸಲಿರೆ । ಅಸುರನ ಮೆಟ್ಟಿ ಆ ॥
ಗಸದ ಮಾರ್ಗದಲಿ—ನಡೆದಳು ೪

ನಂದಗೋಪಗೆ ಮುದ್ದು ಕಂದ ಹುಟ್ಟಿದನೆಂದು
ನಂದಗೋಪನು ಕೇಳಿದ । ಆ ನದಿಯೊಳ
ಗಂದು ಸ್ನಾನವ ಮಾಡಿದ । ಭೂಸುರರಿಗೆ
ಚೆಂದದೋಲೆಯ ಬರೆದ । ಚಾರಕ ಪೇಳೆ
ಬಂದರಾನಂದದಿಂದ । ಭೂಸುರರಿಗೆ ॥
ತಂದು ಗದ್ದುಗೆಯ—ಕೊಡಿಸಿದ ೫

ಕುಶಲವಾರ್ತೆಯ ಕೇಳಿ ಶಿಶು ಹುಟ್ಟಿದ ವೇಳೆ
ವಸುಧೆಯೊಳಿಂತೆನುತ । ಇದನು ನೋಡಿ
ಹಸನಾದ ಜಾತಕವ । ಬರೆಯಿರೆಂದು
ನಸುನಗುತಲಿ ನುಡಿದ । ನಂದಗೋಪನ
ದಶೆಯ ಪುಣ್ಯದ ಫಲವ—ಪೊಗಳುತ ಬೃಹ ॥
ಸ್ಪತಿಯು ನಸುನಗುತ—ನುಡಿದನು ೬

ಪಂಚಾಂಗ ಗಣಿತದಿಂದಲಿ ಚಿನ್ಮಯನಿಗೆ
ಕಂಟಕವಿಲ್ಲೆನುತ । ಲೋಕದ ಸರ್ವ
ಕಂಟಕಹರನೆನುತ । ನಂದಗೋಪನೆ
ಚಿಂತಿಸದಿರು ಎನುತ । ಸಂತೋಷವ
ನಾಂತುಕೊಂಡಿರು ಎನುತ । ನಂದಗೋಪಿಯ ॥
ಬಾಲನ ಜಾತಕವ—ಬರೆದನು ೭

ಪುತ್ರನ ವರ್ಣ ಶ್ರೀಕೃಷ್ಣ ಸುದರ್ಶನ
ಚಕ್ರವ ಪಿಡಿದಿಹನು । ತ್ರಿಲೋಕದಿ
ಸತ್ಕೀರ್ತಿ ಪಡೆಯುವನು । ಗೋಗಳ ಕಾಯ್ದೀ
ವಸುಧೆಗೊಡೆಯನಹನು । ದೇವಕಿ ಮುದ್ದು ॥
ಶಿಶುವಿನ ಜಾತಕವ—ಬರೆದನು ೮

ತಾರಕಮಂತ್ರದೋಲೆಯ ಮೇಲೆ ಶ್ರೀಕರ
ನಾಮ ಕಂಠವ ಪಿಡಿದು । ಬರೆದರು
ಪಾರವಾರವ ತಿಳಿದು । ಬಾಲಕನಿಗೆ
ಜನನ ಮರಣವಿಲ್ಲೆಂದು । ಮುರಹರನನು
ನೋಡಿ ಮನದಿ ನೆನೆದು । ಭೂಸುರರು ಉ ॥
ಚ್ಚರಿಸಿ ಜಾತಕವ—ಬರೆದರು ೯

ದೇವ ಪ್ರಣವ್ಯದ ಸಾಸಿರ ನಾಮವ
ಜಾತಕದಲಿ ಬರೆದ । ಶ್ರಾವಣ ಬಹು
ಳಾಷ್ಟಮಿಯ ದಿನದಿ । ಪಾರಾವಾರ
ರೋಹಿಣಿ ನಕ್ಷತ್ರದಿ । ಜನಿಸಿದುದು
ಮಾವಗೆ ಹಾನಿಯೆಂದು । ಜೋಯಿಸರಂದು ॥
ವಿವರಿಸಿ ಜಾತಕವ—ಬರೆದರು ೧೦

ಜನಿಸಿದ ಮೂರನೆ ದಿವಸದೊಳಗೆ ಖೂಳ
ಅಸುರೆ ಪೂತನಿ ಕೊಲ್ಲುವ । ನಾಲ್ಕನೆ ದಿನ
ಶಕಟಾಸುರ ಮಲ್ಲರ । ಭೇದಿಸಿ ಗೋಪಿ
ಶಿಶುಲೀಲೆಗಳ ತೋರುವ । ಗೋಕುಲದಲ್ಲಿ
ದಿಟ್ಟತನದಿ ಬೆಳೆವ । ಎಂದೆನುತಲಿ ॥
ತಟ್ಟನೆ ಜಾತಕವ—ಬರೆದರು ೧೧

ಆ ಗೋಕುಲದಲ್ಲಿ ಹಾಲು ಮೊಸರು ಬೆಣ್ಣೆ
ಚೋರತನವ ಮಾಡುವ । ನಾರಿಯರ ಕೂಡೆ
ಲೀಲೆಯಿಂದಲಿ ಮೆರೆವ । ಗಾಂಭೀರ್ಯದಿ
ವಾರಿಧಿಯನು ಹೋಲುವ । ಕಂಸನ ಕೊಂದು
ವಸುದೇವ ದೇವಕಿಯ । ಸೆರೆ ಬಿಡಿಸುವ ॥
ಎನುತ ಜಾತಕವ—ಬರೆದರು ೧೨

ಬೃಹಸ್ಪತಿ ದೇವರು ಗಾರ್ಗ್ಯ ವಸಿಷ್ಠರು
ವಿಶ್ವಾಮಿತ್ರರು ಸಹಿತ । ಗೌತಮ ಜಮ
ದಗ್ನಿ ಭಾರದ್ವಾಜರು । ನಾರದರು ಪ
ರಾಶರ ಮುನಿಗಳೆಲ್ಲರು । ಜಾತಕ ಫಲ
ವಿವರಿಸಿ ಹೇಳಿದರು । ನಂದಗೋಪನು ॥
ಹರುಷವಾರ್ಧಿಯಲಿ—ಮುಳುಗಿದ ೧೩

ಸ್ವಸ್ತಿ ಶ್ರೀಮತ್ ಕೃಷ್ಣನಿಗೆ ಶರಣೆಂದಾಗ
ಲರ್ಥಿಯಿಂದೋದಿದರು । ನಂದಗೋಪಗೆ
ಅಷ್ಟಮುನೀಶ್ವರರು । ಮುರಹರನನು

ಅಷ್ಟರೊಳಗೆ ನೋಡುತ । ಮುಂದೆಯು ಬಂದು
ಕಾಣಬೇಕೆಂದೆನುತ । ತೆರಳಿದರು ॥
ಕೃಷ್ಣ ಸ್ತುತಿಯಿಂದ—ಎಸೆದರು ೧೪

ನಂದಗೋಪನು ಅಭಿವಂದನೆಗಳ ಮಾಡಿ
ತಾಂಬೂಲ ದಕ್ಷಿಣೆಯ । ದ್ವಿಜರಿಗೆ ದಿ
ವ್ಯಾಂಬರ ಫಲಗಳನು । ಸಂತಸದಿಂದ
ಲಂದು ತಾ ನೀಡಿದನು । ಶ್ರೀಹರಿಗಾಗ
ತಂದೆತ್ತಲಾರತಿಯು । ಆಗಲೆ ದೇವ ॥
ದುಂದುಭಿ ನಾದ—ವೊಳಗಿತು ೧೫

ಏಕಾದಶಿ ದಿವಸದಲ್ಲಿ ಶಾಸ್ತ್ರೋಕ್ತದಿ
ಪುಣ್ಯಾಹಾರ್ಚನೆ ಮಾಡಿದ । ಬ್ರಾಹ್ಮಣರಿಗೆ
ಶಂಕಿಸದುಣಲಿಕ್ಕಿದ । ಅಂಬರದಲಿ
ಮಂದಾರದ ಮಳೆಯು । ಭೋರ್ಗರೆಯಲು ॥
ದುಂದುಭಿ ವಾದ್ಯಗಳು—ಎಸೆದವು ॥
ಮಂಗಳಾರತಿಯ—ಬೆಳಗಿರೆ ೧೬

## 174. ಬಾಳಂತಿಗೆ ಆರತಿ

ಆರತಿಯ ತೋರಿಸುವ ನಾರಿ ಗೋಪಿಗೆ
ತರಳ ಬಾಲಕೃಷ್ಣನಿಂದ ಭೂರಿಶೋಭಿಪ .ಪ

ಆರು ಮೂರು ಸೇರಿರುವ ವಾರಮಾಸಗಳು
ಇರಿಸಿರುವೆ ಉದರದಲ್ಲಿ ನಾರಾಯಣನನು ೧

ಪನ್ನಗದಲ್ಲಿ ಮಲಗಿದಂಥ ರನ್ನದೇವನ
ತನ್ನ ಮಗನು ಎಂದು ಸೂತಕವನ್ನು ಬಳಸಿದ ೨

ಪುಣ್ಯವಂತೆ ಸ್ವಾಮಿಗವಳು ರನ್ನಮಾತೆಯು
ಬನ್ನಿ ಸಖಿಯರೆಲ್ಲ ನೀವು ಇನ್ನು ಬೇಗದಿ ೩

ಅಕ್ಷತೆಯನು ಇಡಿಸಿ ಮುಸ್ನ ಲಕ್ಷ್ಯಪೂರ್ವಕ
ಪಕ್ಷಿವಾಹನ ಮುರಲಿಧರನ ಚೊಕ್ಕ ಮಾತೆಗೆ ೪

ಸರಸಿಜಾಕ್ಷಿಯಾದ ಚಾರುನಾರಿಯರ ಮಣಿಗೆ
ಗುರು ವಿರೂಪಾಕ್ಷನನ್ನು ನಿರುತ ಭಜಿಸುತ ೫

## 175. ಬಾಳಂತಿಗೆ ಉಡಿಲು ತುಂಬಿದ್ದು

ಉಡಿಲನು ತುಂಬಿರೆ ಸಡಗರದಿಂದಲಿ
ತಡವನು ಮಾಡದೆ ಹಡೆದ ಬಾಳಂತಿಗೆ ಪ

ಬೋಳ ಮೆಣಸಿನ ಕಾಳು ಎಲೆಯಡಕೆ ಮತ್ತು
ಹಳದಿ ಸಿಂಬೇಹಣ್ಣು ಸಲಿಲಜಾಕ್ಷಯರೆ ೧

ಒಣಶುಂಠಿಗಳ ಮಾನವತಿಯರೆ ಕೂಡಿ
ಒಣಗಿದ ತೆಂಗು ಫಲ ಅಣಿಮಾಡಿ ತಂದು ೨

ಅರಸಿನ ಕೊಂಬನು ನಾರೀ ಮಣಿಯರೆ
ತರಳೆಯ ತೊಡೆಯೊಳು ಇರಿಸಿರುವಂಥಾ ೩

ಧರಿಸಿದ ಶಿಶುವಿನ ಭಾರವ ಇಳಿಸಿಹ
ಗುರು ವಿರೂಪಾಕ್ಷನ ಚರಣ ಸೇವಕಿಗೆ ೪

## 176. ಮಗುವಿಗೆ ಸಕ್ಕರೆ ನೆಕ್ಕಿಸುವದು

ಹಾಲು ಸಕ್ಕರೆಗಳ ಈ ಬಾಲಕನಿಗೆ
ಶೈಲಜೆ ಕುಡಿಸು ನೀ ಬೆಳಿಯ ಪಾತ್ರೆಯಲಿ ಪ

ಚೆಲುವಾಗಿ ಬೇಗದಿ ಬೆಳೆಯಲಿಯೆನುತ
ಶೀಲವಂತನಾಗಿ ಬಾಳಲಿಯೆನುತ ೧

ತಲೆಗೆ ಶರೀರಕೆ ಬಳಿಯೆಣ್ಣೆಯನ್ನು
ಮಲಗಲಿ ಸುಖವಾಗಿ ತಿಳಿ ನಾರೀಮಣಿಯೆ ೨

ಕಪ್ಪು ಕಾಡಿಗೆಯನು ರೆಪ್ಪೆ ಮಧ್ಯದಲಿ
ಒಪ್ಪಾಗೆ ಹಚ್ಚು ನೀ ಕ್ಷಿಪ್ರದಿ ಮುದದಿ ೩

ದಪ್ಪವಾಗಿರುವಂಥ ಕುಪ್ಪಸದಿಂದ
ಒಪ್ಪಾಗಿ ಪೊಲಿದಿಹ ಟೊಪ್ಪಿಯ ಕಟ್ಟು ೪

ಹರಸಿ ತೊಟ್ಟಿಲೊಳಿಟ್ಟು ತರಳಗೆ ನಿನ್ನ
ಗುರು ವಿರೂಪಾಕ್ಷನ ಸ್ಮರಿಸೆಂದು ಮನದಿ ೫

## 177. ಹೆಸರು ಬರೆದದ್ದು (ನಾಮಕರಣ)

ಗುರುಗಣಪಗೆ ಶಾರದೆಗೆ ಶಿರವೆರಗಿ ಬೇಡುವೆ
ಹಿರಿಯರ ಪುಣ್ಯ ಕೃಪೆಯಿಂದ—ಬಾಲಂಗೆ
ಹೆಸರಿಡುವ ಪದನ—ರಚಿಸುವೆ ೧

ಸಸಿದೋಟ ಮುಂದಣ ಎಳದೋಟದ ಮನೆಯೊಳು
ಶಶಿಮುಖಿ ಮಗನ ಪಡೆದಳು—ಎನುತಲೆ
ಹೆಸರಿಡುವರನೆಲ್ಲ—ಕರೆದರು ೨

ಎಳದೋಟ ಮುಂದಣ ಹೂದೋಟದ ಮನೆಯೊಳು
ಹಸೆಯಳು ಮಗನ ಪಡೆದಳು—ಎನುತಲೆ
ಹೆಸರಿಡುವರನೆಲ್ಲ—ಕರೆದರು ೩

ಕಳುಹಿದನೆ ಕಾಲಾಳ ಕಳುಹಿದನೆ ಮೇಲಾಳ
ಕಳುಹಿದನೆ ತನ್ನ ಮನೆಯಾಳ—ತಂಗವ್ವನ
ತವರ್ಮನೆಗೆ ಕರೆಯ—ಕಳುಹಿದ ೪

ಅಟ್ಟಿದನೆ ಕಾಲಾಳ ಅಟ್ಟಿದನೆ ಮೇಲಾಳ
ಅಟ್ಟಿದನೆ ತನ್ನ ಮನೆಯಾಳ—ತಂಗವ್ವನ
ಹುಟ್ಟಿದ ಮನೆಗೆ ಕರೆಯ—ಕಳುಹಿದ ೫

ತವರುಮನೆಯಿಂದ ಮತ್ತಾರು ಬರಬೇಕು
ಅಕ್ಕತಂಗಿಯರು ಮೊದಲಾಗಿ—ಬರಲೆಂದು
ತವರ್ಮನೆಗೆ ಕರೆಯ—ಕಳುಹಿದ ೬

ಹುಟ್ಟಿದ ಮನೆಯಿಂದ ಈಗಾರು ಬರಬೇಕು
ತಾಯಿ ತಂಗಿಯರ ಬಳಗವು—ಬಳಗದವರೆಲ್ಲ
ಬಾಲನ ಶುಭಕಾರ್ಯಕ್ಕೆ—ಬರಬೇಕು ೭

ಅತಿಚೆಲ್ವೆ ಪಾರ್ವತಿಗೆ ಸುತನಾಗಿ ಜನಿಸಿದ
ಮತಿಗೆ ಮಂಗಲವ ಕೊಡುವಂಥ[1] ಶ್ರೀಗಣ
ಪತಿಯೆಂಬ ಹೆಸರ—ಬರೆದರು ೮

ಆದಿನಾರಾಯಣ ವೇದಪಾರಾಯಣ
ಆದಿತ್ಯ ಪ್ರಭೆಯ ಗೆಲ್ವಂಥ[2]—ಅಶ್ವತ್ಥ
ನಾರಾಯಣ ಹೆಸರ—ಬರೆದರು ೯

ಕಂಟಕರೆಂಬಂಥ ಕಳ್ಳರಸೀಗಲೆ*
ಕಂತುಪಿತನೊಳಗೆ ನೆಲಸಿದ—ಶ್ರೀಸೀಲ
ಕಂಠನೆಂಬ್ಹೆಸರ—ಬರೆದರು ೧೦

[3]ಅಣ್ಣಪ್ಪದೈವದ ಸನ್ನಿಧಿಯಲಿರುವನು
ಅನ್ನದ ಧರ್ಮವನೆ[3] ನಡಸುವ—ಧರ್ಮಸ್ಥಳ
ಮಂಜುನಾಥ ಹೆಸರ—ಬರೆದರು ೧೧

ಅನ್ನದ ಧರ್ಮದ[4] ಕ್ರಿಯಗಳ ಕಟ್ಟುವರು
ಅರೆದು ಕಟ್ಟುವರು ಅರೆಕಾಸ[5]—ಮೂಡಲ ಗಿರಿ
ತಿಮ್ಮಪ್ಪನೆಂಬ್ಹೆಸರ—ಬರೆದರು ೧೨

ಗೋಕರ್ಣ ಕ್ಷೇತ್ರದಿ ವಾಸವಾಗಿರುವನು
ಲೋಕದ ಕಾಣಿಕೆಯ ಕೊಳ್ವಂಥ—ಗೋಕರ್ಣ
ಮಹಾಬಲೇಶ್ವರ ಹೆಸರ—ಬರೆದರು ೧೩

---

1 ಕರುಣಿಪ. 2 ಜರೆವಂಥ. * ನೀಗಲೆ—ನೀಗುವುದಕ್ಕಾಗಿ. 3 ಅಣ್ಣಪ್ಪದೇವರು ಸನ್ನಿಧಿದಲಿರುವವರು ಅನ್ನದ ಸತ್ರವನೆ. 4 ಹರಿವಾಣದನ್ನವ. 5 ಅಳೆದು ಕಟ್ಟಿದರೆ ಅತಿರಾಶಿ.

ಕಾಶಿಯ ಕ್ಷೇತ್ರದಿ ವಾಸವಾಗಿದ್ದು ಪ್ರ
ವಾಸಿಕರನೆಲ್ಲ ಕರೆಸುವ—ಕಾಶಿಯ
ವಿಶ್ವೇಶ್ವರ ಹೆಸರ—ಬರೆದರು ೧೪

ಕೈಲಾಸ ಪರ್ವತದಿ ವಾಸವಾಗಿರುವನು
ದೇಶದ ಜನರ ಸಲಹುವ—ರಜತಾದ್ರಿ ವರ
ಮೇಶನೆಂಬ್ಹೆಸರ—ಬರೆದರು ೧೫

ಮಂಗಳ ಇಂಗಳ ತಿಂಗಳ ಸೂಡಿದ
ಕಂಗಳಿಂ ಜಗವ ಸಲಹುವ—ಬನವಸೆ
ಮಧುಕೇಶನೆಂದ್ಹೆಸರ—ಬರೆದರು ೧೬

ಭೀತಿಯೀತಿಗಳೆಂಬ ವಾರ್ತೆಯ ಪರಿಹರಿಸಿ
ಪ್ರೀತಿಯಲಿ ಜನರ ಸಲಹಿದ—ಸುಬ್ರಹ್ಮಣ್ಯದ
ಸುಬ್ರಾಯನೆಂಬ್ಹೆಸರ—ಬರೆದರು ೧೭

ಆನೆ ಅಂದಣವೇರು ರಾಜ್ಯಕಧಿಪತಿಯಾಗು
ಆತನು ಜಗವ ಸಲಹುವ—ಮಾರ್ಕಾಂಡೇಯ
ನಾಗಪ್ಪನೆಂಬ್ಹೆಸರ—ಬರೆದರು ೧೮

ರತ್ನದ ಹಣೆಯು ಚಿನ್ನದ ವೃಂದಾವನ
ರನ್ನದ ಹಾಣಿ ಕಡೆಯಲ್ಲಿ—ಮೂಡಲ ಗಿರಿ
ವೆಂಕಟನೆಂಬ ಹೆಸರ—ಬರೆದರು ೧೯

ಎಡದಿ ಕಾಳಂಜಿಯರು ಬಲದಿ ಮಧುಕೇಶ್ವರರು
ನಡುಹಾಸಿನ ಮೇಲೆ ಮಲಗಿದ್ದ—ಮೇಲ್ಪಟ್ಟಣದ
ಗೋವಿಂದನೆಂಬ್ಹೆಸರ—ಬರೆದರು ೨೦

[1]ಮರವನು ಕಡಿದರೆ ಹಾಲಾಗಿ ಹರಿವುದು
ಆಲ್ಲೊಂದು ಲಿಂಗ ನೆಲಸಿತು—ಇಟ್ಟಿಗೆ ಶ್ರೀ
ರಾಮೇಶ್ವರನೆಂಬ್ಹೆಸರ—ಬರೆದರು[1] ೨೧

1 ಈಶ ಮಹೇಶನು ಬರುವನು ರಥಗಳ
ಏಳು ಕೋಟಿಯಲಿ ನೆಲಸಿದ—ಇಟ್ಟಿಗೆಯ ರಾ
ಮೇಶ್ವರನೆಂದ್ಹೆಸರ—ಬರೆದರು.

ಮುತ್ತಿನ ಹರಿವಣದಿ ಪುಟ್ಟಕ್ಕಿಯನೆ ತುಂಬಿ
ಅಚ್ಚೆ ಅರಿಸಿನದ ತುದಿಯಲಿ—ಜೋಯಿಸರು
ಕೃಷ್ಣನೆಂಬ್ಹೆಸರ—ಬರೆದರು ೨೨

## 178. ಹೆಣ್ಣು ಮಗುವಿನ ಹೆಸರು ಬರೆದದ್ದು

ದೇವಕಿಯೊಳು ಜನಿಸಿ ಭೂಮಿಯನಾಳ್ದವನ
ದ್ವಾರಕವಾಸ ಎನಿಸಿದನರಸಿಗೆ
ಸತ್ಯಭಾಮೆ ಹೆಸರ—ಬರೆದರು ೧

ತನ್ನ ವಲಿಸುವ ಜನರ ಮನ್ನಿಸಿ ಸಲಹುವ
ಪನ್ನಗಧರನ ಅರಸಿಯು—ಶ್ರೀ ಅನ್ನ
ಪೂರ್ಣೆ ಎಂಬ್ಹೆಸರ—ಬರೆದರು ೨

ಆಶಾಂಬರೇಶನ ಪ್ರೀತಿಯ ರಾಣಿಯು
ಕಾಶಿಗಿಂತಧಿಕವೆನಿಸಿದ—ಕಾಂಚಿಯ
ಕಾಮಾಕ್ಷಿ ಹೆಸರ—ಬರೆದರು ೩

ಸಕಲಾತ್ಮಲಿಂಗನ ಪಟ್ಟದ ರಾಣಿಯು
ಸೃಷ್ಟಿಕಲ್ಯಾಣಿ ಎನಿಸಿದ—ಮಧುರೆಯ
ಮೀನಾಕ್ಷಿ ಹೆಸರ—ಬರೆದರು ೪

ಹರಗೊಲಿದ ಗಂಗೆಯ ಜಡೆಯೊಳು ಧರಿಸಿದ
ಕಡುನೇಹದಿಂದ ತೊಡೆಲಿಟ್ಟ—ಈಶ್ವರ
ಪಾರ್ವತಿ ಹೆಸರ—ಬರೆದರು ೫

ಎಲ್ಲಾ ನದಿಗಿಂತ ಮೇಲುನದಿಯೆನಿಸಿತು
ಶ್ರೀರಂಗದೊಳಗೆ ನಲಿವದು—ನಾಟ್ಯವಾಡ್ವ
ಕಾವೇರಿ ಹೆಸರ—ಬರೆದರು ೬

ಖಡ್ಗವ ಹಿಡಿದಳೆ ಗೆದ್ದಳೆ ದಾನವರ
ಉಗ್ರ ಮೂರುತಿಯ ಸ್ಥಳದಲ್ಲಿ—ನೆಲಸಿದ
ದುರ್ಗಿ ಎಂಬ್ಹೆಸರ—ಬರೆದರು ೭

ಮಹಿಷನ ಕೊಂದಳೆ ಗೆದ್ದಳೆ ದಾನವರ
ಶಕ್ತಿಸ್ಥಳವೆಂದು ನೆಲಸಿದ—ಶೃಂಗೇರಿ
ಶಾರದೆ ಎಂಬ್ಹೆಸರ—ಒರೆದರು ೮

## 179. ಗುಂಡಪ್ಪನ ಹಾಡು

ಸಿದ್ಧಸ್ವರೂಪನೆ ಸಿದ್ದಪ್ಪ ಜೋ ಜೋ
ಎದ್ದೆದ್ದು ಮೆಣಸನರೆವ ಕಂದ ಜೋ ಜೋ ಪ

ಜೋ ಜೋ ಜೋ ಜೋ ಜೋ ಪುಂಡ ಲಂಡ
ಮಂಡೆಲಿ ಕಣಕೆಯ ಮರ್ದನಗೈದ
ಗುಂಡಿನ ಸರಗಳ ಕೊರಲೊಳಗಿಟ್ಟು
ಬಂಧುಗಳೆಲ್ಲರು ಪಾಡಿ ತೂಗಿದರು—ಜೋ ಜೋ ೧

ಗದ್ದೆಯ ಹಾಳಿಲಿ ಬಿದ್ದಿದ್ದ ಕಂದ
ಭದ್ರೆಯರೈವರು ಆರಿಸಿ ತಂದ
ಮುದ್ದು ತಂಗವ್ವಗೆ ಮಗನಾಗಬೇಕೆಂದು
ಭದ್ರೆಯರೈವರು ಪಾಡಿ ತೂಗಿದರು—ಜೋ ಜೋ ೨

ಅಜ್ಜಂದಿರೈವರು ಅಜ್ಜಿಯಂದಿರೈವರು
ಗೆಜ್ಜೆ ಕಾಲ್ಕಡಗವ ಮಾಡಿಸಿ ತಂದು
ಹಜ್ಜಿಲ್ಲದ ಮಗನನ್ನೆಲ್ಲಿಡಬೇಕೆಂದು
ಮುದ್ದು ತಂಗಮ್ಮನ ಕರೆದು ಕೇಳಿದರು—ಜೋ ಜೋ ೩

ಕಾಲಿಗೆ ಬಿದ್ದಲ್ಲಿ ನೋವು ಮಾಡಿದನು
ಕಾಲಿಗೆ ಮೆಣಸನು ತಾನೇ ಅರೆದನು
ಗಟ್ಟ್ಯಾದ ಗಡಿಗೆಯ ಕುಟ್ಟಿ ಒಡೆದನು
ಕುಟ್ಟಿದ ಗಡಿಗೆಗೆ ಕಿಟ್ಟ ಅರೆದನು—ಜೋ ಜೋ ೪

ಮುದ್ದು ಗುಂಡಪ್ಪನ ಅಜ್ಜಯ್ಯ ಬಂದ
ಗೆಜ್ಜೆ ಕಾಲ್ಕಡಗವ ಮಾಡಿಸಿ ತಂದ
ಪಾದಿಲ್ಲದ ಮಗನ ಎಲ್ಲಿಡಬೇಕೆಂದು
ಹಡೆದ ತಂಗವ್ವನ ಕರೆದು ಕೇಳಿದನು—ಜೋ ಜೋ ೫

ಮಾವಂದಿರ್ ನಾಲ್ವರು ಭಾವಂದಿರ್ ನಾಲ್ವರು
ಮಾಗಾಯಿ ಅರಳೆಲೆ ಮಾಡಿಸಿ ತಂದು
ಕಾಲಿಲ್ಲದ ಮಗನನ್ನೆಲ್ಲಿಡಬೇಕೆಂದು
ನಾರಿ ತಂಗವ್ವನ ಕರೆದು ಕೇಳಿದರು—ಜೋ ಜೋ ೬

## ೧೮೦. ಮದಾಲಸೆಯ ಜೋಗುಳ

ಕರಿವದನನ ಪಾದಕಮಲ ಯುಗವನು
ಸ್ಮರಿಸಿ ಪೇಳುವೆ ಪರತತ್ತ್ವ ಬೋಧಯನು
ಹರಿಭಕ್ತರಾಲಿಸಿ ಕೇಳಿ ಮುಕ್ತಿಯನು
ಕರುಣಿಸುವನು ಮುರಹರ ನಾರಾಯಣನು—ಜೋ ಜೋ ೧

ಧರಣೀಶ್ವರ ಋತಧ್ವಜನೆಂಬವನ
ತರುಣಿ ಮದಾಲಸೆ ತನ್ನ ಬಾಲಕನ
ಇರಿಸಿ ತೊಟ್ಟಿಲೊಳು ವಿಕ್ರಾಂತ ಪೆಸರಿನ
ತರಳನ ತೂಗಿ ಪಾಡಿದಳೆ ಶೋಭಾನ—ಜೋ ಜೋ ೨

ನಿತ್ಯತೃಪ್ತನು ನೀನು ಸುಮ್ಮನೇಕಳುವೇ
ಸತ್ಯವಲ್ಲಿದು ನೋಡು ಸಂಸಾರ ಸ್ಥಿರವೇ
ಮಿಥ್ಯವೆಂದರಿಯದೆ ಬರಿದೆ ದುಃಖಿಸುವೆ
ಮೃತ್ಯುಮುಖದಿ ಕೆಡುವುದು ಲೋಕ ಮಗುವೇ—ಜೋ ಜೋ ೩

ತಂದೆ ತಾಯಿಗಳೆಷ್ಟು ಸಂದುದೀ ವರೆಗೆ
ಬಂದ ಯೋನಿಯ ಲೆಕ್ಕವುಂಟೇನೊ ನಿನಗೆ
ಹಿಂದು ಮುಂದಿನ ಜನ್ಮವರಿಯದೆ ಹೀಗೆ
ಕಂದ ವಿಕಳುವೆಯೊ ಮಾಯಾ ಭ್ರಮೆಗೆ—ಜೋ ಜೋ ೪

ಪ್ರತ್ಯಗಾತುಮ ಪರಂಜ್ಯೋತಿ ತನ್ನಿರವ
ಭೃತ್ಯನಂದದಿ ಧ್ಯಾನಿಸುವರ ರಕ್ಷಿಸುವ
ದೈತ್ಯಾರಿ ಕೃಷ್ಣನಚ್ಯುತ ವಾಸುದೇವ
ತತ್ತ್ವಜ್ಞಾನದಿ ಜೀವನ್ಮುಕ್ತಿಯನೀವ—ಜೋ ಜೋ ೫

ಇಂದಿರೆಯರಸ ಗೋವಿಂದ ಮುಕುಂದ
ಮಂದರಧರ ಕೇಶವ ಸಂಪಕಂದ
ಸಿಂಧುಶಯನ ನಿತ್ಯ ಸಂದಾನಂದ
ಎಂದಳಲುತೆ ದಂದುಗವ ದಾಟೊ ಕಂದ—ಜೋ ಜೋ ೬

ಹೊಲಸು ನಾರುವ ಹೇಸಿಕೆಯು ತನುಮೂಲ
ಮಲಮಾಂಸ ಪಿಂಡ ಜನನಿ ಮೊಲೆ ಪಾಲ
ಚಲದಿಂದ ತಿನಲು ನಿರ್ಮಲವೇನೋ ಬಾಲ
ತಿಳಿದು ಗ್ರಹಿಸಿ ನೋಡಿದರೆ ಮಾಯಾಜಾಲ—ಜೋ ಜೋ ೭

ಪಂಚಭೂತದೊಳಾದ ತನು ದೈವಬಲದಿ
ಸಂಚರಿಸುತಲಿರ್ದು ಕಡೆಗೆ ವಿಧಿವಶದಿ
ಮಿಂಚು ಹೊಳೆವ ತೋರಿಯಡಗುವ ತೆರದಿ
ವಂಚನೆಯಿಂದಳಿವುದು ನೋಡು ಮನದಿ—ಜೋ ಜೋ ೮

ಜನಕ ಜನನಿಯ ರೇತೋರಕ್ತದಲಿ
ಜನಿಸಿದೆ ಮಲಮೂತ್ರ ಹೊಲಸು ದೇಹದಲಿ
ದಿನವೊಂದಾದರು ಸುಖವಿಲ್ಲ ಜನ್ಮದಲಿ
ಮನದಿ ಗ್ರಹಿಸಿ ನೋಡು ಘನವಿವೇಕದಲಿ—ಜೋ ಜೋ ೯

ಗರ್ಭದಿ ಮಲ ಕೃಮಿ ಪೀಡೆಯ ದುಃಖ
ಅರ್ಭಕತ್ವದೊಳಿಚ್ಛೆಯೊದಗದ ದುಃಖ
ಸರ್ಬ ಯೌವನ ಧನ ವನಿತೆಯ ದುಃಖ
ಪರ್ಬಿ ರೋಗವು ರುಜೆ ವಾರ್ಧಕ್ಯದುಃಖ—ಜೋ ಜೋ ೧೦

ಮರಣ ಕಾಲಕೆ ಸತಿಸುತರ ನೀ ನೆನೆದು
ಹರಣವಳಿಯೆ ಯಮನಾಳುಗಳೊಯ್ದು
ನರಕಕಿಕ್ಕಲು ಶಿಕ್ಷೆಯನುಭವಿಸುವದು
ತರವೇನೊ ತರಳ ಈ ಮಾತ ನಂಬುವದು—ಜೋ ಜೋ ೧೧

ಕೆಟ್ಟ ತನುವ ಜೀವ ಬಿಟ್ಟರೆ ಹೆಣನ
ಕಟ್ಟಿ ಬೆಂಕಿಯೊಳಿಟ್ಟು ಸುಟ್ಟರೆ ದಹನ
ಬೆಟ್ಟ ದಾರಿಯ ಮೇಲೆ ಬಿಟ್ಟರೆ ಶ್ವಾನ
ಮುಟ್ಟಿ ತಿಂಬುದು ಮತಿಗೆಟ್ಟ ಹೇಹವನ—ಜೋ ಜೋ ೧೨

ಹೆಂಡತಿ ಸುತ ಮಾತೃಪಿತರ ನಂಬದಿರು
ಬಂಡಿ ತುಂಬಿದ ಧನವಿದ್ದಲ್ಲಿರುವರು
ಚಂಡ ಪಾಶದಿ ಕಟ್ಟುತ ಯಮಭಟರು
ದಂಡಿಸಿಯೆಳೆವಾಗ ಕಂಡು ಬಿಡಿಸರು—ಜೋ ಜೋ ೧೩

ಸುವತಿ ಸುತರು ಬಂಧುವರ್ಗವಿದೆಲ್ಲ
ಸವನದೊಳಿಹರು ಸಂಗಡ ಬಹರಲ್ಲ
ಅದರಿಂದ ವಿಷಯ ದುಃಖವು ಸುಖವಿಲ್ಲ
ಪದುಮನಾಭನ ಮಾಯಾಲೀಲೆಯಿದೆಲ್ಲ—ಜೋ ಜೋ ೧೪

ಬದ್ಧವಲ್ಲಿದು ಬಂಧುಬಳಗ ಸಹಾಯ
ಇದ್ದ ಹಾಗಿರದು ನೋಡಿಕೊ ನಿನ್ನ ಪ್ರಾಯ
ಒದ್ದು ಹೋಗ್ವದು ಯಮನಗರಿಗೆ ಕಾಯ
ಹದ್ದುಕಾಗೆಯು ತಿಂದು ಹೋಪದು ತನಯ—ಜೋ ಜೋ ೧೫

ಶೇಷಗೆ ಸಹ ಹೇಳಿ ತುದಿಯಿಲ್ಲ ಮಾಯಾ
ಪಾಶದುಃಖವ ಬಣ್ಣಿಸುವರುಂಟೆ ತನಯ
ಹೇಸಿಕೆ ಮುಖ್ಯ ಸಂಸಾರದ ಸ್ಥಿತಿಯ
ಪೋಸ ನಂಬದಿರು ಕೋರುವೆನು ಸದ್ಗತಿಯ—ಜೋ ಜೋ ೧೬

ಆದಿ ಮಧ್ಯಾಂತಗಳಿಲ್ಲದ ಗುರುವ
ಪಾದವ ಹಿಡಿದು ಬೇಡಿಕೊ ಮನೋರಥವ
ವೇದವರಿಯದಂಥ ನಿಶ್ಚಿಂತ ಸುಖವ
ಭೇದವಡಗಿದಾತ ಕೊಟ್ಟು ರಕ್ಷಿಸುವ—ಜೋ ಜೋ ೧೭

ಭೂತಪಂಚಕವು ತನ್ಮಾತ್ರೆಗಳೈದು
ಜಾತವಶದಿಂದ ತತ್ತ್ವಗಳಿಪ್ಪತ್ತೈದು
ಭೂತಗಳನ್ಯೋನ್ಯ ಬೆರಕೆಯಾಗಿಹುದು
ಆ ತತ್ತ್ವದಿಂದ ಪಿಂಡಾಂಡ ತೋರಿಹುದು—ಜೋ ಜೋ ೧೮

ಪಂಚಪ್ರಾಣವು ಮನೋಬುದ್ಧಿ ಹೀಗೇಳು
ಸಂಚಿತೇಂದ್ರಿಯ ದಶ ಕೂಡಿ ಹದಿನೇಳು
ಗೊಂಚಲಿಸುವ ಲಿಂಗದೇಹವು ಕೇಳು
ಕಿಂಚಿತ ತನ್ನಂಶವಿಟ್ಟ ಕೃಪಾಳು ಜೋ ಜೋ ೧೯

ಶಿಶುವೆ ಕೇಳಾ ಲಿಂಗದೇಹ ಸೂಕ್ಷ್ಮದಿ
ತುಸು ಮಾತ್ರವೀಶಾಂಶವಿಟ್ಟು ಕಾರಣದಿ
ಪಸರಿಸಿರುವ ಚೇತನವು ದೈವಬಲದಿ
ಎನೆದು ಜೀವಾತ್ಮನೆನಿಸಿಕೊಂಡೆ ಜಗದಿ—ಜೋ ಜೋ ೧೦

ಏಸು ಯುಗವು ಆದರಾ ಲಿಂಗದೇಹ
ನಾಶವಾಗದೆ ಸಿಕ್ಕುವದೆ ಮೋಕ್ಷಜೀವ
ಆಶೆಯಿಲ್ಲದೆ ವಿಷಯವನಾವ ತೊರೆವ
ಈಶನಾತಗೆ ಜೀವನ್ಮುಕ್ತಿಯನೀವ—ಜೋ ಜೋ ೧೧

ವಸನದ ಮಲ ನೀಗಲು ಮಡಿಯಾಗಿ
ಎಸೆವಂತೆ ಪಂಚಕ್ಲೇಶಗಳೆಲ್ಲ ಹೋಗಿ
ಪಸರಿಸಿರುವ ಚೇತನವು ನಷ್ಟವಾಗಿ
ಅಸಿಪದಾತುಮನನ್ನು ಬೆರಸೊ ನೀ ಹೋಗಿ—ಜೋ ಜೋ ೧೨

ಹೊಳೆಹೊಳೆಹೊಳೆದು ತೋರುವದು ತನ್ನಿಂದ
ನಳನಳನಳಿಸಿ ರಶ್ಮಿಯ ತೇಜದಿಂದ
ತಳತಳತಳಿಸಿ ತೋರುವ ನಿತ್ಯಾನಂದ
ಬೆಳಗೆ ಬೆರೆದು ಸುಖಿಯಾಗೊ ನೀ ಕಂದ—ಜೋ ಜೋ ೧೩

ಈ ಪರಿಯಿಂದ ಬೋಧಿಸುತಿರೆ ಮನದ
ತಾಪಗಳನು ನೀಗಿ ಬಯಲ ಸಂಶಯದ
ರೂಪುಗಳಳಿದು ವಿಕ್ರಾಂತನು ನಿಜದ
ಆ ಪರಬ್ರಹ್ಮನೊಳೈಕ್ಯವ ಪಡೆದ—ಜೋ ಜೋ ೧೪

ನಳಿನಲೋಚನೆ ಬಳಿಕಿಬ್ಬರಣುಗರ
ತಿಳುಹಲು ಕಾಂತನಪೇಕ್ಷೆ ಕೇಳ್ಕವರ
ಬಳಿಕ ಹುಟ್ಟಿದರೆ ಗೃಹಸ್ಥ ಧರ್ಮದಲಿ
ನಿಲಿಸಿ ನಿಂದಳು ಪತಿಸಹಿತ ಮೋಕ್ಷದಲಿ—ಜೋ ಜೋ ೧೫

ಪರತತ್ತ್ವಬೋಧೆಯಿದನು ಕೇಳ್ದ ಜನರು
ಧರೆಯ ಭೋಗವನುಂಡು ಕಡೆಗೆ ಮತ್ತವರು
ನರಕದ ಶಿಕ್ಷೆಯನನುಭವಿಸರವರು
ಕರುಣವಾರಿಧಿ ನರಹರಿಯ ಸೇರುವರು—ಜೋ ಜೋ ೧೬

## 181. ಮಗುವನ್ನು ಆಡಿಸುವದು

ಮಗುವೆಂದಾಡಿಸುವಳು ಮೊಗನೋಡಿ ನಗುವಳು ಪ

ಸಾಗರಶಯನನೆ ಯೋಗಿಜನ ಹೃದಯನೆ
ಯೋಗನಿದ್ರೆಯೊಳಿಪ್ಪ ದೇವ ನೀನೆ
ಆಗಮ ನಿಗಮಗಳರಸಿ ಕಾಣದ ವಸ್ತು
ತೂಗಿ ಪಾಡುವ ಪುಣ್ಯ ಎಂತು ಪಡೆದಳಯ್ಯ ೧

ಕಾಲಲಂದುಗೆ ಗೆಜ್ಜೆ ನೀಲಮಣಿಯ ದಂಡೆ
ಮೇಲು ಸೂಸುವ ಪದಕಗಳೆಸೆಯೆ
ನೀಲಮೇಘಶ್ಯಾಮ ಬಾಲ ನೀ ಬಾರೆಂದು
ಪಾಲುಣಿಸುವ ಪುಣ್ಯ ಎಂತು ಪಡೆದಳಯ್ಯ ೨

ಬಣ್ಣ ಸರವು ಗೆಜ್ಜೆ ಹೊನ್ನಿನ ನೇವಾಳ
ರನ್ನ ಕಂಕಣ ಕೈಯ ಘುಲುಘುಲುರೆನುತ
ಬೆಣ್ಣೆ ಬಾಲಕೃಷ್ಣ ಕುಣಿಯೊಮ್ಮೆ ಕುಣಿಯೆಂದು
ಕುಣಿಸಿ ನೋಡುವ ಪುಣ್ಯ ಎಂತು ಪಡೆದಳಯ್ಯ ೩

ಪೊಡವಿಯೀರಡಿ ಮಾಡಿ ಅಳೆದೆ ನೀ ಗಿರಿಯನ್ನು
ಕುಡಿಬೆರಲಲಿ ನೆಗಹಿ ಪಿಡಿದುಕೊಂಡೆ
ಅಡಿಯಿಡೊ ಮಗನೆ ಮೆಲ್ಲಡಿಯಿಡೆಂದೆನುತಲೆ
ನಡ ಕಲಿಸುವ ಪುಣ್ಯ ಎಂತು ಪಡೆದಳಯ್ಯ ೪

ಕುಕ್ಷಿಯೊಳೀರೇಳು ಲೋಕವ ಸಲಹುವ
ರಕ್ಷಿಪರುಂಟೆ ಮೂಜಗದೊಳಗೆ
ಪಕ್ಷಿವಾಹನ ಕೃಷ್ಣ ಅಂಜಬೇಡೆನುತಲೆ
ರಕ್ಷಯಿಡುವ ಪುಣ್ಯ ಎಂತು ಪಡೆದಳಯ್ಯ ೫

## 182. ಕಿವಿ ಸೂಚಿದ್ದು (ಕರ್ಣವೇಧ)

ಪಟ್ಟಣದೊಳಗೆಲ್ಲ ಹೊಕ್ಕು ಕರೆದರು
ಭಕ್ತವತ್ಸಲನ ಕಿವಿಗಳ—ಊರ್ವಲಿಕೆ
ಹೊಕ್ಕು ಕೇರಿಯನೆ—ಕರೆದರು ೧

ಕೇರಿಯ ಒಳಗೆಲ್ಲ ಹೋಗಿಯೆ ಕರೆದರು
ಬಾಲ ವತ್ಸಲನ ಕಿವಿಗಳ—ಊರ್ವಲಿಕೆ
ಹೋಗಿ ಕೇರಿಯನೆ—ಕರೆದರು ೨

ಗುತ್ತಿ ಅಕ್ಕಸಾಲೆ ಕರೆಸಿ ಚೊಕ್ಕ ಚಿನ್ನವ ತರಿಸಿ
ಪುತ್ರನ ಕಿವಿಗೆ ಅನುವಾಗಿ—ಮುರಮಾಡೆಂದು
ಅಪ್ಪಯ್ಯ ನಗುತ—ನುಡಿದನು ೩

ಗೋವೆ ಅಕ್ಕಸಾಲಿ ಕರೆಸಿ ನಾಣ್ಯದ ಬಂಗಾರ ತರಿಸಿ
ಬಾಲನ ಕಿವಿಗೆ ಅನುವಾಗಿ—ಮುರಮಾಡೆಂದು
ಮಾವಯ್ಯ ನಗುತ—ನುಡಿದನು ೪

ಸರಸ್ವತಿ ದೇವಿಯು ಹರುಷವನಾಡುತ್ತ
ತರಿಸಿ ಸುಣ್ಣದಲಿ ಗುರುತಿಸಿ—ನೆಲೆ ಹೌದೆಂದು
ಹೋಗಿ ಕೇಳಿದಳೆ—ಹಿರಿಯರ ೫

ಪಾರ್ವತಿ ದೇವಿಯು ವಿನೋದವನಾಡುತ್ತ
ಹೋಗಿ ಸುಣ್ಣದಲಿ ಗುರುತಿಸಿ—ನೆಲೆ ಹೌದೆಂದು
ಹೋಗಿ ಕೇಳಿದಳೆ—ಹಿರಿಯರ ೬

ಹಲಸಿನ ಕಾಯಷ್ಟು ಚಿನ್ನ ತ್ರಾಸಿಲಿ ತೂಗಿ
ಬಾಲನ ಕಿವಿಗೆ ಅನುವಾಗಿ—ಮುರ ಮಾಡೆಂದು
ಅರ್ಥಿಲಿ ನಂದಗೋಪ—ನುಡಿದನು ೭

ಕಂಚಿಕಾಯಷ್ಟು ಚಿನ್ನ ತ್ರಾಸಿಲಿ ತೂಗಿ
ಕಂದನ ಕಿವಿಗೆ ಅನುವಾಗಿ—ಮುರ ಮಾಡೆಂದು
ಆಯದಿ ನಂದಗೋಪ—ನುಡಿದನು ೮

ಎಂಟು ಮುತ್ತಿನ ಚೌಕುಳಿ ಎಂಟು ಹಸುರ ಬಾವುಲಿ
ಅನಂತನ ಹೆಡೆಯ ಪದಕವ—ಇಡಲಕ್ಕು
ಅನಂತಮೂರುತಿಯೆ—ಅಳದಿರು ೯

ಆರು ಮುತ್ತಿನ ಚೌಕುಳಿ ಆರು ಹಸುರ ಬಾಗುಲಿ
ಸ್ವಾಮಿಯ ಹೆಡೆಯ ಪದಕವ—ಇಡಲಕ್ಕು
ಸ್ವಾಮಿ ಮೂರುತಿಯೇ—ಅಳದಿರು ೧೦

ಬಾಲನೆ ಅಳದಿರೊ ಭಾಸ್ಕರ ಅಳದಿರೊ
ಬಾಲ ಭಾಸ್ಕರನೇ ಅಳದಿರೋ—ನಿನ್ನ ಕಿವಿಗೆ
ಎಂವೆಂದಿಗು ಒಂಟಿ—ಇಡಲಕ್ಕು ೧೧

ನಂದನ ಅಳದಿರೊ ಕಂದನೆ ಅಳದಿರೊ
ನಂದನ ಕಂದಾನೇ ಅಳದಿರೊ—ನಿನ್ನ ಕಿವಿಗೆ
ಯಾವಾಗಲೊಂಟಿ—ಇಡಲಕ್ಕು ೧೨

## 183. ಶಿಶುವಿಗೆ ಆರತಿ (ತ್ರಿಪದಿ ವಿಸ್ತರಣ)

ಹುಟ್ಟಿದೈದನೆ ದಿನದಿ ದುಷ್ಟೆ ಪೂತನಿ ಬರಲು
ಮುಟ್ಟಿ ಮೊಲೆಗಳ ನೀನುಂಡ—ಕಾರಣ
ದೃಷ್ಟಿತಾಗೀತೋ ನಿನಗೆಂದು—ಗೋಪ ತನ್ನ
ಶಿಶುವಿಗಾರತಿಯಾ—ಬೆಳಗಿದ ೧

ಜನಿಸಿದೈದನೆ ದಿನದಿ ದುರುಳೆ ಪೂತನಿ ಬರಲು
ಘನದ ಮೊಲೆಗಳ ನೀನುಂಡ—ಕಾರಣ
ಗಾಳಿ ತಗಲೀತೋ ನಿನಗೆಂದು—ಗೋಪ ತನ್ನ
ತನಯಗಾರತಿಯಾ—ಬೆಳಗಿದ ೨

ಬಾಲತ್ವದಲ್ಲಿಯೆ ಬಾಲರೆಲ್ಲರ ಕೂಡಿ
ಕಾಳಿಂದಿ ಮಡುವ ಧುಮುಕಿದ—ಕಾರಣ
ಕಾಲು ಉಳುಕೀತೋ ನಿನಗೆಂದು—ಗೋಪ ತನ್ನ
ಬಾಲಗಾರತಿಯಾ—ಬೆಳಗಿದ ೩

ಶಿಶುತನದಲ್ಲಿಯೆ ಅಸುರರೆಲ್ಲರ ಮಡುಹಿ
ಸರ್ಪನ ಮಡುವ ಧುಮುಕಿದ—ಕಾರಣದಿಂದ
ಪಾದ ಉಳುಕಿತೋ ನಿನಗೆಂದು—ಗೋಪ ತನ್ನ
ಶಿಶುವಿಗಾರತಿಯಾ—ಬೆಳಗಿದ. ೪

## 184. ಅನ್ನಪ್ರಾಶನ (ಬಾರ್ಸ)

ಶ್ರೀಗುರುಗಣಪ ಶಾರದೆಯರಿಗೇ । ತಲೆ
ವಾಗಿ ರಮೇಶ ಶಂಕರರಡಿಗೆ ॥
ಆಗಮ ಬೆಳಗೆ । ಅತಿಶಯದೊಳಗೆ
ಸಾಗರ ಶಯನನ ನರನಾಟಕತನ ॥
ದಾಗಮಂಗಳನು—ಪೊಗಳುವೆ ೧

ಖಳರುಪಟಳ ಮಾಣಿಸಲಾಗಿ । ಸುರ
ಕುಲಕೆ ಸೌಖ್ಯವ ತೋರಿಸಲಾಗಿ ॥
ಇಳೆಮೊರೆಗಾಗಿ । ನಳಿನಜ ಪೋಗಿ
ಜಲಜಾಕ್ಷಗೆ ದೂರಲು ಧರ್ಮವ ಪೇ ॥
ಳ್ದಲಸದೆ ದೇವಕಿಗೆ—ಜನಿಸಿದ ೨

ಸೆರೆಮನೆಯೊಳು ಜನಿಸಲು ಕಂಡು । ಮ
ತ್ತಿರೆ ವಸುದೇವ ಸಂತಸಗೊಂಡು ॥
ಸ್ಮರಿಸುತ ನಿಂದು । ಗೋಕುಲಕಂದು
ಸಿರಿಯರಸನ ಹೊತ್ತಿರಿಸಿಯೆ ನಿದ್ರೆಯ ॥
ಧರಿಸಿಯೆ ಗುಪಿತದಲಿ—ತೆರಳಿದ ೩

ಹೆತ್ತಳು ಗೋಪಿ ಪುತ್ರನನೆಂದು । ಬಲು
ಅರ್ಥಿಯೊಳ್ ನಂದಗೋಪನು ಬಂದು ॥
ಉತ್ತಮವೆಂದು । ಉಚಿತದೊಳಂದು
ಪೃಥ್ವಿಯಮರ ಸಂದೋಹಕೆ ಬಲುವಿಧ ॥
ವಸ್ತುದಾನಗಳ—ಕೊಡಿಸಿದ ೪

ಪರಿಪರಿ ವಾದ್ಯಘೋಷಗಳಿಂದ । ಅಂ
ಬರದಿ ಸುರರ ಸಂಸ್ತುತಿಯಿಂದ ॥
ಸುರಿದರು ಮಳೆಯ । ಅರಳು ಮಲ್ಲಿಗೆಯ
ಹರುಷದಿ ದೇವದುಂದುಭಿಯನು ಮೊಳಗಿಸಿ ॥
ಶರಣು ಶರಣೆಂದು—ನುಡಿದರು ೫

ಮುದ್ದುಮಗನು ಜನಿಸಿದನೆನುತ । ಬೆಣ್ಣೆ
ಮುದ್ದೆಯ ಶಿಶುವಿನ ಬಾಯ್ಗಿಡುತ ॥

ಮುದ್ದಿಸಿ ನಗುತ । ನೀರಾರಿಸುತ
ಸಿದ್ಧ ಚಾರಣರಂಬರದಿ ಕೊಂಡಾಡುತ ॥
ಲಿದ್ದ ಜಯವೆಂದು—ಪೊಗಳ್ಯಾರು ೭

ಕಲ್ಲುಸಕ್ಕರೆ ಕಾಯಿ ಬೆಲ್ಲವನು । ಅ
ಲ್ಲಲ್ಲಿಗೆ ಹಣ್ಣು ಹಂಪಲುಗಳನು ॥
ನಿಲ್ಲದೆ ಕೊಡಿಸಿ । ಲಗ್ನವ ಗುಣಿಸಿ
ಎಲ್ಲ ವಿವರವನು ಕೇಳಲು ಗಾರ್ಗ್ಯರ ॥
ಸುಲ್ಲನದಿ ನಂದ—ಕರೆಸಿದ ೭

ಮಗನು ಹುಟ್ಟಿದ ಹೊತ್ತು ವೇಳ್ಯವನು । ನಂದ
ನಗುತಲಿ ಗಾರ್ಗ್ಯರೊಳ್ ಕೇಳಿದನು ॥
ಜಗದೀಶ್ವರನು । ಮಗನಾಗಿಹನು
ಅಗಣಿತ ಮಹಿಮನ ಲಗ್ನವ ಗುಣಿಸುತ ॥
ಪೊಗಳಿ ಲೇಸೆಂದು—ನುಡಿದರು ೮

ಕಲಶ ಕನ್ನಡಿ ವಾದ್ಯ ಘೋಷದಲಿ । ನಿಜ
ಪುರವ ಸಿಂಗರಿಸಬೇಕೆನ್ನುತಲಿ ॥
ನಿಳಯ ನಿಳಯದಲಿ । ತಳಿತ ಬೀದಿಯಲಿ
ಸುಲಲಿತ ಗಂಧ ಕಸ್ತೂರಿ ಕಮ್ಮೆಣ್ಣೆಯ ॥
ಚೆಳೆಯುದಿ ತಣ್ಣೀರ—ತಳಿದರು ೯

ತೋರಣ ಕುರುಜು ಮೇರ್ವೆಗಳಿಂದ । ಜಯ
ಭೇರಿ ಸುವಾದ್ಯಘೋಷಗಳಿಂದ ॥
ಬಾರಿಸುತಂದ । ಗಾರ್ಗ್ಯರು ನಿಂದ
ಚಾರು ವಿಧ್ಯುಕ್ತದಿ ಹನ್ನೊಂದನೆ ದಿನ ॥
ಭೂರಿ ಪುಣ್ಯಾಹ—ರಚಿಸ್ಯಾರು ೧೦

ಹನ್ನೆರಡನೆ ದಿವಸದೊಳಂದು । ಮುದ್ದು
ಚೆಣ್ಣಗೆ ನಾಮಕರಣವೆಂದು ॥
ಕನ್ನೆಯರ್ ವೆರಸಿ । ಪುರವ ಸಿಂಗರಿಸಿ
ತನ್ನಯ ಬಂಧುಬಾಂಧವ ನಂಟರಿಷ್ಟರ ॥
ಮನ್ನಿಸುತ ನಂದ—ಕರೆಸಿದ ೧೧

ಪಟ್ಟಣವನ್ನು ಸಿಂಗರಗೈದು । ಹೊಸ
ಪಟ್ಟೆಪಟ್ಟಾವಳಿ ನೆರಿವಿಡಿದು ॥
ಶ್ರೇಷ್ಠರಿಗೊಲಿದು । ಕೊಡಿಸುತ ನಲಿದು
ಪುಟ್ಟಕುಮಾರಕಗನ್ನಪ್ರಾಶನ ॥
ಶಿಷ್ಟರು ಬಹುದೆಂದು—ಕರೆಸಿದ ೧೨

ಕೇಳುತ ಸರ್ವಸಂಭ್ರಮದಿಂದ । ತಮ್ಮ
ಬಾಲಕಿಯರು ಸಹಿತೊಲಪಿಂದ ॥
ಲೀಲೆಯೊಳ್ ಬಂಧು । ಬಾಂಧವರ್ ಬಂದು
ಬಾಲನ ಪಡೆದ ಯಶೋದೆಗೆ ಘೃತ ತಾಂ ॥
ಬೂಲಗಳ ತಂದು—ಕೊಡಿಸ್ಯಾರು ೧೩

ಮಿಸುಪ ಪೊಂಬಣ್ಣ ಬಟ್ಟಲಿನಲ್ಲಿ । ತಂದು
ಪಸರಿಸಿ ಶಾಲಿ ತಂಡುಲದಲ್ಲಿ ॥
ಪೆಸರಿಡಲಲ್ಲಿ । ಬಂದವರಲ್ಲಿ
ಹೆಸರೀತಗೆ ಶ್ರೀಕೃಷ್ಣನೆಂದೆನ್ನುತ ॥
ಒಸಗೆಯು ಬಲಕಿವಿಯೊಳುಸುರಿದ ೧೪

ತಂದೆಯು ಹೆಸರಿಡಬೇಕಾಯ್ತು । ಈ
ಕಂದಗೆ ಪೆಸರಿದು ಪೊಸತಾಯ್ತು ॥
ಎಂದೆನಲರಿತು । ಪೇಳುವರಿನಿತು
ಮಂದಮತಿಗಳೇನರಿಯದವರು ಗೋ ॥
ವಿಂದನೆ ಮಗನಾದ—ತನಗೆಂದ ೧೫

ರಂಜಿತದಲಿ ಹವನವ ರಚಿಸಿ । ಮಣಿ
ಮಂಜರಿ ಮಾಲಾ ಮುಪ್ಪುರಿವೆರಸಿ ॥
ಮಂಜುಳವೆರಸಿ । ಮಡಿಲೊಳಗಿರಿಸಿ
ಕಂಜನಾಭನು ಮಗನೆಂದಾ ನಂದನು ॥
ಮುಂಜಿಯ[1] ಕಟ್ಟಿಸಿದ—ಮುದದಿಂದ ೧೬

ರನ್ನದ ಹರಿವಾಣವ ಹಿಡಿದು । ಪರ
ಮಾನ್ನಕೆ ಹಾಲು ಸಕ್ಕರೆವೆರೆದು ॥

---
1। ಮುಂಜಿ—ಉಡಿದಾರ

ಚಿನ್ನ ಮುಂಗುರದಿ । ಮುಳುಗಿಸಿ ಮುದದಿ
ಚಿಣ್ಣನ ತೊಡೆಯಲಿ ಮಲಗಿಸಿ ಉಣಿಸಿದ ॥
ಚೆನ್ನಕೇಶವಗೆ—ಸಲವಿಂದ ೧೭

ಚಾರುಮುತ್ತಿನ ಕುಂಡಲಗಳನು । ಸುಕು
ಮಾರನ ಕಿವಿಗೆ ಸಂಧಿಸುತದನು ॥
ಭೂರಿ ಸಂಭ್ರಮದಿ । ಸಭೆಯೊಳು ಮುದದಿ
ಧಾರಿಣೀಸುರರ ಸಮೂಹಕೆ ದಕ್ಷಿಣೆ ॥
ಬೇರೆಬೇರಾಗಿ—ಕೊಡಿಸಿದ ೧೮

ಭೂರಿಸಭೆಗೆ ಮತ್ತೊಡೆಮಾಡಿ । ನೆಲ
ಸಾರಿಸಿ ಮಿಗೆ ಸರ್ವರು ಕೂಡಿ ॥
ಸಾರ ಸಂಭ್ರಮದಿ । ಸರ್ವವೈಭವದಿ
ಸಾರನ್ನವು ಷಡ್ರಸ ಪರಮಾನ್ನವು ॥
ಭೂರಿ ಭೋಜನವ—ಗೈದರು ೧೯

ಮಸಗುವ ಭೇರಿಯ ಘೋಷದಲಿ । ವಾದ್ಯ
ಮಿಸರ ನಗಾರಿಯ ರಭಸದಲಿ ॥
ಮಿಸುನಿ ಬಟ್ಟಲಲಿ । ಒಸಗೆಯಿಕ್ಕಿರಲಿ
ಹೊಸ ಪೀತಾಂಬರ ಚಿನ್ನದ ಬಳಿಗಳ ॥
ಶಿಶುವಿನ ಕೈಗಿಟ್ಟು—ಪೊಗಳ್ಯಾರು ೨೦

ಆ ಸಮಯದಿ ಭೂಸುರರಂದು । ಮಂತ್ರ
ಘೋಷದಿ ಮಂತ್ರಾಕ್ಷತೆ ತಂದು ॥
ತೋಷದೊಳಂದು । ಹರಸುತ ನಿಂದು
ವಿಲಾಸದಿ ನಂದನ ಕಂದ ಸಹಿತ.ರಾಣಿ ॥
ವಾಸವ ಕೊಂಡು—ಒಳಗೈದ ೨೧

ಬಟ್ಟಕುಚದ ಮೋಹನಾಂಗಿಯರು । ಪೊಸ
ತೊಟ್ಟಿಲ ಕಟ್ಟಿ ಮೋಹನ್ನೆಯರು ॥
ಪಟ್ಟೆಯ ಹೊದಿಸಿ । ಶೋಭನಪೆರಸಿ
ಸೃಷ್ಟಿಗೊಡೆಯ ಪಂಚಲಿಂಗನ ಸಖ ಶ್ರೀ ॥
ಕೃಷ್ಣನ ತೂಗಿದರು—ಹರುಷದಿ ೨೨

## ಅಧ್ಯಾಯ : 3

# ಉಪನಯನ (ಪೂರ್ವೋತ್ತರ ಸಹಿತ)

## 185. ಚವಲದ ಹಾಡು

ನಂದಗೋಪನು ತನ್ನಣುಗನಿಗೆ । ಸಾ
ನಂದದಿ ಚವಲ ಮಾಡುವ ಬಗೆಗೆ
ಬಂಧುಬಳಗ ಬಹುಮಂದಿ ಮಾರ್ಬಲಗಳ
ವೃಂದ ಮಧ್ಯದಿ ಗೋವಿಂದನ ಕರೆತಂ ॥
ದಂದಣದಿ ಬೇಗ—ಸಭೆಗಾಗಿ ೧

ಕಾಲಲಂದುಗೆ ಗೆಜ್ಜೆಗಳ ತೊಡಿಸಿ । ಇಂದ್ರ
ನೀಲ ರತ್ನಾಭರಣಾಲಂಕರಿಸಿ
ಭಾಳದಿ ಕಸ್ತೂರಿಯ ಕುಂಕುಮಗಳ
ಚಾಳಿಸುತಲೆ ಶೃಂಗರಿಸಿ ವಿನೋದದಿ ॥
ಮೂಲೋಕದೊಡೆಯಗೋಲವಿಂದ ೨

ಅಷ್ಟವಾದ್ಯಗಳು ಭೋರಿಡುತ । ಪರ
ಮೇಷ್ಠಿ ಮುಖ್ಯಾಮರರು ವಂದಿಸುತ
ಅಷ್ಟೈಶ್ವರ್ಯಗಳಿಟ್ಟಣಿಸುತಲಾ
ಸೃಷ್ಟಿಯ ಜನರೊಂದಾಗಿಯೆ ಸಭೆಯಲಿ ॥
ಕೃಷ್ಣನಿಗೆ ಚವಲ—ರಚಿಸ್ಯಾರು ೩

ಕರೆತಂದರು ಗೋವಿಂದನನು । ತ
ನ್ನೆರಕದ ಬಲರಾಮಣ್ಣನನು
ಸುರರಂಬರದಿಂ ಸುರಿಯಲು ಸುಮಗಳ
ಧರೆ ಬಿರಿವಂದದೆ ವಾದ್ಯ ಶೋಭನಗಳು ॥
ಮೆರವ ಸಭೆಯಲ್ಲಿ—ನೆಲಸಲು ೪

ನಾಗಿಲನನು ಕರೆತಂದಾಗ । ಗುಣ
ಸಾಗರ ನಂದಗೋಪನು ಬೇಗ
ಆಗ ತಂಬುಲವುಡುಗರೆಯನು ಕೊಡುತಲೆ
ಆಗ ಚವಲವನು ರಾಗದಿ ರಚಿಸಲು ॥
ಬಾಗಿ ಬಿನ್ನಯಿಸತೊಡಗಿದ ೫

ಮಾಡಿದ ಚವಲವ ಹರುಷದಲಿ । ಸಭೆ
ನೋಡುತ ಪೊಗಳಿದುದೊಲವಿನಲಿ
ಕೂಡಿದ ಜನರಿಗೆ ಇಷ್ಟಾಭೀಷ್ಟವ
ಮಾಡಿದ ಶ್ರೀಗೋವಿಂದ ಮುಕುಂದನು ॥
ಗಾಢದಲಿ ಬಹಳೋತ್ಸಹದಿಂದ ೬

ಮಂಗಲಂ ಶ್ರೀಕೃಷ್ಣಯ್ಯನಿಗೆ । ಜಯ
ಮಂಗಲಂ ಶ್ರೀ ಬಲಭದ್ರನಿಗೆ
ಮಂಗಲಂ ಮುರಹರ ಮಧುಸೂದನನಿಗೆ
ಮಂಗಲಂ ಕೋಳ್ಯೂರ ಹರಿಹರಾತ್ಮಕನಿಗೆ ॥
ಮಂಗಲಾರತಿಯ—ಬೆಳಗಿರೆ

## 186. ಚವಲದಲ್ಲಿ ಪನ್ನೆ ತಿದ್ದಿದ್ದು

ದಶರಥನ ಮನೆಯಲ್ಲಿ ಕುಸುಮನಾಭನ ಚೌಲ
ಎಸೆದವು ನಾಳೆ ಉದಯಕ್ಕೆ—ಎಂದ್ಹೇಳಿ
ದಶರಥನು ನಗುತ—ನುಡಿದನು ೧

ದಶರಥ ನಸುನಗುತ ಸತಿಯೊಡನೆ ಹೇಳಿದ
ರಘುಪತಿಯ ಚೌಲವಡಿಗೆಯಾಗಲೆಂದು
ದಶರಥ ನಗುತ—ನುಡಿದನು ೨

ಶ್ರೀರಾಮಚಂದ್ರಮ ಸ್ವಾಮಿಯ ಚೌಲವು
ಆದಾವೆ ನಾಳೆ ಉದಯಕ್ಕೆ—ಎಂದ್ಹೇಳಿ
ಸ್ವಾದಿನ ಹೆಗ್ಗಾಳೆ—ಹಿಡಿದರು ೩

ಹಸಿಯಾದ[1] ಹುರಿಗಾಳು ಪರಡಿಯ[2] ಪಾಯಸ
ಅರೆದ ಏಲಕ್ಕಿ ಪರಿಮಳವಾಗಿದ್ದ
ಪರಮಾನ್ನವಾಗಲೆನುತಿದ್ದ ೪

ಕುಸುಮದ ಬಟ್ಟಲ್ಲಿ ಬಣ್ಣದಕ್ಷತೆ ಕಲಸಿ
ನಾದು ಸತ್ತಿಗೆಯ ನೆರಳಲ್ಲಿ—ದಶರಥ
ನಾಪಿತನ ಕರೆಯ—ಹೊರಟನು ೫

ಪೊಸ್ತಿಲ ಸಾರಿಸಿ ಮುತ್ತುಗದ್ದಿಗೆಯಿಕ್ಕಿ
ಚಿಕ್ಕತಮ್ಮಯ್ಯನ ಪವಡಿಸಿ—ಪನ್ನೆ ತಿದ್ದಲು
ಅರ್ಥಿಲಿ ನಾಪಿಗನ[3]—ಬರಹೇಳಿ ೬

ಪಟ್ಟೆ ಹಚ್ಚಡ ಹೊದ್ದು ಮುತ್ತಿನುಂಗುರವಿಟ್ಟು
ಹಸಿರು ಸತ್ತಿಗೆಯ ನೆರಳಲಿ—ದಶರಥ
ನಾಪಿಗನ ಕರೆಯ—ಹೊರಟನು ೭

ನಾಪಿಗನ ಅರಮನೆ ಯಾವಲ್ಲೆಂದರಿಯೆವು
ಸಲ್ವತ್ತು ಬಾಗಿಲಿಗೂ ಕದವೊಂದು[4]—ಕೀಲೆರಡು
ಅಲ್ಲುಂಟು ನಾಪಿಗನ—ಅರಮನೆ ೮

ಚೆನ್ನಿಗನ ಅರಮನೆ ಇಂದೆಲ್ಲೆಂದರಿಯೆವು
ಹನ್ನೆರಡು ಬಾಗಿಲಿಗೂ ಕದವೊಂದು—ಕೀಲೆರಡು
ಅಲ್ಲುಂಟು ಚೆನ್ನಿಗನ—ಅರಮನೆ ೯

ಬಾಳೆಯ ಬಲಕೊತ್ತಿ ಕಿತ್ತಾಳೆ ಎಡಕೊತ್ತಿ
ನಾಗಸಂಪಗೆಯ ನಡುಗೊತ್ತಿ—ಹೋದರೆ
ಅಲ್ಲಿ ನಾಪಿಗನ—ಅರಮನೆ ೧೦

ಉಪ್ಪರಿಗೆ ಒಳಪಿಕೆ ಹೊಕ್ಕನೆ ನಾಪಿಗ
ಮುತ್ತಿನ ಹಡಪ ತೆಗೆದಿಡು—ಆವೂರ
ಉತ್ತಮರು ಕರೆಯಲ್—ಬರುತಾರೆ ೧೧

1 ಹೊಸತಾದ. 2 ಪರಡಿ—ಗೋಧಿಯ ಸೇವಗೆ. 3 ನಾಪಿಗ, ನಾಪಿತ, ನಾಗಿಲ, ಹಸ್ತಿಕ, ಚೆನ್ನಿಗ—ಕ್ಷೌರಿಕ. 4—ಪ್ರತಿಯೊಂದು ಬಾಗಿಲಿಗೂ ಕದವೊಂದೇ.

ಸಾಲಿಯ ಪಟ್ಟೆಯ ಸುತ್ತಿದನೆ ನಾಪಿಗ
ಮುತ್ತಿನ ಹಡಪ ಹೆಗಲಲ್ಲಿ—ಇಟ್ಕೊಂಡು
ಮಾರಾಯ್ರ ಮನೆಗೆ—ಹೊರಟನೆ ೧೨

ಮತ್ತೇಕೋ ನಾಪಿಗ ಬರುವದಿಷ್ಟು ಹೊತ್ತಾಯ್ತು
ಚೌಲವೆಂದರಿಯೇ ಮನೆಯಲ್ಲಿ—ಎಂದ್ಹೇಳಿ
ಅಪ್ಪ ಗರ್ಜಿಸುತ—ನುಡಿದನು ೧೩

ಗುತ್ತಿಗೂ ಇಲ್ಲಿಗೂ ಸುತ್ತೆಲ್ಲ ಚೌಲವು
ಮತ್ತೆ ನಿಮ್ಮೂರ ಬಯಲಲ್ಲಿ—ಬರುವಾಗ
ಮುತ್ತಿನ ಕೋಲವರು—ತಡೆದರು ೧೪

ಮುತ್ತಿನ ಮಣೆ ತನ್ನಿ ಪುತ್ರನ ಕರೆತನ್ನಿ
ಮುತ್ತಿನ ಕುಡಿಬಾಳೆ ತೆಗೆತನ್ನಿ—ಎಂದ್ಹೇಳಿ
ಮತ್ತೆ ನಾಪಿತನು—ನುಡಿದನು ೧೫

ಮುತ್ತಿನ ಮಣೆತಂದು ಪುತ್ರನ ಕರೆತಂದು
ಮುತ್ತಿನ ಕುಡಿಬಾಳೆ ತೆಗೆತಂದು—ನಾಪಿಗ
ಅರ್ಥಿಯಲಿ ಕೂಡ್ಲೇ—ಇಳುಗೆಂದ ೧೬

ಕಾಲುಗುರ ತೆಗೆ ಬೇಗ ಕಾಲಿಗೆ ಮಿಂಚಿಡು ಬೇಗ
ಕಾಲುಗುರಿಗೆ ತಕ್ಕ ಅಳತೆಯನಿಟ್ಟರೆ
ಸಾಲಿ ಹಚ್ಚಡವ—ಕೊಡುತೇವೆ ೧೭

ಕಾಲುಗುರ ತೆಗೆದನು ಕಾಲಿಗೆ ಮಿಂಚಿಟ್ಟನು
ಕಾಲುಗುರಿಗೆ ತಕ್ಕ ಅಳತೆಯನಿಟ್ಟನು
ಸಾಲಿ ಹಚ್ಚಡವ—ಕೊಡಿರೆಂದ ೧೮

ಉಪ್ಪರಿಗೆ ಒಳಪಕೆ ಹೊಕ್ಕನೆ ಅಪ್ಪಯ್ಯ
ಪಟ್ಟೆ ಪೆಟ್ಟಿಗೆಯ ಇಳುಗಿದ—ಇಳುಗಿ ಮುಚ್ಚಳ ತೆಗೆದು
ಹಚ್ಚಡವ ಕೊಟ್ಟ—ಉಡುಗರೆ ೧೯

ಅಕ್ಕಿ ಬೇಳೆ ಬೆಲ್ಲ ತುಪ್ಪ ಗೋಧಿಕಾಯಿ[1]
ರೊಕ್ಕ ವೀಳ್ಯವನೆ ನಡುಗಿಟ್ಟು ತಂದರು
ನಾಪಿಗಗೆ ಕೊಡಲು—ಉಡುಗರೆ ೨೦

## 187. ಉಪನಯನದ ನಾಂದಿ

ನಾಂದಿಗೈದನೆ ಈಶ್ವರ । ಪಾರ್ವತಿಯೊಡನೆ
ನೇಮದಿಂದಲಿ ಶಂಕರ
ಅಕ್ಕರೆಯಲಿ ಮುಕ್ಕಣ್ಣನು ಹರುಷದಿ
ಪತ್ನಿ ಪಾರ್ವತಿದೇವಿಯನೊಡಗೊಂಡು ಪ

ವರ ಗಣಪನ ಧ್ಯಾನಿಸಿ । ಮೋದದಿ ನಾ
ಸರಸ್ವತಿಗೆರಗುವೆನು
ಹರುಷದಿ ಪೇಳುವೆ ಕೈಲಾಸವಾಸನು
ತರಳನ ಕಾರ್ಯಕೆ ನಾಂದಿಗೈಯುವ ಪದನ ೧

ಮುಕ್ಕಣ್ಣ ಶಿವನು ತಾನು । ಸ್ನಾನವ ಮಾಡಿ
ತಕ್ಕ ಮಡಿಯನ್ನು ಉಟ್ಟು
ಅಕ್ಕರೆಯಲಿ ತನ್ನ ಕಂದನ ಕರೆಯುತ್ತ
ಭಕ್ತಿಯಿಂದಲಿ ಪುರೋಹಿತರನು ಕೂಡಿಯೆ ೨

ಮಂಡಲವನ್ನು ಹಾಕಿ । ಮಂಡಲದೊಳು
ಕಲಶಗಳನ್ನೆ ಇಟ್ಟು
ಅರ್ಥಿಯಿಂದಲಿ ನಾವು ಮಾಡುವ ಕಾರ್ಯಕೆ
ಪುತ್ರನೆ ನಿರ್ವಿಘ್ನ ನೀಡು ಎಂದೆನುತ ೩

ವೀಳೆಯದೆಲೆಗಳನು । ಹರುಷದಿಂದ
ತೆಂಗಿನಕಾಯ್ಗಳನು
[2]ಬೇಗಬೇಗನೆ ನೀವು ತಂದು ಕೊಡಿರೆನ್ನುತ
ಆಗಲೆ ದಾಸಿಯರನ್ನು ಕರೆಯುತ್ತ[2] ೪

1 ಗೋಟುಕಾಯಿ.
2 ತಂದು ನೀವ್ ಕೊಡಿರೆಂದು ದಾಸಿಯರನು ಕರೆದು
ಶಂಭುಶಂಕರ ತನ್ನ ಸತಿಯನ್ನೆ ಕರೆಯುತ

ಸತಿಯೆ ನೀ ಬೇಗದಲಿ । ಸಿಂಗರವಾಗು
ಹಿಮಗಿರಿಜಾತೆ ನೀನು
ಪುತ್ರ ಷಣ್ಮುಖನಿಗೆ ನಾಂದಿ ಮಾಡುವ ವೇಳೆ
ಆಯ್ತೆಂದೆನುತಲೆ ಸತಿಯನು ಕರೆದನೆ ೫

## 188. ಅಕ್ಷತೆ ಕಲಸಿದ್ದು

ಅಕ್ಷತೆ ಕಲಸಿದರು । ಶುಭಕರವಾದ
ಅಕ್ಷಿಣಿಯರು ಮುದದಿ ॥
ಚಿಕ್ಕ ತಮ್ಮನ ಕಾರ್ಯಕೆನ್ನುತ
ಲಕ್ಷ್ಮೀಪತಿಯನು ಧ್ಯಾನಿಸುತ್ತಲಿ ಪ

ಮನೆಯ ದೇವರ ಮುಂದೆ । ತನಯನ
ವಿನಯದಿಂದಲೆ ಕೂಡ್ರಿಸಿ ॥
ಘನತರದ ಸದ್ಭಕ್ತಿಯಿಂದಲಿ
ಗಣಪತಿಯ ಭಜಿಸುತ್ತಲಿ ೧

ನಾರಿಯರು ಪ್ರೆಯಾರ । ದಿಂದಲಿ
ಆರಿಸಿ ಸಣ್ಣಕ್ಕಿಯ ॥
ಚಾರುತರ ಪಾತ್ರೆಯೊಳು ಸುರುಗುತ
ಸೇರಿಸುತ ಕುಂಕುಮಗಳ ೨

ಚೆಲುವೆಯರ್ ಕುಲದೇವರ । ಬಹು ಭಕ್ತಿಯೊಳ್
ಹರುಷದಿಂದಲೆ ನೆನೆಯುತ ॥
ಶುಭವ ನೀಡೆಂದೆನುತ ಬೇಡುತ
ನಳಿನನಾಭನ ಪಾಡುತ ೩

ಮಂಗಳಾಂಗಿನಿಯರೆಲ್ಲ । ಹರುಷದಿ
ಮಂಗಳಾಕ್ಷತೆ ಕಲಸುತ ॥
ರಂಗನಾಥನಿಗೆರಗಿ ನಮಿಸುತ
ಮಂಗಲವ ನೀಡೆನ್ನುತ ೪

## 189. ಎಣ್ಣೆ ಹನಿಸಿದ್ದು (ವಟು ಶ್ರೀರಾಮನಿಗೆ)

ಹಸ್ತದಿ ಪಾಶಾಂಕುಶಧರನ ದಕ್ಷಾತ್ಮಜೆಯಾತ್ಮಜನ
ಹಸ್ತಿಮುಖದವನ ಬಲಗೊಂಡು—ಸ್ವಾಮಿಯ
ಚಿತ್ತನಿರ್ಮಲದಿ—ನೆನೆಯುವೆ ೧

ಹೊಸ್ತಿಲಿಗೆ ಎದುರಾಗಿ ಶುಕ್ರಮಸು ಮೂಡಿದ
ಅಕ್ಕ ತುಂಬಿದಳೆ ಚೌಕವ—ಮಣೆ ಮೇಲೆ
ಬಂದು ಒಪ್ಪಿದನೆ—ಶ್ರೀರಾಮ ೨

ಬಾಗಿಲಿಗೆ ಎದುರಾಗಿ ಸೂರ್ಯಮಸು ಮೂಡಿದ
ತಾಯಿ ತುಂಬಿದಳೆ ಚೌಕವ—ಮಣೆ ಮೇಲೆ
ಬಂದು ಒಪ್ಪಿದನೆ—ರಘುರಾಮ ೩

ಪಟ್ಟೆ ತಲೆಗೆ ಸುತ್ತಿ ಪಟ್ಟಮಂಚದಿ ಕುಳಿತು
ಚೆಂದದಿಂದಲ್ಲೆ ಉಗುರೆಣ್ಣೆ—ಕೊಂಬಾಗ
ಗುತ್ತಿಯಲಿ ವಾದ್ಯ—ಎಸೆದವೆ ೪

ಸಾಲಿಯ ತಲೆಸುತ್ತಿ ತೂಗುಮಂಚದಿ ಕುಳಿತು
ಆಯದಿಂದಲ್ಲೆ ಉಗುತೆಣ್ಣೆ—ಕೊಂಬಾಗ
ಗೋಪೆಯಲಿ ವಾದ್ಯ—ಎಸೆದವೆ ೫

ಅರಿಸಿನ ಉದ್ದಿಕೊಂಬ ಅರಸುಗಳ ಮಗ ಕೇಳೊ
ಅರಿಸಿನಕೆ ಮುತ್ತು ಸೊಗಸಾಗ—ಶ್ರೀರಾಮ
ತೆಗೆ ನಿನ್ನ ಕೊರಳ—ಪದಕವ ೬

ಎಣ್ಣೆಯನುದ್ದಿಕೊಂಬ ಚೆನ್ನಿಗ ರಾಮನೆ ಕೇಳೊ
ಎಣ್ಣೆಗೆ ಮುತ್ತು ಸೊಗಸದು—ಬಾಲಯ್ಯ
ತೆಗೆ ನಿನ್ನ ಕೊರಳ—ಪದಕವ ೭

ಉದ್ದಿನ ಸೋಡಿಗೆಯಂತೆ ಮುದ್ದು ನಿನ್ನ ಕೈಬೆರಲು
ತಿದ್ದಿದ ಕೇದಗೆಯ ಗರಿಯಂತೆ—ಬಾಲಯ್ಯಗೆ
ಭದ್ರೆಯರು ತೀಡಿದರೆ—ಉಗುರೆಣ್ಣೆ ೮

ಹೆಸರಿನ ಸೋಡಿಗೆಯಂತೆ ಹಸುಳೆ ನಿನ್ನ ಕೈಬೆರಲು
ಎಸಳು ಕೇದಗೆಯ ಗರಿಯಂತೆ—ಮುದ್ದುಮೊಗದ
ಭದ್ರೆರು ತೀಡಿದರೆ—ಉಗುರೆಣ್ಣೆ ೯

## 190. ಹವಳಸರ ಕಟ್ಟುವದು

ಗುರುಪಾದಾಂಬುಜವನು ನೆನೆದು
ಕರಿಮುಖನಿಗೆ ಕೈಯ ಮುಗಿದು
ಸುರುಚಿರ ಮಣೆ ಮೇಲ್ವಾಸಿನೊಳಂದು
ಕರಪಿಡಿದಲ್ಲಿ ಕುಳ್ಳಿರಿಸುತಲಂದು
ಕೊರಳಿಗೆ ಹವಳದ ಸರವನೆ ತೊಡಿಸಿಯೆ ॥
ಹರಸಿದಳು ತಾಯಿ—ಹರಿಗಂದು ೧

ಮಂಗಲ ಶುಭಮುಹೂರ್ತದಲಿ
ರಂಗನ ಕೊರಳಿಗಂದವಳು
ಭೃಂಗಕುಂತಳೆಯಾದ ದೇವಕಿದೇವಿಯು
ಬಂಗಾರಿನ ಮಣಿಸರವನ್ನೆ ತೊಡಿಸಿಯೆ
ಅಂಗಜಪಿತನಿಗೆ ಹರಸುತ ತೋಷದಿ ॥
ಮಂಗಲಾಕ್ಷತೆಯ—ತಳಿದಳು ೨

## 191. ಕಲಶ ಮೀಯುವದು

ಎಪ್ಪತ್ತು ವರಹ ಕೊಟ್ಟು ಬಚ್ಚಲ ಮನೆ ಕಟ್ಟಿಸಿದ
ಮತ್ತದರ ಕೀಲು ಸಡಿಲಿದ—ಅಪ್ಪಯ್ಯ
ಬಿಚ್ಚಿ ಕಟ್ಟಿಸಿಕೋ—ಪ್ರತಿಬಿಂಬ ೧

ನಲ್ವತ್ತು ವರಹ ಕೊಟ್ಟು ಮೀಯುವ ಮನೆ ಕಟ್ಟಿಸಿದ
ಈಗದರ ಕೀಲು ಸಡಿಲಿದ—ಅಣ್ಣಯ್ಯ
ಬಿಚ್ಚಿ ಕಟ್ಟಿಸಿಕೋ—ಪ್ರತಿಬಿಂಬ ೨

ಅಂದದಿ ಚೆಂದದಿ ಮೂರಂದದಿ ಒಲೆ ಹೂಡಿ
ಗಂಧದ ಚಕ್ಕೆ ತಳಕಿಟ್ಟು—ಕಾದ ನೀರು
ಮಿತ್ರೆಯ ಮಗನ—ಜಳಕಕ್ಕೆ ೩

ಬಚ್ಚಲ ಮನೆ ಚಂದವ ಹೊಕ್ಕು ನೋಡುವ ಬನ್ನಿ
ಹತ್ತು ಕಾಲ್ಗರುಡ ಗಿಳಿಹಿಂಡು—ಹೊನ್ನ ಗೊಂಬೆ
ತಾವೆದ್ದು ನೀರ—ಬೆರಸಿದ ೪

ಮೀವ ಮನೆ ಚೆಂದವ ಹೋಗಿ ನೋಡುವ ಬನ್ನಿ
ಆರು ಕಾಲ್ಗರುಡ ಗಿಳಿಹಿಂಡು—ಹೊನ್ನ ಗೊಂಬೆ
ತಾವೆದ್ದು ನೀರ—ಬೆರಸಿದ ೫

ಇಂದು ತೋಡಿದ ಬಾವಿಯಿಂದ ನೀರೆದ್ದಾವು
ಇಂದೇಳು ಕೊಣಕೆ ಹರಿದಾವು—ಹರಿದು ಮಿಕ್ಕ ನೀರು
ರಂಬೆ ನಿನ್ನ ಮಗನ—ಜಳಕಕ್ಕೆ ೬

ಈಗ ತೋಡಿದ ಬಾವಿ ಈಗ ನೀರೆದ್ದಾವು
ಈಗೇಳು ಕೊಣಕೆ ಹರಿದಾವು—ಹರಿದು ಮಿಕ್ಕ ನೀರು
ನಾರಿ ನಿನ್ನ ಮಗನ—ಜಳಕಕ್ಕೆ ೭

ಅತ್ತಿಯ ಮರದಡಿ ಹತ್ತು ಜೋಡೊಲೆ ಹೂಡಿ
ಅತ್ತಿಯ ಚೆಕ್ಕೆ ತಳಕಿಟ್ಟು—ಕಾದ ನೀರು
ಮಿತ್ರೆ ನಿನ್ನ ಮಗನ—ಜಳಕಕ್ಕೆ ೮

ಆಲದ ಮರದಡಿ ಆರು ಜೋಡೊಲೆ ಹೂಡಿ
ಆಲದ ಚೆಕ್ಕೆ ತಳಕಿಟ್ಟು—ಕಾದ ನೀರು
ನಾರಿ ನಿನ್ನ ಮಗನ—ಜಳಕಕ್ಕೆ ೯

ಬಾಲ ಮಿಂದ ನೀರು ಬಾಗಿಲಿಗೆ ಹರಿದವು
ಬಾಗಿಲ ದಾಟಿ ಮಿಗಿಲ್ದಾಟಿ—ಮುಂದಕ್ಕೆ
ಬಾಳೆಯ ವನಕೆ—ಹರಿದಾವು ೧೦

ಪುತ್ರ ಮಿಂದ ನೀರು ಹೊಸ್ತಿಲಿಗೆ ಇಳಿದಾವು
ಹೊಸ್ತಿಲ ದಾಟಿ ಮಿಗಿಲ್ದಾಟಿ—ಮುಂದಣ
ಕಿತ್ತಳೆ ವನಕೆ—ಹರಿದಾವು ೧೧

ಮಂಜು ಬಂದಿತೆಂದು ಅಂಜದಿರಿ ಜನರೆಲ್ಲ
ಮಂಜಲ್ಲ ಮಳೆಯ ಹನಿಯಲ್ಲ—ಪರಶಿವ
ಮಿಂದು ಕೆಂಜೆಡೆಯ—ಕುಡುಗಿದ ೧೨

ಗುಡುಗು ಬಂದಿತೆಂದು ಹೆದರದಿರಿ ಜನರೆಲ್ಲ
ಗುಡುಗಲ್ಲ ಮುಗಿಲ ಪನಿಯಲ್ಲಿ—ಪರಶಿವ
ಒಗೆದು ಕೆಂಜೆಡೆಯ—ಕುಡುಗಿದ ೧೩

ಉದಕ ಮಿಂದನಣ್ಣ ಪದಕವನಿಟ್ಟನು
ಮದಕರಿಯೆಂಬ ಕರಿಯನ್ನ ಏರಿಕೊಂಡು
ಬಂದನೆ ದೇವರೊಳವಿಗೆ ೧೪

ನೀರ ಮಿಂದನಣ್ಣ ಹಾರವನಿಟ್ಟನು
ನೀಲಾದ್ರಿಯೆಂಬ ಕುದುರೆಯನೇರಿಕೊಂಡು
ಬಂದನೆ ದೇವರೊಳವಿಗೆ ೧೫

ಪುತ್ರನ ಮೈಬಣ್ಣಕೆ ದೃಷ್ಟಿತಾಗೀತೆಂದು
ಪಟ್ಟೆ ಹಚ್ಚಡವ ಮರೆಮಾಡಿ—ಕರೆತಂದೇವು
ಪುತ್ರಯ್ಯನೊಳಗೆ—ಕರೆ ಬೇಗ ೧೬

ಬಾಲನ ಮೈಬಣ್ಣಕೆ ಗಾಳಿ ತಾಗೀತೆಂದು
ಸಾಲಿ ಹಚ್ಚಡವ ಮರೆಮಾಡಿ—ಕರೆತಂದೇವು
ಬಾಲಯ್ಯನೊಳಕೆ—ಕರೆ ಬೇಗ ೧೭

ಹತ್ತು ಕೊಪ್ಪರಿಗೆಲಿ ಉಕ್ಕಿ ಕಾದವೆ ನೀರು
ಮತ್ತಾರೂ ಬೆರಸಲಳವಲ್ಲ—ಅಮ್ಮ ನಿಮ್ಮ
ಪುತ್ರಯ್ಯನ ಬೇಗ—ಕರೆತನ್ನಿ[1] ೧೮

ಉದಕವು ಬಿಸಿಯೆಂದು ಕುವರ ಕೈಯೊಡ್ಡಿದ
ಮುತ್ತಿನುಂಗುರದ ಹರಳಿನ—ಕೆಂಬೆರಲು
ಜಗಕೆಲ್ಲ ಪಂಜು—ಎಸೆದವು ೧೯

ಪುತ್ರ ಮಿಂದು ಬಂದು ಹೊಸ್ತಿಲೊಳಗೈದಾನೆ
ಬಪ್ಪವರ[2] ದೃಷ್ಟಿ ಘನವಲ್ಲ—ತಾಯಮ್ಮ
ಪುತ್ರಯ್ಯನ ಒಳಗೆ—ಕರೆ ಬೇಗ ೨೦

---

1 ಹತ್ತು ಕೊಪ್ಪರಿಗುದಕ ಭೋರಿಟ್ಟು ಕಾದಾವು
ಮತ್ತಾರು ಬೆರಸಲಳವಲ್ಲ—ತಮ್ಮಯ್ಯನ
ಅಕ್ಕಂದಿರ ಶೀಘ್ರ—ಬರಹೇಳಿ

2 ಒಪ್ಪುವರ.

ಬಾಲ ಮಿಂದು ಬಂದು ಬಾಗಿಲೊಳಗೈದಾನೆ
ಬಾಹವರ ದೃಷ್ಟಿ ಘನವಲ್ಲ—ತಾಯವ್ವ
ಬಾಲಯ್ಯನೊಳಕೆ—ಕರೆಬೇಗ ೨೧

## 192. ಗೋಪಿನಾಮವಿಡುವದು

ಗುರುಗಣಪತಿಯರ ಚರಣವ ನೆನೆದು
ಸುರಮುನಿವರರತಿ ಹರುಷದಿ ನೆರೆದು
ಸುರರ ಸಮೂಹದಿ ನೆರೆದು ಕಾಶ್ಯಪ ತನ್ನ
ತರಳ ವಾಮನನಿಗೆ ಗೋಪಿನಾಮವನಿಟ್ಟ ॥
ಚರಿತೆಯ ವಿಸ್ತರಿಸಿ—ಪೊಗಳುವೆ ೧

ಸುರಮುನಿ ಸನಕ ಸನಂದನಾದಿಗಳು
ಸರಸ ವಿಲಾಸದಿ ನೆರೆದು ಸಭೆಯೊಳು
ಪರಿಪರಿ ವಾದ್ಯರವಂಗಳ ವಿಭವದಿ
ತರಳ ಮೂರುತಿಯನು ಕರೆದು ಸಭೆಯೊಳಂದು ॥
ಹರುಷದಲಿ ಕುಳಿಸಿ—ಪೊಗಳಿದ ೨

ಹೆತ್ತ ಜನನಿ ನಸುನಗುಗಲೆ ಬಂದು
ಪುತ್ರಗೆ ಮುಹೂರ್ತಮಣಿ ಕಟ್ಟುತಲಂದು
ಧಾತ್ರಿಯೊಳಿಹ ಕಣ್ವಪುರದ ಶ್ರೀಕೃಷ್ಣನ
ಭಕ್ತಿಯೊಳ್ ವಂದಿಸಿ ತೆರಳಿ ಕೊಂಡಾಡಿ ಪೊಗ ॥
ಉತ್ತ ಮಂತ್ರಾಕ್ಷತೆಯ—ತಳಿದರು ೩

## 193. ಉಪನಯನಕ್ಕೆ ಕರೆತರುವದು

ಶ್ರೀ ಗುರುಗಣಪ ಶಾರದೆಯರ ನಮಿಸಿ
ಆ ಗುರುಹಿರಿಯರ ಸಂಸ್ತುತಿಸಿ
ಪ್ರೇಮದಿ ಸಭ್ಯರೊಳನುಮತಿಯನು ಕೊಂಡು
ತಾಮಸವಿಲ್ಲದೆ ತನ್ನ ಮಗನನು ॥
ಹೇಮ ಮಂಟಪಕೆ—ಕರೆತಂದ ೧

ವರೌಕ್ತಿಕ ತಂಡುಲವನು ತಾ ಬೆರಸಿ
ಪುತ್ರನ ಕರೆತಂದವರೊಳು ಕುಳಿಸಿ
ಪತ್ನಿಸಹಿತಲಂದಾ ಸಭೆಗೊಂದಿಸಿ
ಮತ್ತಾ ಫಲದಾನವನತಿ ಹರುಷದಿ ॥
ಇತ್ತೆಲ್ಲವರಿಗೆ—ಕೊಡಿಸ್ಯಾರು ೨

ಮಂಟಪದಲಿ ಗಜಮುಖನ ಪೂಜಿಸುತ
ಸಂಟರಿಷ್ಟರ ಬಹುತರ ಮನ್ನಿಸುತ
ಗಂಟೆಣಿಸಿತು ಸುಮುಹೂರ್ತಕೆಂದೆನುತಲೆ
ಉಂಟುಮಾಡಿಸುವೆ ಬ್ರಹ್ಮೋಪದೇಶವ ವೈ
ಕುಂಠ ಕರುಣದಲಿ—ಸಲಹುವ ೩

## 194. ಉಪನಯನವಾಗುವದು (ಪರಶುರಾಮನಿಗೆ)
(ಸರಳಾರ)

ಮಾಡಿದ ಸುತಗುಪನಯನವನು । ಸತಿಯು
ಕೂಡಿಯೆ ಜಮದಗ್ನಿ ಮುನಿವರನು ಪ

ಶ್ರೀಗುರು ಗಣಪತಿಯಂಘ್ರಿಯನರ್ಚಿಸಿ
ಸಾಗರಶಯನನ ವಂದಿಸುತ
ಆಗಮೋಕ್ತದೊಳು ಪೌರೋಹಿತ್ಯನಿಂದ
ಸಾಗಿಸಿ ಪುಣ್ಯಾಹಾರ್ಚನೆಯ ೧

ನವಗ್ರಹರಿಗೆ ಸುರದೇವತೆಯರಿಗೆಲ್ಲ
ಹವಿರಾಜ್ಯಗಳನಗ್ನಿಯ ಮುಖದಿ
ನವವಿಧ ಭಕ್ತಿಯೊಳ್ ಹರುಷವಗೊಳಿಸುತ
ಸುವರ್ಣ ಕಲಶವ ತಾ ರಚಿಸಿ ೨

ಸರ್ವದೇಶದ ಜನ ಸರ್ವ ತಪಸ್ವಿಗಳು
ಸರ್ವವಿಪ್ರರು ಪತ್ನಿಯರು ಸಹಿತ
ಸರ್ವ ವಿದ್ಯಾವಂತರೆಲ್ಲರು ಕೂಡುತ
ಸರ್ವರು ಹರ್ಷದೊಳಿರಲಾಗ ೩

ಆ ಮಹಾ ತ್ರಿದಶರು ಬ್ರಹ್ಮಶಾರದೆ ಸಹ
ಆ ಮಹಾದೇವ ಗೌರೀ ಸಹಿತ
ಆ ಮಹಾ ಮುನಿಸಂಕುಲವೆಲ್ಲವು ಬಂದು
ಆ ಮಹಾಸಭೆಯೊಳು ನೆರೆದಿರಲು ೪

ಬಂದಬಂದವರಿಗೆ ತಕ್ಕ ಮನ್ನಣೆಗಳ
ಅಂದದಿ ಮಾಡಿಸಿ ವೀಳ್ಯವನು
ಗಂಧವ ಕೊಡಿಸುತ ಪರಿಮಳ ದ್ರವ್ಯವ
ಅಂದು ಸಭೆಗಿರಿಸಿದನಾ ಮುನಿಪ ೫

ಏಳೊಂದು ವರ್ಷದ ಬಾಲಕನನು ಮುನಿ
ಆಲೋಚಿಸುತಲೆ ಕೈವಿಡಿದು
ನೀಲಕಂಠನ ಸಖ ಅಮರಪೂಜಿತ ಲಕ್ಷ್ಮೀ
ಲೋಲನಿವನೆನುತ ಹರುಷದಲಿ ೬

ತನ್ನ ಭಾಗ್ಯವೆನುತ ಕುವರನ ಕರೆತಂದು
ಉನ್ನತ ಯವ ತಂಡುಲದಲ್ಲಿ
ಚೆನ್ನಾಗಿ ಕುಳಿಸುತ ದಿವ್ಯ ಪೀತಾಂಬರ
ವನ್ನು ಮುಸುಕಿದನವ ಭಾರ್ಗವಗೇ ೭

ಭೇರಿ ತಂಬಟೆ ಕೊಂಬು ಕಾಳೆ ಮೃದಂಗ ನ
ಗಾರಿಯ ರಭಸದಿ ಗಾಯನವು
ಚಾರುವೇದದ ರವದಿಂದಲಿ ಮಾತೃಶ್ರೀ
ನಾರೀಮಣಿಯರ ಶೋಭಾನದಲಿ ೮

ಶುಭ ಸುಮುಹೂರ್ತದೊಳರ್ಕ ಶಶಿಗಳಿಗೆ
ಸಭೆಗೆ ನೋಡಿ ವಂದಿಸಿ ಮುನಿಪ
ಅಬುಜಭವಾದ್ಯರನುಜ್ಞೆಯ ಪಡಕೊಂಡು
ವಿಬುಧಾಗ್ರಣಿಗಳ ಸನ್ಮತದಿ ೯

ವಿಪ್ರಜನಕೆ ಸುಮುಹೂರ್ತದಕ್ಷಿಣೆ ತಿದ್ದಿ
ಸುಪ್ರವೀಣರಿಗೆಲ್ಲ ಕೈಮುಗಿದು
ಕ್ಷಿಪ್ರದಿ ಯಜ್ಞೋಪವೀತವ ಮುನಿಪನು
ಸರ್ಪಶಯನನಿಗೆ ತೊಡಿಸಿದನು ೧೦

ಕನಕ ಪವಿತ್ರವ ಚೆಲುವ ಕುವಾರನ
ಮುನಿವನು ಬೆರಳಿಗೆ ಇಡುತಾಗ
ಅನಿಮಿಷರೊಡೆಯನೆ ಅಬುಜಸಂಭವ ಪಿತ
ಅನುದಿನ ಸಲಹು ನೀ ಕರುಣದಲಿ ೧೧

ವಿಧಿಯಿಂದಾಚಮನಂಗಳ ಮಾಡಿಸಿ
ಮುದದಿ ಗಾಯತ್ರಿಯ ಉಪದೇಶ
ಚದುರತನದೊಳಿತ್ತು ಮುನಿಕುಲಶ್ರೇಷ್ಠನು
ಉದಧಿ ಘೋಷದೊಳುಲ್ಲಾಸದಲಿ ೧೨

ಆ ಸಮಯದಿ ದೇವದುಂದುಭಿ ಮೊಳಗಿಸಿ
ತೋಷದಿ ಪುಷ್ಪವೃಷ್ಟಿಯ ಸುರಿಸಿ
ಲೇಸಿನಿಂದಲಿ ನಮ್ಮ ರಕ್ಷಿಸೆಂದೆನುತಲಿ
ಆ ಸುಮನಸರೆಲ್ಲ ಸ್ತುತಿಸಿದರು ೧೩

ಶಾರದೆ ರಮಣನು ಪಾರ್ವತೀವರ ಸಹ
ನಾರದಾದಿ ಮುಖ್ಯ ಯೋಗಿಗಳು
ಚಾರುಮಂತ್ರಾಕ್ಷತೆ ರಾಮಗೆ ಹಾಕಿದ
ರಾರ್‍ಯೈದು ಸಲಹೋ ಕರುಣದಲಿ ೧೪

ಇದನು ಶ್ರದ್ಧೆಯೊಳ್ ಪೇಳ್ವ ಕೇಳುವ ಜನರಿಗೆ
ಮುದದಿ ಮಾಡಿದ ಪಾತಕವು ಸಹ
ಹುದುಗಿ ಪೋಪುದು ದುರ್ಗೆಯಗ್ರಜ ರಾಮನ
ಪದಕೆ ನಮೋ ನಮೋ ಜಯ ಜಯತು ೧೫

## 195. ಯಜ್ಞೋಪವೀತ ತೊಡಿಸುವುದು

ಗುರುವಿಘ್ನೇಶ್ವರ ವಾಗ್ದೇವಿಯರ
ಚರಣಕೆ ಮಣಿದು ಭಕ್ತಿಯೊಳ್ ಹರಿಹರರ
ಸುರಮುನಿ ಕಾಶ್ಯಪರೊಳಗಪ್ಪಣೆಗೊಂಡು
ತರಳ ವಾಮನಗೆ ಯಜ್ಞೋಪವೀತವ ತೊಡಿ ॥
ಸಿರುವ ಸಂಭ್ರಮವ—ಪೊಗಳುವೆ ೧

ಜ್ಞಾನಸರೂಪನಿಗೆ ಸುಜ್ಞಾನವ ಪೇಳಿ
ಜ್ಞಾನಾನಂದದೊಳಿಹರೆಲ್ಲರು ಕೂಡಿ
ಜ್ಞಾನ ಜ್ಞೇಯ ಸ್ವರೂಪನ ಮನ್ನಿಸಿ
ಜ್ಞಾನಿಯು ಬ್ರಹ್ಮಸೂತ್ರಂಗಳ ತೊಡಿಸಿ ॥
ದಾಗ ಮಹಾಸಂಭ್ರಮವ—ಪೊಗಳುವೆ ೨

ಬಾಲನ ಬಲಗೈಯನು ಪಿಡಿದೆತ್ತಿ
ಲೀಲೆಯೊಳಿಡ ಪೆಗಲೊಳಗಮು ಸ್ವಸ್ತಿ
ತಾಳಿ ಶ್ರೀ ಗಜಮುಖ ಪೋಷಿಸಲೆನುತಲೆ
ಮೇಲು ಮಂತ್ರದಿ ಮಂತ್ರಾಕ್ಷತೆ ತಳಿಯುತ ॥
ಮೇಲಾಗಿರು ಎಂದು—ಹರಸ್ಯಾರು ೩

## 196. ಗಾಯತ್ರಿಯ ಉಪದೇಶ

ಸಿದ್ಧವಿದ್ಯಾಧರ ಸಾಧ್ಯ ಆರಾಧ್ಯ
ಬದ್ಧಾಂತರಂಗ ಶ್ರುತಿವೇದ್ಯ ನಿರವದ್ಯ
ಸಿದ್ಧಿಗಣೇಶಾಜ ಪದ್ಮಾಸ್ಯೆಯರಿಗೆ
ಬದ್ಧಾಂಜಲೀಯುತನಾಗಿಯೀ ಕೃತಿಯ ॥
ವರ್ಧಿಪೆನಜಪಿತ ಸಿದ್ಧಿಯೊಳದಿತಿಯ
ಮುದ್ದುಕುವರನೆನುತಿದ್ದಿರೆ ಋಷಿ ತತಿ ॥
ಯೆದ್ದತಿ ಸಂಸ್ತುತಿ ಮಾಡುತ ।
ಪದ್ಮಾಕ್ಷನ ನುತಿ ಪೊಗಳುತ । ಶ್ರುತಿಘೋಷವೆತ್ತಾ ॥
ಪದ್ಮಾಸನದಿ ಪ್ರಸಿದ್ಧದೊಳಿರೆ ಮುನಿ
ರುದ್ರನು ಕಾಶ್ಯಪ ಶುದ್ಧ ಬ್ರಹ್ಮವ ॥
ಹೊದ್ದಿಸಿದ ಬೋಧ—ಸುವಿನೋದ ೧

ಭೋರೆಂಬ ನಾದಬ್ರಹ್ಮವೋ ವಾದ್ಯರವವೋ
ಸಾರೆಂಬ ಶಾಸ್ತ್ರದುಚ್ಚರವೋ ಗಾಯನವೋ
ನಾರುವದೆನುತಜ ಹರ ಸುರವಾದಿ
ಭೂರಿ ದಿವೌಕಸತತಿ ಮೋಹನದಿ ॥
ಸೇರಿಕೆ ಸಭೆಯೊಳು ಚಾರುಮುನೀಶ ಕು
ಮಾರನ ದಕ್ಷಿಣ ಭಾಗದ ತೊಡೆಯೊಳು ॥

ಏರಿಸಿ ಮುಗ್ಧ ಭಾವದಿ ।
ಸಾರುವ ಶ್ರುತಿ ಸುಮುಹೂರ್ತದಿ । ಸಲೆ ಕರ್ಣಯುಗದಿ ॥
ರಾರಾಜಿಪವೋಂಕಾರವಕಾರವು
ಕಾರ ಮಕಾರ ಬ್ರಹ್ಮವ ಸಾರಿದ ॥
ಭಾರಿ ಜನಚೋದ್ಯ—ಶ್ರುತಿವೇದ್ಯ ೨

ನಯನದ್ವಯಗಳೆಂಬ ಕ್ಷೀರಾಂಬುಧಿಯೊಳು
ಪಯ ತಾರಸಿಭಮುಪನಯನವಿದೇಳು
ನಿಯತವು ಶಿರ ಪಂಚವಾಗಿ ಕುಕ್ಷಿಗಳ
ಚಯಗಳದಾರುರೆ ಪಾದತ್ರಯಗಳ ॥
ವರಿಯನುದ್ಯಯ ಸಾಂಖ್ಯಾಯನ ಗೋತ್ರ
ವರಿ ಬೋಧಾಯನ ಸೂತ್ರಗಳು ।
ಸಿರವಯ ಋತುಜನಾಶ್ರಯಗಳು । ಸೋಡ್ಶೈ ಸತ್ಪಾತ್ರ ॥
ನವವಿಧವಾಗಿರುತಿಹ ಗಾಯತ್ರಿಯ
ಚಾತುರ್ವಿಂಶತ್ಯಕ್ಷರಚಯಾಭಯ
ಕರವರದಲಿ ನೀ ಭಜಿಸೈ ಕುವಲಯ ॥
ನಯನ ಎನ್ನಣುಗ—ಸುವಿರಾಗ ೩

ನೆರೆಕರ್ಮಸೂತ್ರ ಸೂತ್ರಿಕಗಳು ಸಾಕ್ಷಿ
ಅರಿಗಳ ತರಿ ಮೋಕ್ಷಕರ ಮನಸ್ಸಾಕ್ಷಿ
ತುರೀಯವ ಮೀರಿ ಮತ್ತಿರುವ ಪ್ರಕಾಶ
ಪರಿಯುದು ಮಲ್ಲಿಯೆದ್ದಿರಪಯ್ಯ ದೋಷ ॥
ತರಳನೆ ಜನನದೆ ಜಂತುವು ತದ್ವಿಜ
ವರನಹ ಕರ್ಮದಿ ಯರಿ ಶ್ರುತಿ ವಿಪ್ರನು
ಸರಿಯಾ ಬ್ರಹ್ಮವ ನೋಡಲು ।
ನೆರೆ ಬ್ರಾಹ್ಮಣನಹೆಯೀಗಲು । ನೀನರಿತುಕೊಳ್ಳೊ ॥
ಗುರು ಚರಣವ ನೀ ಮರೆಯದಿರೋಂಕೃತಿ
ಪರಮ ಜ್ಞಾನವಸರಿಯೆಂದರುಹಿದ ॥
ಪರಮಾತ್ಮಬೋಧ—ಸುವಿನೋದ ೪

ಅರಿಯೈ ನಂದನ ಸರ್ಗಮಾರ್ಗ ವಿಸರ್ಗ
ನೆರೆಮುರೆ ಹರಿಸ್ತುತಿ ಮಿಗೆ ಮನು ಮಾರ್ಗ
ಇರದೀ ಸುಲಕ್ಷಣ ಲಕ್ಷಿಸು ಮೇಣು

ಪರಮ ಜ್ಞಾನಂಗಳ ಇರವರಿ ನೀನು ॥
ಅರಿ ದೂಷಣ ಸಂಸ್ಕರಣ ಗುಣಂಗಳ
ಮರೆಯದಿರಾದಿಗೆ ಗುರು ವಿಘ್ನೇಶ್ವರ
ಕರುಣೆಯು ಚಿತ್ರ ಕಾಶಕನು ।
ಘುರದಿ ಮಾಯಾ ವಿಜಯನು । ನೀನೆ ತಾಸವನು ॥
ಅರಿವರೆ ಮೋಣನ್ನಿರದು ಚಿದಂಬರ
ವರನೆಂದಾಶೀರ್ವಾದದಿ ಪರಸಿದ ॥
ವರಮಾನನದಲ್ಲಿ—ಇರಲಲ್ಲಿ ೫

## 197. ವಟುವನ್ನು ಒಸಗೆಗೆ ಕರೆತರುವದು

ಗುರುಗಣಪತಿಯರ ಚರಣಕೆ ವಂದಿಸಿ
ಗುರುಮುಖದಲಿ ಸಭೆಗೊಂದಿಸುತ
ಹರುಷದಿ ನಭನಹ ವರತರ ಮೂರ್ತಿ ತಾ
ನಿರದೆ ಬಂದಿದ ವಟುವೆಂದೆನುತ
ಇರದೆ ಮಂತ್ರಾಕ್ಷತೆ ಗೈಸಲೆಂದೆನುತಲಿ
ಕರೆತಂದನು ತನುಜನ ಸತಿಸಹಿತಲಿ ॥
ನೆರೆದ ಸಭೆಗಾಗಿ—ಬರಲೆಂದು ೧

ಬ್ರಹ್ಮೋಪದೇಶವ ಪಡೆದಿಹ ವಾಮನ
ಬ್ರಹ್ಮಚಾರಿ ಇವನೆಂದೆನುತ
ಬ್ರಾಹ್ಮಣರೆಲ್ಲರು ಹರುಷವಗೊಳ್ಳುತ
ಬ್ರಹ್ಮನನುಜ್ಞೆಯ ಕೇಳುತ
ಬ್ರಹ್ಮಾಂಡವನುದರದೊಳಿಂಬಿಟ್ಟಿಹ
ಬಹ್ಮನ ಪಿತ ವಟು ವಾಮನನೆನ್ನುತ ॥
ಬ್ರಹ್ಮ ಕರೆತಂದನೊಲವಿಂದ ೨

ಮುತ್ತಿನ ಮೇಲ್ಹಾಸಿಲಿ ಕುಳ್ಳಿರಿಸುತ
ಮುತ್ತೈದೆಯರೆಲ್ಲರು ನಗುತ
ಇತ್ತರು ಮಂತ್ರಾಕ್ಷತೆಯನು ತೋಷದಿ

ತತ್ತ್ವನಿಧಿಯ ಸ್ಮರಿಸುತ ಒಲಿದು
ಇತ್ತರು ಮಂತ್ರಾಕ್ಷತೆಯನು ಹರುಷದಿ
ಮುತ್ತು ಮಾಣಿಕ ದ್ರವ್ಯವನತಿ ತೋಷದಿ ॥
ಇತ್ತು ಗಜಮುಖನೇ—ಸಲಹೆಂದು ೩

## 198. ವಟುವನ್ನು ಹರಸುವದು

ಪಾಲಿಸಲಿ ಶ್ರೀಹರಿಯು ನಿನ್ನನು
ಶೀಲ ಸದ್ಗುಣನಾಗಿರೈ
ಮೇಲೆನಿಪ ರಾಜ್ಯಾಧಿಕಾರವ
ನಾಳು ಸಂತಸದಿಂದಲಿ ಪ

ವೇದವನು ನೀನೋದಿ ತತ್ತ್ವದ
ಹಾದಿಯಲಿ ಸಂಚಾರಿಸು
ಆದಿ ಲಕ್ಷ್ಮೀದೇವಿ ಕಾಂತನ
ಪಾದವನೆ ನೆರೆ ಪೂಜಿಸು ೧

ಪೂರ್ವಪದ್ಧತಿ ಕುಲದ ಧರ್ಮವ
ನಿರ್ವಹಿಸು ಸುಕುಮಾರನೆ
ಸರ್ವರೆನ್ನಲಿ ಗುಣವ ನಿತ್ಯದಿ
ಉರ್ವಿಯೊಳು ಸಂಪನ್ನನೆ ೨

ಗುರುಗಳನು ಹಿರಿಯರನು ಮನ್ನಿಸು
ಕೆರೆಯ ಬಾವಿಯ ಕಟ್ಟಿಸು
ಮರೆಯದಿರು ಬಡವರನು ಕರುಣದಿ
ನಿರುತದೊಳು ಪರಿಪಾಲಿಸು ೩

ಪುತ್ರ ಮಿತ್ರ ಕಳತ್ರ ಬಾಂಧವ
ರುತ್ತಮರ ಸಂದೋಹದಿ
ಮಿತ್ರನಂತಾಗುತ್ತ ನೀನಿರು
ನಿತ್ಯ ಬಹಳಾನಂದದಿ ೪

ಅನ್ನದಾನವ ಮಾಡು ಸಾಗರ
ಕನ್ನೆ ಮನೆಯೊಳು ನೆಲಸಲಿ
ಘನ್ನ ವೆಂಕಟ ಶೈಲದೊಡೆಯನು
ನಿನ್ನ ಮೇಲಿನ್ನೊಲಿಯಲಿ ೫

## 199. ಉಪನಯನದ ಹೋಮ ಮಾಡಿದ್ದು

ಹೋಮವ ಮಾಡಿದನು । ಉಪನಯನದ
ಹೋಮವ ಮಾಡಿದನು ಪ

ಹೋಮವ ಮಾಡಿದ ನೇಮದಿ ಮುನಿವರ
ಪ್ರೇಮದಿಂದಲಿ ಮಹಾ ಜ್ಞಾನಿ ವಸಿಷ್ಠನು ೧

ದಶರಥ ರಾಜನು ಶಶಿಮುಖಿಯೊಡಗೂಡಿ
ಕುಶಲದಿ ಋತ್ವಿಜ ವರಣವ ಕೊಡುತ ೨

ಸ್ವರಯುತ ಮಂತ್ರದಿ ಚರುವು ಆಜ್ಯಗಳನ್ನು
ವರ ಸಮಿಧೆಗಳನು ಇರಿಸುತ ಅಗ್ನಿಯೊಳ್ ೩

ಬುಧನು ಶ್ರೀರಾಮಗೆ ವಿಧಿಯಂತೆ ಇರಿಸಿದ
ಹದವಾದ ದಂಡವು ಅಜಿನವ ತೊಡಿಸುತ ೪

ತಪನನ ಪೂಜಿಸಿ ಉಪನೀತ ಕುವರನೆ
ಗುರುವಿನನುಜ್ಞೆಯ ಮರೆಯದೆ ಪಾಲಿಸೊ ೫

## 200. ಭಿಕ್ಷ ನೀಡುವದು (ಧ್ಯಾತ ಚತುರ್ಮಾತ್ರಾಗತಿ)

ಮಾಧವ ಗೋಪಾಲ ಬಂದ ಕಂಡಿರಮ್ಮ
ಮಾಧವ ಗೋಪಾಲಗೆ ಭಿಕ್ಷವ ನೀಡಿರಮ್ಮ । ಇವನ
ಪಾದದ ಗೆಜ್ಜೆಯ ಧ್ವನಿ ಚಂದವಮ್ಮ ಪ

ಪಾರಿಜನಾಭ ಮೇಳಗಳಿಂದ ಬರುವನಮ್ಮ । ಸತಿಯರ
ಸೀರೆಗಳ ಸೆಳೆದು ಮರವನೇರಿದನಮ್ಮ
ಏರು ಕಡಹ ಮರವನೇರಿ ನಗುವನಮ್ಮ । ನಿಮ್ಮ
ಚಾರು ಬಾಲಯ್ಯನಿಗೆ ಬುದ್ಧಿ ನಾಲದಮ್ಮ ೧

ಚರಣದಲ್ಲಿ ವಜ್ರದ ಹಾವುಗೆ ತುಳಿವನಮ್ಮ । ಅವನ
ಸುರುಳುಗುರುಳು ಹೊಳೆವ ಮೋರೆ ಚೆಂದವಮ್ಮ
ಕೊಡಸ ಕೆಡವಿ ಮೊಸರು ಬೆಣ್ಣೆ ಸುರಿದನಮ್ಮ । ಅವನು
ಜನನಿಯರ ಪಾದಕ್ಕೆ ಎರಗಿದನಮ್ಮ ೨

ಪಂಕಜನಾಭ ಬಿಂಕದ ಕೊಳಲ ಪಿಡಿದನಮ್ಮ । ಇವನ
ಕೊಂಕಿದ ಕೊರಲು ಕೋಮಲಾಂಗವು ಚಂದವಮ್ಮ
ಶಂಕೆಯಿಲ್ಲದೆ ಅಸುರರನ್ನು ಗೆಲಿದನಮ್ಮ । ನಮ್ಮ
ಪಂಕಜನಾಭನಾಗಿರುವ ಶ್ರೀಕೃಷ್ಣನಮ್ಮ ೩

ಮುತ್ತಿನ ಕೊಳಲ ಹಸ್ತದಿ ಪಿಡಿದು ಬರುವನಮ್ಮ । ಅವನ
ಕುತ್ತಿಗೆಯ ಮುತ್ತಿನ ಪದಕ ಚಂದವಮ್ಮ
ಕಸ್ತೂರಿ ಬೊಟ್ಟು ಹಣೆಯಲ್ಲಿ ಇಟ್ಟನಮ್ಮ । ಕೃಷ್ಣನ
ದಿಟ್ಟಿಸಿ ನೋಡಿದರೆ ದೃಷ್ಟಿ ತಾಗುವುದಮ್ಮ ೪

ಯಂತ್ರ ಜ್ಯೋತಿ ಮನೆಗೆಯೀಗ ಬರುವನಮ್ಮ । ಅವನ
ಯಂತ್ರ ತಂತ್ರ ಮಂತ್ರಗಳು ಬಾರದಮ್ಮ
ಯಂತ್ರ ಶಕ್ತಿ ರೂಪದಿಂದ ಇರುವನಮ್ಮ । ಅವಗೆ
ಯಂತ್ರ ತಂತ್ರ ಮಂತ್ರಗಳು ಬರುವದಮ್ಮ ೫

ಪಾರಿಜನಾಭ ಮೇಳವ ಕೂಡಿ ಬರುವನಮ್ಮ । ಸತಿಯರ
ಸೀರೆಗಳನು ಸೆಳೆದುಕೊಂಡು ಓಡುವನಮ್ಮ
ಓಡಿ ಕಡಹದ ಮರವನೇರಿ ನೋಡುವನಮ್ಮ । ನಮ್ಮ
ಪಂಕಜನಾಭ ಶ್ರೀಕೃಷ್ಣನಾಗಿಹನಮ್ಮ ೬

## 201. ವಟುವಿಗೆ ಉಡುಗೊರೆ (ಸರಳಾರ)

ಉಡುಗರೆ ಮಾಡಿದರತಿ ಮುದದಿ । ಜಗ
ದೊಡೆಯ ವಾಮನನಿಗೆ ಸಂತಸದಿ ಪ

ಗುರುವಿಘ್ನೇಶ್ವರರಡಿಗಳ ಧ್ಯಾನಿಸಿ
ಹರಿಹರರನು ಮನದಲಿ ಭಜಿಸಿ
ವರ ಶಾರದೆ ದೇವರನು ಕೊಂಡಾಡುತ
ವಿವರಿಪೆನೀ ಕೃತಿಯನು ನಯದಿ ೧

ಅದಿತಿಗೆ ಪುತ್ರನಾಗಿಯೆ ಸಂಜನಿಸುತ
ಕ್ಷಿತಿಯೊಳು ಲೀಲೆಯ ತೋರಿಸುತ
ಮತಿಯುತೆ ನನ್ನ ಬಯಕೆಯನೆ ಸಲಿಸುತ
ಸತತವು ಸಲಹೆಂದಳತಿ ಮುದದಿ ೨

ಪಾಲಿಪೆ ನಿನ್ನ ಮನದಭೀಷ್ಟವನೆಂದು
ಕೇಳಲು ಮುನಿಕುಲವರ್ಯನಂದು
ಬಾಲನಿಗುಪನಯನವನು ತಾ ವಿರಚಿಸಿ
ಲೋಲಾಕ್ಷನಿಗೆ ಸಂತಸದಿಂದ ೩

ಕೂಡಿದ ಸಭೆಯೊಳು ಪಡೆದಪ್ಪಣೆಯನು
ನಾಡೊಡೆಯನ ಕೈಯಲಿ ಪಿಡಿದು
ರೂಢಿಸಿರುವ ಸಭೆ ಮಧ್ಯಕೆ ಕರೆತಂದು
ಪಾಡಿನೊಳ್ ಕುಳಿಸಿ ಮೇಲ್ಪಾಸಿನಲಿ ೪

ಚಿನ್ನದ ಹರಿವಾಣವ ಕನ್ನೆಯು ತಂದು
ಸಣ್ಣ ಬಾಲಕನ ಮುಂದಿರಿಸುತಲಿ
ತನ್ನಯ ಹರಕೆಯ ಸಲಿಸೆಂದು ಬೇಗದಿ
ಮುನ್ನ ತಳಿದು ಮಂತ್ರಾಕ್ಷತೆಯ ೫

ಎರಡು ಕೈಯಲಿ ಸೆರೆ ಹೊನ್ನನು ಧರಿಸುತ
ಶರಣರಕ್ಷಕನಿವನೆಂದೆನುತ
ಪರಮ ಪುರುಷನಿಗೆ ಕಾಣಿಕೆಯಿದುವೆಂದು
ಸುರುಚಿರ ಹರಿವಾಣಕೆ ಸುರಿದು ೬

ಮುದದೊಳಿದ್ದನು ಮುನಿಕುಲ ತಿಲಕನು ಬೇಗ
ಸದಮಳರೂಪನ ನೆರೆ ಪೊಗಳಿ
ಪದುಮನಾಭಗೆ ಮಂತ್ರಾಶೀರ್ವಚನದಿಂದ
ಹೊದಿಸಿದನಾಗ ಪೀತಾಂಬರವ ೭

ದೇವದುಂದುಭಿಗಳು ಮೊಳಗುತಲಿರುತಿರೆ
ದೇವೇಂದ್ರಾದಿಗಳು ಸಂತಸದಿಂದ
ತಾವರೆಗಣ್ಣನ ಪದಕೆ ಸುರಿದರಂದು
ದೇವವಧುಗಳು ಮಲ್ಲಿಗೆ ಮಳೆಯ ೮

ಮಂಗಲ ರೂಪಗೆ ಸಭೆ ಸರ್ವರು ಸಹ
ಮಂಗಲಾಕ್ಷತೆ ಶಿರದೊಳಗಿಡುತ
ಸಂಗಡ ಗಜಮುಖನನು ಕೊಂಡಾಡುತ
ಅಂಗನೆಯರು ಕೊಂಡಾಡಿದರು ೯

## 202. ಮಂತ್ರಾಕ್ಷತೆ ತಳಿಯುವದು

ವಾಮನನುಪನಯನದೊಳು
ಪ್ರೇಮದ ಬಾಂಧವರುಗಳು
ತಾಮಸ ಮಾಡದೆ ಶೀಘ್ರದೆ ಬರುತ
ಹೇಮದ ಬಟ್ಟಲೊಳೊಸಗೆಯನಿಡುತ
ಕಾಮಜನಕ ಸುರಸ್ತೋಮ ವಂದಿತಗೆ ॥
ಹೇಮದಾರತಿಯಾ—ಬೆಳಗಿದರು ೧

ಆರು ಶಾಸ್ತ್ರಗಳ ಬಲ್ಲವರು
ನಾರಿ ವಟುವಿನೆಡೆಗವರು
ತೋರುವ ತಾರ್ಕಿಕವನು ಮನದೊಳಗೆ
ತಾರಾಪಥದೊಳಗಮರರು ಬಿಡದೆ
ಭೇರಿ ಧುಂದುಭಿಯನು ಬಾರಿಸುತಿರೆ ಶೃತಿ ॥
ಸಾರದೊಳಕ್ಷತೆಯ—ತಳಿದರು ೨

ಒಲಿದು ಕೈಗಳ ನೆಗಹುತಲಿ
ನಲಿದು ವಟುವ ಪೊಗಳುತಲಿ
ಕುಲಗುರು ಪಂಚಲಿಂಗನು ಎಡೆಬಿಡದೆ
ಸಲಹಲೆನುತ ಭೂಸುರರೆಡೆಬಿಡದೆ
ಖಳವೈರಿಯ ಶಿರದೊಳು ಮಂತ್ರಾಕ್ಷತೆ ॥
ತಳಿವರು ಜಯ ಜಯತು—ಜಯವೆಂದು ೩

## 203. ವಟುವಿಗೆ ಆರತಿ—1

ನೀರಜಾಕ್ಷ ನಿರುಪಮನಿಗೆ
ನೀರಜಜನ ಜನಕಗೇ
ಧಾರಿಣಿಯೊಳು ಜನಿಸಿ ಜನಕೆ
ಚಾರು ಸುಖವನೀವಗೇ । ಜಿತ
ಮಾರ ವಾಮನ ದೇವಗೇ
ವೀರುದಂಗಿ ನಿವಹ ಮಿಸುನಿ
ಯಾರತಿಗಳ ಬೆಳಗಿರೇ ೧

ಮೆರೆವ ಜನ್ನದಾರಕೊರಲು
ಕರದಿ ದಂಡಕಾಷ್ಠವು
ಪಿರಿಯ ಮೌಂಜಿ ಕಟಿಯೊಳೆಸೆವ
ಗುರುವಿನೇಯ ಬಾಲಗೇ । ವಾ
ರಿರುಹ ವಿಮಳ ಫಾಲಗೇ
ಧರೆಗೆ ಭಾವಿ ಸುಖಸಮೃದ್ಧಿ
ಕರಗೆ ಮುದದಿ ಬೆಳಗಿರೇ ೨

ನಿರ್ಮಲತೆಯ ವದನ ವಿಮಳ
ಕರ್ಮ ಜನ್ಮಸದನಗೇ
ಧರ್ಮದೇಹ ಧಾರಿ ಮನದೆ
ಪೆರ್ಮೆಯರಿಯದಾತಗೇ । ಈ
ಬ್ರಹ್ಮಚಾರಿ ನಾಥಗೇ
ಕೂರ್ಮೆಯಿಂದಲಾರತಿಗಳ
ನೊರ್ಮನದಲಿ ಬೆಳಗಿರೇ ೩

## 204. ಬ್ರಹ್ಮಚಾರಿಗೆ ಆರತಿ—2

ಶ್ರೀರಮೇಶಗೆ ಸುರವಾರವಂದಿತಗೇ
ಮಾರನಯ್ಯಗೆ ಮಧುಸೂದನ ಹರಿಗೇ
ಸಾರಸನಯನಗೆ ಸರ್ವರಿಗೊಡೆಯಗೆ
ಕಾರುಣಿಕಗೆ ಕಾಮಾಂತಕ ಸಖನಿಗೆ ॥
ಹೇಮದಾರತಿಯಾ—ಬೆಳಗಿರೇ ೧

ಜಲಜದಳಾಕ್ಷಗೆ ಜಲಶಯನನಿಗೆ
ಜಲಜಸಂಭವ ಸುರಕುಲವಂದಿತಗೆ
ಜಲಜಲೋಚನ ಶ್ರೀದುರ್ಗಾಗ್ರಜನಿಗೆ
ಜಲಜದೊಳಡಗಿದ ಚೆಲುವ ರಂಗಯ್ಯಗೆ ॥
ಬೆಡಗಿನಾರತಿಯಾ—ಬೆಳಗಿರೇ ೨

ಮಂದರಧರಗೆ ಮುಕುಂದ ಶ್ರೀಹರಿಗೇ
ಸುಂದರ ಯದುಕುಲ ಸಿಂಧುಚಂದ್ರನಿಗೇ
ಕಂದರ್ಪ ಜನಕಗೆ ಕಮಲಾಂಬಕನಿಗೆ
ವಂದಿಪ ಶ್ರೀಹರಿವೃಂದ ಸೇವಿತನಿಗೆ ॥
ಕುಂದಣದಾರತಿಯಾ—ಬೆಳಗಿರೇ ೩

## 205. ಒಸಗೆ ಆಗಿ ಒಳಗೆ ಹೋಗುವದು

ಶ್ರೀವಾಣೀ ರಮಣ ಶ್ರೀ ಗುರುಗಣಪತಿಗೆ
ವೇಣುವೆಂಕಟಗೆ ಆಶ್ರಿತ ಭಾರ್ಗವಿಗೆ ॥
ಸೋಮಶೇಖರ ಗಿರಿಸುತೆ ತನಯನಿಗೆ
ಪ್ರೇಮದಿ ಗುರು ಹಿರಿಯರ ಸ್ತುತಿಪದಕೆ
ತಾ ಮನದಲಿ ಗುರುಸುಜನರ ಪ್ರಾರ್ಥಿಸಿ
ಪ್ರೇಮದಿ ಬಾಲನ ಕರೆದು ಪೋಗುವೆನೆಂದು ॥
ಆ ಮಹಾ ಪಿತನು—ಹರುಷದಿ ೧

ಚೆನ್ನಾದ ದಿವ್ಯ ಕರವ ಪಿಡಿಯುತ್ತ
ಚೆನ್ನದ ಪೀತಾಂಬರವ ನೆಗಹುತ್ತ ॥
ಚೆನ್ನದ ಬಳೆಗಳ ಸಜ್ಜಿಯ ಮಾಡುತ

ಹೊನ್ನ ರತ್ನಾಭರಣವನೀಕ್ಷಿಸುತ
ಉನ್ನತ ಹರುಷದಿ ಪಿತನಡಿಗೆರಗುತ
ರನ್ನದ ಬಾಲನ ಕರೆದು ಪೋಗುವೆನೆಂದು ॥
ತನ್ನ ಬೆಂಗಡೆಯೊಳ್—ನಡೆದರು ೨

ನಾರಿಯರೆಲ್ಲ ಶೋಭಾನ ಪಾಡುತಲಿ
ಬೇರೆ ಬೇರೆಲ್ಲ ತೋಷದಿ ನಲಿಯುತಲಿ ॥
ಭೂರಿ ವಾದ್ಯವು ಕಹಳೆಯು ಮೊಳಗುತಲಿ
ವಾರ ಪುಷ್ಪವು ಗಮಗಮ ಎನಿಸುತಲಿ
ನಾರಿಯರೆಲ್ಲರೀಕ್ಷಿಸುತಲಿ ಬಲು ಶೃಂ
ಗಾರದಿ ಮೆರೆವಂಥ ವಾರಿಧಿ ಘೋಷದಿ ॥
ಶ್ರೀಗಜವದನನಿಗೆ—ಸ್ತುತಿಸುತ್ತ ೩

## 206. ವಿದ್ಯೆ ಕಲಿತದ್ದು

ಗಜಮುಖ ಗಣಪನೆ ತ್ರಿಜಗದಿ ವಂದ್ಯನೆ
ಕದಳಿಯ ಹಣ್ಣು ಅವಲಕ್ಕಿ—ಸಕ್ಕರೆಯೀವೆ
ಒದಗುವ ಮತಿಯ—ಕರುಣಿಸು ೧

ಬ್ರಾಹ್ಮರಿಗೂ ಸುರರಿಗೂ ನಿರ್ಮಲ ದೇವರಿಗೂ
ನಿಮಗೂ ಕೈಮುಗಿದು ನಮೋ ಎಂದು—ಸ್ತುತಿಸುತ್ತ
ಹೇಳುವೆ ಪುಣ್ಯ—ಕಥೆಗಳ ೨

ಮಕ್ಕಳ ಮುಖ ನೋಡಿ ಏನೆಂದ ವಸುದೇವ
ಉಂಡಾಡಿ ಹೊತ್ತ ಕಳೆಯದೆ—ಶಾಸ್ತ್ರ ಪು
ರಾಣವನೋದಿ—ಕಲಿರೆಂದ ೩

ಒಳ್ಳೆಯ ಮಾತಿಗೆ ಒಳ್ಳಿತಾಯ್ತೆಂದರು
ಅಲ್ಲಿಗೆ ನಮ್ಮ ಕಳುಹುವಿರಾದರೆ
ಎಲ್ಲ ವಿದ್ಯೆಗಳ—ಕಲಿತೇವು ೪

ಮಕ್ಕಳನೊಡಗೊಂಡು ಮಂದಿರಕೆ ಹೊರಟನು
ಮುಂದೆ ಸಾಂದಿಪರ ಮಂದಿರಕೆ—ಬರುವಾಗ
ವಂದಿಸಿ ಕರವ—ಮುಗಿದರು ೫

ಬಂದವರನೆದುರ್ಗೊಂಡು ಚೆಂಬಿಲುದಕವ ಕೊಟ್ಟು
ಜಂಬುಕಾನವನೆ ಕುಳಿರಾಸಿ—ಕುಳ್ಳಿರಿಸಿ
ಬಂದ ಕಾರಣದ—ಬಗೆಯೇನು ೬

ನಾಲ್ಕು ವೇದಂಗಳ ಶಾಸ್ತ್ರ ಪುರಾಣವ
ಓದಿಸಿ ಬರೆಸಿ ಕೊಡುವಿರೊ—ಮಕ್ಕಳಿಗೆ
ಕೇಳಬೇಕೆಂದು—ನಡೆತಂದೆ ೭

ಆರು ಶಾಸ್ತ್ರಂಗಳ ವೇದ ಪುರಾಣವ
ಓದಿಸಿ ಬರೆಸಿ ಕೊಡುವಿರೊ—ಮಕ್ಕಳಿಗೆ
ಕೇಳಬೇಕೆಂದು—ನಡೆತಂದೆ ೮

ನಿಮ್ಮಯ ಸುತರನ್ನು ನಮ್ಮಯ ಸುತರಂತೆ
ನಮ್ಮೊಡನೆ ನೀವು ಇರಿಸಿಕ್ಕಿ—ಹೋದರೆ
ಬಲ್ಲಂಥ ವಿದ್ಯೆ—ಕಲಿಸ್ಯೇವು ೯

ಮಕ್ಕಳೆ ನೀವ್ ಕೇಳಿ ಗುರ್ವಾಜ್ಞೆ ಮೀರದೆ
ಅತ್ಯಂತ ವೇದ ಪುರಾಣವ—ಕಲಿರೆಂದು
ಮಕ್ಕಳ ಒಡನೆ—ನುಡಿದನು ೧೦

ನಾಲ್ಕು ವೇದಂಗಳ ಶಾಸ್ತ್ರ ಪುರಾಣವ
ಮೂವತ್ತಮೂರು ದಿನಗಳಿಂದೊಳಗೋದಿ
ಬಂದೇವು ನಮ್ಮ—ಮನೆಗೆಂದ ೧೧

ಆರು ಶಾಸ್ತ್ರಂಗಳ ವೇದ ಪುರಾಣವ
ನಲುವತ್ತನಾಲ್ಕು ದಿನಗಳು—ಓದಿಯೆ
ಬಂದೇವು ನಮ್ಮ—ಮನೆಗೆಂದ ೧೨

ಒಳ್ಳೆಯ ಮಾತಿಗೆ ಒಳ್ಳಿತಾಯ್ತೆಂದರು
ಎಲ್ಲ ವಿದ್ಯೆಯನು ಕಲಿತೇವು—ಮೂದಿನಕೆ
ಬಂದೇವು ನಮ್ಮ—ಮನೆಗೆಂದ ೧೩

ವಿದ್ಯೆ ಬಾಲಕರಿಗೆ ತಿದ್ದಿ ಮೂರಕ್ಷರವ
ವಿದ್ಯೆ ಶಾಸ್ತ್ರವನೆ ಕಲಿರೆಂದು—ಸಾಂದಿಪರು
ಬುದ್ಧಿ ಮಾರ್ಗದಲಿ—ನುಡಿದರು ೧೪

ವೇದ ಬಾಲಕರಿಗೆ ತೋರಿ ಮೂರಕ್ಷರವ
ವೇದಶಾಸ್ತ್ರವನೆ ಕಲಿರೆಂದು—ಸಾಂದಿಪರು
ಜ್ಞಾನಮಾರ್ಗದಲಿ—ನುಡಿದರು ೧೫

ಓದುವ ಮಕ್ಕಳಿಗೆ ಗುರುಪತ್ನಿ ನುಡಿದಳು
ಉರಿಸಲಿಕೆ ಸೌದೆ ಮೊದಲಿಲ್ಲ—ಮಕ್ಕಳಿರ
ಹೋಗಿ ತನ್ನಿ ಹಲವು—ಸೌದೆಯ ೧೬

ಬರೆವಂಥ ಮಕ್ಕಳಿಗೆ ಬರಹಗಳಾದಾವು
ಕತ್ತಲಿಕೆ ಸೌದೆ ಮೊದಲಿಲ್ಲ—ಮಕ್ಕಳಿರ
ಹೋಗಿ ತನ್ನಿ ಹೊಲನ—ಸೌದೆಯ ೧೭

ಸುಳಿಗುರುಳು ಕುಣಿಯುತ್ತ ಮಕರಕುಂಡಲ ಹೊಳೆಯೆ
ಬಲಭದ್ರ ಸುಧಾಮ ಜನಾರ್ದನ—ಮೂವರು
ಹೊರಟರು ಹೊಲನ—ಸೌದೆಗೆ ೧೮

ಆಗ ಸಾಂದಿಪರು ಬಂದರೆ ಒಳವಿಗೆ
ಮಕ್ಕಳ ಎತ್ತ ಕಳುಹಿದೆ—ಎಂದ್ಹೇಳಿ
ಪತ್ನಿಯ ಕೂಡೆ—ನುಡಿದರು ೧೯

ಪರ ಹೆತ್ತ ಮಕ್ಕಳ ಬಡಿದೆತ್ತ ಕಳುಹಿದೆ
ಕಡುಪಾಪಿ ನಿನಗೆ ಕರುಣವು—ಇಲ್ಲೆಂದು
ಮಡದಿಯ ಒಡನೆ—ನುಡಿದರು ೨೦

ಒಡೆಯರ ಮಾತಿಗೆ ಗಡಗಡ ನಡುಗುತ್ತ
ನಡೆತಂದು ಪಾದಕ್ಕೆರಗಿಯೆ—ಮಕ್ಕಳ
ಕಳುಹಿದೆ ಹೊಲನ—ಸೌದೆಗೆ ೨೧

ಆ ದಿನ ರಾತ್ರಿಲಿ ಉಣಲಿಲ್ಲ ಒರಗ್ಲಿಲ್ಲ
ಮಕ್ಕಳೆಂದೆನುತ ಕೊರಗುತ್ತ—ಸಾಂದಿಪರು
ಮರುಗುತ್ತ ರಾತ್ರಿ—ಕಳೆದರು ೨೨

ಬೆಳಗು ಆಗುತಲಿದ್ದು ಮಿಂದು ಮಡಿಯನುಟ್ಟು
ಸಂಧ್ಯೆಯ ಜಪವ ಮುಗಿಸಿಯೆ—ಮಕ್ಕಳ
ಕಂಡು ಬರುವೆನೆಂದು—ಹೊರಟರು ೨೩

ಬಡವ ಸುಧಾಮನು ಬಲರಾಮ ಶ್ರೀಕೃಷ್ಣ
ಕಟ್ಟಿಯೆ ಹುರುಳಿ ಹೊರೆಗಳ—ಮೂವರು
ಕೃಷ್ಣನೆ ಹೊತ್ತು—ಮನೆಗೆ ಬಂದ ೨೪

ತಂದೆವು ಹೊರೆಗಳ ಮಂದಿರದಲ್ಲಿಳುಹಿದೆವು
ತಂದೆವು ಹೊಲನ ಸೌದೆಯ—ಎಂದ್ಹೇಳಿ
ಋಷಿಪತ್ನಿ ಚರಣಕ್ಕೆರಗಿದ ೨೫

ಗುರುಗಳೆ ನೀವ್ ಬೇಡಿ ಬೇಕಾದ ವರಗಳ
ಮನದೊಳಗೊಂದು ಹೊರಗೊಂದು—ಇಲ್ಲದೆ
ಬೇಕಾದ್ದ ಬೇಡಿ—ವರಗಳ ೨೬

ಅಂದು ನಾವ್ ಹೋಗಿ ಆ ಶರಧಿಲಿ ಮೀವಾಗ
ನಮ್ಮಗನ ವರುಣ ಕೊಂಡೊಯ್ದ—ಅವನನ್ನು
ತಂದಿಟ್ಟರೆನಗೆ—ಅದೆ ಸಾಕು ೨೭

ಮಕ್ಕಳಾ ಮಾತಿಗೆ ನಿಷ್ಠುರಗೊಂಬರೊ
ಸತ್ತವರ ತಂದು ಕೊಡುವರೊ—ಎಂದ್ಹೇಳಿ
ಪತ್ನಿಯ ಒಡನೆ—ನುಡಿದರು ೨೮

ಒಳ್ಳೆಯ ಮಾತಿಗೆ ಒಳ್ಳಿತಾಯ್ತೆಂದರು
ತಂದೇವು ನಿಮ್ಮ ಕುವರನ—ಎಂದ್ಹೇಳಿ
ಶರಧಿಯ ತಡಿಗೆ—ನಡೆದರು ೨೯

ನಮ್ಮ ಗುರುವಿನ ಮಗ ನಿಮ್ಮ ದೇಶದೊಳುಂಟೊ
ನಮ್ಮೊಡನೆ ನೀವು ಕಳಿಸಿದು—ಆದರೆ
ಗುರುವಿನ ಆಜ್ಞೆ—ಸಲಿಸ್ಯೇವು ೩೦

# ಅಧ್ಯಾಯ : 4

# ಐಚ್ಛಿಕ : ಪೂಜೆ - ವ್ರತ - ಹಬ್ಬ - ಹೋಮ

## 207. ಸತ್ಯನಾರಾಯಣನಲ್ಲಿ ಬೇಡುವದು

ದೇವ ನಿನ್ನ ಪಾದವನ್ನು ಯಾವಾಗಲೂ ಸ್ಮರಿಸುವೆನು
ಭಾವ ಭಕ್ತಿ ಪ್ರೇಮವಿತ್ತು ಕಾವುದೆನ್ನ ಹರಿಯೆ ನೀನು ಪ

ಇಂದಿರೇಶ ನಾರಾಯಣ ಚಂದದಿಂದ ಭಜಿಪೆ ನಿನ್ನ
ಮಂದಮತಿಯ ಕಳೆದು ನೀನು ಚಂದದೊಳಗಿರಿಸೊ ಎನ್ನ ೧

ಬೇಡಿಕೊಂಬೆನೀಗ ನಿನ್ನ ನೋಡು ಬೇಗ ಕೃಪೆಯೊಳೆನ್ನ
ಬೇಡ ಬೇಡ ಬೇರೆನಗೆ ಇಡೋ ಇಡೋ ನಿನ್ನೊಳೆನ್ನ ೨

ಚಿಂತೆಗಳನ್ನೆಲ್ಲ ತ್ಯಜಿಸೊ ಸಂತಸಂಗಳೊಳಗೆ ಇರಿಸೊ
ಕಂತುಪಿತನೆ ಗುರುವೆ ಎನಗೆ ಶಾಂತಿಪದವನೆ ಪಾಲಿಸೋ ೩

ದೀನನಾಥನೆಂಬ ಬಿರುದ ಮಾನಭಕ್ತರನ್ನು ಪೊರೆಯೊ
ದೀನ ಹೀನನಾದೆ ನಿನ್ನ ಜ್ಞಾನವಿತ್ತು ರಕ್ಷಿಸುವದು ೪

## 208. ಸತ್ಯನಾರಾಯಣ ಸ್ತುತಿ

ಶ್ರೀಸತಿ ಸಹಿತಲಿ ಶೇಷತಲ್ಪದಲಿ
ತೋಷದಿಂದ ಜಗವ ಪೊರೆವ ದೇವ ಶ್ರೀಹರಿ
ಬೇಗ । ಬಾರೋ ಶ್ರೀಹರಿ
ಸತ್ಯ । ದೇವ ಶ್ರೀಹರಿ
ಸುಂದರ । ನಾದ ಶ್ರೀಹರಿ ಪ

ದುರ್ಗುಣ ಪರ್ವತಕ್ಕೆ ವಜ್ರಸ್ವರೂಪ
ಮಾರ್ಗವ ತೋರೊ ಬಂದು ಕಾಯೋ ಶ್ರೀಹರಿ
ಬೇಗ । ಬಾರೊ ಶ್ರೀಹರಿ
ಸುಂದರ । ನಾದ ಶ್ರೀಹರಿ
ಸತ್ಯ । ದೇವ ಶ್ರೀಹರಿ ೧

ವೈರಿ ಭವಾರ್ಣವ ತಾರಣ ತರಣಿ
ಸಾರವರಿದೆ ನಲಿದು ಬಾರೊ ಶ್ರೀಹರಿ
ಬೇಗ । ಬಾರೊ ಶ್ರೀಹರಿ
ಸುಂದರ । ನಾದ ಶ್ರೀಹರಿ
ಸತ್ಯ । ದೇವ ಶ್ರೀಹರಿ ೨

ಚೇತನವೀವುದಚೇತದ ಜನಕೆ
ಚೇತಸ ಕವಿಕೃಷ್ಣ ಸ್ತುತ್ಯ ಶ್ರೀಹರಿ
ಬೇಗ । ಬಾರೊ ಶ್ರೀಹರಿ
ಸುಂದರ । ನಾದ ಶ್ರೀಹರಿ
ಸತ್ಯ । ದೇವ ಶ್ರೀಹರಿ ೩

## 209. ಪೂಜೆಗೆ ಕರೆಯುವುದು

ಚಾರು ಪೂಜೆಯ ಬಂದು ನೋಡಿರಿ । ದಯಾ
ಧಾರಂಗೆ ನತರಾಗಿ ಬೇಡಿರಿ ಪ

ಮೂರು ಗುಣಂಗಳ ಮೀರಿದಪಾರನ
ಭೂರಿ ರಾಗದಿ ಮುಳುಗಾಡಿರಿ—ಹಾಡಿರಿ ೧

ನವ ಧೂಪದೀಪದ ವಿಸ್ತಾರ । ಸುಮ
ವಿವಿಧಾರ್ಚನೆಯ ಭಕ್ತಿ ಸಾಕಾರ । ಜನ
ಕವನಿಯೊಳಖಿಳಾಘ ಜಲನಿಧಿ ವಡಬವು
ಸುವಿಮಳತರ ಪುಣ್ಯದಾಕರ—ಶ್ರೀಕರ ೨

ಕಂಬು ಜಾಗಟೆಗಳ ನಾದಿಸಿ । ಹೊಸ
ತಂಬೂರಿ ವೀಣೆಯ ಬಾಜಿಸಿ । ಭಕ್ತಿ
ಗಿಂಬಾಗಿ ಹರಿಯ ಪದಾಂಬುಜವನು ಕಂಡು
ತುಂಬ ದೋಷವನೆಲ್ಲ ನೀಗಿರಿ—ಬಾಗಿರಿ ೩

## 210. ಸತ್ಯನಾರಾಯಣನಿಗೆ ನೈವೇದ್ಯ

ಜಯ ಜಯ ಜಯ ಮಂಗಲ । ದೇವ ಸತ್ಯನಾರಾಯಣ
ಆರೋಗಣೆಯ ಮಾಡು ಪ

ಉದಯದೊಳೆದ್ದು ದೇವನ ಸ್ತುತಿಗೈದು
ಪದುಮಪ್ರಿಯನ ಪಾದಗಳಿಗೆ ಮಣಿದು
ಪದುಮಾಕ್ಷನ ಪೂಜೆಯ ಮಾಡುವೆನೆಂದು
ಬುಧ ಬಾಂಧವ ಬಲ್ಲವರನು ನೆರಹಿಸಿ
ಒವಗಿಲಿ ಪುಷ್ಪಂಗಳನೆಲ್ಲ ಕೊಯ್ದು
ಸದನ ಶೃಂಗರಿಸುತಲಿ । ದೇವ । ಸತ್ಯನಾರಾಯಣ
ಆರೋಗಣೆಯ ಮಾಡು । ಜಯ ಜಯ ಜಯ ಮಂಗಲ ೧

ಅರ್ಕೋದಯದಿ ಗೃಹ ಸ್ವಚ್ಛದಿ ಬಳಿದು
ಕಸ್ತೂರಿ ಪನ್ನೀರಿನ ಚೆಳಯ ಹಿಡಿದು
ಅಕ್ಕರೆಯಲಿ ಸುಣ್ಣ ಸೂತ್ರವ ಬರೆದು
ತೋರಣಂಗಳ ಸೊಗಸಿಲಿ ರಚಿಸಿ
ಸ್ವಚ್ಛದಿ ಸ್ನಾನ ಜಪ ನಿತ್ಯನೇಮವ ಮಾಡಿ
ಭಕ್ತಿಲಿ ಪತ್ರ ಪುಷ್ಪಂಗಳ ಕೊಯ್ದು
ಸೂಕ್ತ ವಿಧದಿ ಅರ್ಚಿಸುವೆನು । ದೇವ । ಸತ್ಯನಾರಾಯಣ
ಆರೋಗಣೆಯ ಮಾಡು । ಜಯ ಜಯ ಜಯ ಮಂಗಲ ೨

ಹೊಳೆವ ಹೊಳೆವ ಮಂಟಪವನು ನಿರ್ಮಿಸಿ
ಬೆಳಗಿ ದೀಪಿಗೆ ಅಷ್ಟದಳಗಳ ರಚಿಸಿ
ನಳಿನನಾಭವ ಆವಾಹಿಸಿ ಪ್ರಾರ್ಥಿಸಿ
ಕಲಶಸ್ಥಾಪನೆಯನು ಗೈಸಿ
ಹೊಳೆಹೊಳೆವ ಸತ್ಯದೇವನ ಸಮ್ಮುಖದಲಿ

ಕಳಿಕಳಿವ ಶಂಖ ಜಾಗಟೆ ಭೇರಿಗಳ
ಮೊಳಗಿಸಿದರು ಶುಭವಾಗಿ । ದೇವ । ಸತ್ಯನಾರಾಯಣ
ಆರೋಗಣೆಯ ಮಾಡು । ಜಯ ಜಯ ಜಯ ಮಂಗಲ ೩

ಅತಿ ಭಕ್ತಿಯಲಿ ಸತ್ಯದೇವನ ನೋಡಿ
ಕಥೆ ಕಲ್ಪೋಕ್ತದಿ ಪೂಜೆಯ ಮಾಡಿ
ಮತಿಯುತನಿಗೆ ಮಂಗಳಾರತಿ ಬೆಳಗಿ
ತ್ರಾಸು ತೂಗಿದ ಗೋಧಿ ಚೂರ್ಣ ಗೋಘೃತಗ್ರಾಸ
ಮಿತಿಯಾಗಿ ಸಕ್ಕರೆ ಕದಳೀ ಪಕ್ವವ
ಪಂಚಕಜ್ಜಾಯ ಪಾಯಸ ಭಕ್ಷ್ಯಂಗಳನೆಲ್ಲ
ಬಡಿಸಿಹರೈ ಸೊಗಸಾಗಿ । ದೇವ । ಸತ್ಯನಾರಾಯಣ
ಆರೋಗಣೆಯ ಮಾಡು । ಜಯ ಜಯ ಜಯ ಮಂಗಲ ೪

ಅತಿಭಕ್ತಿಯೊಳಾಪೋಶನಕೆರೆದು ಶ್ರೀ
ಪತಿಯುಂಡನು ತಾನತಿ ಸಂತೋಷದಿ
ಕೈತೊಳೆಸಿ ಸಂಗೀತ ಸೇವೆಗಳನೇಕಾ
ರತಿಗಳ ಕೈಕೊಂಡುತ್ತರ ಪೂಜೆಯನು
ಲೋಪವಿಲ್ಲದೆ ಬೆಳಗಿ ಭಕ್ತವತ್ಸಲ ನಿನ್ನ
ಶ್ರೀಪಾದಕೆರಗುವೆ ಭಕ್ತಿಯಲಿ । ದೇವ । ಸತ್ಯನಾರಾಯಣ
ಆರೋಗಣೆಯ ಮಾಡು । ಜಯ ಜಯ ಜಯ ಮಂಗಲ ೫

ಶೇಷಶಯನ ಮೂರುತಿಯನೆ ನೋಡಿ ಸಂ
ತೋಷದಿ ಸಾಧುಸಂತರು ತನುವೀಡಾಡಿ
ಆಶಾಪಾಶಗಳಿಲ್ಲದ ಪರವಸ್ತು ವಿ
ಶೇಷವ ಸೆರಗೊಡ್ಡಿ ಬೇಡಿದರು
ಕೇಶವ ಕೊಡು ಸರ್ವತ್ರ ಸರ್ವೇಭ್ಯವ
ದಾಸರೊಳಗೆ ಅತಿ ಚೋದ್ಯದ ಮುಕ್ತಿಯ
ವಾಸುದೇವನೆ ದಾಸತ್ವವ ಪಾಲಿಸೆಂ
ದಾಸೆಯೊಳ್ ಬೇಡಿದರು । ಜಯ ಜಯ ಜಯ ಮಂಗಲ

## 211. ಸತ್ಯನಾರಾಯಣನಿಗೆ ಆರತಿ

ನೈಮಿಷಾರಣ್ಯದೊಳು ಸೂತ ಮ
ಹಾಮುನೀಂದ್ರರ ಸಭೆಯೊಳು
ಆ ಮಹಾ ಪೌರಾಣ ವ್ರತ ಚರಿ
ತಾಮೃತವ ವಿಸ್ತರದೊಳು
ಪ್ರೇಮದಿಂ ಪೇಳುತಿರೆ ಕಲಿಯುಗ
ಕಾಮಧೇನುವನದರೊಳು
ನೇಮಿಸೆಮಗೆಂದೆನಲು ಶರಣ ಲ
ಲಾಮ ಮನದೊಳು ನೆನೆದ ಶ್ರೀರಂಗ ||
ಧಾಮಗಾರತಿಯಾ—ಬೆಳಗಿರೆ ೧

ಸುರಮುನಿಪ ನಾರದನು ಲೋಕವ
ಕರುಣಿಸಲು ಕಾರುಣ್ಯದಿ
ತಿರುಗುತೆಲ್ಲವನೊಂದು ದಿನ ದೀ
ನರನು ಮಧ್ಯಮ ಭುವನದಿ
ಪರಿಕಿಸುತ ಸಂತಾಪವನು ಪರಿ
ಹರಿಸಲಾರದೆ ದೈನ್ಯದಿ
ವರ ಮಹಾವೈಕುಂಠದೊಳು ಮುರ
ಹರನ ವಂದಿಸೆ ಕರುಣಿಸಿದ ಕರಿ ||
ವರದ ಗಾರತಿಯಾ—ಬೆಳಗಿರೆ ೨

ಭೂಸುರನ ಬಡತನದ ಬಹಳಾ
ಯಾಸಗಳ ಕಂಗೊಳಿಸುತ
ದಾಸಜನರನು ಕರುಣಿಸುವ ಕರು
ಣಾ ಸಮುದ್ರನು ವ್ಯಥಿಸುತ
ದೇಸಿಗನು ದಾರಿಯೊಳು ಬ್ರಾಹ್ಮಣ
ವೇಷದಲಿ ಬಂದೊದಗುತ
ಕ್ಲೇಶಗಳ ಪರಿಹರಿಸಿ ಭಾಗ್ಯದ
ರಾಶಿಯನು ಕರುಣಿಸಿದ ತ್ರೈಜಗ ||
ದೀಶಗಾರತಿಯಾ—ಬೆಳಗಿರೆ ೩

ಕಷ್ಟಗಳ ಕಳೆದಾ ವ್ರತದಿ ಸಂ
ತುಷ್ಟನಾದ ದ್ವಿಜೇಂದ್ರನು
ಇಷ್ಟಬಾಂಧವರೊಡನೆ ನಿಯಮದ
ನಿಷ್ಠೆಯೊಳಗಿರಲೋರ್ವನು
ಕಾಷ್ಠಗಳ ವಿಕ್ರಯಿಸುವನು ಬರ
ಲಿಷ್ಟರೊಳು ಮತ್ತವನನು
ಶ್ರೇಷ್ಠವಾದ ಮಹಾವ್ರತವ ಮತಿ
ಗೊಟ್ಟು ಕಾಯ್ದ ದಯಾ ಸಮುದ್ರಗೆ ॥
ಶಿಷ್ಟರಾರತಿಯಾ—ಬೆಳಗಿರೆ ೪

ಅರಸನುಲ್ಕಾಮುಖನ ಸತಿ ಸತಿ
ಯರ ಶಿರೋಮಣಿ ಪೂರ್ವದಿ
ಸರಸಿಜಾಂಬಕಿ ಸತ್ಯದೇವನ
ಪರಿಚರಿಸುವಾ ವೇಳ್ಯದಿ
ಪರಿಯ ಕೇಳಿದ ವೈಶ್ಯ ವಿಧಿಗಳ
ನರಿತು ಮನ ಸಂತೋಷದಿ
ವರಿಸಿರಲು ಸಂತತಿಯನಾತನ
ತರುಣಿಯೊಳು ಪಾಲಿಸಿದ ಸೂನೃತ ॥
ದೆರೆಯಗಾರತಿಯಾ—ಬೆಳಗಿರೆ ೫

ಸುತೆಯ ವೈವಾಹದೊಳು ಸತ್ಯ
ವ್ರತವ ಮಾಡುವೆನೆನ್ನುತ
ಸತಿಯೊಳಾಡಿದ ಮಾತ ಮದಗ
ರ್ವಿತನು ಮರೆಯಲು ಕಾಣುತ
ಗತಿಯ ತೋರುವೆನೆಂದು ರತಿಪಿತ
ಖತಿಯ ಮನದಲಿ ತಾಳುತ
ಜತೆಯೊಳಿಹ ಜಾಮಾತ ಸಹ ದು
ರ್ಮತಿಯನುರೆ ಬಂಧಿಸಿದ ಶ್ರೀಮುರ ॥
ಮಥನಗಾರತಿಯಾ—ಬೆಳಗಿರೆ ೬

ಮತ್ತವನ ಸತಿ ಮನದಿ ಬಲು ಬೇ
ಸತ್ತು ಸತ್ಯವರೇಣ್ಯನ
ಚಿತ್ತಶುದ್ಧಿಯೊಳಿರಗಿ ಪೂಜಿಸಿ

ಪುತ್ರಿಗಹ ಪರಮಾತ್ಮನ
ಪ್ರಾರ್ಥಿಸಲು ಪತಿಯಳಿಯರನು ವರ
ವಿತ್ತವರ ಬಂಧನವನು
ಕಿತ್ತು ಕಾಮಿನಿಯಳ ಮನೋರಥ
ವಿತ್ತು ಸಲಹಿದ ಸತ್ಯದೇವಗೆ ॥
ಮುತ್ತಿನಾರತಿಯಾ—ಬೆಳಗಿರೆ ೭

ಭೂರಿ ಭಾಗ್ಯದಿ ಬರುವ ವಿಭವ ವಿ
ಶಾರದನ ಮನದಿರವನು
ಸಾರಿ ನೋಡುವೆನೆಂದು ಯತಿಯಾ
ಕಾರದಲಿ ಬರಲಾತನು
ಮೀರಿದರೆ ಮುಳಿದಿತ್ತು ಶಾಪವ
ತೋರಿ ತನ್ನಯ ನಿಜವನು
ಸೇರಿಸುತ ಸಿಜನಗರವನು ಪರಿ
ವಾರ ಸಹ ಸಂತೈಸಿದಾಗಮ ॥
ನಾರಗಾರತಿಯಾ—ಬೆಳಗಿರೆ ೮

ಕಾಡಿನೊಳು ಗೋವಳರು ಪೂಜೆಯ
ಮಾಡುತಿರಲಾ ವೇಳ್ಯದಿ
ರೂಢಿಪತಿ ಪೂಜಾಪ್ರಸಾದವ
ಬೇಡದಿರೆ ಮದಗರ್ವದಿ
ಕೂಡಿರುವ ಸೌಭಾಗ್ಯಗಳ ನೀ
ಗಾಡಿ ಬಹು ದುಮ್ಮಾನದಿ
ನೋಡಿ ತನ್ನಪರಾಧಗಳ ಕೈ
ಜೋಡಿಸುತ ಸೇವಿಸಲು ಸುಗತಿಯ ॥
ನೀಡಿರುವ ದೇವ—ಕೃಪೆಮಾಡು ೯

## 212. ಸತ್ಯದೇವನಲ್ಲಿ ಹೂ ಬೇಡುವದು

ಹೂವ ಪಾಲಿಸೊ ಸತ್ಯದೇವನೆ । ಏಕ
ಭಾವದಿ ಬೇಡುವ ಸೇವಕ ಜನರಿಗೆ ಪ

ನಿತ್ಯತೃಪ್ತನೆ ನಿರ್ಮಲಾತ್ಮನೆ । ದೇವ
ಸತ್ಯದೇವನೆ ಪಾದ ಸೇವನೆ । ಭಕ್ತ
ರ್ಗಿತ್ತು ಸಂತಸವೆತ್ತು ಹತ್ತವತಾರನೆ ೧

ಇಳೆಯಧಿಪನೆ ನಿನ್ನ ಕಂಠದಿ । ತಳ
ತಳಿಪ ಮಲ್ಲಿಗೆ ಮಾಲೆ ಪ್ರೇಮದಿ । ಕರ
ತಳದೊಳಗಿಹ ಚೆಲ್ವ ನಳಿನ ಮುಂತಾಗಿಹ ೨

ವೇದಗೋಚರ ನಿನ್ನ ಪಾದವ । ತೋರು
ತೀ ದೀನಸರನ್ನೆತ್ತು ಮಾಧವ । ಭಕ್ತ
ರ್ಗಾ ಧೇನುಸಮನೆ ಸಪಾದ ಭಕ್ಷ್ಯವ ಸಹ ೩

ಸಜನಿ[1]ಯಂದದಿ ಕಾವೆ ಭಕ್ತರ । ನೀನು
ತ್ಯಜಿಸಿಹೆ ನಾಸ್ತಿಕಪಂಥರ । ನಾಥ
ರಜನಿಯಿಂದತ್ತೆನ್ನ ಗಜಮುಖ ಸೇವ್ಯನೆ ೪

## 213. ಸತ್ಯನಾರಾಯಣನ ಹೂ ಕೊಡುವದು

ತಾರೋ ಸುಮವ ನೀರಜನಯನ
ಶ್ರೀರಮಣೀವರ ಚಾರುಗುಣ ಘನ ಪ

ಭಕ್ತಿಯಿಂ ನುತಿಪ ಭಕ್ತರಗಧಿಪ
ಭುಕ್ತಿಮುಕ್ತಿಯನತಿ ಶಕ್ತಿಯ ಕೊಡುವ ೧

ಖುಲ್ಲರ ತರಿದು ಎಲ್ಲರ ಪೊರೆವ
ಮಲ್ಲ ಮುರಾಂತಕ ಮಲ್ಲಿಗೆಯೆನುವ ೨

ಸತ್ಯದ ಭೂಷ್ಯವ ಪೃಥ್ವಿಗೆ ತೊಡಿಪ
ಸತ್ಯದೇವನೆ ಚೆಲ್ಲವತ್ತವೆಂದೆನಿಪ ೩

ಸೊಂಪಿನ ಸೊಗದ ಪೆಂಪಿನ ಬಗೆಯ
ಸಂಪದಂಗಳನೀವ ಸಂಪಗೆವೆಸರ ೪

---

1 ಸಜನಿ—ಗೆಳತಿ.

ಚಿಂತೆಯಳಿದು ಸುಖತಿಂಥಿಣಿಯೆಸಳ
ನಾಂತುದೆನಿಸುವ ಸೇವಂತಿಗೆ ಮಿಸುಪ ೫

ಮಂದರಗಿರಿಯೆತ್ತಿ ನಿಂದ ಮುಕುಂದ
ಮಂದಾರ ಸುಮವನು ತಂದೆ ಗೋವಿಂದ ೬

ಸುರಭಿ ಸಮೀರನ ಚರಿಯಿಸಿ ಕೊಯಿಸಿ
ಹರಿಪದಕೆರಗುವ ಪರಿಯ ಕೇದಗೆಯ ೭

## 214. ಶಿವನ ಸ್ತುತಿ

(4 ಪಾದಗಳಿಗೆ ತ್ರಿವಿಡೆ, 5ನೇ ಪಾದಕ್ಕೆ ರೂಪಕ ತಾಳದ ಗತಿ.)

ಪಾಲಿಸೈ ಶಶಿವಮೌಳಿಯೇ ಮುದದಿ ! ವರ ನೀಲಕಂಠನೆ
ಪಾಲಿಸೈ ಶಶಿವಮೌಳಿಯೇ ಮುದದಿ ಪ

ಪಾಲಿಸೈ ಶಶಿವಮೌಳಿ ವಾಕ್ಯವ
ಲಾಲಿಸೈ ವರ ನೀಲ ಕಂಧರ ॥
ಪಾಲಿಸು ಬಾಳಿಸಸುಗಾಲ ಸಂಪದ ಸುಖ ಅಪ

ನಂದಿವಾಹನ ಚಂದ್ರಶೇಖರನೆ । ಮುನಿವೃಂದ ಪಾಲನೆ
ಕಂದುಗೊರಲಾನಂದ ಪರಶಿವನೆ
ಇಂದು ನಿನ್ನಯ ದ್ವಂದ್ವಪಾದವ
ಹೊಂದಿ ಭಜಿಸುವೆ ಸ್ಕಂದ ಜನಕನೆ ॥
ಅಂದದಿ ಚಂದದಿ ತಂದೆ ನೀ ಸಲಹೆನ್ನ ೧

ಕೋತಿಕೇತನಗಸ್ತ್ರಪಿತ್ತವನೆ । ಸುರನಾಥ ನುತನೆ
ಭೂತಪತಿ ದ್ವೈಮಾತುರನ ಪಿತನೆ
ಜ್ಯೋತಿರೂಪನೆ ಚೇತನಾತ್ಮನೆ
ಭೂತನಾಯಕನಾಥ ರಕ್ಷಕ ॥
ಪಾತಕ ಘಾತಿಸು ಪ್ರೀತಿಯಿಂದಲೆ ನಮ್ಮ ೨

ಲೋಕಭರಿತ ಪಿನಾಕ ಕರಧೃತನೆ । ಅನೇಕ ಚರಿತನೆ
ನಾಕಸುರಮುನಿ ಲೋಕಪೂಜಿತನೆ
ಶೋಕನಾಶನೆ ಲೋಕಕೀಶನೆ
ಏಕದಂತ ವಿನಾಯಕನ ಪಿತ ॥
ವ್ಯಾಕುಲಕಿಕ್ಕದೆ ನೀ ಕರುಣಿಸು ವಿಘ್ನ ೩

## 215. ಮಹಾಬಲನ ದರ್ಶನ

ಉದಯಕಾಲದೊಳೆದ್ದು ಸ್ನಾನವ ಮಾಡಿ
ಮುದದಿಂದಲಿ ಗಣಪತಿಗೆರಗುವೆನು
ತಡೆಯದೆ ನಿಂತು ಮೊದಲು ಪೂಜೆಯ ಕೊಂಬ
ಮಹಾಗಣಪತಿ ಶರಣು । ಜಯ ಜಯ ಮಂಗಲವೇ ೧

ಮಂಗಲ ತಾಮ್ರಗೌರಿಯ ರಮಣನಿಗೆ
ಮಂಗಲ ಕಣ್ಣು ಮೂರನಿಗೆ ಶಂಕರಗೆ
ಮಂಗಲ ಗೋಕರ್ಣಪುರದೊಳು ನೆಲಸಿರ್ಪ
ಮಹಾಬಲಲಿಂಗನಿಗೇ । ಜಯ ಜಯ ಮಂಗಲವೇ ೨

ಗುಳುಗುಳಿಸುತಿಹ ಸಮುದ್ರವ ಕಂಡೆ
ತಳತಳಿಸುವ ಸಂಗಮವನು ಕಂಡೆ
ಜಗಜಗಿಸುವ ಮುತ್ತಿನ ಮಂಟಪಗಳ
ಕಂಡೆನು ಮಹಾಬಲನ । ಜಯ ಜಯ ಮಂಗಲವೇ ೩

ಮೂರ್ತಿ ಮಂಟಪಗಳ ಕಂಡೆನು ಕಣ್ಣಲಿ
ಮೂಜಗದೊಡೆಯನ ಪಾದವ ತೊಳೆದೆ
ಮೂಲಮಂತ್ರಗಳಿಂದ ಪೂಜೆಯ ಮಾಡುವ
ಯೋಗಿಗಳನು ಕಂಡೇ । ಜಯ ಜಯ ಮಂಗಲವೇ ೪

ಲೋಕಕಧಿಕವಾದ ಮೂರ್ತಿಯ ಕಂಡೆ ಮೂ
ಲೋಕದಧೀಶನ ಪಾದವ ತೊಳೆದೆ
ಮೂಲಮಂತ್ರಗಳಿಂದ ಪೂಜೆಯ ಮಾಡುವ
ಯೋಗಿಗಳನು ಕಂಡೇ । ಜಯ ಜಯ ಮಂಗಲವೇ ೫

ಮೂರು ಪೂಜೆಯ ಮೂರು ಬಾರಿಯು ಕಂಡೆ
ಮೂಜಗದೊಡೆಯನ ಪಾದವ ತೊಳೆದೆ
ಮೂಲಮಂತ್ರಗಳಿಂದ ಪೂಜೆಯ ಮಾಡುವ
ಯೋಗಿಗಳನು ಕಂಡೆ । ಜಯ ಜಯ ಮಂಗಲವೇ ೬

ರುದ್ರವ ಪೊಗಳುವ ಶಬ್ದವ ಕಂಡೆ
ಅದ್ವೈತದ ಮಹಾಪೂಜೆಯ ಕಂಡೆ
ಮುಗ್ಧ ಭಕ್ತಿಯೋಳ್ಲಿ ಪೂಜೆಯ ಮಾಡುವ
ಯೋಗಿಗಳನು ಕಂಡೆ । ಜಯ ಜಯ ಮಂಗಲವೇ ೭

ಕೋಟಿ ತೀರ್ಥಂಗಳ ಕೆರೆಗಳ ಕಂಡೆ
ಕೋಟಿ ಜನರು ಸ್ನಾನಗೈವುದ ಕಂಡೆ
ಕೋಟಿ ದಳದ ಬಿಲ್ವಪತ್ರೆಯ ಶಿವನಿಗೆ
ತರುವದ ನಾ ಕಂಡೆ । ಜಯ ಜಯ ಮಂಗಲವೇ ೮

ಒಮ್ಮೆಯಲಾ ಸುಬ್ರಹ್ಮಣ್ಯನ ಕಂಡೆ
ಬಿಮ್ಮನಿರುವ ಗಣಪತಿಯನು ಕಂಡೆ
ಕಣ್ಣಿನಿಂದಲಿ ಶಂಕರನರ್ಧಾಂಗಿಯ
ಪಾರ್ವತಿಯನು ಕಂಡೆ । ಜಯ ಜಯ ಮಂಗಲವೇ ೯

ನಾಗಾಭರಣದಿ ಮೆರೆವುದ ಕಂಡೆ
ನಾಲ್ಕು ವಿಧದೊಳಿಹ ಮೂರ್ತಿಯ ಕಂಡೆ
ನಾಗಕನ್ನಿಕೆಯರು ನಾಟ್ಯವನಾಡುವ
ಆನಂದವ ನಾನು ಕಂಡೆ । ಜಯ ಜಯ ಮಂಗಲವೇ ೧೦

## 216. ಶಿವಪೂಜೆ

ಪೂಜಿಪೆ ಗಂಗಾಧರ । ದೇವ
ಪೂಜಿಪೆ ಗಂಗಾಧರ
ವರಲಿಂಗ ಆಕಾರ ಶರಣೆಂಬೆ ಓಂಕಾರ ಪ

ಕೊರಲಿಗೆ ಸುಮದ ಮಾಲೆಯ ರಚಿಸಿ
ಹರುಷದೊಳಿರಿಸಿ ಹಾಡುವೆ ಸ್ತುತಿಸಿ ೧

ಶಾಲ್ಯನ್ನಗಳ ಶಾಕಪಾಕಗಳ
ಶೇಖರಿಸಿಯೆ ನಾ ನೈವೇದಿಸುತ  ೨

ಕರ್ಪೂರದಾರತಿ ಬೆಳಗುವೆ ಜ್ಯೋತಿ
ಸರ್ಪವಿಭೂಷನೆ ನೀಡು ನೀ ಸುಮತಿ  ೩

ಭಾಗ್ಯಾರೋಗ್ಯವ ಮುಕ್ತಿ ಸಂಪದವ
ಶೀಘ್ರದಿ ಕರುಣಿಸು ಶ್ರೀ ಮಹಾದೇವ  ೪

## 217. ಶಿವರಾತ್ರಿಯ ಪೂಜೆಯ ಹಾಡು

ನೋಡುವ ಬಾರೆ ಬೇಗ । ಶಿವ ಪೂಜೆಯ
ಮಾಡುವ ವೈಭವವ  ಪ

ನೋಡುವ ಬಾರೆ ನೀ ಪಾರ್ವತೀಶನ ಪೂಜೆ
ಮಾಡುತ್ತಲಿರುವಂಥ ಪೂಜೆಯ ಸಮಯಕೆ  ಅಪ

ಹರುಷದಿ ನೋಡೆ ಸಖಿ । ಕಾಮಾರಿಯ
ಪೂಜೆ ಮಹೋತ್ಸವವ
ಬಾಣನ ಪುರಕಾಯ್ದ ಮಾರಾರಿಶಿರದೊಳು
ಪಂಚಾಮೃತದಭಿಷೇಕವ ಗೈಯುತ  ೧

ಪಾರ್ಥನ ತಪಕೆ ಮೆಚ್ಚಿ । ಪಾಶುಪತಾಸ್ತ್ರ
ವಿತ್ತ ಮಹೇಶನಿಗೆ
ಗಂಧ ಚಂದನಾಕ್ಷತೆ ಏರಿಸಿ ನಾವೀಗ
ಬಿಲ್ವಪತ್ರೆಯ ಪೂಜೆ ಗೈಯುವ ಚಂದವ  ೨

ರಾವಣನ ತಪಕೆ ಮೆಚ್ಚಿ । ಲಿಂಗವನಿತ್ತ
ಮಾರಹರನ ಪಾದಕೆ
ಸಹಸ್ರ ನಾಮದ ಪೂಜೆ ಬಿಲ್ವಪತ್ರೆಯ ಪೂಜೆ
ಮಾಡುವ ಚಂದವ ನೋಡುವ ನಾವೀಗ  ೩

ಕೈಲಾಸಪುರದೊಳಗೆ । ವಾಸವ ಗೈದ
ಚಂದ್ರ ಕಲಾಧರಗೆ
ಧೂಪ ದೀಪಾರತಿ ನೈವೇದ್ಯ ತಾಂಬೂಲ
ಅರ್ಪಿಸಿ ಪೂಜೆಯ ಗೈಯುತ್ತಲಿರುವುದ ೪

ತ್ರಿಪುರಾರಿ ಶಂಕರಗೆ । ಭಕ್ತಿಯೊಳೀಗ
ಎರಗುವ ಪ್ರೇಮದಲಿ
ಅಪ್ಪ ತಪ್ಪುಗಳನ್ನೆ ಕ್ಷಮಿಸಿ ಎಮ್ಮನು ಬೇಗ
ತಪ್ಪದೆ ತವ ಪದ ಭಕ್ತಿಯ ಕರುಣಿಸು ೫

## 218. ಶಿವರಾತ್ರಿ ಪೂಜೆಯ ಆರತಿ

ಶ್ರೀಸಾಂಬಶಿವಗೆ ಶಂಕರಗೆ । ವರ
ವಾಸವನುತ ಸರ್ವೇಶ್ವರಗೆ ಪ

ಭಾಸುರ ಘನ ಕೈಲಾಸ ನಿವಾಸಗೆ
ಭೂಸುರ ವಂದ್ಯ ಸದಾಶಿವ ರುದ್ರಗೆ ॥
ಭಾಸುರದಾರತಿಯಾ—ಬೆಳಗಿರೆ ೧

ದರ್ಪದಿ ವಿಷವನು ಕುಡಿದವಗೆ[1] । ಕಂ
ದರ್ಪನ ಪೋಲ್ವ ಶರೀರನಿಗೆ
ಕಪ್ಪುಗೊರಲನಾಗಿರುವ ಗಿರೀಶಗೆ
ಮುಪ್ಪುರಹರನಿಗೆ ಮುನಿಜನ ಸೇವ್ಯಗೆ[2] ॥
ಕರ್ಪೂರದಾರತಿಯಾ—ಬೆಳಗಿರೆ ೨

ಮೃಗಧರನೆನಿಸಿದ ದೇವನಿಗೆ । ಆ
ನಗಧರಸಖ ಸರ್ವೇಶ್ವರಗೆ[3]
ಜಗದೊಳು ಕಾಶಿಯೊಳಗಜೆ ಸಮೇತದೊ
ಳೊಗೆದು ಭಕ್ತರಿಗಿಷ್ಟವ ಪಾಲಿಸುವಗೆ ॥
ಸೊಗಸಿನಾ[4]ರತಿಯಾ—ಬೆಳಗಿರೆ ೩

1 ದರ್ಪದಸುರರನು ಗೆಲಿದವಗೆ 2 ಹರಗೆ ಸದಾಶಿವ ರುದ್ರಗೆ. 3 ಮಾಹೇಶನಿಗೆ.
4 ಮೃಗವಂದದಾ,

ಖಂಡಪರಶು ಪರಮೇಶನಿಗೆ[1] । ಮಾ
ರ್ತಾಂಡ ಸಹಸ್ರ ಪ್ರಕಾಶನಿಗೆ
ಅಖಂಡಲಾತ್ಮಜನಿಗೆ ವರವಿತ್ತಾತಗೆ[2]
ರುಂಡ ಮಾಲೆಯ ಧರಿಸಿರುವ ಕಪರ್ದಿಗೆ ॥
ಕುಂಡಲಿಯಾರತಿಯಾ—ಬೆಳಗಿರೆ ೪

ಮಾಘ ಬಹುಳ ಚತುರ್ದಶಿ ದಿವಸ । ನಿಗ
ಮಾಗಮ ವ್ರತವೆಂಬುಪವಾಸ
ಆಗಮದಿಂ ಶಿವರಾತ್ರಿಯ ನಡುವಿರು
ಳಾಗುವ ಸಮಯಕ್ಕರ್ಘ್ಯವ ಕೊಂಬಗೆ ॥
ಜಾಗರದಾರತಿಯಾ[3]—ಬೆಳಗಿರೆ ೫

ಮಂತ್ರದೊಳಗೆ ವರ ಗಾಯತ್ರಿ । ಭವ
ತಂತ್ರದೊಳಗೆ ಘನ[4] ಶಿವರಾತ್ರಿ
ಅಂತರವಿಲ್ಲದಚಿಂತ್ಯ ಮಹಿಮನಿಗೆ
ಮಂತ್ರಸ್ವರೂಪ ಪರಾತ್ಪರ ಮೂರ್ತಿಗೆ ॥
ಮಂತ್ರದಾರತಿಯಾ—ಬೆಳಗಿರೆ ೬

ಅಂತರಹಿತ ಪರಮಾತ್ಮನಿಗೆ । ದೇ
ಲಂತಪುರನವಿಷ್ಣು ಪ್ರಿಯನಿಗೆ
ಕಂತು ಸಂಹಾರಗೆ ಅಂತರ್ಯಾಮಿಗೆ
ಮಂತ್ರದೊಡೆಯ ಗಿರಿಜೇಶ ನಂದೀಶಗೆ ॥
ಕಿಂಕಿಣಿಯಾರತಿಯಾ—ಬೆಳಗಿರೆ ೭

## 219. ಶಿವನಿಗೆ ಆರತಿ

ಶ್ರೀ ಗಂಗಾಧರಗೆ ಶಂಕರಗೆ । ಚೆಲ್ವ
ನಾಗಭೂಷಣನಿಗಾರತಿಯೆತ್ತಿರೇ ಪ

---

1 ಕುಂಡಲಿಯನುದಿನ ಧರಿಸಿದಗೆ. 2 ಖಂಡಳಜಗೆ ಶಥವಿತ್ತಗನುದಿನದೊಳ್ಗ.
3 ಬೇಗದೊಳಾರತಿಯಾ. 4 ತಂತ್ರದ ವ್ರತದೊಳು.

ಮುತ್ತಿನ ಮಂಟಪದೊಳಗೆ ರಾಜಿಪ ನವ
ರತ್ನ ಸಿಂಹಾಸನ ಮಧ್ಯದಲಿ
ಮಾರ್ತಾಂಡಕೋಟಿ ಪ್ರಕಾಶದಿ ರಾಜಿಪ
ಚಿತ್ತಜಾಂತಕಗಾರತಿಯೆತ್ತಿರೇ ೧

ಫಾಲನೇತ್ರಗೆ ಲೋಕಪಾವನ ಗಾತ್ರಗೆ
ಬಾಲೇಂದು ಮೌಳಿಗೆ ಭಯಹರಗೆ
ಕಾಲಾಗ್ನಿ ರುದ್ರಗೆ ಕಾಲಕಾಲಗೆ ಸರ್ವ
ನೀಲಕಂಧರಗಾರತಿಯೆತ್ತಿರೇ ೨

ಅಂಬಿಕೆ ತೊಡೆಯ ಮೇಲೇರಿ ಶೋಭಿಪ ಮುಂದೆ
ರಂಭೆಯೂರ್ವಶಿಯರು ನಾಟ್ಯವಾಡೆ
ಇಂಬಾಗಿ ತಾಳಮದ್ದಳೆ ಸರ್ವಘೋಷದಿ
ಅಂಬುಜಾಕ್ಷಿಯರಾರತಿಯೆತ್ತಿರೇ ೩

ಮೃಡಗೆ ಮಹೇಶಗೆ ಭೂತಗಣಂಗಳ
ಗಡಣದಿಂದೊಪ್ಪುವ ಧೂರ್ಜಟಿಗೆ
ಜಡಿವ ಮಂಗಳವಾದ್ಯವೆಸೆಯುವ ಮೂಲೋಕ
ದೊಡೆಯಗೆ ಸತಿಯರಾರತಿಯೆತ್ತಿರೇ ೪

ವ್ಯೋಮಕೇಶಗೆ ಪರಮಾತ್ಮ ಸ್ವರೂಪಗೆ
ಶ್ರೀಮುರವೈರಿ ಸಮೇತನಿಗೆ
ಪ್ರೇಮದಿ ಕುಕ್ಕುಟಪುರದಲಿ ನೆಲಸಿದ
ಸೋಮಶೇಖರನಿಗಾರತಿಯೆತ್ತಿರೇ ೫

## 220. ಶಿವನ ಪ್ರಸಾದ ಬೇಡುವದು

ಮಾರನಾಶನ ದೇವ ಶ್ರೀಪತಿ । ಸಖ
ನೀರಜನೇತ್ರ ವಾಣೀಪತಿ । ಶಿರೋ
ಹಾರಿ ಕರುಣದೋರಿ ಚಾರು ಭಕ್ತೋದ್ಧಾರಿ ಪ

ಪಾಲಿಸು ದೇವ ಪ್ರಸಾದವ । ಕಾಲ
ಕಾಲನೆಂದೆನಿಪ ಉಮಾಧವ । ಚೆಲ್ವ
ನೀಲಕಂಧರ ಗೌರೀಲೋಲ ನೀ ಕೃಪೆದೋರಿ ೧

ನಂಬಿ ಪೂಜಿಪ ತವ ಕಿಂಕರಾ । ಭೀಷ್ಟ
ಬೆಂಬಿಡದೀವ ಶ್ರೀಶಂಕರ । ದು
ರ್ಗಾಂಬೆ ಶ್ರೀಮಹಾಜಗದಂಬೆ ರಮಣ ಬೇಗ ೨

ವೃಂದಾವನಾಂತದೊಳಾಡುವ । ಶ್ರೀಗೋ
ವಿಂದನ ಕೀರ್ತಿ ಕೊಂಡಾಡುವ । ಜನ
ರಿಂದ ವಂದನೆಗೊಂಬೆ ಚೆಂದದಿ ಸಲಹೆಂಬೆ ೩

ಜಡಜಮಿತ್ರಾಗಣಿತ ತೇಜಿತ । ವರ
ಜಡಜ ಸಂಪೂರ್ಣ ವಿಭ್ರಾಜಿತ—ದೇವ
ಜಡಜಭವಾಮರ ಜಡಜ ದಿವಾಕರ ೪

ನೃತ್ಯವಿನೋದ ತ್ರಿಶೂಲಿಯೇ । ಪಾಹಿ
ಸತ್ಯಾತ್ಮಕಾಯ ಕಪಾಲಿಯೇ । ತ್ರಾಹಿ
ನಿತ್ಯತೃಪ್ತ ಕಪರ್ದಿ ಭೃತ್ಯರೊಳ್ ದಯಾವರ್ತಿ ೫

ಪಂಚವದನ ತನುಕಾಂಚನ । ದೇವ
ಪಂಚಶರಾರಿ ವಿಧುಲಾಂಛನ । ತ್ರಾಹಿ
ಪಂಚ ಪಂಚಾಕಾರ ಪಂಚಬ್ರಹ್ಮ ಪವಿತ್ರ ೬

ಮೂರುಲೋಕದ ಕಾರಣಾತ್ಮಕ । ಶ್ರೀ ಓಂ
ಕಾರ ಮೂರುತಿಯಂತರಾತ್ಮಕ । ಶ್ರೀ ಕೊ
ಲ್ಲೂರ ಮೂಕಾಂಬಾಪ್ರಿಯ ತೋರೋ ಸರ್ವತ್ರ ಜಯ ೭

## 221. ಪ್ರದೋಷ ವ್ರತ ಪೂಜೆ – ಆರತಿ

ಸಾಂಬ ಸದಾಶಿವ ದೇವಗೇ । ಜಗ
ದಂಬಿಕಾರಮಣಗಾರತಿಯೆತ್ತಿರೇ ಪ

ರಜತಾದ್ರಿಯಲಿ ಕಲ್ಪಕುಜಮೂಲದೆಡೆಯಲ್ಲಿ
ಸುಜನಸೇವಿತ ರತ್ನಪೀಠದಲಿ
ನಿಜಸತಿಸಹಿತೊಡಗೂಡಿ ರಂಜಿಸುತಿಪ್ಪ
ಮೃಡ ಮಹಾದೇವಗಾರತಿಯೆತ್ತಿರೇ ೧

ಚಂದ್ರಾರ್ಧ ಮಸ್ತಕದಿಂದ ಶೋಭಿಪನಿಗೆ
ನಂದಿವಾಹನ ಜಲಂಧರ ಹರಗೆ
ನಂದನ ಸನಕಾದಿವಂದ್ಯ ಶಂಕರನಿಗೆ
ಸುಂದರ ರೂಪಗಾರತಿಯೆತ್ತಿರೇ ೨

ಪುರ ಮೂರ ಗೆಲಿದ ಕೃತ್ತಿವಾಸ ಮೃಡನಿಗೆ
ಸುರರಿಂದೋಲಗ ರಂಜಿಸುವಾತಗೆ
ಪರಶುವ ಪಿಡಿದಂಥ ದುರಿತಸಂಹಾರಗೆ
ಗುರು ಚಿದಂಬರಗಾರತಿಯೆತ್ತಿರೇ ೩

ನೀಲಕಂಧರ ರುಂಡಮಾಲಾ ಭೂಷಿತನಿಗೆ
ಭಾಳಲೋಚನ ವೃಷಭಧ್ವಜಗೆ
ಕಾಲಾಗ್ನಿರುದ್ರಗೆ ಕಾಲಕಾಲಗೆ ಚೆಲ್ವ
ನೀಲಕಂಠನಿಗಾರತಿಯೆತ್ತಿರೇ ೪

ಕೆಂಜೆಡೆಗಳು ನಲಿನಲಿವಾ ಮಹೇಶಗೆ
ಮಂಜುಳಕರ ಪಂಚವದನನಿಗೆ
ಕುಂಜರ ಪುಲಿದೊಗಲುಡಿಗೆಯನುಟ್ಟ ಧ
ನಂಜಯ ವರದಗಾರತಿಯೆತ್ತಿರೇ ೫

ಪಕ್ಷ ತ್ರಯೋದಶಿ ಸಂಧ್ಯಾಕಾಲದಿ ಕಮ
ಲಾಕ್ಷ ಮುಖ್ಯರಪೇಕ್ಷೆಯೊಂದಿಸಿದ
ದಾಕ್ಷಾಯಣಿಯೆನಿಪ ಕೌಮಾರೀ ಪ್ರಿಯಗೆ ಪಂ
ಚಾಕ್ಷರದೊಡೆಯಗಾರತಿಯೆತ್ತಿರೇ ೬

ನಾರದಾದ್ಯರ ಗಾನ ಭೇರಿ ತಂಬಟೆ ಕಾಳೆ
ಭೋರೆಂಬ ಮದ್ದಳೆ ವಾದ್ಯಗಳು
ಭೂರಿ ವೇದ ಶಾಸ್ತ್ರಾಚಾರವ ಕೈಗೊಂಬ
ಚಾರು ಶ್ರೀಕಂಠಗಾರತಿಯೆತ್ತಿರೇ ೭

ಮಂಗಳ ಮಹಿಮಗೆ ಗಂಗೋತ್ತಮಾಂಗಗೆ
ಕಂಗಳು ಮೂರು ಪ್ರಜ್ವಲಿಸುವಗೇ
ಭೃಂಗಾಳಕೆ ಪಾರ್ವತೀಶ ಗೋವಿಂದನ
ಸಂಗಾತೀಶಾನಗಾರತಿಯೆತ್ತಿರೇ

ಭುವನವೊಳತಿಶಯುವೆನಿಪ ಕೋಳ್ಯೂರಲ್ಲಿ
ನವಮೋಹನಾಂಗ ಮಾಧವ ಸಹಿತ
ಭವ ತಾನೆ ನೆಲಸಿ ಭಕ್ತರಿಗಿಷ್ಟ ಕೊಡುತಿಹ
ಶಿವಪರಮೇಶಗಾರತಿಯೆತ್ತಿರೇ ೯

## 222. ಶ್ರೀರಾಮನವಮಿ ಪೂಜೆ

ಶ್ರೀಗುರು ನಾಗಾಸ್ಯರಾಗವೋಕ್ತದಲಿ
ಬಾಗಿ ಶಿರವ ವೀತರಾಗಯುಕ್ತವಲಿ ॥
ಭಾಗವತೋತ್ತಮನಾಗಿಹ ಶ್ರೀಹರ
ವಾಗಧಿಪತಿ ಮೊದಲಾಗಿಹ ಭಕ್ತರ
ಮೂಗಿಲಿ ಬೆಳಗುವ ರಾಘವಮೂರ್ತಿಗೆ
ಯೋಗಿಗಳತಿ ಕೊಂಡಾಡುವ ಕೀರ್ತಿಗೆ ॥
ಯೋಗದಾರತಿಯಾ—ಬೆಳಗಿರೆ ೧

ಏಕರೂಪನು ನೀನು ಲೋಕಭರಿತನು
ಏಕಾಂತ ಸ್ಥಳದಿ ಮತ್ತೇಕೋಭಾವಿತನು ॥
ಏಕಸ್ವರೂಪವ ಮೆರೆಸುವ ವಿದ್ಯೆಯ
ನೇಕತರದಿ ಗುರುಮುಖದಲಿ ಬೋಧಿಸಿ
ಏಕಜ್ಞಾನವನೀಯುವೆ ಹೃದಯದಿ
ಏಕ ಸ್ವರೂಪದಿ ಬೆಳಗುವ ಬೆಳಕಿನ ॥
ಏಕದಾರತಿಯಾ—ಬೆಳಗಿರೆ ೨

ತಾರಕಾರಿಯ ಪಿತ ಚಾರುಧ್ಯಾನದಲಿ
ತಾರಕಸ್ಥಾನದಿ ತೋರಿಯಾತನಲಿ ॥
ತಾರಕರಾಮನೆಂದೆನ್ನುವ ಪೆಸರಲಿ
ತಾರಕಪತಿಯಂತೆಸೆಯುವ ಬೆಳಕಿಲಿ
ತಾರಕಮಂತ್ರವ ಜಪಿಸುವ ಜನರನು
ತಾರಿಸೆ ಭವಸಾಗರವನು ಭಜಿಸುವ ॥
ತಾರಕದಾರತಿಯಾ—ಬೆಳಗಿರೆ ೩

ಚೈತ್ರಮಾಸದ ಸಿತಪಕ್ಷ ನವಮಿಯಲಿ
ಮಿತ್ರಕುಲದ ದಶರಥನ ಪತ್ನಿಯಲಿ ॥
ಹತ್ತವತಾರದೊಳುತ್ತಮವಾಗಿಹ
ಸಪ್ತಮ ಜನ್ಮದಿ ಜನಿಸಿಯೆ ಗೈದಿಹ
ವಿಸ್ತರ ಚರಿತವ ಗ್ರಹಿಸುವ ಭಕುತರ
ಚಿತ್ತದಿ ನೆಲಸುತ ಮುಕ್ತಿಯನೀವ ರ ॥
ಘೋತ್ತಮಗಾರತಿಯ—ಬೆಳಗಿರೆ ೪

ಹರಧನುವೆತ್ತುತ ಧರಣೀಪುತ್ರಿಯನು
ವರಿಸಿಹ ತನ್ನಯ ತರುಣಿ ಸೀತೆಯನು ॥
ಕರೆದೊಯ್ಯಲು ತದ್ದಶಶಿರ ಸಹಿತಲಿ
ಹರಣವ ಗೈಯುತ ಶರಣನ ಕಾಯುತ
ತೆರಳಿಯಯೋಧ್ಯದಿ ನಿರುಪಮ ಪೀಠದಿ
ತರುಣಿ ಸಹಿತ ತಾ ಮೆರೆದಿಹ ರಾಮಗೆ ॥
ನಿರುಪಮದಾರತಿಯಾ—ಬೆಳಗಿರೆ ೫

ಸೀತೇ ಭೂಸೀತೇ ಸುಭಾಷಿತೆ ಗೀತೆ
ಭೂಸುರ ವಂದಿತೆ ಕೇಶವ ಪ್ರೀತೆ ॥
ಪಾಶರಹಿತೆ ನಿರ್ದೋಷಿತೆ ಭೂಷಿತೆ
ಸಾಸಿರನಾಮೆ ಸುರಾಸುರವಂದಿತೆ
ತೋಷದೊಳಂಕದೊಳಿಹ ರಘುವರನಿಗೆ
ಶೇಷಶಯನನಿಗೆ ಸೀತೆಗೆ ಸಹಿತಲೆ ॥
ಭಾಸುರದಾರತಿಯಾ—ಬೆಳಗಿರೆ ೬

ಜಾತಿಭ್ರಂಶಕನಾಗಿ ಪಾತಿತ್ವದವನು
ಮಾತಾಪಿತರ ಮಾತ ಘಾತಿಸಿದವನು ॥
ಪಿತರ ಧನ ಸತಿ ಕ್ಷೇತ್ರಗಳಪಹರ
ಭೂತಳಸುರರ ವಿಘಾತಿಯ ಗೈದಿಹ
ಪಾತಕ ರಾಮಸ್ಮರಣೆಯ ಮಂತ್ರದಿ
ಪೂತವಾಗುವ ಶ್ರೀನಾಮಧಾರಕನಿಗೆ ॥
ನೂತನದಾರತಿಯಾ—ಬೆಳಗಿರೆ ೭

ದಶರಥಪುತ್ರನು ದಶಮ ಲಕ್ಷಣನು
ವ್ಯಸನವಿನಾಶನಾದಸಮ ಸಾಹಸನು ॥
ಶಶಿಧರನುಸುರುವಸಸಮಾಕ್ಷರವೆನ
ಉಸುರುತ ಭವವನು ಜಯಿಸುವ ಮಹಿಮೆಯೊ
ಳೆಸೆಯುವವಗೆ ವಿಷಮವ ನೀಗಾಡುವ
ಪಶವಾದರ ಹೃದ್ಬಿಸರುಹವಾಸಗೆ ॥
ಕುಸುಮದಾರತಿಯಾ—ಬೆಳಗಿರೆ ೮

ಅಜಭವಮುಖ್ಯರು ಭಜಿಸುವ ಪಾದ
ತ್ರಿಜಗವೆಲ್ಲವು ನಿನ್ನಾ ದಯಪಾದ ॥
ಕುಜನಕುಠಾರಗೆ ಭಜಕೋದ್ಧಾರಗೆ
ಸುಜನಾಶ್ರಯನಿಗೆ ಗಜಮುಖ ಗಣಪಗೆ
ವಿಜಯ ಶ್ರೀರಾಮಗೆ ರವಿಕುಲ ಸೋಮಗೆ
ತ್ರಿಜಗವಂದಿತೆ ಭೂಸುತೆಗೆ ಸುವಿದ್ಯೆಗೆ ॥
ಭಜಿಸುವಾರತಿಯಾ—ಬೆಳಗಿರೇ ೯

## 223. ಅಷ್ಟಮಿಯ ಕೃಷ್ಣನಿಗೆ ಆರತಿ

ಗೋಪಿಯ ಕಂದ ಗೋಪಾಲಗೆ । ಚೆಲ್ವ
ಗೋವಳರಾಯಗಾರತಿಯೆತ್ತಿರೆ ಪ

ಶ್ರಾವಣ ಮಾಸದಿ ಅಷ್ಟಮಿಯಿರುಳಲ್ಲಿ
ಪಾವನ ರೋಹಿಣಿ ತಾರೆಯಲಿ
ದೇವಕೀದೇವಿಯ ಗರ್ಭದಿ ಜನಿಸಿದ
ದೇವ ಕೃಷ್ಣಯ್ಯಗಾರತಿಯೆತ್ತಿರೇ ೧

ಒಂದು ಕೈಯಲಿ ಕಡೆಗೋಲನ್ನೆ ಹಿಡಿದು ಮ
ತ್ತೊಂದು ಕೈಯಲಿ ಬೆಣ್ಣೆ ಮೆಲ್ಲುತಲೆ
ಅಂಬೆಗಾಲಿಕ್ಕುತ ಮರವನು ಮುರಿದಂಥ
ಅಂಬುಜನಾಭಗಾರತಿಯೆತ್ತಿರೇ ೨

ಬಿಲ್ಲ ಮುರಿದು ಮಲ್ಲರ ಮರ್ದಿಸಿದಗೆ
ಮಲ್ಲರ ಕೂಡೆ ಕಾದಿದವನಿಗೆ
ಗೊಲ್ಲ ಕೃಷ್ಣಗೆ ಬೆಟ್ಟವನೆತ್ತಿದಾತಗೆ
ಮಲ್ಲಿಗೆ ಹೂವಿನಾರತಿ ಎತ್ತಿರೇ ೩

ತರಳೆ ದ್ರೌಪದಿಯಭಿಮಾನವ ಕಾಯ್ದಗೆ
ಮರಳಿ ಧರೆಯನಿತ್ತಾತನಿಗೇ
ಮರುಳೆ ಪೂತನಿಯಾ ಮೊಲೆಯನುಂಡಾತಗೆ
ತರಳ ಕೃಷ್ಣಯ್ಯಗಾರತಿಯೆತ್ತಿರೇ ೪

ತೊಟ್ಟಿಲ ಶಕಟನ ಮುರಿದ ಪಾದಕೆ ಜಯ
ಸೃಷ್ಟಿಯ ಪೊರೆದ ಪಾದಕೆ ಜಯತು
ದುಷ್ಟ ಕಾಳಿಂಗನ ಹಡೆ ತುಳಿದಗೆ ಸಂ
ದೃಷ್ಣ ಉಡುಪಿ ಕೃಷ್ಣದೇವನಿಗೇ ೫

## 224. ವರಲಕ್ಷ್ಮಿಯ ಸ್ತುತಿ

ಪಾಲಿಸು ಲಕ್ಷ್ಮಿಯೇ ಬಾಲಕೃಷ್ಣನ ಪ್ರಿಯೇ
ಲೀಲೆಯಿಂ ನಿಜಭಕ್ತರಾಲಯ ವಾಸಿಯೆ ಪ

ರತ್ನ ಕಿರೀಟವ ಮುತ್ತಿನ ಓಲೆಯ
ಚಿತ್ರಕಂಕಣಪಿಟ್ಟು ನಿತ್ಯರಾಜಿಪಳೇ ೧

ಈರಾರು ರತ್ನದ ಸರಪಣಿ ತೊಟ್ಟಿಲೊಳು
ಚಾರು ವುಯ್ಯಾಲೆಯನಾಡುವ ಚಿದ್ರೂಪ ೨

ಶುಕ್ರವಾರದ ದಿವಸ ಅರ್ಥಿಯಿಂ ಪೂಜಿತಳೆ
ಭಕ್ತರಿಷ್ಟಾರ್ಥವನಿತ್ತು ಪಾಲಿಪಳೇ ೩

ರಾಜಾಧಿರಾಜರಿಂ ಪೂಜೆಯ ಕೊಳ್ಳುವ
ರಾಜೀವಮುಖಿಯೆ ಮರಾಳಗಾಮಿನಿಯೇ ೪

ಕ್ಷೀರಶರಧಿ ಮಧ್ಯ ಚಾರುಕೃಷ್ಣಾಶ್ರಯ
ದ್ವಾರಕವಾಸ ಶ್ರೀರಂಗನ ಪ್ರಿಯಳೇ ೫

## 225. ಲಕ್ಷ್ಮಿಯಲ್ಲಿ ವರ ಬೇಡುವದು

ವರವ ಕೊಡೆ । ತಾಯೆ । ವರವ ಕೊಡೆ ಪ

ಶರಧಿಯ ಕನ್ನೆ ನೀ ಕೇಳವ್ವ ಸಂಪನ್ನೆ
ಸೆರಗೊಡ್ಡಿ ಬೇಡುವೆ ವರವ ಕೊಡೆ
ನೆರೆ ನಂಬಿದನು ನಿನ್ನ ಚರಣ ಕಮಲವನು
ಪರಿಹರಿಸಮ್ಮ ದಾರಿದ್ರ್ಯಗಳ ೧

ಹಾಲಾದರಿವೆಯು ಕಾಲಲ್ಲಿ ಸರಳಿಮ್ಮ
ಜೋಡಾಗಿರುವಂಥ ವರವ ಕೊಡೆ
ಶಾಲ್ಯನ್ನ ಪಂಚಾಮೃತ ಭಕ್ಷ್ಯ ಪರಮಾನ್ನ
ಯಾವಾಗಲಿರುವಂಥ ವರವ ಕೊಡೆ ೨

ಗುಳಗಂಧಪರಿಸಿನ ಹೊಳೆಯುವ ಕರಿಮಣಿ
ಬೆಳಗಿರುವಂಥಾ ವರವ ಕೊಡೆ
ಬೇಡಿದ ಬಡವರಿಗೆ ಕರೆದು ಮೃಷ್ಟಾನ್ನವಿಕ್ಕಿ
ವೀಳನೀರು ಕೊಡುವಂಥ ವರವ ಕೊಡೆ ೩

ಒಂದು ಬಳಗವು ಹೆಚ್ಚಾಗಿ ಮನೆಯಲ್ಲಿ
ಎಂದೆಂದಿಗಿರುವಂಥ ವರವ ಕೊಡೆ
ಕಂಡಕಂಡವರನು ಕರೆದು ಮೃಷ್ಟಾನ್ನವಿಕ್ಕಿ
ಉಂಡುಂಡು ದಣವಂಥ ವರವ ಕೊಡೆ ೪

ಮಾಳಿಗೆ ಮನೆಯಲ್ಲಿ ಜೋಡು ತೊಟ್ಟಿಲ ಕಟ್ಟಿ
ಜೋಗುಳವಾಡುವ ವರವ ಕೊಡೆ
ಬಾಗಿಲ ತೋರಣ ಮದುವೆ ಮುಂಜಿ ನಾಮಕರಣ
ವಾಗಲಿರುವಂಥ ವರವ ಕೊಡೆ ೫

ಸನಕವಂದಿತೆ ನಿನ್ನ ಷೋಡಶ ಪೂಜೆ ಮಾಡಿ
ತನಯರ ಪಡೆವಂಥ ವರವ ಕೊಡೆ
ಕರುಣಾಕರ ಗುಣನಿಧಿ ನಿನ್ನ ಶರಣರ
ಕರೆದು ಮನ್ನಿಸುವಂಥ ವರವ ಕೊಡೆ ೬

ಕರುಣಾವಾರಿಧಿ ನಿನ್ನ ಚರಣಾಂಬುಜಗಳ
ಶರಣಾಗುವಂಥ ವರವ ಕೊಡೆ
ಶರಣನಾದರೆ ಎನ್ನ ಮರಣಕಾಲಕೆ ನಿನ್ನ
ಸ್ಮರಣೆ ದೊರಕುವಂಥ ವರವ ಕೊಡೆ ೭

## 226. ಲಕ್ಷ್ಮೀಪೂಜೆ

ಪೂಜೆಯ ಮಾಡುವೆ ಮಾಲಕ್ಷ್ಮಿ ನಾ ನಿನ್ನ
ತೇಜಬೀರುತ್ತ ಬಾರಮ್ಮ—ನಮ್ಮಮ್ಮ
ಸಕಲ ಸೌಭಾಗ್ಯ—ತಾರಮ್ಮ ೧

ಪನ್ನೀರಿನಲಿ ನಿನ್ನ ಪಾದವ ತೊಳೆಯುವೆ
ಗಂಧಾಕ್ಷತೆ ಪುಷ್ಪವಿರಿಸುತ್ತ—ಧೂಪದೀಪದ
ಪೂಜೆಯ ಗೈವೇ—ಮಹಾಲಕ್ಷ್ಮಿ ೨

ಅರಿಸಿನ ಕುಂಕುಮ ಹರುಷದಿ ಹಚ್ಚುವೆ
ಪರಿಪರಿ ಭಕ್ಷ್ಯ ಬಡಿಸುವೆ—ಕರೆಯುವೆ
ವರುಷದ ಪೂಜೆಯನು—ಸ್ವೀಕರಿಸು ೩

ವಿಷ್ಣುವಿನ ರಾಣಿಯೆ ಲಕ್ಷುಮಿ ದೇವಿಯೆ
ರಕ್ಷಿಸು ನಮ್ಮ ಕೈಬಿಡದೆ—ಎಲೆ ತಾಯೆ
ಕಾಪಾಡು ನಮ್ಮ—ಮಹಾಲಕ್ಷ್ಮಿ ೪

ಎಂದೆಂದು ನೀ ನಮ್ಮ ಮನೆಯೊಳು ವಾಸಿಸು
ಕಷ್ಟ ದಾರಿದ್ರ್ಯ ಪರಿಹರಿಸು—ನೀನೆಮಗೆ
ಅಷ್ಟ ಸೌಭಾಗ್ಯ—ತಾರಮ್ಮ

ನಿತ್ಯವು ನಿನ್ನನು ಭಕ್ತಿಯೊಳ್ ಪೂಜಿಸಿ
ಮುತ್ತೈದೆ ಭಾಗ್ಯ ಸ್ಥಿರವಾಗಿ—ಇರುವಂತೆ
ಹೂವ ನೀಡಮ್ಮ—ಮಹಾಲಕ್ಷ್ಮಿ

## 227. ಲಕ್ಷ್ಮಿಗೆ ಆರತಿ

ಸಿಂಧುಕುಮಾರಿ ಸುಂದರಿಗೆ
ಸಿಂಧುಜಮುಖಿ ಗುಣಯುತೆಗೆ ॥
ಕುಂದಣ ನಾನಾಲಂಕೃತೆ ಸತಿಗೆ
ಚಂದಿರಮುಖಿ ಸರ್ವೇಶ್ವರಿ ಶುಭೆಗೆ
ಹೊಂದಿದ ಭಕ್ತರ ಸಲಹುವ ದಿವಿಜರ
ವೃಂದಾರ್ಚಿತಳಿಗೆ ತೇಜೋನ್ವಿತಳಿಗೆ ॥
ಕುಂದಣದಾರತಿಯಾ—ಬೆಳಗಿರೆ ೧

ನಿರ್ಮಲ ಚರಿತೆ ಮಂಗಳೆಗೆ
ಕೂರ್ಮರೂಪನ ನಿಜಸತಿಗೆ ॥
ಧರ್ಮಪ್ರದಾಯಿನಿ ಸರ್ವೇಶ್ವರಿಗೆ
ಕರ್ಮವಿನಾಶಿನಿ ಸುಖದಾಯಕಿಗೆ
ಬ್ರಹ್ಮ ಸುರಾರ್ಚಿತ ಪಾವನ ಚರಿತೆಗೆ ॥
ನಿರ್ಮಲದಾರತಿಯಾ—ಬೆಳಗಿರೆ ೨

ಅಂಗಜನವ್ವೆ ಕಮಲೆಗೆ
ಮಂಗಳವದನೆ ಶಾಶ್ವತೆಗೆ ॥
ಭೃಂಗಕುಂತಳೆ ಮುನಿಜನ ಸೇವಿತೆಗೆ
ಸಾಂಗದಿ ನತರ ಪೊರೆವ ಮತಿಯುತೆಗೆ
ಮಂಗಳ ರೂಪಿಣಿ ನಿರುತ ಕಲ್ಯಾಣಿಗೆ ॥
ಸಿಂಗರದಾರತಿಯಾ—ಬೆಳಗಿರೆ ೩

ಕುಂಡಲಿವೇಣಿ ಜಾನಕಿಗೇ
ದಂಡಿತೆ ಭಯಹರೆ ಸುಖಿಗೆ ॥
ಚಂಡಪ್ರಕಾಶಿತೆ ಮುಗ್ಧಾಂಗಿನಿಗೆ
ಕೊಂಡಾಡುವ ಭಕ್ತರ ಪೊರೆವಳಿಗೆ
ಭಂಡರ ತೊರೆದ ಸರ್ವವ್ಯಾಪ್ತಳಿಗೆ ॥
ಕುಂಡಲಿಯಾರತಿಯಾ—ಬೆಳಗಿರೆ ೪

ಚಿತ್ರಶಾಶ್ವತೆ ಜರಗತೆಗೆ
ಮಿತ್ರನ ಪಡೆದ ನಿರ್ಮಲೆಗೆ ॥
ಧಾತ್ರಿಯೊಳಗೆ ತುಂಬಿದ ಘನಸಿರಿಗೆ

ಗೋತ್ರಾರಿಯ ನಾದಿನಿ ಕೇಸರಿಗೆ
ಮೃತ್ಯುಗತಾರ್ಚಿತೆ ಕಮಲಾಕರೆಗೆ ॥
ಮುತ್ತಿನಾರತಿಯಾ—ಬೆಳಗಿರೆ ೫

ಹಂಸಚಿದ್ರೂಪೆ ಕೋಪಿದೆಗೆ
ಹಂಸ ಭಾರತಿ ರತ್ನಮಣಿಗೆ ॥
ಹಂಸಗಮನೆ ಯೋಗಾಂಗಿಣಿ ಶಿರೆಗೆ
ಹಂಸಾಹಂಸವ ತಿದ್ದಿದ ದೃಢಗೆ
ಹಂಸಾರ್ಚಿತೆ ನಾಯಕಿ ಶುಭಗಾತ್ರೆಗೆ ॥
ಹಂಸದಾರತಿಯಾ—ಬೆಳಗಿರೆ ೬

ಲಕ್ಷಣ ಭರಿತೆ ಕೇತಕಿಗೆ
ಸಾಕ್ಷಾತ ವಿಮಲೆ ಶೃಂಗರೆಗೆ ॥
ದಕ್ಷಾರಿಯ ಮೋಹದ ಸೋದರಿಗೆ
ಕುಕ್ಷಿಯೊಳಗೆ ಜಗವನು ತಾಳ್ದಳಿಗೆ
ಈಕ್ಷಿಸಿ ಸುಜನರ ರಕ್ಷಿಸುವಾಕೆಗೆ ॥
ಸೂಕ್ಷ್ಮದಾರತಿಯಾ—ಬೆಳಗಿರೆ ೭

ಕರ್ಪೂರವಾಸಿ ಮಂಗಳೆಗೇ
ಶೂರ್ಪಭಾಂಗಿನಿ ನಾರಾಯಣಿಗೆ ॥
ತೋರ್ಪ ವಿಷಾದ ವಿನಾಶಿನಿ ಜನೆಗೆ
ಸತ್ಫಲದಾಯಕಿ ಸುಖಪೂರಿತೆಗೆ
ಉತ್ಪಲ ಕುಸುಮಾದ್ಯಖಿಳ ವಿಭೂಷಿತೆಗೆ ॥
ಕರ್ಪೂರದಾರತಿಯಾ—ಬೆಳಗಿರೆ ೮

ಶ್ರೀಮಹಾಶುಭ್ರಮಂಗಳೆಗೆ
ಸೋಮಸನ್ನಿಭ ನಿಜಮುಖಿಗೆ ॥
ಸೋಮಾರಿಯ ಪಿತನ ಮೋಹದ ಸತಿಗೆ
ಹೇಮ ಸುಮಂಗಳೆ ಸಿರಿ ಪಾಲಿತೆಗೆ
ಕೋಮಲ ವಪುವಿನ ಸಾಗರ ಪುತ್ರಿಗೆ ॥
ಹೇಮದಾರತಿಯಾ—ಬೆಳಗಿರೆ ೯

## 228 ಗೌರೀ ಪೂಜೆಗೆ ಕರೆಯುವುದು

ಪೂಜೆ ನೋಡುವ ಬನ್ನಿರೇ । ಶ್ರೀ ಗೌರಿಯ
ಪೂಜೆ ನೋಡುವ ಬನ್ನಿರೆ ಪ

ಪೂಜೆ ನೋಡುವ ಬನ್ನಿ ಮೂಜಗದಂಬೆಯ
ರಾಜರಾಜೇಶ್ವರಿಯೆನಿಪ ಶ್ರೀಗೌರಿಯ ೧

ಚಂದದರಸಿನ ಕುಂಕುಮ । ಗೆಜ್ಜೆ ವಸ್ತ್ರ
ಗಂಧ ಪರಿಮಳಗಳಿಂದ
ಚಂದುಳ್ಳ ಕರಿಮಣಿ ಬಿಚ್ಚೋಲೆ ಬಳೆಯಿಟ್ಟು
ಮಂದಾರ ಮಲ್ಲಿಗೆ ಮಾಲೆಗಳನು ಮುಡಿಸಿ ೨

ಸಾಲು ದೀಪಿಗೆಯ ಹಚ್ಚಿ । ಶ್ರೀ ಗೌರಿಯ
ಲೋಲೆಯರುರೆ ಪೂಜಿಸಿ
ನೀಲದ ಧೂಪದೀಪಾರತಿಗಳ ಮಾಡಿ
ಹಾಲು ಒಡದ ಕಾಯಿ ಫಲಗಳನರ್ಪಿಸಿ ೩

ಪಂಚಭಕ್ಷ್ಯವ ಮಾಡಿಸಿ । ಶ್ರೀ ಗೌರಿಯ
ಆರೋಗಣೆಗೆ ಕರೆದು
ಕತ್ತರಿಸಿದಡಕೆಯು ಬಿಳಿಯೆಲೆಯೇಲಕ್ಕಿ
ಕರ್ಪೂರ ಬೆರೆದ ಮುತ್ತಿನ ಸುಣ್ಣವನಿತ್ತು ೪

## 229. ಗೌರಿಯನ್ನು ಪಾಂಚಾಲೆ ಪೂಜಿಸಿದ್ದು

ಪೂಜಿಸಿದಳು ಗೌರಿಯ । ಪಾಂಚಾಲೆಯು
ಪೂಜಿಸಿದಳು ಗೌರಿಯ ಪ

ಗಂಧ ಅಕ್ಷತೆಗಳಿಂದ । ಕುಂಕುಮ ಹರಿದ್ರ
ಚಂದನ ಪುಷ್ಪದಿಂದ ॥
ತಂದ ವಿಧವಿಧ ಸುಮಗಳೇರಿಸಿ
ಮುಂದಿರುವ ಭಕ್ಷ್ಯಗಳನರ್ಪಿಸಿ
ಚಂದದಿಂದಲಿ ಗೀತ ಪಾಡುತ
ಮಂಗಳಾರತಿ ಮಾಡಿ ಎತ್ತುತ ೧

ಪಟ್ಟೆ ವಸ್ತ್ರವನೆ ಉಟ್ಟು । ವಿಚಿತ್ರದ
ಕುಪ್ಪಸವನ್ನೆ ತೊಟ್ಟು ॥
ರತ್ನ ಕಂಕಣ ಕರದೊಳಿಟ್ಟು
ಮುತ್ತು ಸರಗಳ ಕೊರಳೊಳಿಟ್ಟು
ಉತ್ತಮಾಂಗನೆಯವರು ಕೂಡಿ
ಮುತ್ತಿನಾರತಿ ಮುದದೊಳೆತ್ತುತ ೨

ಚರಣಕ್ಕೆ ಪಾದ್ಯವನು । ಪರಿಪರಿಯಿಂದ
ಹರುಷದಿ ಧ್ಯಾನವನು ॥
ತರತರದಲಾಭರಣವಿರಿಸಿ
ಪರಿಮಳಿಪ ಹಲ ಮಾಲೆಯಿರಿಸಿ
ಪರಮ ಪ್ರೇಮದಿ ಚರಣಕೆರಗಿಯೆ
ಕರವ ಮುಗಿದು ವರವ ಬೇಡುತ ೩

## 230. ಗೌರಮ್ಮ ತವರಿಗೆ ಬಂದದ್ದು

ಲೋಕಕ್ಕೆ ಬರುವುದು ಬೇಕೆಂಬ ಹಬ್ಬವು
ಆಕೆ ಗೌರಮ್ಮ ಬರಬೇಕು ಪ

ಇಂದ್ರನ ಹೂವಾದವು ಬಂದಿತು ಗೌರಿಯ ಚೌತಿ
ಇಂದೇಕೆ ಅಪ್ಪ ಬರಲಿಲ್ಲ—ಎಂದ್ಹೇಳಿ
ರಂಭೆ ಗೌರಮ್ಮ—ನುಡಿದಳೆ ೧

ಹತ್ತು ಕಾಲೇಣಿಯ ಉಪ್ಪರಿಗೆಗೆ ಸಾಚಿಕೊಂಡು
ಹತ್ತಿನೋಡಿದಳೆ ತವರೂರ—ಹಾದಿಯ
ಅಪ್ಪಯ್ಯ ಬಪ್ಪ— ಬರವನು ೨

ಆರು ಕಾಲೇಣಿಯ ಮಾಳಿಗೆಗೆ ಸಾಚಿಕೊಂಡು
ಹೋಗಿ ನೋಡಿದಳೆ ತವರೂರ—ಹಾದಿಯ
ಮಾವಯ್ಯ ಬಪ್ಪ—ಬರವನು ೩

ಅಪ್ಪ ಬಪ್ಪ ಬರವ ಅಷ್ಟು ದೂರದಿ ಕಂಡು
ಮುತ್ತಿನ ತಂಬಿಗೆಯಲ್ಲುದಕವ—ತೆಕ್ಕೊಂಡು
ಅಪ್ಪಯ್ಯನ ಚರಣಕ್ಕೆರಗಿದ ೪

ಮಾವ ಬಪ್ಪ ಬರವ ಬಹಳ ದೂರದಿ ಕಂಡು
ಹೂವಿನ ತಂಬಿಗೆಯಲ್ಲುದಕವ—ತೆಕ್ಕೊಂಡು
ಮಾವನ ಚರಣಕ್ಕೆರಗಿದ ೫

ಪಟ್ಟಲ ಹಿತ್ತಲಿಗೆ ಹೋದಳೆ ಗೌರಮ್ಮ
ಪಟ್ಟಲಕಾಯಿ ಕೊಯಿತಂದು—ತಾಳಿಲ ಮಾಡಿ
ಅಪ್ಪಂಗಿಕ್ಕಿದಳೆ—ಹಗಲೂಟ ೬

ಹೀರೆಯ ಹಿತ್ತಲಿಗೆ ಹೋದಳೆ ಗೌರಮ್ಮ
ಹೀರೆಯ ಕಾಯ ಕೊಯಿತಂದು—ತಾಳಿಲ ಮಾಡಿ
ಮಾವಂಗಿಕ್ಕಿದಳೆ—ಹಗಲೂಟ ೭

ಹಾಲವು ಎರೆಯವು ಮೇಲಪ್ಪ ತೆಳ್ಳವು
ಸಾಲಿಯಲಿ ಎರೆದ ತೊಡೆದವು—ಇವು ಮೂರು
ಆದವಪ್ಪಯಗೆ—ಹಗಲೂಟ ೮

ನಿನ್ನಯ ತವರಿಲೆ ನಿನ್ನ ಕರೆವಲಿ ಬಂದ
ಎನ್ನೊಂದ ಮಾತ ಕರಿಲಿಲ್ಲೆ—ಎಂದ್ಹೇಳಿ
ನಂದಿಕೇಶ್ವರರು—ನುಡಿದರು ೯

ನೀನು ಹೋದಾರಿಲ್ಲಿ ಹೂವು ಕೊಯ್ಯುವರಿಲ್ಲೆ
ದೇವರಿಗನ್ನ ಮೊದಲಿಲ್ಲೆ—ಅರಸಿಯೆ
ಹೇಗ್ಹೋಪೆ ನಿನ್ನ—ತವರಿಗೆ ೧೦

ಆನು ಹೋದರೆ ಇಲ್ಲಿ ಹೂವು ಕೊಯ್ಯುವರುಂಟು
ದೇವರಿಗೆ ಅನ್ನ ಮೊದಲುಂಟು—ಅರಸರೆ
ಆನ್ ಹೋಪೆ ಎನ್ನ—ತವರಿಗೆ ೧೧

ಚಕ್ಕುಲಿ ಕರ್ಜಿಕಾಯಿ ನೈವೇದ್ಯಕಿರಿಸುವರು
ಮುಡಿಗೆ ಮುಡಿಸುವರು ಮುಡಿವಾಳ—ಪತ್ರೆಯ
ಮುಡಿದು ಮೂರ್ದಿನದಿ—ಬರುವೆನು ೧೨

ಕಾಡ ಕೆಸವಿನ ಸೊಪ್ಪು ಮೂಡ ಹಾಗಲಕಾಯಿ
ಕಾಡೊಳಗಿದ್ದ ಬಿದಿರಿನ—ಕಳಿಲೆ ಮೆದ್ದು
ಮೂದಿನಕೆ ಎದ್ದು—ಬರುವೆನು ೧೩

ಬಡವ ಬಡವ ಎಂದು ಏನೆಂದು ಜರೆವಿರಿ
ಬಡವ ಎನ್ನಪ್ಪ ಗಿರಿರಾಜನೆಂದರೆ
ಭೂಮಿ ಭಾರತದ—ತೊಡಿಗೆಯು ೧೪

ಈರಣ್ಣ ಗುಂಗುರ ಬೆನವಣ್ಣ ಗುಡಿದಾರ
ಸೃಷ್ಟಿಗೆ ಭಾರತದ ತೊಡಿಗೆಯು—ಗಿರಿರಾಜ
ಹೋಗಿ ನಾ ಬಪ್ಪೆ—ತವರಿಗೆ ೧೫

ಹಿಂದಕ್ಕೆ ಈರಣ್ಣ ಮುಂದಕ್ಕೆ ಬೆನವಣ್ಣ
ಬಾಲರೀರ್ವರನೆ ಒಡಗೊಂಡು—ಗೌರಮ್ಮ
ಹೊರಟಳೆ ತನ್ನ—ತವರಿಗೆ ೧೬

## 231. ಗೌರಮ್ಮನನ್ನು ಕಳುಹಿಸಿದ್ದು (ಗೌರೀ ಬಿಂಬ ವಿಸರ್ಜನೆ)

ಹೋಗಿ ಬಾರಮ್ಮ ಪಾರ್ವತಿ । ಕೈಲಾಸಕಿಂದು
ಸಾಗಿ ಬಾರಮ್ಮ ಪಾರ್ವತಿ ಪ

ಅತಿಶ್ರೇಷ್ಠ ಭಾದ್ರಪದ । ತದಿಗೆಯ ದಿವಸ
ಮತಿವಂತೆ ಗೌರಿ ನಿನ್ನನು
ಸತಿಯರು ಪೂಜಿಸಿ ಅತಿ ಸಂತೋಷದಿ
ಮತಿಯನು ಬೇಡಲು ಕ್ಷಿತಿಯೊಳು ಕರೆವರು ೧

ತರಳರಿಲ್ಲದೆ ಪರ್ವತ । ತಪವ ಗೈದು
ಉರಗಭೂಷನ ಮೆಚ್ಚಿಸಿ
ಪರಶಿವೆ ನಿನ್ನನು ಪಡೆದು ಸುಖದೊಳಿರೆ
ತರಳೆಗೆ ವರನಾರೆನುತಲೆ ಯೋಚಿಸಿ ೨

ಬಾಲೆ ತಪದಿ ಜಯಿಸಿದೆ । ಈಶಗೆ ವನ
ಮಾಲೆಯನಿಕ್ಕಿ ಪೂರ್ವದಿ
ಕೈಲಾಸಕ್ಕೆ ನೀ ಪೋಗಲು ಆ ದಿನ
ಭೂಲೋಕದಿ ನಿಜ ಸಖಿಯರ ಮರೆಯದೆ ೩

ವರುಷಕ್ಕೆ ನೀನೊಮ್ಮೆ ಬಂದರೆ । ನಿನ್ನ ಗೆಳತಿಯರು
ಹರುಷದಿ ಸ್ವಾಗತಗೈವರು
ಪರಿಪರಿಯಲಿ ಗೃಹ ತರತರ ಸಾರಿಸಿ
ಪರಿಮಳ ಹೂ ರಂಗೋಲಿಯನಿಡುವರು ೪

ಬಾಳೆ ತೋರಣ ಕಟ್ಟಿಸಿ । ಮಾವಿನ ತಳಿರ
ಸಾಲು ಸಾಲಾಗಿ ಬಂಧಿಸಿ
ಎಳ ಸೀಯಾಳವ ಬಳುಕುವ ಕಬ್ಬನು
ಚೆಲುವಿನ ಫಲಾವಳಿಯ ಬಂಧಿಸುವರು ೫

ತದಿಗೆಯ ದಿವಸ ಬರುವೆ । ನಿನ್ನ ಕರೆಯಲಿಕೆ
ಮುದದಿ ಗಣೇಶ ಬರುವನು
ಮೋದಕವನು ಚಕ್ಕುಲಿ ಮಂಡಿಗೆಯನು
ಆದರದಲಿ ನೈವೇದ್ಯವ ಕೊಳ್ಳುತ ೬

ರತ್ನದ ಪೀಠವಿಡುವರು । ಹೂಗಳನಿರಿಸಿ
ಸುತ್ತ ಜ್ಯೋತಿಗಳನಿಡುವರು
ಚಿತ್ರವಿಚಿತ್ರದ ಬಳೆ ಕರಿಮಣಿಗಳ
ಉತ್ತಮವಾದ ಬಾಗಿನವ ಸ್ವೀಕರಿಸುತ್ತ ೭

ಪಂಚಕಜ್ಜಾಯ ಗೈವರು । ನೀ ಪೋಗುವೆಯೆಂದು
ಮುಂಚೆ ನೈವೇದ್ಯಕಿಡುವರು
ಪಂಚಾಮೃತದಭಿಷೇಕದ ಪೂಜೆಯ
ಪಂಚಮುಖನ ಅರಸಿಯೆ ಪಾರ್ವತಿ ೮

ಸೃಷ್ಟಿಗೀಶನ ಪ್ರಿಯಳೆ । ಸ್ತ್ರೀಯರು ತಲೆವಾಗಿ
ಅಷ್ಟ ಸೌಭಾಗ್ಯ ಬೇಡುವರು
ಅಷ್ಟಯತಿಗಳಿಗಸಾಧ್ಯವಾಗಿರುವಂಥ
ಶ್ರೇಷ್ಠವಾಗಿಹ ನಿಜಮುಕ್ತಿಯ ಪಾಲಿಸು ೯

## 232. ಗಣೇಶನನ್ನು ಸ್ತುತಿಸುವುದು
(ವರಣ, ಶಿಖಾಪಾದಗಳುಳ್ಳ ಹಾಡು)

ಪಾರ್ವತೀಪ್ರಿಯನಂದನ । ಗಜಾನನ
ಸರ್ವರಿಂದಭಿವಂದನ ಪ
ಸರ್ವದಾ ಪಡೆಯುವ ಸರ್ವಲೋಕವ ಕಾವ
ಸರ್ವಭಕುತ ಸಂಜೀವ । ಮಹಾನುಭಾವ ಅ ಪ

ಪಾಶಾಂಕುಶ ಹಸ್ತನೆ । ರಕ್ಷಿಸೊ ಜಗ
ದೀಶ ದೇವ ಪ್ರಶಸ್ತನೆ
ಕ್ಲೇಶದ ಭವಭಯಪಾಶವೆಲ್ಲವ ನೀಗಿ
ನೀ ಸದಾ ಪೊರೆಯೋ ಎನ್ನ । ನಂಬಿದೆ ನಿನ್ನ ೧

ಅಪ್ಪ ಕಜ್ಜಾಯಗಳ । ಅಷ್ಟದ್ರವ್ಯ
ತುಪ್ಪಯೆಳ್ಳುಂಡೆಗಳ
ಚಪ್ಪರಿಸುತ ಬಾಯ ತಪ್ಪದೆ ಸವಿವ ಕಂ
ದರ್ಪ ಮೋಹನ ಶರೀರ । ಮೃಡನ ಕುಮಾರ ೨

ನಂಬಿ ಪ್ರಾರ್ಥಿಸುವೆ ನಿನ್ನ । ವಿಘ್ನೇಶ್ವರ
ಇಂಬಿತ್ತು ಸಲಹೋ ಎನ್ನ
ಜಂಭಾರಿ ಸುರರ ಸೌರಂಭದಿ ಪೊರೆವ ಹೇ
ರಂಬ ಗಣಾಧೀಶ್ವರ । ಸರ್ವೇಶ್ವರ ೩

ಏಕದಂತ ವಿನಾಯಕ । ನಿಗಮಾಗಮಾ
ನೇಕ ವಿದ್ಯಾ ಪ್ರದಾಯಕ
ಆಖುವಾಹನ ತ್ರೈಲೋಕಮೋಹನ ವಿಘ್ನ
ಭೀಕರ ಶಶಿಶೇಖರ । ಕರುಣಾಕರ ೪

ಮುದದಿಂದ ಕೊಂಡಾಡುವೆ । ಪ್ರಾರ್ಥಿಸಿ ದಿವ್ಯ
ಪದವನರ್ಚಿಸಿ ಬೇಡುವೆ
ಅಧಿಕ ಸೌಭಾಗ್ಯ ಸೌಖ್ಯದಿ ಬೆಳಗುವ ಚೆಲ್ವ
ಮದವೂರ ಪುರನಿವಾಸ । ಪಾಲಿಸು ಈಶ ೫

## 233. ಗಣಪತಿಯು ಪೂಜೆಗೆ ಕರೆಯುವುದು (ಸರಳಾರ)

ಗಣಪತಿ ಪೂಜೆ ನೋಡುವ ಬನ್ನಿರೋ
ಮನಸಿನಿಷ್ಟಾರ್ಥವ ಪಡಕೊಳ್ಳಿರೋ ಪ

ನವಶಕ್ತಿ ಮೊದಲಾದಧಿಕ ಮಂತ್ರೋಕ್ತದಿ
ನವವಿಧ ಭಕ್ತಿ ಭಾವಂಗಳಲಿ
ತವಕದಿ ಯೋಗ ಪದ್ಮಾಸನ ಪೀಠವ
ಭುವನವಂದಿತಗಿತ್ತು ಪೂಜಿಸುವ ೧

ಮತ್ತೆ ಸಶಕ್ತಿ ಸಾಯುಧವಾಹನಗಳ
ಪ್ರಾರ್ಥಿಸಿ ಪರಿವಾರಾದಿಗಳ
ನಿತ್ಯಾತ್ಮಕ ನಿರ್ವಿಘ್ನೇಶ್ವರನನು
ಭಕ್ತಿಯಿಂದಾವಾಹಿಸುತೊಲಿದು ೨

ಆವಾಹಿತೋ ಭವ ಸನ್ನಿಹಿತೋ ಭವ
ದೇವೇಶ ಸುಪ್ರಸನ್ನೋ ಭವತು
ಭಾವಭಾವಿತ ಗಾಯತ್ರಿಯರ್ಘ್ಯವನಿತ್ತು
ಕೇವಲ ಗುರುವಿನಂಘ್ರಿಯ ಭಜಿಸಿ ೩

ಋಷಿ ಛಂದಸದ ಮೂಲದಲಿ ಪ್ರತಿಷ್ಠಿಸಿ
ಕುಸುಮದಿ ಪಂಚೋಪಚಾರಗಳ
ಎಸಗಿ ದ್ವಾದಶನಾಮದಿಂದ ಪೂಜಿಸಿ ಮತ್ತೆ
ಹಸನದಿಂದಷ್ಟಾರ್ಘ್ಯವನಿತ್ತು ೪

ಒಳ್ಳಿತಾದವಲು ತೆಂಗಿನಕಾಯಿ ಕಡಲೆಯ
ಬೆಲ್ಲ ಕಬ್ಬಿನ ಕೋಲು ಮೋದಕವ
ಸಲ್ಲಲಿತದಿ ಪಂಚಭಕ್ಷ್ಯ ನೈವೇದ್ಯವ
ಚೆಲ್ವ ಮೂರುತಿಗೆ ಸಮರ್ಪಿಸುತ ೫

ಮತ್ತೆ ಗುಗ್ಗುಳ ಧೂಪ ದೀಪಾರತಿಗಳ
ನರ್ಥಿಯಿಂದಲಿ ಬೆಳಗುತ ಮುದದಿ
ಭಕ್ತಿಯಿಂದೊಲಿದು ನೈವೇದ್ಯ ಸಮರ್ಪಿಸಿ
ಇತ್ತು ಕ್ರಮುಕ ತಾಂಬೂಲಗಳ ೬

ತಾಳಮದ್ದಳೆ ಶಂಖ ಘಂಟಾರವದಲಿ
ಬಾಲೆಯರೆಂಬ ಶೋಭಾನದಲಿ
ಮೇಲುಮೇಲಾರತಿ ಬೆಳಗಿ ವಿನೋದದಿ
ನೀಲಕಂಠನ ಸುತನಡಿಗೆರಗಿ ೭

ಕೂಡೆ ಪ್ರಸನ್ನ ಪೂಜೆಯ ಮಾಡಿ ವಿಭವದಿ
ಮಾಡಿ ಬ್ರಹ್ಮಾರ್ಪಣವನು ಗೈದು
ನೋಡಿ ಭಕ್ತರಿಗೆ ಪ್ರಸಾದವನೊಲಿದಿತ್ತು
ಜೋಡಿಸಿ ಕರಗಳ ಶರಣೆಂದು ೮

ಚಂಚಲತೆಯನುಳಿದೇಕೋ ಭಾವದಿ
ವಾಂಛಿತಾರ್ಥವ ದಯಮಾಡೆನುತ
ಪಂಚಲಿಂಗೇಶನಾತ್ಮಜ ಗಣಪತಿಯನು
ವಂಚನೆಯಿಲ್ಲದೆ ಪ್ರಾರ್ಥಿಸುವ ೯

## 234. ಗಣಪತಿ ಬಂದದ್ದು

ಬಂದನು ಪಾರ್ವತಿ ಕಂದನು ತಾನಾ
ನಂದದಿ ಭಕ್ತರ ಗೃಹಕೀಗ ಪ

ಒಂದೇ ಮನದಲಿ ಭಜಿಸುವ ಭಜಕರ
ವೃಂದವ ಪಾಲಿಸಲುತ್ಸಹದಿ ಅ ಪ

ಧರೆಯೊಳು ತನ್ನನು ಸ್ಮರಿಸುವ ಜನರಿಗೆ
ದುರುಳರ ಬಾಧೆಯು ಬರುತಿರಲು
ತರಿದು ಅವರ ನಿಜಶರಣರ ಪಾಲಿಸೆ
ಕರದೊಳು ಪಾಶಾಂಕುಶ ಧರಿಸಿ ೧

ಅನವರತವು ಪೂಜಿಸುತಿಹ ಜನರತಿ
ವಿನಯದಿ ಕರೆಯಲು ಜಯವೆನುತ
ದಿನಕರ ಕೋಟಿಯ ತೇಜದಿ ಹೊಳೆಯುವ
ಗಣಪನು ಬಂದನು ನಸುನಗುತ ೨

ಗಿರಿಜೆಯ ಕುವರನು ಸುರಪತಿವಂದ್ಯನು
ಪರಿಪರಿ ಮೋದವ ಬೀರುತಲಿ
ಶರಣರ ಪೂಜೆಯ ಸ್ವೀಕರಿಸಲು ತಾ
ಹರುಷದೊಳಗೆ ಅತಿ ವೇಗದಲಿ ೩

ಮೋದಕ ಪ್ರಿಯನು ಬಾಧಕನಾಶನು
ಕಾದಿಪ ಕಾತರದಿರುವವನು
ಶ್ರೀಧರ ಸಖಸುತನಾಗಿಹ ಗಣಪನು
ಆದರದಲಿ ಶರಣರ ಗೃಹಕೆ ೪

## 235. ಫಲಾವಳಿ ಕಟ್ಟಿದ್ದು

ಕಟ್ಟಿದರು ಫಲಾವಳಿಯ ಗಣಪನ ಪುಟ್ಟ ಮಂಟಪದೆದುರೊಳು
ಶ್ರೇಷ್ಠವಾಗಿಹ ಫಲಗಳೆಲ್ಲವ ಒಟ್ಟುಗೂಡಿಸಿ ಮುದದೊಳು ಪ

ತಳಿರು ತೋರಣಗಳನು ರಚಿಸುತ ಕದಳಿಕಂಬವ ನಿಲಿಸುತ
ವಿಧವಿಧದ ಪುಷ್ಪಗಳ ಲತೆಗಳ ತಂದು ಮಿಗೆ ಸಿಂಗರಿಸುತ ೧

ಕದಳಿ ಕಿತ್ತಳೆ ಮಾದಳೆಯ ಕೆಂದಾಳಿ ನಿಂಬೆಯ ಕಂಚಿಯ
ಬದನೆ ಬಾಳೆಯ ಕೊನೆಯು ಮೊದಲಾಗಿರುವ ನಾನಾ ಫಲಗಳ ೨

ತೊಂಡೆ ಬೆಂಡೆಯು ಚೆಂಡುಬದನೆಯು ದುಂಡು ಹೀರೆಯು ಗೋವೆಯ
ತಂಡತಂಡದೊಳಿರುವ ಅಡಕೆಯ ಕೊನೆಯು ಬಿಳಿಯೇಲಕ್ಕಿಯು ೩

ಹೀರೆ ಬೋರೆಯು ಸೋರೆ ಸೌತೆಯು ಅವರೆ ಹಾಗಲ ಕಾಯ್ಗಳ
ಬೇರು ನೀರ್ಹಲಸುಗಳು ಮಾವಿನ ಹಣ್ಣು ಮಡಹಾಗಲುಗಳು ೪

ಇಂತು ನಾನಾಪರಿಯ ಫಲಗಳ ಸಂತಸದಿ ತಾವ್ ತರಿಸುತ
ಚಿಂತಿತಾರ್ಥವನೀವ ಗಣಪನ ಮುಂದೆ ಕ್ರಮದೊಳಗಿರಿಸುತ ೫

## 236. ಗಣಪತಿ ಪೂಜೆ

ಪೂಜಿಪೆ ಗಜವದನ । ದಯಾಘನ
ಪೂಜಿಪೆ ತವ ಚರಣ ॥ ಪ

ಪೂಜಿಪೆನು ನಾ ವಿಘ್ನರಾಜನ
ಮೂಜಗದಿ ವಿಖ್ಯಾತನಾದನ
ರಾಜವೈಭವದಿಂದ ಮೆರೆವನ
ರಾಜಿಪಾ ಗಣನಾಥನಾ ಅ ಪ

ಮಿಂದು ನಾ ಮಡಿಯನುಟ್ಟು । ಆನಂದದಿ
ಚಂದದ ತಿಲಕವಿಟ್ಟು ॥
ಗಂಧ ಚಂದನದಕ್ಷತೆಗಳನು
ಕುಂದ ಮಂದಾರಾದಿ ಸುಮಗಳ
ತಂದು ಪೂಜೆಗೆ ಸಿದ್ಧಗೊಳಿಸುತ
ಹಾಡುತ । ವರ ಬೇಡುತ ೧

ಕೆನೆಹಾಲು ಮೊಸರುಗಳ । ಸಕ್ಕರೆ ತುಪ್ಪ
ಜೇನುತುಪ್ಪಾದಿಗಳ ॥
ಘನತರದ ಕೆಂದಾಳಿ ಕದಳಿಯ
ಪನಸ ಖರ್ಜೂರಾದಿ ದ್ರಾಕ್ಷಯ
ಗಣಗಳೊಡೆಯಗೆ ವಿನಯದಿಂದಭಿ
ಷೇಕವನು ತಾ ಮಾಡುತ ೨

ಸಿದ್ಧಿಬುದ್ಧಿಯರ ಕಾಂತ । ಸದ್ಗುಣವಂತ
ಮುದ್ದುಗೌರಿಯ ಸುಪ್ರೀತ ॥
ರುದ್ರತರಳನೆ ದೀನನಾಥನೆ
ಶುದ್ಧ ಜಲದಭಿಷೇಕ ಮಾಡುತ
ವಿದ್ಯೆಬುದ್ಧಿಯ ನೀಡು ಎನ್ನುತ
ಬೇಡುತ । ಕೈಮುಗಿಯುತ ೩

ಗಂಧ ಚಂದನವೆರಿಸಿ । ನಾ ತಂದಿಹ
ಅಂದದ ಹೂಮುಡಿಸಿ ॥
ನಂದಿಕೇಶನ ಕಂದ ಗಣಪನೆ
ಸುಂದರಾಂಗನೆ ಮಂದಗಮನನೆ
ವಂದಿಪೆನು ನಾನಿಂದು ಮದಹರ
ತಂದೆಯನುದಿನ ರಕ್ಷಿಸೆನ್ನನು ೪

## 237. ಶ್ರೀಗಣೇಶ ಚರಿತೆ (ಸರಳಾರ)

ಜಯವೆನ್ನಿರೆಲ್ಲರು ಗಣನಾಥನ । ದೇವಿ
ಕರುಣಾಸಾಗರೆ ಪಾರ್ವತಿಸುತನ ಪ

ಗುರುವರಸಂಘ್ರಿಯ ನೆನೆದು ಪಾಣಿಯ ಪದ
ಚರಣಕಾತನನಾಗುವೆ ಹರಿಯ
ಪರಮ ಪಾವನ ದೇವ ಎನಗೆ ಶಂಕರ ಶಿವ
ವರವ ಪಾಲಿಸು ಈ ಕೃತಿಯಿಂದ ೧

ಒಂದು ದಿವಸ ಹರನಂದು ವಿನೋದದಿ
ಬಂದು ಕುಳ್ಳಿರೆ ಸಿಂಹಾಸನದಿ
ಅಂದಗೆಡುತ ಮುನಿವೃಂದಗಳೆಲ್ಲರು
ಬಂದು ದೂರಿದರುದ್ವೇಗದಲಿ ೨

ಖೂಳ ಗಜೇಂದ್ರನ ಊಳಿಗದಲಿ ನಾವು
ಬಾಳಲಾರೆವು ಪೊರೆಯೆಂದೆನಲು
ಮೇಳ ಸಹಿತ ಪೊರವಂಟನು ದೈತ್ಯನ
ತಾಳಲಾರದೆ ಬಹು ಕಷ್ಟಗಳ ೩

ಭಕ್ತರಭೀಷ್ಟವ ಶಕ್ತಿಧರನು ಕೇಳಿ
ಯುಕ್ತಿಯಿಂದಲಿ ತಾ ಬರುತಿರಲು
ಮುಕ್ತಿದಾಯಕ ತಾನು ತತ್ತ್ವಗುಣಂಗಳು
ವ್ಯಕ್ತದಿ ಬಂದರು ಮನವೊಲಿದು ೪

ಬಂದು ದೈತ್ಯನೊಳು ತಾನಂದು ಕಾಳಗಕಾಗ
ನಿಂದು ಆನಂದದಿ ಮೆರೆಯುತಿರೆ
ಕುಂದದೆ ಕೆಲವು ದಿನಂಗಳು ಸಂದವು
ಚಂದ್ರಮಧರನು ವಿನೋದದಲಿ ೫

ಇತ್ತಲೀ ತೆರನಿರೆ ಅತ್ತ ಪಾರ್ವತಿ ತಾನು
ಹೊತ್ತು ಕಳೆಯಲಾರದೆ ಬಳಿಕ
ಚಿತ್ರತರಾಂಗಿಯು ಮತ್ತೆ ಮೌನದೊಳಿರೆ
ಮೃತ್ತಿಕೆಯನು ನೋಡುತಲಂದು ೬

ಬೆರಳ ಕೊನೆಗಳಿಂದ ಕೆರೆಯುತ ಸಾಂಗದಿ
ತರುಣರೂಪವನೆಸಗುತಲಾಗ
ಕರುಣಸಾಗರ ತಾನು ವಿರಚಿಸಿ ಜೀವವ
ಕರೆದಳು ಕೃತಜಿತನೆಂದೆನುತ ೭

ಬಾಲದೊಡಿಗೆಗಳ ಲೀಲೆಯ ನೋಡಲು
ಶೀಲೆ ತನ್ನಯ ಸಖಿಯರ ಕರೆದು
ಮಾಲೆ ಕೊರಳ ಕಿವಿ ಜಾಲಿ ವಂಟಿಯು ಬಳೆ
ತೋಳ ವಂಕಿಯು ಸಹ ತೊಡಿಸಿದಳು ೮

ಇಟ್ಟು ಕಿರೀಟವ ಪಟ್ಟೆ ಪೀತಾಂಬರ
ಉಟ್ಟು ಸನ್ಮೋಹನಮುಡುಪುಗಳ
ಸೃಷ್ಟಿಗೊಡತಿ ತಾನು ಘಟ್ಟಸೆ ವಿದ್ಯೆಯ
ಮುಟ್ಟಿ ಕಲಿಸಿದಳು ಹರುಷದಲಿ ೯

ಎಲ್ಲ ವಿದ್ಯೆಯೊಳು ನೀ ಬಲ್ಲನಾಗೆನುತಲಿ
ಫುಲ್ಲಲೋಚನ ಸೊಲ್ಲಿಸುತಿರಲು
ಚೆಲ್ವದೇವನು ತಾನು ಸಲ್ಲದೆ ಕಲಿತನು
ಗೆಲ್ವರ ಕಾಣೆನು ಜಗದೊಳಗೆ ೧೦

ನೋಡುತ ಪಾಡುತಲಾಡುತ ಬಾಲನ
ಕೂಡೆ ಕರೆದು ಸಂತೋಷದಲಿ
ನೋಡಿಕೊ ಬಡಗ ಬಾಗಿಲ ಕಾವಾಟವ
ರೂಢಿಯೊಳಾರು ಬಾರದ ತೆರದಿ ೧೧

ಇತ್ತ ಗಜಾಸುರ ದೈತ್ಯನ ಶಿರವನು
ಕತ್ತರಿಸುತ ಬೀಳೆಂದೆನಲು
ವ್ಯರ್ಥಮಾಡದಿರೀಗ ಮಸ್ತಕವನು ಎಂದು
ಮತ್ತೆ ಬೇಡಿದಡದನೀಕ್ಷಿಸುತ ೧೨

ಭಕ್ತನ ಮಾತಿಗೆ ಯುಕ್ತಿಯ ಕಾಣದೆ
ಭಕ್ತಿಗೆ ಪರವಶನಾಗುತಲಿ
ಮತ್ತೆ ಶಿರವ ಕೊಂಡು ಪ್ರತ್ಯೆಗಾತ್ರನು ತಾನು
ಚಿತ್ರತರದಿ ಬೇಗನೆ ಬಂದನು ೧೩

ಯಾರು ದ್ವಾರದಿ ಎಂದಪಾರ ಮಹಿಮನಾಗ
ಕ್ರೂರಸ್ವರದಿ ತಾನು ಕೇಳುತಿರೆ
ಧೀರ ನುಡಿದ ಬಲು ಶೂರತನಂಗಳ
ಯಾರಾದರೇನು ಬಿಡೆನು ದ್ವಾರವ ೧೪

ಲಾಲಿಸಿ ಮಾತ ಕಪಾಲಿ ರೋಷದಿ ತನ್ನ
ಶೂಲದೊಳಂದು ಬಾಲನ ಶಿರವ
ಫಾಲಾಕ್ಷನಿರಿದು ಮುಂದಕೆ ಪೋಗಲಾಕ್ಷಣ
ಬಾಲೆಯರಿದು ಪೇಳಿದಳಾಗ ೧೫

ಶಿಶುವ ಹರಿಸಿ ನೀವು ಕುಶಲದಿ ಬಂದಿರೆ
ಪಸರಿಸಿಹುದು ಪಾತಕವೀಗ
ವಸುಧೆಯೊಳ್ ಬಾಳೆನು ವಿಷವ ಕೊಂಡಾದರೂ
ಉಸುರಲರಿಯೆ ಮುಂದಿನ ಪರಿಯ ೧೬

ಆಡಳು ಮಾತನು ನೋಡಳು ಕಾಂತನ
ಮೂಡಿ ಬರುವ ಕಣ್ಣೀರಿನೊಳು
ಕೂಡೆ ಮಗುವ ಕೊಡದಿದ್ದರೆ ಇಂದು ನಾ
ರೂಢಿಯೊಳಗೆ ಕೂಡೆನು ನಿಜವು ೧೭

ಓಗೆ ಪೇಳುವುದೇಕೆ ನಾಗವೇಣಿಯೆ ನೀನು
ಬೇಗದಿ ಜೀವವಾಗುವ ತೆರದಿ
ನಾಗನ ಶಿರವನು ಸಾಗಿಸಿ ಜೀವವ
ಭೋಗಿಭೂಷಣ ಮಾಡಿದನೊಲಿದು ೧೮

ನಚ್ಚಿನ ಸುತನೆಂದು ಮೆಚ್ಚಿ ಸಂಪ್ರೀತಿಯೊ
ಳಿಚ್ಛೆ ಬಂದಂದದಿ ವರಗಳನು
ತುಚ್ಛೀಕರಿಸದಿರಲೆಂದು ವಿನೋದದಿ
ಉಚ್ಚರಿಸಲಿ ಲೋಕದೊಳೆನುತ ೧೯

ಖಂಡ ಪರಶು ದಯೆಯಿಂದಲಿ ನಿನ್ನ ಬ್ರ
ಹ್ಮಾಂಡ ಕಟಾಹದೊಳೆಲ್ಲವರು
ತಂಡ ತಂಡದಿ ನಿನ್ನ ಕೊಂಡಾಡಲಿ ಎಂದು
ರುಂಡಮಾಲನು ಆಡಿದನೊಲಿದು ೨೦

ಅಂದಿನಿಂದಿಂದಿಗೂ ಹೊಂದಿ ಸುರರು ನಿನ್ನ
ಚೆಂದದ ಮಹಿಮೆಯ ಪೊಗಳಿದರೆ
ಕುಂದದೆ ಕರುಣವ ಮುಂದೆಯಿಡುವ ದೇವ
ನಂದಿಕೇಶ್ವರ ಸಹ ಪೊರೆಯುವರು ೨೧

## 238. ಗಣಪತಿಗೆ ನೈವೇದ್ಯಾರ್ಪಣೆ

ಮೋದದಿ ನಿವೇದಿಸುವೆ ಮೋದಕಾದಿ ಭಕ್ಷ್ಯವ
ಆದರದಿ ಸ್ವೀಕರಿಸು ಆದಿಪೂಜ್ಯ ಗಣಪನೆ ಪ

ಶಾಲಿಯನ್ನ ಹಾಲು ಮೊಸರು ಮೇಲೆ ನಿನಗೆ ತುಪ್ಪವು
ಸಾಲಲಿರುವ ಹೋಳಿಗೆಯು ಲೀಲೆಯಿಂದ ಬಡಿಸುವೆ ೧

ದಾಸಪ್ರಿಯ ಕೇಸರಿಯ ಬಾಸುಂದಿಯು ಪುರಿಗಳ
ಲೇಸೆನಿಸಿದ ಬೇಸಿನುಂಡೆ ದೋಸೆ ಕೋಸಂಬರಿಗಳ ೨

ಸಕ್ಕರೆಯನಿಕ್ಕಿರುವ ಚಿಕ್ಕ ಚಿಕ್ಕ ಉಂಡೆಯ
ಅಕ್ಕರೆಯೊಳಿಕ್ಕುವೆನು ಮುಕ್ಕಣ್ಣನ ಕುವರನೆ ೩

ಅಡಿಗಡಿಗೆ ಕುಡಿಯಲೆಂದು ಒಡನೆ ಕರೆದ ಹಾಲನು
ಸಡಗರದಿ ಇಡಿಸಿರುವೆ ಮೃಡನ ಕುವರ ನಿನಗೆ ನಾ ೪

ಕಿರಿಯ ಪುರದಿ[1] ಸರಸದಿಂದ ಇರುತಿರುವ ಗಣಪನೆ
ಕರುಣದಿಂದ ಕಾಯೊ ನಮ್ಮ ಗಿರಿಜೆಕುವರ ಬೇಡುವೆ ೫

## 239. ಚೌತಿ ಗಣಪತಿಗೆ ಆರತಿ

ಆರತಿಯನೆತ್ತಿದರು ಸುಜನರು ಪಾರ್ವತಿಯ ವರಪುತ್ರಗೆ
ಧಾರಿಣಿಯು ಮೇಲೆಲ್ಲ ಭಕ್ತರ ಮೊದಲ ಪೂಜೆಯು ಕೊಂಬಗೆ ಪ

ಕರದಿ ಪಾಶಾಂಕುಶವ ಧರಿಸಿಹ ಶಿರದಿ ರತ್ನ ಕಿರೀಟವು
ಮೊರದಗಲ ಕಿವಿ ಕರ್ಣಕುಂಡಲ ಕಿರಿಯ ಸುಂಡಿಲ ಗಣಪಗೇ ೧

---

1 ಕಿರಿಯಪುರ—ಕಿದೂರು (ಕಾಸರಗೋಡು ತಾಲೂಕಿನಲ್ಲಿದೆ.)

ಬರುಬರುತ್ತಿರೆ ನಡುವೆ ಮಾರ್ಗದಿ ಹಾರಿ ಮೂಷಿಕವೇರಲು
ಜಾರಿ ಬಿದ್ದನು ಗಣಪತಿಯು ತಾ ಘೋರಸರ್ಪನ ಸುತ್ತಿದ ೨

ಭಾರವಾಗಲು ಹೊಟ್ಟೆ ಗಣಪನು ಜಾರಿಬಿದ್ದನು ಮಾರ್ಗದಿ
ಸಾರಿ ನಕ್ಕನು ಚಂದ್ರನೆನ್ನುತ ಘೋರಶಾಪವನಿತ್ತನು ೩

ಧಾರಿಣಿಯ ಮೇಲೆಲ್ಲ ಭಕ್ತರು ಮೀರಿ ಚೌತಿಯ ದಿನದಲಿ
ಕೋರೆ ಚಂದ್ರನ ನೋಡಲಾ ದಿನ ಚೋರ ಕಂಟಕ ಬರುವದು ೪

## 240. ಗಣಪತಿಯಲ್ಲಿ ಹೂ ಬೇಡಿದ್ದು

ಹೂವೊಂದ ಕೃಪೆಯಿಂದ ನೀಡಯ್ಯ । ನಿನ್ನ
ಭಕ್ತರ ಮನದಿಚ್ಛೆ ನೋಡಯ್ಯ । ಓ
ಪರಮಾತ್ಮ ಕಣ್ತೆರೆದು ನೋಡಯ್ಯ । ಸೀ
ಶಾಂತಿಯ ಸುಮವೊಂದ ನೀಡಯ್ಯ ಪ

ಬಾಳುವೆ ದುಃಖದಿ ತುಂಬಿದೆ । ನಮ್ಮ
ಭಕ್ತಿಯ ಜ್ಯೋತಿಯು ನಂದಿದೆ । ಕಾ
ಗರ್ತ್ತಲೆಲ್ಲೆಲ್ಲಿಯೂ ಮುಸುಕಿದೆ । ರವಿ
ಮೂಡುವ ಹೂವೊಂದ ನೀಡಯ್ಯ ೧

ವಿಘ್ನೇಶ ನಾ ಗೈವೆ ವಂದನೆ । ಅತಿ
ಸರಸದಿ ಕೃಪೆದೋರೋ ವಂದ್ಯನೆ
ಸ್ತುತಿಗೈವೆ ನಾನೀಗ ನಿನ್ನನೆ । ಈಗ
ಪಾಲಿಸು ಹೂವ ಗಣೇಶನೆ ೨

ಈಶಕುಮಾರ ವಿಘ್ನೇಶನೆ । ದುಷ್ಟ
ರಾವಣ ಗರ್ವವಿನಾಶನೆ । ಓ
ಪರಮಾತ್ಮ ಕಣ್ತೆರೆದು ನೋಡಯ್ಯ
ಶಾಂತಿಯ ಸುಮವೊಂದ ನೀಡಯ್ಯ ೩

ದಾರಿಯ ಕಾಣದೆ ಬಂದೆ ನಾ । ನಿಜ
ದಾರಿಯ ತೋರಿಸೋ ತಂದೆ ನೀ । ಓ
ಪರಮಾತ್ಮ ಕಣ್ತೆರೆದು ನೋಡಯ್ಯ
ಶಾಂತಿಯ ಸುಮವೊಂದ ನೀಡಯ್ಯ ೪

ಆಲಿಸಿ ಕೇಳದೆ ಮೌನದೆ । ಈಗ
ಬಾಲೆಯರ ಮೊರೆ ಕೇಳದೆ
ಇಟ್ಗುಳಿ*ಪುರದ ನಿವಾಸನೆ । ನಿಜ
ಭಕ್ತಜನರ ಪರಿಪಾಲನೆ ೫

## 241. ಗಜವದನನ ಪ್ರಸಾದ (ಹೂ) ಬೇಡುವುದು (ಸರಳಾರ)

ತಾರೋ ಪ್ರಸಾದವ ಗಜವದನ । ನಿನ್ನ
ನಿರುತ ಪೂಜಿಪೆ ಪಾರ್ವತಿ ನಂದನ ಪ

ಹಸ್ತಿವದನ ನಿನ್ನ ಭಕ್ತಿಯೊಳರ್ಚಿಸಿ
ನಿತ್ಯನಿತ್ಯವು ವಂದನೆಗೈದು
ಹಸ್ತವ ಮುಗಿದು ನಾ ಬೇಡುವೆ ಸುಮಗಳ
ಇತ್ತು ರಕ್ಷಿಪುದೆನ್ನ ಕರುಣದಲಿ ೧

ಅಪ್ಪವೋದಕ ಜೇನುತುಪ್ಪವ ಮುಂದಿಟ್ಟು
ಬಪ್ಪ ವಿಘ್ನವ ಪರಿಹರಿಪುದೆಂದು
ಸರ್ಪಭೂಷಣ ನಿನಗರ್ಪಿತವಾಗಿಯೆ
ಇಪ್ಪೆ ರಕ್ಷಿಪುದೆನ್ನ ಕರುಣದಲಿ ೨

ಒಳ್ಳಿತಾದವಲು ತೆಂಗಿನ ಕಾಯಿ ಕಡಲೆಯು
ಎಳ್ಳುಂಡಲಿಗೆ ಕಬ್ಬುಕದಳಿಗಳ
ಎಲ್ಲವ ನೀಡಿ ನಾ ಬೇಡುವೆ ಸುಮವನು
ಮೊಲ್ಲೆ ಮಲ್ಲಿಗೆ ಜಾಜಿ ಸಂಪಗೆಯ ೩

* ಇಟ್ಗುಳಿ ಎಂಬುದು ಶಿರಸಿ ಸಮೀಪದ ಒಂದು ಸ್ಥಳ.

ಮದುವೆ ಮಂಗಲ ಶುಭಲಗ್ನದ ಕಾರ್ಯದಿ
ಮೊದಲಿಗೆ ಪೂಜೆಯು ಕೊಂಬವಗೆ
ತ್ರಿದಶವಂದಿತ ನಿನ್ನ ಮಕುಟದಿ ರಾಜಿಪ
ಪದುಮದೆಸಳ ಪಾಲಿವುದೆನಗೆ ೪

## 242. ಗಣಪ ದುರ್ಗಾಂಬಿಯರಿಗೆ ಆರತಿ

ಶ್ರೀಶೈಲಾಧೀಶ ಗಣೇಶ ಮೂರುತಿಗೆ
ಶ್ರೀಶಕ್ತಿರೂಪೆ ಸದಾಶಿವೆಯಡಿಗೆ ॥
ಮೂಷಿಕವಾಹನ ಶೇಷಾಭರಣಗೆ
ಕೇಸರಿ ಧ್ವಜೆ ಕಾತ್ಯಾಯಿನಿ ದೇವಿಗೆ
ವಾಸವ ವಂದ್ಯೆ ದಿನೇಶ ಸನ್ನಿಭೆಗೆ
ಸಾಸಿರ ನಾಮದ ಲಲಿತೆಗೆ ಪದ್ಮದ ॥
ಕೇಸರದಾರತಿಯಾ—ಬೆಳಗಿರೆ ೧

ಶುಂಡಾಲಾಸನಗೆ ಮಾರ್ತಾಂಡ ತೇಜನಿಗೆ
ಚಂಡಮುಂಡಾಂತಕಿ ಚಂಡಿಕೆಯಡಿಗೆ ॥
ರುಂಡಮಾಲನ ಸುತ ದಂಡಕ ಧರನಿಗೆ
ಭಂಡರ ತರಿದ ಚಾಮುಂಡಿ ಮುಕಾಂಬೆಗೆ
ದಂಡ ಪ್ರಣಾಮದೊಳೆರಗಿ ಭೂಸುರರೆಲ್ಲ
ದುಂಡುಮಲ್ಲಿಗೆ ಸೇವಂತಿಗೆಯರಲಿನ ॥
ಚೆಂಡಿನಾರತಿಯಾ—ಬೆಗಗಿರೆ ೨

ಅಪ್ಪ ಮೋದಕ ಜೇನು ತುಪ್ಪವುಂಬವಗೆ
ಒಪ್ಪಿದಾಯುಧ ಕರ ಷೋಡಶಾಕೃತಿಗೆ ॥
ದರ್ಪದೊಳಸುರರ ತರಿದ ವರಾಹಿಗೆ
ಕರ್ಪೂರ ವೀಳ್ಯ ಸಮರ್ಪಣೆಯಲಿ ದ್ವಿಜ
ರೊಪ್ಪುತ ಮಂತ್ರದ ರವದಲಿ ಜಾಜಿಯ ।
ಪುಷ್ಪದಾರತಿಯಾ—ಬೆಳಗಿರೆ ೩

ಬಿಂಕಣ ಕರ್ಣ ಪಾಶಾಂಕುಶಧರಗೆ
ಕಿಂಕರನುತಗೆ ಭಯಂಕರಾಕೃತಗೆ ||
ಶಂಕರ ತನುಭವ ವಿಘ್ನವಿನಾಶಗೆ
ಶಂಕರಿ ಪರಮೇಶ್ವರಿ ದುರ್ಗಾಂಬೆಗೆ
ವೆಂಕಟ ಸುತ ರಾಮಾಂಕಿತನೆಸಗಿದ
ನಿಂ ಕೃತಿ ಪಾಡುತ ಲಲನಾಮಣಿಯರು ||
ಕುಂಕುಮಾರತಿಯಾ—ಬೆಳಗಿರೆ ೪

## 243. ದುರ್ಗಾಪೂಜೆ ಷೋಡಶೋಪಚಾರ (ಸರಳಾರ)

ಮಂಗಳಾರತಿ ಬೆಳಗಿದೆವಮ್ಮ
ಹಿಂಗದೆ ಸಲಹಿಕೋ ನೀನೆಮ್ಮ ಪ

ಮದಗಜಗಮನೆಯ ಪದಕಭಿವಂದಿಸಿ
ಮುದದೊಳಗಾ ದುರ್ಗಾಂಬಿಕೆಯ
ಸದಮಳದೀರೆಂಟುಪಚಾರಗಳಲಿ
ಒದಗಿ ಪೂಜಿಸುವಂದವ ಪೇಳ್ವೆ ೧

ಸರ್ವಮಂಗಳೆ ಸಮ್ಮೋಹಿನಿ ಸಂತತ
ಗರ್ವವಿನಾಶಿನಿ ಗಜಗಮನೆ
ನಿರ್ವಹಿಸುವೆ ಜಗದಂಬಿಕೆ ತವಪದ
ಸರ್ವೇಶ್ವರಿ ಧ್ಯಾನಿಪೆ ನಿನ್ನ (ಧ್ಯಾನ) ೨

ತ್ರಿಭುವನ ಪೋಷಿಣಿ ತ್ರಿಪುರವಿನಾಶಿನಿ
ಅಬುಜಭವಾಮರ ಕುಲವಂದ್ಯೆ
ವಿಭವಾನಂದಪ್ರದಾಯಕಿ ನಿನಗಿದು
ಅಭಯವಾಣಿ ಆವಾಹನೆಯು (ಆವಾಹನ) ೩

ನೂತ್ನ ನಿರ್ಮಿತ ಮಂಟಪ ಮಧ್ಯದಿ ನವ
ರತ್ನದ ಕೆತ್ತಿಗೆಯಲಿ ಮೆರೆವ
ಅತಿಶಯ ಮಂಗಳ ಕರದೊಳಗೊಪ್ಪುವ
ಹಿಂತದಾಸನವಿದೆ ನೋಡಮ್ಮ (ಆಸನ) ೪

ಸಾಧಿಸಿ ತಪವ ಭಗೀರಥ ತಂದಿಹ
ಮಾಧವನಮಲ ಪಾದೋದ್ಭವೆಯ
ಮೋದದಿ ಭಾಗೀರಥಿಯುದಕವನಿದೋ
ಆದಿ ಮಹಾತ್ಮ ಪಾದೋದಕವು (ಪಾದ್ಯ) ೫

ಕರಪುಟ ಯುಗಳದಿ ಮೆರೆವಂಗುಲಿಯೊಳು
ಸುರಿದಂದದ ಪಾನೀಯಗಳ
ಧರಿಸುತ ಭಕ್ತಿ ವಿಶೇಷದಿ ಧ್ಯಾನಿಸಿ
ನಿನಗೆ ಯಶಸ್ವಿನರ್ಘ್ಯವನೀವೆ (ಅರ್ಘ್ಯ) ೬

ದಾನವರನು ಸಂಹರಿಸಲು ತ್ರಿದಶರು
ಧ್ಯಾನಿಸಿ ನಿನ್ನನು ಮೊರೆಯಿಡಲು
ತಾನ್ಮೈತಂದಿದಿ ಸುಖದಲಿ ಸಲಹಿದಿ
ನೀನೆ ಕೊಳ್ಳಾಚಮನೀಯಕವ (ಆಚಮನ) ೭

ವಿಮಲ ಸರೋರುಹದೆಡೆಯಲಿ ಸುಳಿಯುತ
ಕ್ರಮಿಸಿ ರಂಜಿಪ ನಿರ್ಮಲತರದ
ಹಿಮದುದಕವಿದೋ ಮಮತೆಯ ಸ್ನಾನಕೆ
ಶ್ರಮವೀಯದೆ ಪಾಲಿಸು ನಮ್ಮ (ಸ್ನಾನ) ೮

ಗಂಧ ಚಂದನ ಕನಕಾಂಕಿತವಿರುವಂಥ
ಕುಂಕುಮವಿದೆಯಿದ ನೀ ನೋಡೆ
ಮಂದಗಮನೆ ಪೂರ್ಣೇಂದುನಿಭಾನನೆ
ಚಂದದ ಉಪವೀತವಿದಮ್ಮ (ಉಪವೀತ) ೯

ಶತಸೂರ್ಯಾಂಕಿತವಾಗಿಯೆ ಶೋಭಿಪ
ಸಿತವರ್ಣದಿ ಶೋಭಿಸುತಿರುವ
ಅತಿಶಯವಾಗಿಹ ರತುನಾನಂದದಿ
ಪೀತಾಂಬರ ವಿಲಸಿತವದನೇ (ವಸ್ತ್ರ) ೧೦

ಕಸ್ತೂರಿಯ ರಮಣೀಯಕವಾಗಿಹ
ಮಸ್ತಕದಲಿ ರೇಖೆಯನೆಳೆದು
ವಿಸ್ತರದಲಿ ಸೌಭಾಗ್ಯದ್ರವ್ಯ ಸ
ಮಸ್ತದಾಯಕಿಯೀವೆನು ಮುದದಿ (ಗಂಧ) ೧೧

ರಾಜೀವವು ಮೊದಲಾಗಿಹ ವಿಧವಿಧ
ಜಾಜಿಯ ಕುಸುಮಗಳನೆ ತಂದು
ರಾಜಮುಖಿಗೆ ನವ ರಾಜಿಪ ಪುಷ್ಪವು
ಸೋಜಿಗವಾಗಿಯೆ ಇರಿಸಿದೆನು (ಪುಷ್ಪ) ೧೨

ವಿಧವಿಧದಲಿ ಪೂಜಿಸಿ ಭಕ್ತಿಯೊಳು
ಒದಗಿ ವಿನೋದದಿ ಧೂಪವನು
ಸದಮಲೆಗಾಘ್ರಾಣಿಸಿದೆನು ವಿನಯದಿ
ಮದಮುಖನಾಶಿನಿ ವಿಧುವದನೇ (ಧೂಪ) ೧೩

ದುರುಳರ ಬಾಧೆಗೆ ಪುರಬಿಟ್ಟಮರರು
ಮೊರೆಯಿಡುತಡಗಿಕೊಂಡಿರುತಿರಲು
ಭರದೊಳು ದುಷ್ಟರ ತರಿದುಜ್ವಲಿಸಿದೆ
ಹರಿವಾಹಿನಿ ದೀಪವಿದಮ್ಮ (ದೀಪ) ೧೪

ಷಡ್ರಸದನ್ನವ ವಿಧವಿಧ ಭಕ್ಷ್ಯವ
ಒಡತಿಯ ಮುಂದಿಡುತೆಡೆಗಿಡುತ
ಕಡುನಿರ್ಮಲ ಪಾನೀಯವ ಲಾಲಿಸು
ಮೃಡಸುಪ್ರೀತೆ ನೈವೇದ್ಯವನು (ನೈವೇದ್ಯ) ೧೫

ಪೂಗೀಫಲ ತಾಂಬೂಲ ಸಮರ್ಪಿಸಿ
ಆ ಗರುವೆಯ ಮಾಣಿಕ್ಯದಲಿ
ಆಗಲೆ ರಚಿಸಿದ ಮುತ್ತಿನಾರತಿಯನು
ಬೇಗದಿ ಬೆಳಗಿದರೇನೆಂಬೆ (ತಾಂಬೂಲ—ನೀರಾಜನ) ೧೬

ವಿಶ್ವಾತ್ಮಕಿ ವಿಶ್ವೋದರಿ ಶಂಕರಿ
ವಿಶ್ವಾಶ್ರಿತೆಯೆ ಜಗನ್ಮಾತೆ
ವಿಶ್ವಾಸದಲಿ ಪೂಜಿಸುವೆನು ಪಾಲಿಸು
ವಿಶ್ವೇಶ್ವರಿ ಪ್ರಾರ್ಥನೆಯನ್ನು (ಪ್ರಾರ್ಥನೆ) ೧೭

ನ್ಯೂನತೆಗಳ ತೊಲಗಿಸಿದೆ ಸಮರ್ಪಿಸಿ
ನೀನದ ಕೊಳ್ಳೆ ಮಹಾಮಾಯೆ
ಏನರಿಯದೆಯೀ ಕೃತಿಯಲಿ ಕೊರತೆಯ
ನೀನದನಾಯದೆಮ್ಮನು ಸಲಹು ೧೮

ಮಂಗಲ ಜಯ ಸರ್ವೇಶ್ವರಿ ಸಂತತ
ಮಂಗಲ ಜಯ ಸುಸ್ಥಿರವಾಸಿ
ಮಂಗಲಕರ ನಿನ್ನಮಲ ಚರಿತ್ರವು
ಮಂಗಲವಾಗಿದೆ ಸಲಹಮ್ಮ ೧೯

## 244. ಅಮ್ಮನವರಿಗೆ ಆರತಿ (ಧವಳಾರ)

ಶ್ರೀಮಹಾಮಾಯೆ ಭವಾನಿ ಭಾರ್ಗವಿ ಗೌರಿ
ಹೈಮವತೀಶ್ವರಿಗೆ । ಉಮೆ ಶಾರದಾಂಬ
ರಾಮಣೀಯಕ ರೂಪೆಗೆ । ದಾಕ್ಷಾಯಣಿ ಸು
ತ್ರಾಮಾದಿ ವಂದಿತೆಗೆ । ಸೋಮಸೋದರಿಗೆ ॥
ಸೋಮವದನೆ ಸುಚಾರುಚರಿತೆಗೆ
ಸೋಮಸೂರ್ಯಾನಲ ತ್ರಿನೇತ್ರೆಗೆ
ಕಾಮಜನನಿ ಕೃಪಾಂಗಿ ಭೈರವಿ
ಧಾಮನಿಧಿ ತ್ರೈಲೋಕ್ಯ ಸಂರ
ಕ್ಷಾಮಣಿ । ಕಾತ್ಯಾಯಿನೀ । ಗಜ
ಗಾಮಿನಿ । ಪಾವನ ಸ್ವರೂಪೆಗೆ ॥
ಹೇಮದಾರತಿಯಾ—ಬೆಳಗಿರೆ ೧

ಸೃಷ್ಟಿ ಸಂಹಾರದಿ ವಿಷ್ಣುರೂಪದಿ ಶಿವ
ಕಿಟ್ಟವನುಗುರಿನಲ್ಲಿ । ನೀರಿಗೆ ತೆಗೆ
ದಿಟ್ಟೊಡಾ ಕ್ಷಣದೊಳಲ್ಲಿ । ಮಧುಕೈಟಭಾಖ್ಯರು
ಪುಟ್ಟಿ ಗರ್ಜಿಸಿ ಬಂದಲ್ಲಿ । ಬಲು ಭೀತಿಯಲ್ಲಿ ॥
ಪುಟ್ಟಿರುವ ಹರಿನಾಭಿ ಕಮಲದಿ
ಗುಟ್ಟಿನಿಂದಜನಡಗಿರಲ್ಕತಿ
ಸಿಟ್ಟಿನಲಿ ಮಹಾಕಾಳಿ ರೂಪವ
ತೊಟ್ಟು ಖಳರನು ಕೊಂದು ಪಾಯುವ
ಸೃಷ್ಟಿಸಿ । ವೇಧಸರವರ್ಗಳ
ಪುಟ್ಟಿಸಿ । ಮೇದಿನಿ ಗೈದವಳಿಗತಿ ॥
ಶ್ರೇಷ್ಠದಾರತಿಯಾ—ಬೆಳಗಿರೆ ೨

ಕಾಲಾಂತರದೊಳತಿ ಘೋರಾಕಾರದ ದುಷ್ಟ
ಖೂಳನು ಮಹಿಷಾಖ್ಯನು । ಲೋಕವನೆಲ್ಲ
ಗೋಳುಗುಟ್ಟಿಸುತಿರ್ದನು । ತ್ರೈಮೂರ್ತಿಗಳ್
ಕೇಳಿಂದ್ರಾದ್ಯರ ದೂರನು । ರೋಷಾಗ್ನಿಗಳನು ॥
ಮೇಲೆ ಸುರಿಯಲು ಸರ್ವರಲಿ ವಿಷ
ಜ್ವಾಲೆ ಮಹಾರೌದ್ರಸ್ವರೂಪವ
ತಾಳಿ ಮಹಿಷಾಸುರನ ಸೇನೆಯು
ಸೀಳಿ ಮಹಿಷನ ದಿಂಡುದರಿದ ತ್ರಿ
ಶೂಲಿನಿ । ಮಾತಂಗಿ ಜ್ವಾಲಾ
ಮಾಲಿನಿ। ಕಾಲಾಂತಕಿಗೆ ಆರ್ಯೆಗೆ ॥
ನೀಲದಾರತಿಯಾ—ಬೆಳಗಿರೆ ೩

ಸುಂದೋಪಸುಂದರ ನಂದನರತಿ ದರ್ಪ
ದಿಂದ ರಾಜಿಸುತಿರ್ದರು । ಕೇಳುತ ದೇವಿ
ಯಂದವನವರಿರ್ವರು । ಧೂಮ್ರಾಕ್ಷನ
ನಂದು ಕಳುಹಿಕೊಟ್ಟರು । ಬಂದಾತನಿದಿರು ॥
ನಿಂದಡಾಕ್ಷಣ ತಾಳುತತಿಖತಿ
ಯಿಂದ ಹೂಂಕೃತಿ ಗೈದ ಮಾತ್ರದಿ
ಬೆಂದು ಭಸ್ಮೀಭೂತವಾಗ
ಲ್ಕಂದು ಸಂತಸದಾಳ್ದ ತ್ರೈಪುರ
ಸುಂದರಿ । ಘೋರಾಟ್ಟಹಾಸ ಧು
ರಂಧರಿ । ನವಯೌವನಾಂಗಿಗೆ ॥
ಕುಂದಣದಾರತಿಯಾ—ಬೆಳಗಿರೆ ೪

ಭಂಡರೀರ್ವರು ಚಂಡಮುಂಡರ ಕಳುಹೆ ಬೀ
ಳ್ಕೊಂಡವರೈತಂದರು । ಕ್ರೋಧದೊಳಂದು
ಚಂಡಮುಂಡಾಸುರರು । ದೇವಿಯನಿದಿ
ರ್ಗೊಂಡು ಯುದ್ಧಕೆ ನಿಂತರು । ಬಹಳ ಕಾದಿದರು ॥
ಗಂಡುಗಲಿ ಚಂಡಾಸುರನ ಶಿರ
ಖಂಡಿಸುತ ಚಂಡಿಸ್ವರೂಪದಿ
ಮುಂಡ ಖಳನನು ಛೇದಿಸುತ ಚಾ
ಮುಂಡಿ ರೂಪವ ತಾಳ್ದ ಘನಗುಣ

ಪಂಡಿತೇ । ಭವಪಾಶ ಬಂಧನ
ಖಂಡಿತೇ । ವೇದಾಂತ ವೇದ್ಯೆಗೆ ॥
ಕುಂಡಲಿಯಾರತಿಯಾ—ಬೆಳಗಿರೆ ೫

ಮಾತೆ ಯುದ್ಧಕೆ ಬಂದ ರಕ್ತಬೀಜನ ಕೂಡೆ
ಸಪ್ತ ಮಾತೃಕೆಯರಾಗಿ । ಕಾದಿದಡವನ
ರಕ್ತವು ಬೀಳಲಾಗಿ । ಪುಟ್ಟಿದಡಾಗ
ರಕ್ತಬೀಜರು ಹೆಚ್ಚಾಗಿ । ಮುತ್ತಿ ಬರಲಾಗಿ ॥
ಚಿತ್ತದೊಳು ಖತಿವೆತ್ತು ಬಾಯಿಯ
ನೆತ್ತಿ ರಕ್ತೇಶ್ವರಿ ಸ್ವರೂಪವ
ರಕ್ತಬೀಜರನುಳಿಸದೆಲ್ಲರ
ತುತ್ತುಗೊಂಡ ಮಹಾವಿನೋದೆ ಪ್ರ
ಶಸ್ತೆಗೇ । ಪುಸ್ತಕ ವರಾಭಯ
ಹಸ್ತೆಗೇ । ಷಟ್ಚಕ್ರರೂಪೆಗೆ ॥
ಮೌಕ್ತಿಕದಾರತಿಯಾ—ಬೆಳಗಿರೆ ೬

ಡೊಂಬಿಯ ಕೇಳ್ದು ಸೇನಾಂಬುಧಿಯೊಡನೆ ನಿ
ಶುಂಭನೈತರಲು ನೋಡಿ । ಯುದ್ಧದೊಳಾ ನಿ
ಶುಂಭನ ಮುರಿದೀಡಾಡಿ । ಮೇಲಿದಿರ್ಬಂದ
ಶುಂಭನ ಶಿರ ಚೆಂಡಾಡಿ । ತಾಂಡವವನಾಡಿ ॥
ಕಂಬುಕಂಠೆ ಸಿತಾಕ್ಷೆ ನಾನಾ
ಸಂಭ್ರಮದೊಳೊಪ್ಪಿರುವ ತ್ರೈಜಗ
ದಂಬೆ ಮಹಾ ಸರಸ್ವತಿ ಸ್ವರೂಪಿಣಿ
ಅಂಬುಜಾನನೆ ರಕ್ತದಂತೆ ಮು
ಕಾಂಬಿಕೆ । ವಾಗ್ವಾದಿನೀ ನಿಟಿ
ಲಾಂಬಿಕೆ । ಸಿಂಧೂರವರ್ಣೆಗೆ ॥
ಸಂಭ್ರಮದಾರತಿಯಾ—ಬೆಳಗಿರೆ ೭

ನಿತ್ಯಮಂಗಲೆ ನಿರ್ವಿಕಾರಿಣಿ ಭಂಡಾದಿ
ದೈತ್ಯಸಂಹಾರಿಣಿಗೆ । ನಿಗಮಾಗಮ
ಸ್ತುತ್ಯೆ ಸಚ್ಚಿದಾನಂದೆಗೆ । ಹತ್ತವತಾರ
ವೆತ್ತ ನಾರಾಯಣಿಗೆ । ಪ್ರತ್ಯಗಾತುಮೆಗೆ ॥

ತತ್ತ್ವಮಸಿ ವಾಗ್ವೃತ್ತರೂಪೆ ಸ
ಮಸ್ತ ದುರಿತಧ್ವಾಂತ ದಿನಮಣಿ
ನಿತ್ಯತೃಪ್ತೆ ಗಿರೀಂದ್ರ ಸುತೆ ಸದ್
ವೃತ್ತೆ ದುರ್ಗಾಂತಕಿ ಪರಾತ್ಪರ
ಮೂರ್ತಿಗೆ । ಸಚರಾಚರದಿ ಸಂ
ಪೂರ್ತಿಗೆ । ಸಾಹಸ್ರನಾಮ್ನೆಗೆ ॥
ಪುತ್ತಳಿಯಾರತಿಯಾ—ಬೆಳಗಿರೆ ೮

ಮಂಗಲರೂಪೆ ಭುಜಂಗ ಭೂಷಣೆ ಸರ್ವ
ಮಂಗಲ ಮಾಂಗಲ್ಯೆಗೆ । ಕುಲಗುರು ಪಂಚ
ಲಿಂಗ ಮನೋಹರೆಗೆ । ಮೇನಕಾ ಪುತ್ರಿ
ಸಂಗೀತ ಸುಪ್ರೀಯೆಗೆ । ಸಿಂಹವಾಹಿನಿಗೆ ॥
ಡಿಂಗರಿಗರಿಂಗೊಲಿಯುತನುದಿನ
ಮಂಗಲವ ಪಾಲಿಸುವ ಸರ್ವೋ
ತ್ತುಂಗ ಮೂರುತಿ ಭಗವತೀ ಭ
ದ್ರಾಂಗಿ ಜಯಭೈರವಿ ಮುಕಾಂಬೆಗೆ
ಮಂಗಲಂ । ಜಯ ಸರ್ವದಾ ಶುಭ
ಮಂಗಲಂ । ಜಯವೆಂದು ಕರ್ಪುರ ॥
ಮಂಗಳಾರತಿಯಾ—ಬೆಳಗಿರೆ ೯

## 245. ಅಮ್ಮನವರ ಪುಷ್ಪ (ಪ್ರಸಾದ) ಪಾಲಿಸುವದು

ಅಂಬಾ ಪುಷ್ಪವ ಪಾಲಿಸು । ತವ ಸರದ ಮು
ಕಾಂಬಾ ಪುಷ್ಪವ ಪಾಲಿಸು ಪ

ರಾಜವಂದಿತೆ ಶ್ರೀದೇವಿ । ಮಹಾಮಾಯೆ ರಾಜ
ರಾಜವಂದಿತೆ ವೈಷ್ಣವಿ
ರಾಜನಿಭಾನನೆ ರಾಜೀವಲೋಚನೆ ॥
ರಾಜಿತೇ ಸುರಪೂಜಿತೇ ಮೃಗ
ರಾಜವಾಹಿನಿ ಹಂಸಗಾಮಿನಿ
ರಾಜರಾಜೇಶ್ವರಿ ಮಹಾಗಿರಿ
ರಾಜನಂದನೆ ರಾಜಶೇಖರೆ ೧

ಶಂಖಚಕ್ರಾಬ್ಜ ಪಾಣಿ । ಪನ್ನಗವೇಣಿ
ಕುಂಕುಮಾಂಕಿತೆ ಕಲ್ಯಾಣಿ ।
ಓಂಕಾರೇಶ್ವರಿ ದಿವ್ಯಾಲಂಕಾರ ರೂಪಿಣಿ ॥
ಶಂಕರೀ ನತಕಿಂಕರೀ ಅಭ
ಯಂಕರೀ ಅನವರತ ತವಪದ
ಪಂಕಜವನೋಲೈಸಿ ಮನದೊಳು
ಪಂಕಜಾನನ ಮುಖ್ಯರೀಕ್ಷಿಪ ೨

ದಕ್ಷನಂದನೆ ಲಾಲಿಸು । ಸಂತತ ಕಾರು
ಣ್ಯೇಕ್ಷಣದೊಳಗೀಕ್ಷಿಸು
ಪಕ್ಷಿವಾಹನೆ ಸರ್ವಸಾಕ್ಷಿರೂಪಿಣಿ ಪೋಡ ॥
ಶಾಕ್ಷರೀ ಸರ್ವಾಕ್ಷರೀ ಖಳ
ಶಿಕ್ಷಕೀ ನತರಕ್ಷಕೀ । ನಿ
ರ್ಲಕ್ಷ್ಯಮಾಡದಿರೆನ್ನ ಮನದಾ
ಪೇಕ್ಷೆಗಳು ನೆರವೇರುವಂದದೊಳ್ ೩

ಕಾದಿ[1] ದೇವಾಳಿ ನತೇ । ಭಾರ್ಗವಿ ವೇದ
ವೇದಾಂತ ಪ್ರತಿಪಾದಿತೆ
ಸಾಧುಸನ್ನುತೆ ಶಿವೆ ಮಾಧವಿ ವಿಶ್ವ ವಿ ॥
ನೋದಿನೀ ಭವ ಭೇದಿನೀ ರಿಪು
ಛೇದಿನೀ ನಿಗಮಾಗಮಾರ್ಚಿತೆ
ಆದಿ ಮಧ್ಯಾಂತಂಗಳಿಲ್ಲದ
ನಾದ ಬಿಂದು ಕಲಾಸ್ವರೂಪಿಣಿ ೪

ವಾಂಛಿತಪ್ರದೆ ಚಿದ್ರೂಪೆ । ಷಟ್ಚಕ್ರರೂಪಿಣಿ
ಪಂಚಬ್ರಹ್ಮಸ್ವರೂಪೆ ।
ಕಾಂಚನಮೂರ್ತಿ ಪ್ರಪಂಚರೂಪಿಣಿಯೆನ್ನ ॥
ಸಂಚಿತಾಘವ ಹಿಂಚಿ ತಾ ನಿ
ಶ್ಚಂಚಲತ್ವವನೊಲಿದು ಕುಲಗುರು
ಪಂಚಲಿಂಗೇಶನ ಮನೋಹರೆ
ಪಂಚಪಂಚಾತೀತೆ ಪರಶಿವೆ ೫

1 ಕಾದಿ—ವಿಷ್ಣು ಮುಂತಾದ.

## 246. ಧಾನ್ಯಲಕ್ಷ್ಮೀ ಪೂಜೆ (ಕದಿರು ಹಾಡು)

ಶ್ರೀಸರ್ವಸೌಭಾಗ್ಯ ಮೂಲ
ವಾಸವೆನಿಸುವ ವಿಶಾಲ
ಈ ಶಾಲಿಯ ತೆನೆ ವರವನಮಾಲ
ನಾ ಶೋಭಸ್ಕರ ರಚನೆಯ ಜಾಲ
ಭಾಸುರ ಪೀಠದಿ ನೆಲೆಗೈಯುತ ಮಿಗೆ ॥
ತೋಷದೊಳರ್ಚಿಸುತ—ಎರಗುತ್ತ ೧

ಫಲ ನೈವೇದ್ಯವ ಸಮರ್ಪಿಸುತ
ಒಲಿದು ದೀಪವನೆ ಬೆಳಗುತ
ನಲಿದು ಧೂಪವು ನೀರಾಂಜನ ಸಹಿತ
ಬಲು ವಿನಯದಿ ಬೆಳಗಿಯೆ ಪ್ರಾರ್ಥಿಸುತ
ಕಲಿ ಮಹಿಮೆಯನಪಹರಿಸಿಯೆ ಶುಭದಿನ ॥
ದಲಿ ನಮ್ಮನೆಯೊಳಗೆ—ನೆಲೆಯಾಗೆ ೨

ಕಾಶೀಪುರದಿ ನೆಲೆಯಾಗಿ
ದೇಶದೇಶದ ಜನಕಾಗಿ
ಬೇಸರವಾದ ಕ್ಲೇಶವ ನೀಗಿ
ದೋಷವನೆಣಿಸದೆ ಬಲು ದಯವಾಗಿ
ಲೇಸ ತೋರುವ ಅನ್ನಪೂರ್ಣೇಶ್ವರಿಯೆ ವಿ ॥
ಲಾಸದಿ ದಯವಾಗ ಲೆಮಗೀಗ ೩

## 247. ಕದಿರು ತರುವದು

ಶ್ರೀಮದ್ಗುರು ಗಣಪತಿಯರ ವಂದಿಸಿ
ಶ್ರೀಮನೋಹರಿಯ ಕೊಂಡಾಡುವೆನು
ಪ್ರೇಮದಿ ಸ್ತುತಿಗಳ ಮಾಡುವೆನು
ಕಾಮಿನಿ ಮಣಿ ಮಹಾಲಕ್ಷ್ಮಿಯನಿದಿಗೊರ್ಂ
ಡಾ ಮಹಿಮೆಯೊಳರಮನೆ ಗೈದುತ ಬರು ॥
ವಾ ಮಹಾಸಂಭ್ರಮವ—ಪೊಗಳುವೆ ೧

ಚಿನ್ನದ ಹರಿವಾಣದಲಿ ತಂದಿರಿಸುತ[1]
ಕನ್ನೆ ಮಾಲಕ್ಷ್ಮಿಯು ಹರುಷದಲಿ
ಮನ್ನಿಸಿ ಕೊಂಬುವಾದ್ಯಂಗಳಲಿ
ಇನ್ನು ತಾವನುದಿನ ಅನ್ನಪೂರ್ಣೆಯ ಬಲು
ಮನ್ನಣೆಯಿಂದಿದಿಗೊಂಡು ವಿಲಾಸದಿ ॥
ಚಿನ್ನದ ಮಣೆ ಮೇಲೆ—ಇರಿಸ್ಯಾರು ೨

ಪರಿಪರಿವಾದ್ಯ ಸಂಗೀತದ ರವದಲಿ
ತರುಣಿ ಮಾಲಕ್ಷ್ಮಿಯು ಪೂಜಿಸುತ
ವರ ನೈವೇದ್ಯವ ಮಾಡಿಸುತ
ಹರುಷದಿ ಷಡ್ರಸ ಪರಮಾನ್ನವ ಮುರ
ಹರನ ರಮಣಿಗತಿ ತಾಂಬೂಲಗಳನು ॥
ಇರಿಸಿ ಪೂಜಿಸಿದರೊಲಪಿಂದ ೩

ಧೂಪದೀಪಗಳಿಂದಾರಾಧನೆ ಗೈ
ದಾ ಪರಿವಸ್ತುಗಳರ್ಪಿಸುತ
ಈ ಪರಿಯಲಿ ಜನ ವಂದಿಸುತ
ಭೂಪಾಲಕರತಿ ಹರುಷದಿ ನುತಿಸುತ
ಗೋಪಾಲನ ಮಡದಿಯ ಕೊಂಡಾಡುತ ॥
ಪಾಪ ತೀರಲ್ಕೇ—ಜಯವೆಂದು[2] ೪

ಸುರಪಾಲಿನಿ ಜಯ ನರಪಾಲಿನಿ ಜಯ
ದುರಿತವಿನಾಶಿನಿ[3] ಜಯಜಯವೇ
ಧರೆಯೊಳು ಪಾಹಿ ನೀ ಜಯ ಜಯವೇ[4]
ತರತರದಲಿ ವರ ಕೊಡುವವಳಿಗೆ ಜಯ
ವರಪತಿ ನಾರಾಯಣ ಶ್ರೀ ಜಯ ಜಯ ॥
ವರ ಪಾಲಿಸೆನಗೇ—ಜಯ ಜಯ ೫

1 ತುಂಬಿರಿಸುತ. 2 ಜಯ ಜಯ. 3 ದುರಿತಾಪಹಾರಿಣಿ. 4 ಧರೆಯೊಳು ಪಾಲಿಸಿ ಜಯತರದಿಂದಲಿ.

## 248. ಕದಿರಿಗೆ ಆರತಿ

ಶ್ರೀಗಜವದನನ ಅಡಿಗೆರಗಿ
ವಸುದೇವಸುತನ ಸಿರಿಗಾಗಿ
ಬಿಸಜಾಕ್ಷಿಯರತಿ ಕುಶಲದೊಳಿದಿರ್ಗೊಂ
ಡರಸಿ ಮಾಲಕ್ಷ್ಮಿಯ ಪಾಡುತ ಪೊಗಳುತ ॥
ಕುಶಲದಾರತಿಯಾ—ಬೆಳಗಿರೆ ೧

ಕನ್ನೆಯ ಮಾಸದೊಳನುದಿನದಿ
ಪನ್ನಗ ಶಯನನ ಸಿರಿ ಮುದದಿ
ಚಿನ್ನದ ಸಮನಾಗಿಯೆ ಬೆಳೆದಿರಲು
ಕನ್ನೆಯರತಿ ತಾಂಬೂಲವ ಕೊಡಿಸಿದು ॥
ಚಿನ್ನದಾರತಿಯಾ—ಬೆಳಗಿರೆ ೨

ಗಂಧ ಕಸ್ತೂರಿ ಕುಂಕುಮದಿಂದ
ಮಂದಗಮನೆ ಪೂಜೆಗಳಿಂದ
ಇಂದಿರೆ ದೇವಿಯು ಮನೆಯೊಳಗೊಲಿಯಲಿ
ಎಂದು ನುತಿಸಿದರು ಜಯ ಜಯವೆನ್ನುತ ॥
ಕುಂದಣದಾರತಿಯಾ—ಬೆಳಗಿರೆ ೩

## 249. ಹೊಸ್ತಿನ ದಿವಸ ಅನ್ನದೇವರಿಗೆ ಆರತಿ

ಶ್ರೀಗುರು ಹರಿ ಲೀಲೆಯನು
ಸಾಗಿಸಲೆಂದು ಲೋಕವನು ॥
ಭೋಗದೊಳುದ್ಧರಿಸಿದ ಯತ್ನವನು
ಯೋಗದೊಳರಿತೀ ಯವರೂಪವನು
ಬೇಗದೊಳಾಂತತಿ ಪುಷ್ಟಿಯನೀಯುವ ॥
ಯೋಗಿನಿಗಾರತಿಯಾ—ಬೆಳಗಿರೆ ೧

ಧಾನ್ಯವೆನಿಸಿ ಲೋಕದೊಳು
ಮಾನ್ಯರನತಿ ಕರುಣದೊಳು ॥
ದೈನ್ಯಯುತರ ಸಲಹುವ ರೀತಿಯೊಳು

ಹೂನ್ನ್ಯವನುಳಿಸಿಯೆ ಬಲು ಚೆಂದದೊಳು
ಹೈನ್ನ್ಯವನಿತ್ತೆಲ್ಲರ ಸಲಹುವ ಚೈ ॥
ತನ್ನೆಗಾರತಿಯಾ—ಬೆಳಗಿರೆ ೨

ಅನ್ನವಾಗಿಯೆ ಮೆರೆದಿರುವ
ಅನ್ನಪೂರ್ಣೆಯೆ ಕೊಡು ಶುಭವ ॥
ಪನ್ನಗವೇಣಿ ಮಹೇಶ್ವರಿ ತಾಯೆ
ಸನ್ನುತೆ ಶರಣಮನೋಹರೆ ಕಾಯೆ
ಮನ್ನಿಸಿ ಸಲಹೆಂದೆನ್ನುತ ಗುಣಸಂ ॥
ಪನ್ನೆಗಾರತಿಯಾ—ಬೆಳಗಿರೆ ೩

ಬಳಿಕ ತಂಡುಲವೆಂದೆನಿಸಿ
ಬೆಳಗುವ ಲೋಕದೊಳುದಿಸಿ ॥
ಇಳೆಯೊಳು ಪೂಜ್ಯೆಯಾಗಿಯೆ ಸಾಂಗದೊಳು
ಹೊಳೆಯುತ ಕಂಡುಕೊಳಲು ಹರುಷದೊಳು
ಬರಲಕ್ಷಯದ ಸರ್ವಾರಂಭದ ॥
ಲಲನೆಗಾರತಿಯಾ—ಬೆಳಗಿರೆ ೪

ಮತ್ತೆ ಮಾನವರರದ ಕಂಡು
ಬಿತ್ತಲು ಧರೆಯೊಳೈತಂದು ॥
ಉತ್ತಮವೆಂದೆನಿಸುತ ವರ್ಧಿಸುತ
ಸುತ್ತಲು ಶಾಲ್ಯನ್ನವ ರಕ್ಷಿಸುತ
ಹೆತ್ತವಳಂದದಿ ಸರ್ವರ ಸಲಹುವ ॥
ಶಕ್ತಿನಿಗಾರತಿಯಾ—ಬೆಳಗಿರೆ ೫

## 250. ಸರಸ್ವತಿ ಪೂಜೆ—ಆರತಿ

ಆರತಿ ಭಾರತಿಗೇ ಸರಸ್ವತಿಗೇ
ನುತ । ಶಾಸ್ತ್ರಿಗೇ । ಸ್ತುತಿ । ಪಾತ್ರಗೇ ಪ

ಶರಣಮಾನಸ ದುರಿತ ತಾಪವ
ಕರುಣಾವರ್ಷವ ಸುರಿಸಿ ಕಳೆವಾ
ವರ । ದಾತೆಗೇ । ವಿ । ಖ್ಯಾತೆಗೇ ೧

ರಸಿಕರಸನಾ ವಸತಿ ಸಹಿತೇ
ರಸವಚನದಾ ಮಿಸುನಿ ವಸನೇ
ಶುಭ । ಗಾನೆಗೇ । ಬ್ರ । ಹ್ಮಾಣಿಗೇ ೨

ನೀರಜಜ ಮುಖ ನೀರಜ ಸ್ಥಿತೆ
ನೀರಜೋಗುಣೆ ನೀರಜ ದ್ವಿ
ಣ್ಮುಖ । ಭಾಸೆಗೇ । ಗತ । ದೋಷೆಗೇ ೩

ಮಂಗಳದ ರುತಿ ಮಂಗಳಾರತಿ
ಮಂಗಳ ಸ್ತುತಿ ಮಂಗಳದೆಗೇ
ಶುಭ । ಮಂಗಳಂ । ಜಯ । ಮಂಗಳಂ ೪

## 251. ಸರಸ್ವತಿಯಲ್ಲಿ ಹೂ ಬೇಡುವದು

ನೀಡೇ ವಾಣೀ ಬೇಗ ಹೂವನು । ಈಗ
ಬೇಡುವೆ ಮಾಡು ನೀ ದಯವನು । ನಿನ್ನ
ಹಾಡಿ ಕೊಂಡಾಡಿಯೆ ಬೇಡುವೆ ವರವನು ಪ

ವೀಣಾಪಾಣಿಯೆ ವಾಣಿ ಶಾರದೆ । ಬಲು
ಜಾಣೆ ನಿನ್ನೊಳಿಂದು ಬೇಡುವೆ । ಸರ್ವ
ಕ್ಷೋಣಿ ಸಂಪೂಜಿತೆ ನೀಡು ಮಲ್ಲಿಗೆ ಹೂವ ೧

ಅಂಬುಜಾಂಬಕಿ ಅಮರ ಸೇವಿತೆ । ನಿನ್ನ
ನಂಬಿ ಭಕ್ತಿಯೊಳಿಂದು ಪೂಜಿಪೆ । ದೇವಿ
ಅಂಬುಜೋದ್ಭವ ರಾಣಿ ಅಂಬುಜ ಸುಮವನು ೨

ಶುಂಭನಿಶುಂಭರ ಗೆಲಿದಳೇ । ನತಕ
ದಂಬಕ್ಕೆ ವಾಂಛಿತ ವರದಳೇ । ತಾಯೆ
ಕುಂಬಿಟ್ಟು ಬೇಡುವೆ ನೀಡೇ ಕೇದಗೆ ಹೂವ ೩

## 252. ಶಾರದಾ ವಿಸರ್ಜನೆ

ಪೋಗಿ ಬಾರಮ್ಮ ಶಾರದೆಯೆ । ನಿನ್ನ
ಯೋಗಮಂಟರಕಾಗಿ ಹೇಮಹಾಮಾಯೆ
ಸಾಗಿ ನಿನ್ನನು ಭಕ್ತಿರಾಗದಿಂದೆರಗುವೆ
ಬೇಗ ಸಂತೈಸೆಮ್ಮ ಆಗುಹೋಗುಗಳನು ಅ ಪ

ಜನನಿ ನಾ ಬಿಟ್ಟಿರಲಾರೆ । ಎನ್ನ
ಮನವೆಲ್ಲ ನಿನ್ನೊಳಗಾದುದು ಸೂರೆ
ಕನಕಾಂಗಿ ಎನ್ನಯ ಮನ ನಿನ್ನೊಳಿರಿಸುವೆ
ತನುವಿನೊಳೈಕ್ಯವಾಗನುದಿನ ನಂಬಿದೆ ೧

ಸಾಕಮ್ಮ ಭವದ ಕೋಟಲೆಯು । ಎನ್ನ
ನೇಕಿಷ್ಟು ದಣಿನುತಲಿರುವೆ ಇಳೆಯೊಳು
ಶ್ರೀಕರ ಮುಖಿಯೆ ಸದ್ಭಕ್ತಿಯನೆನಗಿತ್ತು
ಸಾಕಿ ಸಲಹು ಕರಕಮಲದೊಳಿಟ್ಟು ೨

ಮಾಡು ಮಂಗಲವ ಮನ್ಮತದ । ಇಷ್ಟ
ನೀಡುತ್ತ ಪೊರೆಯಮ್ಮ ಯೀ ಸರ್ವಜಗವ
ನಾಡು ಬೀಡಿನ ಕಷ್ಟ ನೋಡಲಾರೆನು ತಾಯೆ
ಬೇಡುವೆ ನಿನ್ನಯ ಗುಡಿಯೊಳೆ ನೆಲಸುತ್ತ ೩

## 253. ಬಲೀಂದ್ರ ಬಂದದ್ದು

ಆ ಮಹಾ ಬಾಗಿಲ ಕಾಯ್ವ ಶ್ರೀವಿಷ್ಣು ಭಕ್ತನೆಂದೆನಿಸಿ
ಭೂಮಿಪಾಲಿಪ ದೊರೆಯೆನಿಸಿ । ಬಲಿ ಬಂದನೆ ಅರಮನೆಗೆ ಪ

ಸೃಷ್ಟಿಯಾಳುವ ಶ್ರೀಹರಿಯ ಭಕ್ತ ಬಲೀಂದ್ರನೆಂದೆನಿಸಿ
ಮತ್ತೆ ಪೋಗಿ ಪಾತಾಳಕ್ಕೆ । ಬಲಿ ಬಂದನೆ ಅರಮನೆಗೆ ೧

ಧರೆಯೊಳಧಿಕನೆಂದೆನಿಸಿ ಪೊಡವಿಗೆ ದೊರೆಯೆಂದೆನಿಸಿ
ಆ ಮಹಾ ಬಾಗಿಲ ಕಾಯ್ದು । ಬಲಿ ಬಂದನೆ ಅರಮನೆಗೆ ೨

ಸತ್ಯವ ಮೆರೆಸಬೇಕೆನುತ ತಾನುದಿಸಿದ ಶ್ರೀಹರಿಯು
ಅದಿತಿಯ ಗರ್ಭದಿ ವಾಮನನಾಗಿ । ನಸುನಗುತ ತಾಯೊಡನೆಂದ ೩

ಲೇಸು ಲೇಸೆಲೆ ತಾಯೆ ನಿನ್ನ ಉದರದಿ ಜನಿಸಿ ಬಂದಿಹೆನು
ಮೂರಡಿ ದಾನವ ದಾನವರರಸನೊಳ್ । ಬೇಡುವೆ ಧರೆಯೊಳಗೆಂದ ೪

ಬಂದನೆ ಬಲಿಯರಮನೆಗೆ ನಿಂದು ಕೇಳಿದನೆ ಮೂರಡಿಯ
ಇಂದೀಗ ಮೂರಡಿ ಧಾರಿಣಿಯನ್ನು । ಕುಂದದೀಕ್ಷಣ ಕೊಡು ಎಂದ ೫

ಆಗ ಮೂರಡಿ ಧಾರಿಣಿಯು ಸಾಲದೆ ಮನದಲಿ ನೊಂದು
ಬೇಗನೆ ತಲೆಯನ್ನೊಡ್ಡಿದ । ಬಲಿ ಬಂದನೆ ಅರಮನೆಗೆ ೬

ಅಂದು ಪಾತಾಳ ಲೋಕದಲಿ ನಿಂದು ಬಾಗಿಲ ಕಾಯ್ದ ಹರಿಯು
ಇಂದು ಲೋಕವ ನೋಡಲೆಂದು । ಬಲಿ ಬಂದನೆ ಅರಮನೆಗೆ ೭

ಕಾರ್ತಿಕ ಮಾಸ ಶುದ್ಧದಲಿ ಧರೆಯಲಿ ಮೂರು ದಿನದಲಿ
ಧರೆಯ ಜನರಿಗೆದುರಾಗಿ । ಬಲಿ ಬಂದನೆ ಅರಮನೆಗೆ ೮

## 254. ಬಲಿಗೆ ನೈವೇದ್ಯ

ಅಮೃತಾನ್ನವನುಣ್ಣೊ ಆನಂದ ಭರಿತ
ಘನವಾಗಿ ಗೈದು ಭಕ್ತರು ತಂದ ಪಾಕ ಪ

ತುಪ್ಪದೊಗ್ಗರಣೆಯ ಬುತ್ಯನ್ನ ದೋಸೆ
ಇಪ್ಪ ಪಲಕ್ಕಿಯು ಪರಿಮಳ ಸೂಸೆ
ರುಚಿಯಪ್ಪ ಹೂರಣ ಕಡುಬು ಪರಾಕೆ
ಒಪ್ಪುವುದಪರಂಜಿ ಪಾತ್ರೆಯೊಳ್ ಜೋಕೆ ೧

ಅಲಸದೆ ಗೈದಿಹ ಕಲಸನ್ನ ನಿನಗೆ
ಸಲಿಸುವೆ ಸಣ್ಣಕ್ಕಿ ಕಳಮಾನ್ನದೊಡನೆ
ತಳತಳಿಸುವ ಗಂಗಳ ತೊಳೆದಿಕ್ಕಿ
ಬಲಿಚಕ್ರವರ್ತಿ ನಿನ್ನೊಲುಮೆಯೊಳರ್ಥಿ ೨

ಹಾಲಿನ ಮೇಲಿನ ಕೆನೆಮೊಸರಿಟ್ಟೆ
ಮೇಲಾಗಿರುವ ಅಪೂಪವ ಸುಟ್ಟೆ
ಕಾಲ ಮೀರದೆಯೆ ಸ್ವೀಕರಿಸು ಸನ್ನಿಷ್ಟ
ಪಾಲಿಸು ಕೃಪೆಯಿಂದಮ್ಮನು ಶಿಷ್ಟ ೩

## 255. ಬಲೀಂದ್ರನಿಗೆ ಆರತಿ

ಶ್ರೀಪತಿ ಭಕ್ತ ಬಲೀಂದ್ರನಿಗೆ
ಶ್ರೀಪತಿಯನ್ನೊಡಗೊಂಡನಿಗೆ
ಆ ಪಾತಾಳದಿ ವಾಸವ ಗೈದಗೆ
ಶ್ರೀಪತಿಯರ್ಚನೆ ನಿತ್ಯವೂ ಗೈವಗೆ ॥
ಧೂಪದಾರತಿಯಾ—ಬೆಳಗಿರೆ ೧

ಮೂರಡಿ ದಾನವ ಬೇಡಿದಗೆ
ಮಾರಜನಕ ದಯೆದೋರಿದಗೆ
ಧಾರೆಯೆರೆದು ಮೂರಡಿ ನೆಲವಿತ್ತಗೆ
ಧಾರಿಣಿ ಸಾಲದೆ ತಲೆಯೊಡ್ಡಿದ ದಯಾ ॥
ಸಾರನಿಗಾರತಿಯಾ—ಬೆಳಗಿರೆ ೨

ವರ ಕಾರ್ತಿಕದ ಮಾಸದಲಿ
ಧರೆಯೊಳು ಮೂರು ದಿನಗಳಲಿ
ಧರೆಯ ಜನರ ದೀಪಾರಾಧನೆಗಳ
ಹೊಗಳಿಸಿ ಹೊಗಳಿಸಿಕೊಂಬ ಬಲೀಂದ್ರಗೆ ॥
ಹರಳಿನಾರತಿಯಾ—ಬೆಳಗಿರೆ ೩

## 256. ಗೋಪೂಜೆ ಮಾಡುವದು (ಪೂಜಾಮಹಿಮೆ)

ಗಜವದನನ ಪಾದಕೆ ಎರಗುವೆನು
ಅಜ ಶಾರದೆಗೆ ವಂದನೆಯ ಮಾಡುವೆನು
ದ್ವಿಜರೆಲ್ಲ ಕೂಡಿ ಮುದದಿಂದ—
ಮುದದಿಂ ಗೋಪೂಜೆಯ ಮಾಡುವ
ಪದನ ಹೇಳುವೆನು—ಮುದದಿಂದ ೧

ಹಸ್ತಿಮುಖನ ಪಾದಕೆ ಎರಗುವೆನು
ಹಸ್ತವ ಮುಗಿದು ವಂದನೆಯ ಮಾಡುವೆನು
ದ್ವಿಜರೆಲ್ಲ ಕೂಡಿ ಮುದದಿಂದ—
ಮುದದಿಂ ಗೋಪೂಜೆಯ ಮಾಡುವ
ಪದನ ಹೇಳುವೆನು—ಶುಭದಿಂದ ೨

ಕಾರ್ತಿಕ ಶುದ್ಧದ ಪಾಡ್ಯವಾಗಿರಲು
ಸ್ವಾತಿಯ ನಕ್ಷತ್ರವು ಬಂದಿರಲು
ಗೋಪೂಜೆಯ ಮಾಡಲಿಕೆ—ಕರ ಲೇಸು—
ಕರ ಲೇಸೆಂದೆನುತಲೆ
ಕಾಂತೆಯರೊಡನೆ—ನುಡಿದನೆ ೩

ಎಂದ ಮಾತನು ಕೇಳಿ ಮಡದಿಯರೆಲ್ಲ
ಮಿಂದು ಮಡಿಯನುಟ್ಟು ಸಡಗರದಿಂದ
ಕಡಗ ಹಿಂಬಳೆಯೇ ಹೊಳೆಯುತ್ತ—
ಹೊಳೆಯುತ್ತ ನಾರಿಯರು
ದೇವಿಗಡಿಗೆಯನೇ—ಸಮೆದರೆ ೪

ಮಡದಿಯರೆಲ್ಲರು ತಡೆಯದೆ ಬಂದು
ಕಡುಬು ಕಜ್ಜಾಯಂಗಳ ಸಮೆದಿಡಲು
ತಡವೇತಕಿನ್ನು ಎನುತಲೆ—
ಎನುತ ಗೋಪೂಜೆಗೆ
ತೊಡಗಲಾಯ್ತೆಂದೇ—ನುಡಿದರೆ ೫

ನುಡಿದ ಮಾತನು ಕೇಳಿ ಮಿಂದು ಮಡಿಯನುಟ್ಟು
ಗಂಧಾಕ್ಷತೆ ಪುಷ್ಪ ಧೂಪ ದೀಪಗಳನು
ಚಂದದಿ ಕರದೊಳಗೆ ಧರಿಸುತ್ತ—
ಧರಿಸುತ್ತ ನಡೆತಂದರೆ
ಗೋವಿನ ಪೂಜೆಗನುವಾಗಿ ೬

ಹಂಡಿ ಆಕಳಿಗೆ ದಂಡೆ ಕಟ್ಟಿದರೆ
ಕಾಳಿ ಆಕಳಿಗೆ ದಂಡೆ ಕಟ್ಟಿದರೆ

ಕಾಳಿಯು ಕಾಳ ಕರುವಿನ—
ಕರುವಿನ ತಂಡಕ್ಕೆ
ದಂಡೆ ಕಟ್ಟಿದರೆ—ಶುಭದಿಂದ ೭

ಕಾಯನೊಡೆದು ಗೋಪೂಜೆ ಮಾಡಿದರೆ
ಗೋವಿಗೆ ಗೋಗ್ರಾಸವ ಬಡಿಸಿದರೆ
ಕಾಮಿತ ಫಲವ ಕೊಡುವಂಥ—
ಕೊಡುವ ಗೋಮೂರ್ತಿಗಳಿಗೆ
ಚಂದದಾರತಿಯಾ—ಬೆಳಗಿರೆ ೮

ಕಣ್ಣಿನಲ್ಲಿರುವ ಸೂರ್ಯಚಂದ್ರರಿಗೆ
ಕೋಡಿನಲ್ಲಿರುವ ಯಮಧರ್ಮರಿಗೆ
ನಾಭಿಯಲ್ಲಿರುವ ನರಹರಿ—
ನರಹರಿ ನಾರಾಯಣರಿಗೆ
ಚಂದದಾರತಿಯಾ—ಬೆಳಗಿರೆ ೯

ಬಾಲದಲ್ಲಿರುವ ಭಾಗೀರಥಿಗೆ
ಪಾದದಲ್ಲಿರುವ ದಿಕ್ಪಾಲಕರಿಗೆ
ಬೆನ್ನಿನಲ್ಲಿರುವ ಪರಬ್ರಹ್ಮ—
ಪರಬ್ರಹ್ಮ ಮೂರುತಿಗೆ
ಚಂದದೊಳಾರತಿಯಾ—ಬೆಳಗಿರೆ ೧೦

ಮುಟ್ಟಿ ಪ್ರದಕ್ಷಿಣೆ ಮಾಡಿದ ಜನರಿಗೆ
ಸಪ್ತ ಜನ್ಮದ ಪಾಪ ಪರಿಯಾರವಕ್ಕು
ಮುತ್ತಿನಾರತಿಯಾ ಬೆಳಗಿದರೆ—
ಬೆಳಗಿ ಕೈಮುಗಿದರೆ
ದೇವಲೋಕವೇ—ದೊರೆವದು ೧೧

ಏಳು ಪ್ರದಕ್ಷಿಣೆ ಮಾಡಿದವರಿಗೆ
ಮೂರು ಜನ್ಮದ ಪಾಪ ಪರಿಹಾರವಕ್ಕು
ಹರಳಿನಾರತಿಯಾ ಬೆಳಗಿದರೆ—
ಬೆಳಗಿ ಕೈಮುಗಿದರೆ
ದೇವಲೋಕವೇ—ದೊರೆವದು ೧೨

ಆರು ಪ್ರದಕ್ಷಿಣೆ ಮಾಡಿದವರಿಗೆ
ಸಪ್ತ ಜನ್ಮದ ಪಾಪ ಪರಿಹಾರವಕ್ಕು
ಹೂವಿನಾರತಿಯಾ ಬೆಳಗಿದರೆ—
ಬೆಳಗಿ ಕೈ ಮುಗಿದರೆ
ಇಂದ್ರನ ಲೋಕ—ದೊರೆವದು ೧೩

## 257. ಗೋಪೂಜೆ

ಕಾರ್ತಿಕ ಶುದ್ಧ ಪಾಡ್ಯ ಸ್ವಾತಿಯ ನಕ್ಷತ್ರ
ಗೋಪೂಜೆಗಿದುವೇ ಕರ ಲೇಸು—ಎಂದಪ್ಪಯ್ಯ
ಕಾಂತೆಯರೊಡನೆ—ನುಡಿದನು ೧

ನಕ್ಷತ್ರವಡಗಿದ ಪುಷ್ಪಗಳರಳಿದ
ಪಕ್ಷಿಗಳು ಕೂಗಿ ಬೆಳಗಾದ—ಜಾವದಲಿ
ಮಿತ್ರೆಯರೇಳಿ—ಎನುತಿದ್ದ ೨

ತಾರಕಿ ಅಡಗಿದ ತಾವರೆ ಅರಳಿದ
ಕೋಗಿಲೆ ಕೂಗಿ ಬೆಳಗಾದ—ಜಾವದಲಿ
ನಾರಿಯರೇಳಿ—ಎನುತಿರ್ದ ೩

ಅಕ್ಕಂದಿರೆಲ್ಲರು ಚೆಚ್ಚರನೆ ಏಳಿರಿ
ಎತ್ತಿಗೆ ನೀರ ಹದಮಾಡಿ—ಕೊಡಿರೆಂದು
ಅಕ್ಕಂದಿರೊಡನೆ—ನುಡಿದನು ೪

ತಾಯಂದಿರೆಲ್ಲರು ಬೇಗದಿಂದೇಳಿರಿ
ಗೋವಿಗೆ ನೀರ ಹದಮಾಡಿ—ಕೊಡಿರೆಂದು
ತಾಯಂದಿರೊಡನೆ—ನುಡಿದನು ೫

ಉತ್ತಮರ ಮನೆ ಬಚ್ಚಲ ಎಪ್ಪತ್ತು ಗಾವುದ
ಮಿತ್ರೆಯರು ಹೋಗಿ ಮಡಿಯುಟ್ಟು—ಗೋವಿಗೆ
ಒಪ್ಪಕೊಂದಡಿಗೆ—ಸಮೆದವು ೬

ವರುಷಕ್ಕೆ ಬರುವುದು ಅರಸು ದೀವಾಳಿಗೆ
ಅರಿಸಿನ ಉದ್ದಿ ಮಡಿಯುಟ್ಟು—ಗೋವಿಗೆ
ವರುಷಕೊಂದಡಿಗೆ—ಸಮೆದವು ೮

ಕಾಲಕ್ಕೆ ಬರುವುದು ರಾಯ ದೀವಾಳಿಗೆ
ಕಾಲುಂಗುರವಿಟ್ಟು ಮಡಿಯುಟ್ಟು—ಗೋವಿಗೆ
ಕಾಲಕೊಂದಡಿಗೆ—ಸಮೆದವು ೯

ಇಂದು ಗೋವಿನ ಹಬ್ಬ ಎಂದ ಸುದ್ದಿಯ ಕೇಳಿ
ಅಂಗಡಿಯ ಮುಂದೆ ಬರುವಾಗ—ಅಪ್ಪಯ್ಯ
ಉಂಗುರ ಬಿದ್ದು ಹೋದುದರಿಯನೆ ೧೦

ನಾಳೆ ಗೋವಿನ ಹಬ್ಬ ಹೇಳಿ ಸುದ್ದಿಯ ಕೇಳಿ
ಚಾವಡಿಯ ಮುಂದೆ ಬರುವಾಗ—ಮಾವಯ್ಯ
ನೇವಳ ಬಿದ್ದು ಹೋಮುದರಿಯನೆ ೧೧

ಗುತ್ತಿಯ ಹೊಳೆಯಲಿ ಎತ್ತು ಮೈತೊಳೆದವು
ಮುತ್ತಿನ ಸರಗಂಟೆ ಮರೆತರು—ಬಂದೈದರೆ
ಈಗಾಳ ಕಳುಹಿ—ತರಿಸಿದ ೧೨

ಗೋವೆಯ ಹೊಳೆಯಲಿ ಗೋವು ಮೈತೊಳೆದವು
ಹೂವಿನ ಸರಗಂಟೆ ಮರೆತರು—ಬಂದೈದರೆ
ಈಗಾಳ ಕಳುಹಿ—ತರಿಸಿದ ೧೩

ಗುತ್ತಿನ ಹೊಳೆಯಲಿ ಎತ್ತು ಮೈತೊಳೆದವು
ಮುತ್ತಿನ ದಾಬಿಕ್ಕಿ ಹೊಡೆತನ್ನಿ—ನಮ್ಮನೆಯ
ಚಿತ್ತಾರ ಬರೆದ—ಜಗಲಿಗೆ ೧೪

ಗೋವೆಯ ಹೊಳೆಯಲಿ ಗೋವು ಮೈತೊಳೆದವು
ಹೂವಿನ ದಾಬಿಕ್ಕಿ ಹೊಡೆತನ್ನಿ—ನಮ್ಮನೆಯ
ರೂವಾರ ಬರೆದ—ಜಗಲಿಗೆ ೧೫

ಶುಕ್ರರ ವಾರಾಗಿ ಹೋದಾವೆ ಹಳ್ಳಕ್ಕೆ
ಎತ್ತುಗಳೆಲ್ಲ ಮೈತೊಳೆದು—ನಿಂದವು
ಶುಕ್ರುಮದೇವರಿಗೆ—ಎದುರಾಗಿ ೧೬

ಮಂಗಳವಾರಾಗಿ ಹೋದಾವೆ ಹಳ್ಳಕ್ಕೆ
ಗೋವುಗಳೆಲ್ಲ ಮೈತೊಳೆದು—ಬಂದವು
ಸೂರ್ಯಮ ದೇವರಿಗೆ—ಎದುರಾಗಿ ೧೭

ಮುತ್ತಿನ ಹರಿವಾಣದಿ ಸೇಡಿ ಕೆಮ್ಮಣ್ಣು ತುಂಬಿ
ಉತ್ತಮರು ಕಡೆದ ಮರಸಿದ್ದೆ—ತೆಕ್ಕೊಂಡು
ಗೋವಿಗೆ ಬಚನ—ಬಡಿದರು[1] ೧೮

ಹೂವಿನ ಹರಿವಾಣದಿ ಆಯುಳ್ಳ ಸೇಡಿಯ ತುಂಬಿ
ಮಾರಾಯರು ಕಡೆದ ಮರಸಿದ್ದೆ—ತೆಕ್ಕೊಂಡು
ಗೋವಿಗೆ ಬಚನ—ಬಡಿದರು ೧೯

ಮುತ್ತಿನ ಹರಿವಾಣದಿ ಅಚ್ಚುಳ್ಳ ಮಣ್ಣುಂಬಿ
ಇಂದು ತಮ್ಮ ಮನೆಯ ಗೋವಿಂಗೆ—ಎಲ್ಲವಕೆ
ಹರಸಿ ಬಚ್ಚನೆಯನಿಕ್ಕಿದರು ೨೦

ಮುತ್ತಿನ ಹೊಸ ಕುಕ್ಕೆಯಲಿ ಅಚ್ಚಡಕೆ ದಂಡೆ ತುಂಬಿ
ಇಂದು ತಮ್ಮ ಮನೆಯ ಗೋವಿಂಗೆ—ಎಲ್ಲವಕೆ
ಹರಸಿ ದಂಡೆಯನೆ—ಕಟ್ಟಿದರು ೨೧

ಹೂವಿನ ಹೊಸ ಕುಕ್ಕೆಯಲಿ ಕಾಯಡಕೆ ದಂಡೆಯ ತುಂಬಿ
ಈಗ ತಮ್ಮ ಮನೆಯ ಗೋವಿಂಗೆ—ಎಲ್ಲವಕೆ
ಹರಸಿ ದಂಡೆಯನು—ಕಟ್ಟಿದರು ೨೨

ಲಕವಳ್ಳಿ ಎಲೆಯಲಿ ನಾಗಳ ಅಕ್ಕಿಯ ರೊಟ್ಟಿ
ಅಚ್ಚ ಸಿಂಗಾರ ಕೊನೆದಂಡೆ—ಪಚ್ಚೆತೆನೆ
ಒಪ್ಪಿತು ಗೋವಮ್ಮ—ಕೊರಳಿಗೆ ೨೩

ನಾಗವಳ್ಳಿ ಎಲೆಯಲಿ ನಾಗಳಕ್ಕಿಯ ರೊಟ್ಟಿ
ಅಚ್ಚ ಸಿಂಗಾರ ಕೊನೆದಂಡೆ—ಪಚ್ಚೆತೆನೆ
ಆಯಿತು ಗೋವಮ್ಮನ—ಕೊರಳಿಗೆ ೨೪

1 ಬಚನ ಬಡಿ—ಬಣ್ಣ ಹಚ್ಚು.

ಮಂಚದ ಕೆಳಗಿನ ಕಂಚಿನ ಹರಿವಾಣ
ಕೆಂಚೆಯರೆ ಹೋಗಿ ತೆಗೆತನ್ನಿ—ನಮ್ಮನೆಯ
ಗೋವಿಗೆ ಗೋಗ್ರಾಸ—ಕೊಡುವಲೆ ೨೫

ಎರೆಯ ಕೆಳಗಣ ಹವಳದ ಹರಿವಾಣ
ನಾರಿಯರೆ ಹೋಗಿ ತೆಗೆತನ್ನಿ—ನಮ್ಮನೆಯ
ಗೋವಿಗೆ ಗೋಗ್ರಾಸ—ಕೊಡುವಲೆ ೨೬

ಮುತ್ತಿನ ಹರಿವಣದಿ ಪುಟ್ಟಕ್ಕಿ ಪಾಯಸ
ಪಟ್ಟೆಯ ತೆರೆಯಲ್ಲಿ ಮರೆಯಾಗಿ—ಇಪ್ದುಕೊಂಡು
ಉಂಡು ದಣದವು—ಗೋವುಗಳು ೨೭

ಹೂವಿನ ಹರಿವಣದಿ ಸಣ್ಣಕ್ಕಿ ಪಾಯಸ
ಸಾಲಿಯ ತೆರೆಯಲ್ಲಿ ಮರೆಯಾಗಿ—ಇದ್ದುಕೊಂಡು
ಉಂಡು ದಣಿದವು—ಗೋವುಗಳು ೨೮

ಅಕ್ಕ ಗೋವಕ್ಕಗೆ ತುಪ್ಪ ಸಕ್ಕರೆಯಿಕ್ಕಿ
ಪಟ್ಟೆಯ ಸೀರೆ ಮರೆ ಮಾಡಿ—ತಂದ್ಯೆದೇವೆ
ಅಕ್ಕ ಗೋವಕ್ಕ—ಉಣಲೇಳು ೨೯

ಅಣ್ಣ ಬಸವಣ್ಣಗೆ ಹಣ್ಣು ಸಕ್ಕರೆಯಿಕ್ಕಿ
ಬಣ್ಣದ ಸೀರೆ ಮರೆಮಾಡಿ—ತಂದ್ಯೆದೇವೆ
ಅಣ್ಣ ಬಸವಣ್ಣ—ಉಣಲೇಳು ೩೦

ನಡೆ ನಡೆಯೆಂದರೆ ನಡಿಲೊಲ್ಲಳು ಪಶುತಾಯಿ
ನಡೆವ ಪಾದದೊಳಗೆ ಸೆರೆಹೊನ್ನ—ಹೊಯ್ದರೆ
ನಡೆದು ಬರುವಳು—ಪೂಜೆಗೆ ೩೧

ಬಾ ಬಾರೆ ಎಂದರೆ ಬರಲೊಲ್ಲಳು ಪಶುತಾಯಿ
ಬರುವ ಪಾದದೊಳಗೆ ಸೆರೆಹೊನ್ನ—ಹೊಯ್ದರೆ
ಕೊಡುವಳು ಕಾಲ—ಪೂಜೆಗೆ ೩೨

ಸಂಪತ್ತು ಹೆಚ್ಚಲೆಂದು ಸಂಪಗೆ ನೆಡಿಸಿದ
ತಂಪಗೆ ಎರೆದ ನೊರೆಹಾಲ—ಪಶುತಾಯೆ
ತಂಪ ಕೊಡು ನಮ್ಮ—ಮನೆಯಲ್ಲಿ ೩೩

ಬಳಗ ಹೆಚ್ಚಲೆಂದು ಬದನೆಯ ನೆಡಿಸಿದ
ತನುವಿಗೆ ಎರೆದ ನೊರೆಹಾಲ—ಪಶುತಾಯೆ
ಸಂಪತ್ತು ಕೊಡು ನಮ್ಮ—ಮನೆಯಲ್ಲಿ ೩೪

## 258. ಗೋಗ್ರಾಸ ಕೊಟ್ಟದ್ದು

ತಂದು ನೀಡಿದಳೆ ಗೋಪಿ । ಗೋಗ್ರಾಸವ
ತಂದು ನೀಡಿದಳೆ ಗೋಪಿ ಪ
ತಂದು ನೀಡುತ ಪಾದ ದ್ವಂದ್ವಕೆರಗಿ ಮುದ
ದಿಂದ ಭುಂಜಿಸಿ ನಿನ್ನ ಎಂಜಲ ಕೊಡು ಎಂದು ಅ ಪ

ನಂದಗೋಪನು ಮುದದಿ । ಗೋವಿನ ಪೂಜೆ
ಬಂದು ಮಾಡಲು ಭರದಿ
ಗಂಧಾಕ್ಷತೆ ಪುಷ್ಪ ಧೂಪದಿಂದರ್ಚಿಸು
ತಂದು ನೈವೇದ್ಯ ತಾಂಬೂಲ ಸಮರ್ಪಿಸಿ ೧

ಸಣ್ಣ ಸೇವಗೆ ಬಟುವಿ । ತಣ್ಣನ ಕ್ಷೀರ
ಎಣ್ಣೂರಿಗೆಯು ಮಂಡಿಗೆ
ಹಣ್ಣು ಹಂಪಲ ಹರಿವಾಣದೊಳಗೆ ತುಂಬಿ
ಉಣ್ಣು ಉಣ್ಣೆನುತಲೆ ಬಣ್ಣಿಸಿ ಗೋವಿಗೆ ೨

ಅರೆದ ಸಕ್ಕರೆ ಪೇಡೆಯು । ಕೂಡಿರಿಸಿದ
ಕರಿದ ಲಡ್ಡುಗೆ ಉಂಡೆಯು
ಪರಮ ಪಾವನೆ ನೀನು ಭುಂಜಿಸಬೇಕೆಂದು
ಶಿರವನೆರಗಿ ಕರ ಮುಗಿದು ಪ್ರಾರ್ಥಿಸುತ ೩

## 259. ದೃಷ್ಟಿ ಬಳಿದದ್ದು

ದೃಷ್ಟಿಯ ಬಳಿದರು ಕೃಷ್ಣನ ಗೃಹದ
ಕೊಟ್ಟಿಗೆಯಲ್ಲಿಹ ಗೋಗಳಿಗೆಲ್ಲ ಪ

ಕಪಿಲೆ ಕೌಲೆ ಕಾಳಿ ಚಪಲೆ ಗೋವುಗಳಿಗೆ
ಸಿಪುಣೆ ಕಾವೇರಿ ಕಾಳಿಂದಿ ಆವುಗಳಿಗೆ ೧

ನಂದಿನಿ ವೃಂದೆಗೆ ಕೆಂದ ಗೋವುಗಳಿಗೆ
ಸುಂದರಿ ಸರಸ್ವತಿ ಎಂಬ ತುರುಗಳಿಗೆ ೨

ಕೃಷ್ಣೆ ಕಾಳಿಂದಿಗೆ ವಿಷ್ಣು ಭಾರ್ಗವಿಗೆ
ವೈಷ್ಣವಿ ಸರಸ್ವತಿಯೆಂಬ ತುರುಗಳಿಗೆ ೩

ಗಂಗೆ ಗೋದಾವರಿ ತುಂಗಭದ್ರೆಯರಿಗೆ
ಇಂಗು ಬೇವು ಉಪ್ಪು ಮೆಣಸು ಅಗ್ನಿಯೊಳಗೆ ೪

## 260. ಗೋವಿಗೆ ಆರತಿ

ಶ್ರೀ ಮಹಾ ಸಾಕ್ಷಾತ್ ಕಾಮಧೇನುವಿಗೆ
ಪ್ರೇಮದ ಕವಿಲೆಗೆ ಸುಜನವಂದಿತೆಗೆ
ಕೋಮಲೆ ಗೌರಿಗೆ ಕಾಳಿಗೆ ವಿಮಲಸು
ಧಾಮಯ ಕ್ಷೀರವನೀವ ಮಹಾತ್ಮೆಗೆ ॥
ಹೇಮದಾರತಿಯಾ—ಬೆಳಗಿರೆ ೧

ಪ್ರತಿವತ್ಸರದೊಳು ಕಾರ್ತಿಕ ಪಾಡ್ಯ ದಿನದಿ
ಕ್ಷಿತಿಯ ಸಜ್ಜನರಿಂದ ಬಿಡದೆ ವೈಭವದಿ
ಅತಿಶಯ ಪೂಜೆಯ ಕೊಂಡು ನೈವೇದ್ಯವ
ಹಿತದಿ ಸಮರ್ಪಿಸಿ ಕೊಳ್ವ ಗುಣಾಢ್ಯೆಗೆ ॥
ಶತವಿಧದಾರತಿಯಾ—ಬೆಳಗಿರೆ ೨

ಮಂಗಲವನುದಿನ ನಂಬಿದ ಜನಕೆ
ಹಿಂಗದೆ ಮುದವಿತ್ತು ಪಾಲಿಸಿ ಮನಕೆ
ಸಿಂಗರದಿಂದ ಗೋಕುಲವ ವೃದ್ಧಿಸಿ ನಿತ್ಯ
ಮಂಗಲವೀವ ಮುಕಾಂಬೆ ಕಾರುಣ್ಯದಿ ॥
ಮಂಗಳಾರತಿಯಾ—ಬೆಳಗಿರೆ ೩

## 261. ಕೊಳಚಿನ ಪೂಜೆ

ಮುತ್ತಿನ ಹೊಸ್ತಿಲು ಮುತ್ತಿನ ದಾರಂದ
ಎಪ್ಪತ್ತಂಕಣದ ಅರಮನೆ—ಜಗಲಿ ಮೇಲೆ
ಹೂವಿನ ಕೊಳಚೆ—ಬರೆದರೆ ೧

ಚಿನ್ನದ ಹೊಸ್ತಿಲು ಚಿನ್ನದ ದಾರಂದ
ಹನ್ನೆರಡಂಕಣದ ಅರಮನೆ—ಜಗಲಿ ಮೇಲೆ
ಮುತ್ತಿನ ಕೊಳಚೆ—ಬರೆದರು ೨

ಕಡೆವ ಕಡಗಲ ತನ್ನಿ ಕರೆವ ಅಂಡೆಯ ತನ್ನಿ
ಕಡೆವ ಕಡಗಲ ತಂದು ಕರೆವ ಅಂಡೆಯ ತಂದು
ಮಡಗಿ ಪೂಜೆಯನು—ಮಾಡಿದರೆ ೩

ಹೂಡುವ ನೇಗಿಲ ತನ್ನಿ ಕಡಿವ ಕತ್ತಿಯ ತಂದು
ಹೂಡುವ ನೇಗಿಲ ತಂದು ಕಡಿವ ಕತ್ತಿಯ ತಂದು
ಮಡಗಿ ಪೂಜೆಯನು—ಮಾಡಿದರೆ ೪

ಪಟ್ಟೆಯನುಟ್ಕೊಂಡು ಪಟ್ಟೆಯ ಹೊದಕೊಂಡು
ಮುತ್ತಿನುಂಗಿಲವ ಬೆರಲಲ್ಲಿ—ಇಟ್ಕೊಂಡು
ಕೊಳಚಿನ ಪೂಜೆ—ತೊಡಗಿದ ೫

ಸಾಲಿಯನುಟ್ಕೊಂಡು ಸಾಲಿಯ ಹೊದಕೊಂಡು
ಚಿನ್ನದುಂಗಿಲವ ಬೆರಲಲ್ಲಿ—ಇಟ್ಕೊಂಡು
ಕೊಳಚಿನ ಪೂಜೆ—ತೊಡಗಿದ ೬

ಮುತ್ತಿನ ಜನಿವಾರ ಹೊಟ್ಟೆ ಮೇಲಲೆಕೊಂಡು
ಇಟ್ಟ ಶ್ರೀಗಂಧ ಹೊಳೆಯುತ್ತ—ಅಪ್ಪಯ್ಯ
ಕೊಳಚೆಯ ಪೂಜೆ—ತೊಡಗಿದ ೭

ಚಿನ್ನದ ಜನಿವಾರ ಬೆನ್ನ ಮೇಲಲೆಕೊಂಡು
ಚೆನ್ನ ಶ್ರೀಗಂಧ ಹೊಳೆಯುತ್ತ—ಅಣ್ಣಯ್ಯ
ಕೊಳಚಿನ ಪೂಜೆ—ತೊಡಗಿದ ೮

ಕೊಳಚಿಗೆ ಪೂಜಿಸುತ ಕೊಳಚಿಗೆ ಅರ್ಚಿಸುತ
ಕೊಳಚಿಗೆ ಕಾಯ ಒಡೆಯುತ—ಅಪ್ಪಯ್ಯ
ಕೊಳಚಿನ ಪೂಜೆ—ತೊಡಗಿದ ೯

## 262. ತುಳಸಿ ಪೂಜೆ—ಆರತಿ

ಶ್ರೀ ಮಹಾಲಕ್ಷ್ಮಿಗೆ ಕ್ರೌಂಚನಂದನೆಗೆ
ಕಾಮುಕ ವರ ಜಲಂಧರನ ವಲ್ಲಭೆಗೆ
ಪ್ರೇಮದೊಳೀರೆಂಟುಪಚಾರಗಳಿಂದ
ಕೋಮಲ ಚರಣಕೆ ವೃಂದಾದೇವಿಗೆ ॥
ಹೇಮದಾರತಿಯಾ—ಬೆಳಗಿರೆ ೧

ಹರಿಹರರಿತ್ತ ವರದಿಂದಲಿ ಜಗದಿ
ಪರಿಪರಿಯೊಳಗನುದಿನದಿ ಕಾರ್ತಿಕದಿ
ಹಿರಿದು ಭಕ್ತಿಗಳಿಂದ ಚರಣವ ಪೂಜಿಸಿ
ಹರಿವಲ್ಲಭೆ ಸಿರಿ ವೃಂದಾದೇವಿಗೆ ॥
ಸರಸಿಜದಾರತಿಯಾ—ಬೆಳಗಿರೆ ೨

ಗಂಧ ಕುಂಕುಮ ಧೂಪ ದೀಪಗಳಿಂದ
ಮುಂದೆ ನೈವೇದ್ಯ ನೀರಾಜನದಿಂದ
ಚಂದದೊಳೆರಗಿ ಪ್ರಾರ್ಥಿಸುತ ಪ್ರಸಾದವ
ನೊಂದಿಸಿ ಗುರು ಪಂಚಲಿಂಗನ ಪಾದಕೆ ॥
ಕುಂದಣದಾರತಿಯಾ—ಬೆಳಗಿರೆ ೩

## 263. ಶ್ರೀ ವೆಂಕಟೇಶ್ವರ ದೇವರ ಶೋಭಾನೆ

ಇಂದು ನಾನೇನ ಸುಕೃತವ ಮಾಡಿದೆನೊ
ಸುಂದರ ಮೂರ್ತಿ ವೆಂಕಟ ಬಂದ ಮನೆಗೆ ಪ

ಶಿರದಲೊಪ್ಪುವ ರತ್ನಖಚಿತ ಕಿರೀಟ
ಶರದಿಂದುವಿನಪೋಲು ಹೊಳೆವ ಲಲಾಟ
ಕರುಣ ದೃಷ್ಟಿಯಲೀಕ್ಷಿಸುವ ಕುಡಿನೋಟ
ಉರಗಾದ್ರಿವಾಸ ವೆಂಕಟ ಬಂದ ಮನೆಗೆ ೧

ಮುತ್ತಿನ ಹಾರ ನವರತ್ನದ ಪದಕ
ಕಸ್ತೂರಿ ಹಣೆಯೊಳು ಮೋಹನ ತಿಲಕ
ಹಸ್ತದೊಳಗೆ ಶಂಖ ಚಕ್ರ ಬಿರುದಾಂಕ
ಕರ್ತೃ ಶ್ರೀ ವೆಂಕಟಾಚಲ ಬಂದ ಮನೆಗೆ ೨

ಕೊರಳೊಳು ಕೌಸ್ತುಭ ಉರದಿ ಶ್ರೀವತ್ಸ
ಬೆರಳೊಳು ಮುದ್ರೆಯುಂಗುರವು ಪ್ರಶಸ್ತ
ಶರಣರ್ಗೆ ವರದಾಭಯ ತೋರ್ಪ ಹಸ್ತ
ಕರಿರಾಜವರದ ವೆಂಕಟ ಬಂದ ಮನೆಗೆ ೩

ಉಟ್ಟ ಪೀತಾಂಬರ ಸಿರಿಗಳ ಚೆಂದ
ಕಟ್ಟಿದ ಕಾಂಚೀದಾಮವು ಹೊಳೆವಂದ
ಇಟ್ಟ ಕಾಲಂದುಗೆ ಝಣರವದಿಂದ
ದಿಟ್ಟ ಶ್ರೀ ವೆಂಕಟೇಶ್ವರ ಬಂದ ಮನೆಗೆ ೪

ಸೇವಕರುಗಳನು ಸಲಹುವ ಪಾದ
ಭಾವ ಭಕ್ತಿಗೆ ಮೆಚ್ಚಿ ಒಲಿವಂಥ ಪಾದ
ದೇವಗಂಗೆಯನು ತಾ ಪಡೆದಂಥ ಪಾದ
ದೇವಾದಿ ದೇವ ವೆಂಕಟ ಬಂದ ಮನೆಗೆ ೫

ನೀಲಗಿರಿಯ ಮಧ್ಯ ನೆಲಸಿಹ ಪಾದ
ಶೀಲವಂತರಿಗೆ ತಾ ಸಿಲುಕುವ ಪಾದ
ಕಾಲನ ಭಯವನು ಕಳೆವಂಥ ಪಾದ
ಕಾಳಿಂಗ ಮಥನ ವೆಂಕಟ ಬಂದ ಮನೆಗೆ ೬

ಅಜರುದ್ರಾಮರರೆಲ್ಲ ಭಜಿಸುವ ಪಾದ
ನಿಜಯೋಗಿಗಳು ನಿತ್ಯ ಯಜಿಸುವ ಪಾದ
ಧ್ವಜವಜ್ರಾಂಕುಶ ರೇಖೆಯೊಪ್ಪುವ ಪಾದ
ಸುಜನಾರಾಧಿತ ಶ್ರೀ ವೆಂಕಟ ಬಂದ ಮನೆಗೆ ೭

ಸಿರಿಮುಡಿಯೊಳು ಮುಡಿದರಳು ಮಲ್ಲಿಗೆಯು
ಮುಂದುಂಬಿವೋಲ್ ಕುರುಳೊಪ್ಪುವ ಬಗೆಯು
ಸ್ಫುರಿಪ ದಂತಗಳಿಂ ಶೋಭಿಪ ಮುಗುಳ್ನಗೆಯು
ಸಿರಿ ಭೂಮಿಯರಸ ವೆಂಕಟ ಬಂದ ಮನೆಗೆ ೮

ಶೃಂಗಾರ ಸೊಬಗಿನಿಂ ಪೊಳೆವ ಕಪೋಲ
ಪೊಂಗೊಳಲನ್ನೂದಿಸುತ ಶ್ರೀಗೋಪಾಲ
ರಂಗುದುಟಿಯ ಕಾಂತಿಯೆಸೆಯೆ ಸುಶೀಲ
ಮಂಗಳ ಮಹಿಮ ವೆಂಕಟ ಬಂದ ಮನೆಗೆ ೯

ಆಗಮ ಶ್ರುತಿಗಳಿಂ ಸ್ತುತಿಸಿಯೆ ಕೊಳುತ
ಬೇಗದಿ ಭಕ್ತರಿಂಗಭಯವ ಕೊಡುತ
ಯೋಗಕಾಶ್ರಯ ಶ್ರೀಪಾದವ ಧರೆಗಿಡುತ
ಶ್ರೀಗುರು ಲಕ್ಷ್ಮೀವೆಂಕಟ ಬಂದ ಮನೆಗೆ ೧೦

## 264. ವೆಂಕಟರಮಣನಿಗೆ ಆರತಿ

ಮುತ್ತಿನ ಮಂಟಪದೊಳಗೆ
ರತ್ನಪೀಠದ ಮಧ್ಯದಲಿ ॥
ಮತ್ತಕಾಶಿನಿ ಮಹಾಲಕ್ಷ್ಮಿಯು ಸಹಿತ
ಚಿತ್ತಜಪಿತ ವೆಂಕಟೇಶ್ವರ ನಗುತ
ಭಕ್ತಿಯಿಂದಲಿ ಬಂದು ಓಲಗವಾಗಿರೆ ॥
ಮುತ್ತಿನಾರತಿಯಾ—ಬೆಳಗಿರೆ ೧

ಚಿನ್ನದ ಹರಿವಾಣದೊಳಗೆ
ಸಣ್ಣ ಬತ್ತಿಗಳನ್ನೆ ತುಂಬಿ ॥
ಕಿನ್ನರಿ ಸ್ವರದಲಿ ಗಾಯನ ಪಾಡಿ
ಚೆನ್ನಿಗ ವೆಂಕಟಪತಿಯ ಕೊಂಡಾಡಿ
ಕಣ್ಣಲ್ಲಿ ಮೋಹನ ಮೂರ್ತಿಯ ನೋಡುತ ॥
ಚಿನ್ನದಾರತಿಯಾ—ಬೆಳಗಿರೆ ೨

ರತ್ನದ ಮಕುಟ ವಿಠ್ಠಲನೆ
ಮುತ್ತಿನ ಕುಂಡಲಧರನೆ ॥
ಹಸ್ತಕದಂಬುಜ ಕಂಕಣ ಸರಿಗೆ
ಕಸ್ತೂರಿ ಚಂದನ ಲೇಪಿತ ಹರಿಗೆ
ಭಕ್ತ ಸಂರಕ್ಷಕ ವೆಂಕಟ ರಮಣಗೆ ॥
ರತ್ನದಾರತಿಯಾ—ಬೆಳಗಿರೆ ೩

ನಾಗನ ಮೇಲೇರಿದವಗೆ
ಯೋಗಮಾತೆಯ ಶ್ರೀಹರಿಗೆ ॥
ಯೋಗಿ ಜನಂಗಳ ಪಾಲಿಪ ಹರಿಗೆ
ಸಾಗರ ತನುಜೆಯ ಮೋಹದ ಪತಿಗೆ
ಆಗಮ ಸೇವಿತ ನತಜನ ವಂದ್ಯಗೆ ॥
ಹೂಗಿ[1]ನಾರತಿಯಾ—ಬೆಳಗಿರೆ ೪

ಭೂಮಿಯೊಳುತ್ತಮವಾದ
ಕಾಮಿತ ಫಲಗಳನೀವ ॥
ಹೇಮಗಿರೀಂದ್ರನ ಸಲಹುವ ವೆಂಕಟ
ನಾಮದಿ ಪರ್ವತ ಮಧ್ಯದಿ ನೆಲಸಿದ
ಶ್ರೀ ಮಹಾಲಕ್ಷ್ಮಿಗೂ ತಿರುಪತಿಯೊಡೆಯಗೂ ॥
ಹೇಮದಾರತಿಯಾ—ಬೆಳಗಿರೆ ೫

## 265. ವೆಂಕಟರಮಣನ ಪ್ರಸಾದ ಬೇಡುವದು

ಪಾಲಿಸೊ ಹೂವನು ದೇವನೇ । ಚೆಲ್ವ
ಶ್ರೀಲೋಲ ವರ ವೆಂಕಟೇಶನೇ । ಬಹು
ಲೀಲೆಯಿಂದಲಿ ಭಕ್ತ ಜಾಲವ ಪೊರೆವಂಥ
ನೀಲಕಂಠನ ಸಖ ನೀಲಶರೀರನೆ ೧

ಮಂದಾರ ಪಾರಿಜಾತವನು । ಅರ
ವಿಂದ ಮಲ್ಲಿಗೆ ಚಂಪಕವನು । ಚೆಂದ
ದಿಂದಾ ಅಶೋಕ ಸೌಗಂಧಿಕ ಸುಮವನ್ನು
ವಂದಿಸುವರಿಗೆ ನೀನಿಂದು ಪ್ರಸಾದವ ೨

ಪೂಗ ಸೇವಂತಿಗೆ ಜಾಜಿಯು । ಪು
ನ್ನಾಗ ಕೇತಕಿ ಶತಪತ್ರವು । ಶ್ರೀ
ನಾಗಶಯನ ತಾರೆಂದೀಗಲೆ ನಿನ್ನನು
ಬಾಗುವೆ ಕಾಯಬೇಕು ಯೋಗನಾಥನೆ ನೀನು ೩

1 ಹೂಗು—ಹೂವು.

ಪನ್ನೀರು ರತ್ನ ಕಂಟಿಕೆಯನು । ಕೊಟ್ಟು
ಎನ್ನೊಳು ಕೃಪೆಯನು ಮಾಡಿನ್ನು । ಚೆಲ್ವ
ಕನ್ನೆ ಚಂಡಿಕಾಗ್ರಜ ರನ್ನೆ ಲಕ್ಷ್ಮಿಯ ಪ್ರಿಯ
ನೆನ್ನುತಲಿಹ ನೀನು ಎನ್ನ ಮೊರೆಯ ಕೇಳಿ ೪

ನಿತ್ಯ ಪುಷ್ಪಂಗಳ ಸಹಿತವು । ನೀ
ನಿತ್ತು ಪಾಲಿಪುದೆಮ್ಮ ನಿರುತವು । ದೇವ
ನಿತ್ಯ ಸದ್ಗುಣಸಾಂದ್ರ ರತ್ನದಲಂಕೃತ
ನಿತ್ಯ ಪೂಜಿಪೆ ನಾನು ಅರ್ಥಿಯೊಳಗೆ ನೀನು ೫

ಕರವೀರ ದೇವದಾರು ದಾಡಿಮಿ । ಪಾಟಲಿ
ಗಿರಿಕರ್ಣಿಕಾರ ಕಮಲ ಶಮಿ । ಚಾರು
ವರ ಬಿಲ್ವಪತ್ರಾತಸಿ[1] ಮರುಗ ದಮನ ಪತ್ರ
ಕರವ ನೀಡಿಪೆ ನಾನು ಕರುಣದಿ ನೀಡೆಂದು ೬

ಕಾಲಿಗೆರಗಿ ನಿನ್ನ ಬೇಡುವೆ । ಸಹ
ಲೋಲೆ ಪದ್ಮಾವತಿ ಪಾದವೇ । ಗತಿ
ಪಾಲಿಸಬೇಕು ತೀರ್ಥ ಶೂಲಿದೇವನ ಮಿತ್ರ
ಕಾಲಕಾಲದಿ ಕಾಯೊ ನೀಲವರ್ಣದ ಕಾಯ ೭

ಶೇಷಗಿರಿಯ ಪೀಠದಲ್ಲಿ । ನೀನು
ಸಾಸಿರ ಭಕ್ತರ ಸೇವೆಯಲ್ಲಿ । ಪ್ರಿಯ
ದಾಸರು ಪೂಜೆಗೈದ ಪೂಸರಂಗಳನು ನಿ
ಶ್ಶೇಷದಿಂದಲಿ ವೆಂಕಟೇಶನೆ ದಯದೊಳು ೮

## 266. ಸುಬ್ರಹ್ಮಣ್ಯನಿಗೆ ಆರತಿ

ವರಮಹಾ ಕೈಲಾಸ ಶಿಖರದಿ ಹರನ
ತರುಣಿ ಪಾರ್ವತಿ ಸುತನೆನಿಪ ಷಣ್ಮುಖನ
ಧರಣಿಯೊಳಗೆ ಬಹು ದುರುಳರ ಮಥಿಸಿದ
ಪರಮ ಪುರುಷ ಷಡ್ವದನ ಸುಬ್ರಾಯಗೆ ॥
ಸರಸಿಜದಾರತಿಯಾ—ಬೆಳಗಿರೆ ೧

1 ಬಿಲ್ವ ತುಲಸಿಯು.

ಆರು ಮೊಗದಿ ಬೆಳಗುವ ಮಹಾದೇವ
ಆರು ಲಿಂಗಗಳೆಂಬ ಜ್ಯೋತಿಷ ಭಾವ
ಆರು ದಳದ ಮಧ್ಯ ಶಾರದೆ ಸಹಿತದಿ
ಸಾರ ಶಾಸ್ತ್ರವ ನಯನದಿ ಕಂಡು ಸಮೆದಿಹ ॥
ವೀರಗಾರತಿಯಾ—ಬಳಗಿರೆ ೨

ಹುಟ್ಟಿ ಬಳೆದು ಬಂದು ಏಳನೆ ದಿನದಿ
ದುಷ್ಟ ತಾರಕನನು ಗೆಲಿದು ಸಂಗತದಿ
ಕುಟ್ಟಿ ಕೊಂದಾ ಕ್ಷಣ ಸುರರನು ಮುದದಲಿ
ಒಟ್ಟುಗೂಡಿಯೆ ಸಲಹಿದ ಮಹಾದೇವ ಸಂ ॥
ತುಷ್ಟನಿಗಾರತಿಯಾ—ಬೆಳಗಿರ ೩

ನವಿಲು ವಾಹನವೇರಿ ಶಕ್ತ್ಯಾಯುಧದಿ
ಮೌಳಿಮಣಿಯು ಕುಂಡಲ ಭೂಷಣದಿ
ಕುವಲಯಾನ್ವಿತ ಸ್ವಾಮಿ ಪಾವನ ಗುಣಮಣಿ
ನವ ನೂತನ ವಿದ್ಯೆಯನೆಲ್ಲ ಕರುಣಿಪ ॥
ಮೌಳಿಗಾರತಿಯಾ—ಬೆಳಗಿರೆ ೪

ಹರ ರುದ್ರದೇವರ ವರಜ್ಞಾನಸಿಂಧು
ಹರುಷದೊಳುಪದೇಶವ ಕೊಂಡು ಬಂದು
ಧರೆಯೊಳುತ್ತಮ ಸುಬ್ರಹ್ಮಣ್ಯದಿ ನೆಲಸಿದು
ಸರಸದಿ ಭಕ್ತರ ಪೊರೆವ ಮಹಾತ್ಮಗೆ ॥
ಹರುಷದೊಳಾರತಿಯಾ—ಬೆಳಗಿರೆ ೫

## 267. ಸೂರ್ಯನಾರಾಯಣನಿಗೆ ಆರತಿ

ಆರತಿಯೆತ್ತಿರೆ ದಿನಮಣಿಗೇ । ಚೆಲ್ವ
ಸಾರಸಸಖಗೆ ದಿನೇಶನಿಗೇ ಪ
ವಾರಿಧಿ ಸಮಗಂಭೀರಗೆ ಧೀರಗೆ
ಮೂರು ಮೂರ್ತಿಯೊಳ ಸೇರಿಸಿ ಕೊಂಡಗೆ ॥
ಮೇರುವೆಯಾರತಿಯಾ—ಬೆಳಗಿರೆ ೧

ಕರುಣಾ ಸಾಗರ ಸುಂದರಗೇ । ಸತ್ಯ
ಶರಣವತ್ಸಲಗೆ ದ್ಯುತಿಧರಗೆ
ಧರಣೀಸುರೋತ್ತಮ ನಂದಗೆ ವಂದ್ಯಗೆ
ನಿರುತ ತ್ರಿಜಗತಿಯ ಪೊರೆವಗೆ ಮಹಿಮಗೆ ॥
ಸರಸಿಜದಾರತಿಯಾ—ಬೆಳಗಿರೆ ೨

ಅದಿತಿ ಗರ್ಭಾಂಬುಧಿ ಚಂದ್ರನಿಗೇ । ಭಾಸುಗೆ
ಚಮರನಿಗೆ ಶ್ರುತಿಯೊಡಲನಿಗೆ
ಸದಮಲಗೇ ಗಾಯತ್ರಿ ಸುಪ್ರೀಯಗೆ
ಬುಧಜನ ಸೇವಿತ ಸ್ತೋತ್ರಗೆ ಮಿತ್ರಗೆ ॥
ವಿಧವಿಧದಾರತಿಯಾ—ಬೆಳಗಿರೆ ೩

ಜಲಜಪ್ರೀಯ ಪ್ರಭಾಕರಗೇ । ಕುಜನ
ಕುಲ ನಿರ್ಮೂಲಗೆ ಭಾಸ್ಕರಗೇ
ಹೆಳವ ಸಾರಥಿ ಶ್ರೀ ಸಪ್ತಾಶ್ವನಿಗೆ
ನೆಲಸಿಹ ತತ್ತ್ವಾಧೀಶಗೆ ಹರಿಗೆ ॥
ಅಲರಿನಾರತಿಯಾ—ಬೆಳಗಿರೆ ೪

ದುರಿತ ವಿಧ್ವಂಸಗೆ ಬ್ರಧ್ನನಿಗೇ । ಆ
ಪರಮ ಪರಾತ್ಪರ ಮೂರ್ತಿಗೆ ತರಣಿಗೆ
ವರ ಸಾವಿತ್ರಗೆ ತಪನಗೆ ರವಿಗೇ
ಗುರು ವಿಷ್ಣುಪ್ರಿಯ ಶ್ರೀ ಶುಭಕರನಿಗೆ ॥
ಸರಸದೊಳಾರತಿಯಾ—ಬೆಳಗಿರೆ ೫

## 268. ಶೇಷಪೂಜೆ—ಆರತಿ (ನಾಗಾರಾಧನೆ)

ಶ್ರೀ ಮಹಾ ನಾಗರಾಜನಿಗೇ । ಗುಣ
ಧಾಮ ಶೇಷನಿಗಾರತಿಯೆತ್ತಿರೇ ಪ

ಈರೇಳು ಲೋಕದ ಭಾರವ ಧರಿಸಿದ
ನಾರಾಯಣನ ಪರ್ಯಂಕನಿಗೇ
ವಾರಿಧಿ ಮಥನಕ್ಕೆ ದೇಹದಾನವ ಗೈದ
ಧೀರ ವಾಸುಕಿಗಾರತಿಯೆತ್ತಿರೇ ೧

ಮತ್ಸ್ಯಜಾತೆಯ ಸುತೆಯಿತ್ತ ಶಾಪದಿ ಭೂಮಿ
ಪೋತ್ರಮುನಿಯ ಜಾಲ ಕೈದಿದಗೆ
ಮತ್ತೆ ಭೂಪನ ಕೊಂದು ಮುನಿಶಾಪಗಳನು ನಿ
ವೃತ್ತಿಯ ಗೈದ ತಕ್ಷಕಗಾರತಿಯೆತ್ತಿರೇ ೨

ನಳನು ಕಾಡಿನೊಳ್ಳೈದೆ ಸುಳಿಯಗ್ನಿಯೊಳು ಸಿಕ್ಕಿ
ಕಳವಳಿಸುತ ಕರೆದಾತನಿಗೇ
ಬಳಿಕಗ್ನಿಸುಳಿಯಿಂದ ಉಳಿಸೆ ವಿಕಾರವ
ನಳಗಿತ್ತ ಕಾರ್ಕೋಟಕಗಾರತಿಯೆತ್ತಿರೇ ೩

ವರ ಪದ್ಮನಿಗೆ ಮಿಗೆ ಮಹಾಪದ್ಮನಿಗೆ ಸ್ಕಂದ
ಗಿರಿಯೊಳಗಿಹ ಶಂಖಪಾಲನಿಗೇ
ಶರಣರಭೀಷ್ಟದಾಯಕಗೆ ಕುಳಿಕನಿಗೆ
ಹರುಷದೊಳಷ್ಟನಾಗರಿಗಾರತಿಯೆತ್ತಿರೇ ೪

ಕರಿಮುಖ ಸುರಪಾಲಯನಿಗೆ ಗಿರಿಜಾಪ್ರಿಯ
ಪರಮೇಶನಂಗದಿ ಶೋಭಿಪಗೇ
ತರುಣಿ ಕದ್ರುಜ ಸಂಕುಲಕೆ ಸಾಷ್ಟಾಂಗದೊ
ಳೆರಗಿ ಕರ್ಪೂರದಾರತಿಯೆತ್ತಿರೇ ೫

## 269. ಹೊಸಮನೆಯ ಹೊಸ್ತಿಲ ಪೂಜೆ

ಲಂಬೋದರನ ಪಾದ ಪದ್ಮಕೆ ವಂದಿಸಿ
ಬ್ರಹ್ಮನ ರಾಣಿಯನು ಭಜಿಸಿಯೆ—ಹೊಸಮನೆ
ಹೊಸ್ತಿಲ ಪೂಜೆ—ವಿವರಿಸುವೆ ೧

ಮುತ್ತು ಮಾಣಿಕ ನವರತ್ನದಿ ಕೆತ್ತಿಸಿದ
ಬಾಗಿಲಿಗೆ ಜ್ಯೋತಿ ಬೆಳಗಿರಿಸಿ—ಮಾವಯ್ಯ
ಪೂಜೆಗನುವಾದ—ಸತಿಸಹ ೨

ಗಂಧ ಅಕ್ಷತೆ ಪುಷ್ಪ ಪರಿಮಳ ದ್ರವ್ಯವು
ಬಾಗಿಲಿಗೆ ಹೊನ್ನ ಇರಿಸುತ್ತ—ಮಾವಯ್ಯ
ಹೊಸ್ತಿಲ ಪೂಜಿಸಿದ—ಸುಮುಹೂರ್ತ ೩

ಕದಳಿ ನಾರಿಕೇಳ ವೀಳ್ಯ ನೈವೇದಿಸಿ
ಮುತ್ತಿನಾರತಿಯು ಬೆಳಗುತ್ತ—ಮಾವಯ್ಯ
ಹೊಸ್ತಿಲ ಪೂಜಿಸಿದ—ಶುಭದಿಂದ ೪

ವಾಸ್ತುದೇವತೆಗೆರಗಿ ಸುಖಸಂಪದವನೀವ
ಕಾಮಧೇನುವಿನ ಚರಣಕ್ಕೆ—ವಂದಿಸಿ
ಕರೆತಂದರೆ ದೇವರೊಳವಿಕೆ ೫

ಬಾಗಿಲ ಪೂಜಿಸಿ ಸತಿಸುತ ಪುರೋಹಿತರ
ಒಡಗೊಂಡು ಒಳಗೆ ಬರುವಾಗ—ಬಲಹೆಜ್ಜೆ
ಸಿದ್ದೆಡವುತ ಬಂದರೊಳವಿಗೆ ೬

ಎಡಗಿದ ಸಿದ್ದೆಯಲಿ ಧನ ತುಂಬಿ ತುಳುಕಲಿ
ಮುತ್ತು ಮಾಣಿಕವು ಒದಗಲಿ—ಎಂದೆನುತ
ಬಂದರೆ ದೇವರೊಳವಿಗೆ ೭

ಕಲಶ ಕನ್ನಡಿ ಮಂತು ತುಂಬಿದ ಕೊಡಗಳು
ರನ್ನದ ತೊಟ್ಟಿಲಲಿ ಹಸುಬಾಲ—ಬಳಗ ಪಾತ್ರಸಹ
ಬಂದರೆ ದೇವರೊಳವಿಗೆ ೮

ಲಕ್ಷ್ಮೀನಾರಾಯಣರ ಪಾದಕ್ಕೆ ವಂದಿಸಿ
ಸಂಪದ ಸೌಖ್ಯಗಳು ಸ್ಥಿರವಾಗಿ—ಇರಲೆಂದು
ತ್ರಿಜೂರಿಯ ತಂದರೊಳವಿಗೆ ೯

ಹಾಲು ಉಕ್ಕೀತೆಂದು ಮನೆ ಬಳಗ ಹೆಚ್ಚಲೆಂದು
ಮಾವ ಸತಿಸುತರ ಒಡಗೊಂಡು—ಸಂತಸದಿ
ದೇವರ ಪಾದಕ್ಕೆರಗಿದ ೧೦

## 270. ಹೊಸಮನೆ ಒಕ್ಕಲಿನ ಮಂತ್ರಾಕ್ಷತೆ ಮಾಡಿದ್ದು

ಮಂತ್ರಾಕ್ಷತೆಯ ಗೈದರು । ಪುರೋಹಿತರು
ಸಡಗರದಿಂದಲೀಗ
ಚಿಂತಿತಾರ್ಥವ ಹೊಂದಿ ಸಕಲರೀ ಗೃಹದೊಳು
ಸಕಲೈಶ್ವರ್ಯದಿ ಬಾಳಿ ಸುಖಿಸಲಿಕೆಂದು ಪ

ಗ್ರಹಶಾಂತಿಯನೆ ಮಾಡಿಸಿ । ಭಕ್ತಿಯೊಳು
ಗೃಹದೇವರ ಧ್ಯಾನಿಸಿ
ಗುರು ಗಣಪತಿಗೆರಗಿ ವಾಗ್ದೇವಿಗೆ ನಮಿಸಿ
ಸುಮುಹೂರ್ತದೊಳು ಗೃಹವ ಸೇರಿದರಾಗ ೧

ವಾಸ್ತುದೇವರ ಪೂಜಿಸಿ । ಹೊಸ್ತಿಲಿಗೆ
ಕಾಯ ಕಾಣಿಕೆಯನಿಕ್ಕಿ
ಒಡೆಯನ ಮನಸ್ಸಿನ ಅಭಿಲಾಷೆಯೆಲ್ಲವ
ಬೇಡುತ್ತ ಹರಕೆಯನರ್ಪಿಸಿ ಮುದದಿ ೨

ಪಂಚಗವ್ಯವ ಹೋಮವ । ಮಾಡಿಸಿದರು
ತರ್ಪಣ ಬಲಿಗಳನು
ಯಜಮಾನ ಸಹಿತಲೆ ಪುರೋಹಿತರಿಂದಲಿ
ಸಕಲ ಕರ್ಮಗಳನು ವಿಧಿಯಿಂದ ನಡೆಸುತ ೩

ಮಂತ್ರೋಚ್ಚಾರಣದಿಂದಲೆ । ಭೂಸುರರಿಂದ
ನವಗ್ರಹ ವಾಸ್ತು ಬಲಿ
ಚಂದದಿ ಯಜಮಾನ ಮಾಡಿಸಿ ಮನದೊಳು
ದಕ್ಷಿಣೆಯನು ನೀಡಿ ಶಿರವ ಬಾಗಿದನು ೪

ಬಂಧುಬಾಂಧವ ಸಹಿತ । ಯಜಮಾನನ
ಸಹ ಕುಟುಂಬವು ಸಹಿತ
ಸಡಗರದಿಂದಲಿ ಸುಮುಹೂರ್ತವೆಂದೆನುತ
ಗೋವು ತೊಟ್ಟಿಲ ಶಿಶು ದೇವರ ಒಳಗಿಟ್ಟು ೫

ವಿಪ್ರರ ಸಂತರ್ಪಣೆ । ಮಾಡಿಸಿ ಬೇಗ
ದಾನ ಧರ್ಮಗಳ ಕೊಟ್ಟು
ಹರುಷದಿ ನಲಿಯುತ ಮುತ್ತೈದೆಯರಿಗೆಲ್ಲ
ದಕ್ಷಿಣೆಗಳ ಕೊಟ್ಟು ಗೋಗ್ರಾಸ ನೀಡಿದ ೬

ರಾಜಿಪ ಸಭೆಯೊಳಗೆ । ಯಜಮಾನನು
ರಮಣಿಯ ಸಹಿತ ಬೇಗ
ಗುರುವಾಶೀರ್ವಾದವ ಪಡೆಯಬೇಕೆನುತಲಿ
ಬಹುಮಾನ ವೀಳ್ಯವ ಕೊಟ್ಟೆರಗಿದನು ೭

ಸಹ ಕುಟುಂಬವು ಸಹಿತ । ದಂಪತಿಗಳೆ
ಅಮಿತ ತೋಷದಿ ಬಾಳಿರಿ
ಧರೆಯೊಳಗತಿಶಯ ಕೀರ್ತಿಯ ಗಳಿಸಿರಿ
ಆಯುರಾರೋಗ್ಯವ ಪಡೆದು ಸುಖಿಸಿರಿ ೪

## 271. ಹಾಲುಕ್ಕಿಸುವುದು (ಸರಳಾರ)

ಕ್ಷೀರಪಾಕವ ಮಾಡಿದರವರು ।
ದ್ವಾರಕಾಪುರದೊಳು ನಾರಿಯರು ಪ

ಇಂದಿರೆಯರಸ ಗೋವಿಂದ ಮುರಾರಿಗೆ
ಸಿಂಧುಮಧ್ಯದಿ ದ್ವಾರಕಿಯೆಸಗೆ
ಮಂದಿರದಲ್ಲಿ ಗೋವಿಂದನಪ್ಪಣೆಗಾಗಿ
ಬಂದರು ದ್ವಿಜರು ಸಂತೋಷವಾಗೆ ೧

ಕುಸುಮನಾಭನು ಗೈದ ಪೊಸತಾದ ಮನೆಗೆಂದು
ಋಷಿಗಳು ದಂಪತಿ ಸಹಿತ ಬಂದು
ಎಸಗಿ ಹೋಮವನು ಕ್ಷೀರವ ಒಲೆಯೊಳು ತಂದು
ಬಿಸಿಯ ಮಾಡುತಲುಕ್ಕಿಸಿದರಂದು ೨

ಹೆತ್ತ ತಾಯಿಯ ಸ್ತನದಲಿ ಬಂದು ನೆಲಸಿದೆ
ಇತ್ತು ನಿನ್ನನು ಶಿಶುಗಳ ಪೊರೆದೆ
ಋತ್ವಿಜರೆಸಗುವ ಯಾಗಕೆ ಶುದ್ಧಿಯಾದೆ
ಮತ್ತೆ ಮಾಲಕ್ಷ್ಮಿಗೆ ಮಾತೆಯಾದೆ ೩

ಶಿಶುತನದಲಿ ಸಚರಾಚರದೊಳಗುಳ್ಳ
ಪಶುಮೊದಲಾದ ಪ್ರಾಣಿಗಳಿಗೆಲ್ಲ
ಎಸಗಿ ಜೀವನ ನೀನಾಗಿರುವೆಯಲ್ಲ
ಪೆಸರಿಡೆ ಪಾಲ್ಗೊಸರೆಂಬರೆಲ್ಲ ೪

ಹಾಲಿನ ಮಹಿಮೆಯ ಶ್ರೀಲಲನೆಯ ತಾಯ
ಬಾಲೆಯರಾಲಿಸಿ ಪೇಳೆ ಪ್ರಿಯ
ಶ್ರೀಲಲಾಮನ ಸತಿಯನು ಪೆತ್ತೆ ಶ್ರೀಸುಧೆಯ
ಪಾಲಿಸಿ ದ್ವಿಜರ ಪೊರೆದೆ ಜೀಯ ೫

ಕ್ಷೀರಶರಧಿಯೆಂದೆನಿಸುತ ಜಗದೊಳು
ತೋರಿ ಕರುಣವನು ಪ್ರೀತಿಯೊಳು
ವಾರಿಜನಾಭಗೆ ಮಂದಿರವೆನಿಸಿದೆ
ಊರ ಜನರಿಗಿಷ್ಟ ಪಾಲಿಸಿದೆ ೬

ಮಂಗಲಂ ಮಹಿಮೋತ್ತುಂಗ ಕೃಪಾಂಗಗೆ
ಮಂಗಲಂ ಮುದ್ದು ಶ್ರೀರಂಗನಿಗೆ
ಮಂಗಲಂ ಸ್ಥಾವರ ಜಂಗಮಭರಿತಗೆ
ಅಂಗಜಪಿತನಿಗೆ ಅಖಿಳನಿಗೆ ೭

## 272. ಯಜ್ಞೇಶ್ವರನನ್ನು ಸ್ತುತಿಸುವುದು

ಸಾಮಜ ವದನನ ಸ್ತುತಿಗೈದು । ಕುಲ
ಸ್ವಾಮಿಯ ಗುರುಹಿರಿಯರ ನೆನೆದು । ಕವಿ
ತಾ ಮಹಾಜನರನು ಅನುಪಡೆದು । ಬಹು
ಕಾಮಿತ ವರಗಳ ಕರುಣಿಸುವಗ್ನಿಯ ॥
ಹೋಮದ ಮಹಿಮೆ—ಪೊಗಳುವೆ ೧

ಬಾಲಾದಿತ್ಯ ಪ್ರಕಾಶಗಳು । ಮೂರು
ಕಾಲು ನಾಲಗೆ ನೋಡಿದರೇಳು । ಕಿವಿ
ಸಾಲಾಗಿಯೆ ಓಲಾಗಿರಲು । ಸ್ಥಿರ
ಓಲಾಡುವದೆರಡರ ಶೃಂಗದ ನಾ ॥
ಲ್ಕಾಳುವ ಯಜ್ಞೇಶ—ದಯವಾಗು ೨

ಸಪ್ತ ಹಸ್ತವು ರಂಜಿಸುವ । ಮುಖ
ಕುತ್ತಮ ಕಣ್ಣುಗಳಾರೊಲಿವ । ಬಹು

ಚಿತ್ರಾಭರಣವು ರಂಜಿಸುವ । ದಯೆ
ವೆತ್ತು ಜಗದಿ ಪ್ರತ್ಯಕ್ಷ ಪ್ರಜ್ವಲಿಸುವ ॥
ಮೂರ್ತಿ ಯಜ್ಞೇಶ—ದಯವಾಗು ೩

ಕರದಲಿ ಸ್ರುಕ್ ಸ್ರುವೆಗಳ ಧರಿಸಿ । ಅನ
ವರತವು ಮೇಷವಾಹನನೆನಿಸಿ । ಭೂ
ಸುರರ ಕ್ರಿಯೆಗಳ ಮಖ ನಡೆಸಿ । ಹರಿ
ಹರರ್ದೇಳಿವ ಹರಕೆಯ ಸಲಿಸುವ ॥
ವರದ ಯಜ್ಞೇಶ—ದಯಮಾಡು ೪

ತಪ್ತಕಾಂಚನದಂತೆ ಹೊಳೆಯುತ್ತ । ಬಹು
ಯುಕ್ತಿಯಿಂದಲಿ ದೆಸೆ ಬೆಳಗುತ್ತ । ಕ
ಗ್ಗತ್ತಲೆಯನು ಕಳೆದೊಯ್ಯುತ್ತ । ಸುರ
ವೊತ್ತಕೆ ಹವಿರ್ಭಾಗವ ಸಲಿಸುವ ದೇ ॥
ವೋತ್ತಮ ಯಜ್ಞೇಶ—ದಯವಾಗು ೫

ಬಿಂಕದಿ ಜ್ವಲಿಸುವ ಮಹಾಜ್ವಾಲೆ । ಆ
ಲಂಕೆಯ ಸುಟ್ಟುರುಹಿದೆ ಮೊದಲೆ । ಅ
ಲಂಕೃತ ರಕ್ತಾಂಬರ ಮಾಲೆ । ಶಿವ
ಶಂಕರನಿಗೆ ಹಣೆಗಣ್ಣೆನಿಸಿದ ಅಭವ ॥
ಯಂಕರ ಯಜ್ಞೇಶ—ದಯಮಾಡು ೬

ಅಷ್ಟದ್ರವ್ಯದ ರಾಶಿಯನು । ಚರು
ಮುಟ್ಟಿಗೆ ಸಮಿಧೆ ಘೃತಂಗಳನು । ತಂ
ದೊಟ್ಟಿದ ದರ್ಭೆ ತಿಲಂಗಳನು । ಸಂ
ತುಷ್ಟಿಯೊಳಾಹುತಿಗೊಂಡು ಪ್ರಜ್ವಲಿಸುವ ॥
ಶ್ರೇಷ್ಠ ಯಜ್ಞೇಶ—ದಯಮಾಡು ೭

ಪಾಂಡುಕುಮಾರನೊಡನೆ ಬೇಡಿ । ಆ
ಖಾಂಡವ ವನ ದಹನವ ಮಾಡಿ । ಆ
ಖಂಡಲಜಗೆ ರಥ ದಯಮಾಡಿ । ಮಾ
ರ್ತಾಂಡನಂತಿರೆ ಮನೆಮನೆಯೊಳಗೆಸೆವ ಪ್ರ ॥
ಚಂಡ ಯಜ್ಞೇಶ—ದಯಮಾಡು ೮

ಶ್ರುತಿಮತಿಯಿಂದಾಹುತಿಗೊಂಡು । ಗ್ರಹ
ಗತಿಗಳ ಪರಿಪರಿಸುತ ಕಂಡು । ದೇ
ವತೆಗಳ ಹವಿರ್ಭಾಗವ ಕೊಂಡು । ಸುರ
ತತಿಗಳಿಗತಿಶಯ ತೃಪ್ತಿಯ ನೀಡುವ ॥
ಹುತವಹ ಯಜ್ಞೇಶ—ದಯಮಾಡು ೯

ಮೂರು ಸ್ವರೂಪವು ತಾನಾಗಿ । ಮಹಾ
ಮೇರುವಿನಂತಿರೆ ಬೆಳೆದಡಗಿ । ಆ
ಧಾರವು ಭುವನಕೆ ತಾನಾಗಿ । ಶುಭ
ಕಾರಣ ಮದುವೆ ಮಾಂಗಲ್ಯವ ನಡೆಸುವ ॥
ಧೀರ ಯಜ್ಞೇಶ—ದಯಮಾಡು ೧೦

ಒಲಿದಾಜ್ಯಾಹುತಿಗಳ ಕೊಡುತ । ತಳ
ತಳಿಸಿ ನಾಲಗೆಗಳ ನೀಡುತ್ತ । ಸುಳಿ
ಸುಳಿದು ನಾಲಗೆಗಳ ಬೆಳಗುತ್ತ । ಮನ
ವೊಲಿದಿಷ್ಟಾರ್ಥವ ಸಲಿಸುವ ಪಾವಕ ॥
ಚೆಲುವ ಯಜ್ಞೇಶ—ದಯಮಾಡು ೧೧

ಇಂತಗ್ನಿಯ ಚಾರಿತ್ರವನು । ಮನ
ಸಂತಸದಲಿ ಹೇಳಿ ಕೇಳ್ವರನು । ದಯ
ವಾಂತು ಸಲಹುವ ಯಜ್ಞೇಶ್ವರನು । ಶುಭ
ಸಂತತಿ ಸೌಭಾಗ್ಯಂಗಳ ಪಾಲಿಪ ॥
ಅಂಥಾ ಕೊಳ್ಳೂರ—ಪುರವಾಸ ೧೨

## 273. ಅಗ್ನಿ ಹುಟ್ಟಿದ್ದು

ಗುರುಹಿರಿಯರ ಪಾದ ಪದ್ಮಕ್ಕೆ[1] ವಂದಿಸಿ
ಸ್ಮರಹರ ಸುತಗೆ ನಮೋ ಎಂದು—ಯಜ್ಞೇಶ್ವರನ
ಚರಿತೆಯನೆ ಪಾಡಿ—ಪೊಗಳುವೆ ೧

ಸೃಷ್ಟಿ ನಿರ್ಮಿಸಿ ಬ್ರಹ್ಮ ಚಿತ್ತದೊಳಾಲೋಚಿಸಿ
ಸಪ್ತಋಷಿಗಳನೆ ಬೆಸಗೊಂಡು—ಯಜ್ಞೇಶ್ವರನ
ಸೃಷ್ಟಿಸಬೇಕೆಂದು—ನುಡಿದನು[2] ೨

1 ಚರಣಕ್ಕಭಿ, ಪಾದಕಮಲಕ್ಕಭಿ, ಪುಣ್ಯಪಾದಕ್ಕಭಿ. 2 ನುಡಿದಾರೆ.

ಆದಿ ದೇವತೆಗಳ ನಿರ್ಮಾಣವನೆ ಮಾಡಿ
ಪಾರ್ವತೀವರನ ಒಲಿಸಿಯೆ[1] ಪಾವಕನ
ಬೇಡಿಕೊಳ್ಳೆನುತ—ನುಡಿಪನು ೩

ದೇವಾದಿ ಸುರರು ತಮ್ಮೊಹಾರಕ್ಕೋಸ್ಕರ[2]
ಪಾವಕನ ನಮಗೆ ಪಯಮಾಡಬೇಕೆಂದು
ಆ ಸದಾಶಿವಗೆ—ನುಡಿದರು ೪

ಕಡಲೇಳು ಸಾಗರದ[3] ನಡುಮಧ್ಯದೊಳಗಿರುವ
ಬಡಬಾನಲನೆಂಬ ಪುರುಷನ—ಮೆಚ್ಚಿಸಲು
ಕಡು ಉಗ್ರತಪವ—ಚರಿಸಿದ ೫

ಈಶ್ವರನ ಹಣೆಯಲ್ಲಿ ಯಜ್ಞೇಶ್ವರನಿರುತಿರೆ
ಸಾಸಿರ ವರುಷ ತಪಗೈದ ವಾರ್ತೆಯ
ಈಶ್ವರ ಚಿಂತಿಸಿದ[4]—ಮನದಲ್ಲಿ ೬

ಗಂಗೆ ಪಾರ್ವತಿ ಸಹ ನಂದಿ ವಾಹನವೇರಿ
ಬಂದರೆ ಸುರರ ಬಳಿಗಾಗ—ಈಶ್ವರರು
ಇಂದ್ರ ಮಾಡುಗ್ರ—ತಪವೇನು ೭

ಮಂಗಲ ಮಹಿಮ ಮಾದೇವಿಯೊಳಿಂತೆಂದ
ಇಂದ್ರ ಮಹೋಗ್ರ ತಪಗೈವ—ವಾರ್ತೆಯ
ಅಂಬಿಕೆ ನೋಡೆನುತ—ನುಡಿದನು ೮

ಧರಣಿ ದೇವಿಯು ದಿವ್ಯ ತರುಣಿ ರೂಪವ ತಾಳಿ
ಧರೆಯ ಮಾನವರ ಅತಿ ಪಾಪದ ಹೊರೆಯ
ಹೊರಲಾರೆನೆನುತ—ನುಡಿದಳು ೯

ನೀವಲ್ಲದೆ ಜನವನು ರಕ್ಷಿಪರಾರೆಂದು
ತಂದೆ ತಾಯಿಯರು ಜಗದಲ್ಲಿ—ಲೋಕವ
ರಕ್ಷಿಸಬೇಕೆಂದೆ—ನುಡಿದರೆ ೧೦

---

1 ವರಿಸಿಯೆ 2 ತಮ್ಮೋಹಗೋಸ್ಕರವಾಗಿ. 3 ಈರೇಳು ಭುವನದ. 4 ಈಶ್ವರ ತಾತಿಳಿದ.

ನಮ್ಮ ಲೋಕದ ಜನರು ಹಣ್ಣು ಹಂಪಲು ಸವಿದು
ಪನ್ನಗಧರನ ಒಳಗಿಹರೆಂಬುದ[1]
ಪನ್ನಗ ಭೂಷಣನು—ತಿಳಿದನೆ[2] ೧೧

ಈರೇಳು ಲೋಕಕ್ಕೂ ಪಾವನಕಾಗಿಯೆ
ಪಾವಕನ ನಮಗೆ ದಯಮಾಡಬೇಕೆಂದು
ಸುರರು ಬಿನ್ನವಿಸಿ—ನುಡಿದರು ೧೨

ಉರಗ ಭೂಷಣ ನೀನು ಅರಿಯದ್ದೇನುಂಟೆಂದು
ಸುರರು ಬಿನ್ನಪಿಸಿ ನಮೋ ಎಂದು[3]—ಪಾವಕನ
ಕೊಡಬೇಕೆಂದೆನುತ—ನುಡಿದರು ೧೩

ಸುರರು ಬಿನ್ನಪಿಸಲು ಹರ ನಸುನಗುತಲೆ
ಕಿರಣದಲೆ ಬಿಟ್ಟ ಅನಲನು—ಮೂಲೋಕ
ಉರಿವಂದದಲಿಳಿದ—ಧರಣಿಗೆ ೧೪

ಗುಡುಗುಡುಗುಟ್ಟುತ್ತ ಗಗನವಲ್ಲಾಡುತ್ತ
ಕಿಡಿಕಿಡಿಯಾಗಿ ಉದುರುತ್ತ—ಯಜ್ಞೇಶ್ವರನು
ಕಡುಬೇಗ ಇಳಿದ—ಧರಣಿಗೆ[4] ೧೫

ಗಗನದ ತಾರೆಗಳು ಉದುರುತ್ತಿರುವಂದದಿ
ಬಿಡಿಮುತ್ತು ಸುರಿದ ತೆರನಂತೆ—ಪಾವಕನು
ಕಡುಬೇಗ ಇಳಿದ—ಧರಣಿಗೆ[5] ೧೬

ಕರೆತಂದು ಕೂಡ್ರಿಸಿ ಕದಳಿ[6] ಪೀಠದ ಮೇಲೆ
ಒಂದಾಗಿ ಸುರರು ನಮಿಸುತ್ತ—[7]ಪೂಜಿಸಿ
ಪರಿಮಳದಾರತಿಯಾ—ಬೆಳಗಿರೆ[7] ೧೭

ಅಷ್ಟವಿಧಾನವ ಕೊಟ್ಟು ವಡಬಾನಲಗೆ
ಪ್ರದಕ್ಷಿಣೆಯ ಗೈದು ನಮೋಯೆಂದು—ಪ್ರಾರ್ಥಿಸಿ
ಕರ್ಪೂರದಾರತಿಯಾ—ಬೆಳಗಿರೆ ೧೮

---

1 ಪನ್ನೀರಾಹಾರದೊಳಗಿಪ್ಪರೆಂಬುದ. 2 ಭೂಷಣನೆ ನುಡಿದರು. 3 ಸ್ತುತಿಗೈದು. 4 ಸುಡುವಂದದಲಿಳಿದ ಧರಣಿಗೆ, ಎದುರ್ಗೊಂಡರಿಂದ್ರ ಸುರರೆಲ್ಲ. 5 ಪಾವಕನ ಇದಿರ್ಗೊಂಡರಿಂದ್ರರೆ ಸುರರೆಲ್ಲ,....ಸಭೆಯಲ್ಲಿ. 6 ಕಮಲ. 7 ಬಡಬಗೆ ಪಟ್ಟಗಟ್ಟಿದ ಸುರರೆಲ್ಲ.

ಅಷ್ಟಮುನಿ ಹರಿಬ್ರಹ್ಮ ದಿಕ್ಪಾಲರೊಂದಿಗೆ[1]
ಶ್ರೇಷ್ಠನೆಂದೆನಿಸೊ ಎನುತಲೆ—ಸುರರೆಲ್ಲ
ಪಟ್ಟಗಟ್ಟಿದರೆ—ಮುದದಿಂದ ೧೯

ವಾಸುಕಿ ಶಯನ ಯಜ್ಞೇಶ್ವರನ ಕರೆತಂದು
ಭೂಸುರೋತ್ತಮರ ಕರದಿಂದಾಹುತಿಗೊಂಡು
ಸಾಸಿರ ಮುಖವ—ಧರಿಸೆಂದ ೨೦

ಹೇ ಹುತಾಶನೆ ಕೇಳೊ ಆಹುತಿಯ ನೀ ಕೊಂಡು
ದೇವತೆಗಳಿಗಿತ್ತು ತಣಿಸಲು—ಬೇಕೆನುತ
ಪಾವಕಗೆ ನುಡಿದ—ಪರಮೇಶ ೨೧

ಬಹುಪರಿಯಲಿ ಕರದಿ ಆರತಿ ನೀವಾಳಿಸಿ
ಪಾವಕಗೆ ಸುಳಿಸಿರೆನುತಲೆ—ಸುರರೆಲ್ಲ
ಮೇರು ಪರ್ವತಕೆ—ನಡೆದರು ೨೨

ಧರಣಿ ಮಂಡಲದ ಪರಿಪಾಲದಿ ಪಾವಕನ
ವೇದಪಾಲಕನ ಒಡಗೊಂಡು—ಪೂಜಿಸಿ
ಪೂರ್ಣಾಹುತಿಯನೆ—ರಚಿಸಿದ ೨೩

ಪರಿಮಳದುದಕವು ಅಗರು ಚಂದನ ಗಂಧ
ಬರಹದ ಶಾಲೆ ರಚನೆಯು—ಪೀತಾಂಬರವ
ಅನಲಗಾಹುತಿಯನೆರೆದರು ೨೪

ಕೆಂದೆ ಕರೆದ ಹಾಲು ನಾನಾಪರಿ ಭಕ್ಷ್ಯಗಳು
ಧನ ಧಾನ್ಯ ಸಹಿತ ಬಹುವಿಧ—ಭಕ್ಷ್ಯದಿ
ಅನಲಗಾಹುತಿಯ—ಎರೆದರೆ ೨೫

ದರ್ಭೆ ಸಮಿಧವು ಯಜ್ಞೋಪವೀತವು
ವಿಧ್ಯುಕ್ತವಾದ ಪರಮಾನ್ನ—ಪಿಂಡವನು
ಅಗ್ನಿಗಾಹುತಿಯನೆರೆದರು ೨೬

1 ... ಚಿತ್ತದೊಳಾಲೋಚಿಸಿ.

ಇಕ್ಷುದಂಡವು ರಾಜಭಕ್ಷ್ಯ ಕಜ್ಜಾಯವು
ಲಕ್ಷ ಮೋದಕವು ಲಡ್ಡುಗೆ—ಘೃತಗಳ
ಅಗ್ನಿಗಾಹುತಿಯನೆರೆದರು ೨೭

ಕೊಡ ಕೊಡ ಘೃತ ತಿಲ ತಂಡುಲ ರಾಶಿಗಳು
ನವಧಾನ್ಯ ಸಹಿತ ನವವಿಧ—ತಾಂಬೂಲ
ಅನಲಗಾಹುತಿಯನೆರೆದರು ೨೮

ಅವನಿಪಾಲರು ಸುರರು ಕಲಶ ಕನ್ನಡಿ ಹಿಡಿದು
ಮಧುಪರ್ಕ ಕ್ಷೀರ ವಿಧದಿಂದ—ಉಪಚರಿಸಿ
ಪೂರ್ಣಾಹುತಿಗಳ—ರಚಿಸಿದ ೨೯

ಇಂತು ಸಜ್ಜನ ವೇದ ಮಂತ್ರ ವಿಧ್ಯುಕ್ತದಿ
ಪಂಚಾಮೃತ ಫಲವ ಕದಳಿ ತೆಂಗಿನ ಕಾಯಿ
ಪಾವಕಗಾಹುತಿಯನೆರೆದರು ೩೦

ಅತ್ತಿ ಮುತ್ತುಗ ಸಮಿಧೆ ಉತ್ತರಣೆ ಅಶ್ವತ್ಥ
ಎಕ್ಕೆಯು ಖದಿರ ಶಮಿಪತ್ರ—ಸಹಿತಾ।
ಅನಲಗಾಹುತಿಯನೆರೆದರು ೩೧

ಕೇತಕಿ ಸ್ವರ್ಣ ಚಂಪಕ ಮಾಣಿಕ ಮೊಲ್ಲೆ
ನೂತನವಾದ ಮಂದಾರ—ಸುರಗಿಯ
ಕೊಟ್ಟರಾಹುತಿಯ—ಅನಲಗೆ ೩೨

ಮೂಲ ಮಂತ್ರದಿ ವಡಬಾನಲನ ಪೂಜಿಸಿ
ಒಂದಾಗಿ ಸುರರು ನಮೋ ಎಂದು—ಯಜ್ಞೇಶ್ವರಗೆ
ಮಂಗಳಾರತಿಯಾ—ಬೆಳಗಿರೆ ೩೩

ಮಂಗಲ ವಡವಗೆ ಮಂಗಲ ಯಜ್ಞೇಶ್ವರಗೆ
ಮಂಗಲ ಮೂಲೋಕದೊಡೆಯಗೆ—ಅನಲಗೆ
ಮಂಗಳಾರತಿಯಾ—ಬೆಳಗಿರೆ ೩೪

ಜಯ ವಡಬಾನಲಗೆ ಜಯ ಕಾಲ ಸನ್ನಿಧಿಗೆ
ಜಯ ಪಾವಕನಿಗೆ ಜಯ ಜಯ—ಎನುತಲೆ
ಸುರರು ಹೂಮಳೆಯ—ಕರೆದರು[1] ೩೫

1 ಜಯವೆಂದಾರತಿಯಾ ಬೆಳಗಿರೆ.

ಇಂತು ವಡಬಾನಲನ ಅಂತರಂಗದ ಕಥೆಯ
ಸಂತೋಷದಿಂದ ಬರೆದೆನು—ತಪ್ಪಿರೆ
ವೆಂಕಟರಮಣ—ಸರಿಮಾಡು[1] ೩೬

## 274. ಪೂರ್ಣಾಹುತಿಯಾಗುವದು

ಶ್ರೀ ಪಾರ್ವತಿಯ ಜಾತನಡಿದಾವರೆಯ
ನಾ ಪೊಡಮಡುತ ವಂದಿಪೆ ಶಾರದೆಯ
ಶ್ರೀಪತಿ ಶಿವ ಬ್ರಹ್ಮಾದ್ಯರ ನೆನೆದು
ತಾಪಸ ತಿಂಥಿಣಗುರೆ ಕೈಮುಗಿದು
ತಾಪಸ ಕರದಿಂ ರಚಿಸಿದ ಹವನ ಕ
ಲಾಪದೊಳಗೆ ಮತ್ತಾ ಪೌರೋಹಿತ ॥
ರಾ ಪೂರ್ಣಾಹುತಿಯ—ಗೈದರು ೧

ಸ್ತೋತ್ರ ಸತ್ಪಾತ್ರ ಪವಿತ್ರ ಸುಗಾತ್ರ
ಚಿತ್ರ ಚರಿತ್ರವನಲ ವೀತಿಹೋತ್ರ
ಸುತ್ರಾಮಾದ್ಯಖಿಳ ದೇವಾವಳಿ ವಿನುತ
ಸತ್ರೇಶನ ನಡು ಸಜ್ಜನನಾಥ
ವರ್ತಿಸಿಯಾಹುತಿಯಲಿ ಸಂತುಷ್ಟಿಯ
ಬಿತ್ತರಿಸೆಮಗೆ ಧನಂಜಯ ನೀ ಶುಭ ॥
ಸಪ್ತಾರ್ಚಿ ಸಾರಿ—ದಯದೋರಿ ೨

ಮಿಗೆ ಗಣಾನಾಂತ್ವಾದಿ ಮಂತ್ರೋಚ್ಚಾರದಲಿ
ತೆಗೆತೆಗೆದೆತ್ತಿ ಪಿಡಿದಾಜ್ಯಾಹುತಿಯಲಿ
ಭುಗುಭುಗಿಲೆಂದು ವಿಡಾಯದೊಳಾಗ
ನೆಗೆನೆಗೆದಾಸ್ವಾದಿಸಿ ಹರಿ ಬೇಗ
ಅಗಣಿತ ಗುಣ ಶ್ರೀಗುರು ವರ ವೆಂಕಟ
ಜಗದೊಡೆಯನನಂದೊಗುವಾನಂದದಿ ॥
ಮಿಗಿಸಿ ಕೈಮುಗಿದರೊಲವಿಂದ ೩

1 ಕರುಣಿಸು.

## ಅಧ್ಯಾಯ 5

# ಪುಣ್ಯಕಥಾತ್ಮಕ

### 275. ದಮಯಂತೀ ಕಲ್ಯಾಣ

ಶ್ರೀ ಗುರುವಿನ ಪಾದ ಪೂಜೆಯ ಗೈದು
ನಾಗವದನನೊಳು ಮತಿಗಳ ಪಡೆದು
ವಾಗೀಶ್ವರಿಯನು ಮನದಲಿ ಸ್ಮರಿಸುತ[1]
ನಾಗಶಯನ ಮಾರಮಣನ[2] ನೆನೆದನು ॥
ರಾಗದಲಿ ಪಾಡಿ ಪೊಗಳುವೆ ೧

ಭೂರಿ ವೈಭವದಿಂದ ನಿಷಧ ಪಟ್ಟಣದಿ
ವೀರಸೇನನು ಧರೆಯಾಳ್ವ ಸಮಯದಿ
ವಾರಿಜನಯನ ಮುರಾರಿಯ ಕರುಣದಿ
ಕ್ಷೀರವಾರಿಧಿಯೊಳು [3]ಚಂದ್ರನಂತೋರ್ವ ಕು ॥
ಮಾರ[3]ನುದಿಸಿದನು—ನೃಪತಿಗೆ ೨

ಹೊತ್ತು ವೇಳ್ಯವ ನೋಡಿ ಪೃಥ್ವೀಪಾಲಕನು
ಮತ್ತೆ ಜೋಯಿಸರನು ಕರೆಸಿ ಲಗ್ನವನು
ನಿತ್ತು ಪಂಡಿತರೊಳು ಕೇಳಲು ಭೂಪನು
ಉತ್ತಮನಾಗಿ ಬಾಳುವನೆಂದು ಯೋಚಿಸಿ ॥
ಉತ್ತರವ ಪೇಳಿ—ತೆರಳ್ಯಾರು ೩

ಬಾಲ ಹುಟ್ಟಿದನೆಂದು ಬಹಳ ತೋಷದೊಳು
ಮೇಲಾಗಿಹ ಭೂಸುರರೈತರಲು[4]
[5]ಬೀಳುಕೊಂಡಗಣಿತ ದಾನವ ಕೊಡಲು ಭೂ
ಪಾಲಕಗಾಶೀರ್ವಾದ ಪಾಲಿಸುತ ತ ॥
ಮ್ಮಾಲಯಕೆ[5] ಬೇಗ—ನಡೆದರು ೪

---

1 ಪ್ರಾರ್ಥಿಸಿ. 2 ಶ್ರೀರಮಣನ. 3 ಚಂದ್ರನಂದದಿ ಒಬ್ಬ ಕುವರ. 4 ಮೇಲಾದ ಭೂಸುರರನು ಕರೆತರಲು. 5 ಬೀಳುಕೊಂಡಿರುತಿಹಗಣಿತ ದಾನವ ಕೊಟ್ಟು। ಭೂಪಾಲಕಗೆ ಆಶೀರ್ವಾದವ ಮಾಡಿ ಆಲಯಕೆ.

ಜಾತಕರ್ಮವ ಗೈದು ಭೂತಳೇಶ್ವರನು
ದೂತರ ಕಳುಹಿಸಿ ಶೀಘ್ರದಿ ಸುತನ
ಮಾತುಳ ಮೊದಲಾದ ಸರ್ವರ ಕರೆಸಿದ
ಭೂತನಾಥಗೆ ಕೈಯ ಮುಗಿದು ಪ್ರಾರ್ಥಿಸಿ ತನ್ನ ॥
ಜಾತಗೆ ಪೆಸರಿಟ್ಟ—ನಳನೆಂದು ೫

ಮೋದದಿ ಚಾರರ ಮೊದಲಾಗಿ ಕಳುಹಿ
ಭೂದಿವಿಜರ ಸತ್ವರದಲಿ[1] ನೆರಹಿ
ವೇದವಿಹಿತದುಪನಯನವ ಮಾಡಿಯೆ
ಓದಿಸಿದನು ಶ್ರುತಿಶಾಸ್ತ್ರ ಪುರಾಣವ ॥
ಮೇದಿನಿಯೊಳಗಿವಗೆ—ಸರಿ ಕಾಣೆ ೬

ನಂದಿವಾಹನ[2] ಸುರವಂದ್ಯನ ದಯದಿ
ಚಂದದಿ ಪೂರ್ವಪಕ್ಷದ ಕಲೆಗೂಡಿ
ಚಂದ್ರನು ಬೆಳಗುವ ತೆರದಲಿ ನೈಷಧ
ನಂದನ ಶೋಭಿಸುತಿರೆ ಮಂದಿರದೊಳು ॥
ತಂದೆ ತಾಯಿಗಳು—ಹರುಷದಿ ೭

ಆ ಮಹೀಪತಿ ವೀರಸೇನನೆಂಬವನು[3]
ಸೋಮಶೇಖರನನು ನೆನೆದು ಪೇಳಿದನು
ಸೋಮವಾರದಿ ಶುಭ ಲಗ್ನವೆಂದೆನುತಲೆ
ಭೂಮಿ[4]ಯನಾಳೆಂದು ಪಟ್ಟವ ವಿರಚಿಸಿ ॥
ನೇಮಿಸಿದನು ತನ್ನ—ಮಗನಿಗೆ ೮

ಸರ್ಪಭೂಷಣನಂತೆ ದರ್ಪವ ಧರಿಸಿ[5]
ಛಪ್ಪನ್ನ ದೇಶದ ದೊರೆಗಳ[6] ಜಯಿಸಿ
ಕಪ್ಪಕಾಣಿಕೆಗೊಂಡು ಸೈನ್ಯವನೊಡಗೊಂಡು
ಬಪ್ಪ ಬರವ ಕಂಡು ಸುರಪ ದಿಕ್ಪಾಲಕ ॥
ರೊಪ್ಪಿಸಿದರಮಿತ—ಧನವನ್ನು ೯

1 ಭೂರಿವಿಜಯ ಸಚ್ಚರಿತದಿ. 2 ನಂದೀಶ್ವರ. 3 ಆ ಮಹಾಭೂಪತಿ ವೀರಸೇನಕನು.
4 ಸೀಮೆ. 5 ಬಹಳ ದರ್ಪದಲಿ, 6 ಛಪ್ಪನ್ನ ದೊರೆಗಳ ಸಮರದಿ,

ಪಡೆದು ಇಂದ್ರಾದಿಗಳೊಡನೆ ಮಾತಾಡಿ
ಪೊಡವಿಗೆ ಬರೆ ಪಡೆಗಳನೊಡಗೂಡಿ
ಅಡವಿಯೊಳ್ ಮೃಗಗಳ ಖಡ್ಗದಿ ಕಡಿದು
ಉಡಿದು ಬಿದ್ದಿಹ ಹಂಸ ಖಗವನು ಪಿಡಿದು ॥
ಕಡುಬೇಗ ಪುರಕೆ—ಬರಲಂದು ೧೦

ಚಿತ್ರವಾಗಿಹ ಪಂಜರವೊಂದ ರಚಿಸಿ
ಉತ್ತಮವಾಗಿಹ ಸ್ಥಳದೊಳಗಿರಿಸಿ[1]
ಪೆತ್ತವರುಗಳಂತೆ ಪ್ರೇಮದಿ ಲಾಲಿಸಿ[2]
ಇತ್ತು ಭೋಜ್ಯಂಗಳ ದಿನದಿನ ಸಲಹಿದ ॥
ವಿಸ್ತರವನೇನ—ಪೊಗಳುವೆ ೧೧

ಒಂದು ದಿವಸ ಹಂಸನಧಿಕ ಭಕ್ತಿಯೊಳು
ವಂದಿಸಿ ಪೊಗಳಿ ಪೇಳಲು ಭೂಪನೊಳು
ಕಂಧರವನು ಕಾಯ್ದುಳುಹಿದೆ ಹಿತದೊಳು
ಬಂಧನವನು ಬಿಟ್ಟು ನಂಬಿರುವೆನು ಇ ॥
ನ್ನೊಂದನು ನಿನಗೆ—ಒರೆವೆನು ೧೨

ಏಕಚಕ್ರಾಧಿಪನೆಂಬ ನಾಮವನು
ಲೋಕದೊಳ್ ಪಡೆದಿಯೆ ಬಹು ಖ್ಯಾತಿಯನು
ಏಕೆ ನೀ[3] ಪರಿಣಯವಾಗದೆ ಇರುತಿಹೆ
ಸಾಕಿದೊಡೆಯನೊಳು[4] ಕೇಳಲು ಮರಳಿ ವಿ ॥
ವೇಕದಲಿ ಹಂಸಗುಸುರಿದ ೧೩

ನಿನ್ನಿಂದ ಮಿಗಿಲೆನಗಾಪ್ತರ ಕಾಣೆ
ಎನ್ನ ಇಂಗಿತವ ಪೇಳುವೆ ನಿನ್ನಾಣೆ[5]
ಕನ್ನಿಕೆಯೆನಗೆಣೆಯಿಲ್ಲದೆ ವಿರಹವ
ಅನ್ಯರಿಗರಿಯದ ತೆರದೊಳಗಿರುವೆನು॥
ಇನ್ನೇನು ನಿನಗೆ—ನುಡಿಯಲಿ ೧೪

1 ಹಸ್ತದೊಳಿರಿಸಿ. 2 ಪ್ರೇಮದೊಳಾಲಿಸಿ. 3 ಏಕೆಂದು. 4 ಸಾಕೆಂದೊಡೆಯನೊಳು, 5 ಇಂಗಿತವನು ಕೇಳು ಎನ್ನಾಣೆ.

ಎಂದ ಮಾತನು ಕೇಳಿ ಪಕ್ಷಿರಾಜೇಂದ್ರ
ಇಂದುವಂಶಜಗೆ ಪೇಳಿದ ಗುಣಸಾಂದ್ರ
ಮಂದಹಾಸದಿ ಜಗದೊಳು ನಿನಗಾಗುವ
ಮಂದಗಾಮಿನಿಯನು ನೋಡಿ ಬರುವೆನೆಂದು ॥
ನಿಂದು ಕೈಮುಗಿದು—ಪೊರಟನು ೧೫

ನಳನೊಳಪ್ಪಣೆಗೊಂಡು ನಿಮಿಷ ಮಾತ್ರದಲಿ
ಇಳೆಯೊಳು ಸಂಚರಿಸಿದ ಶೀಘ್ರದಲಿ
ಚಳಕದಿ ನೋಡಲು ನೃಪತಿಗೆ ಪೋಲುವ
ನಳಿನಲೋಚನೆಯನ್ನು ಕಾಣದೆ ಶೋಕದಿ ॥
ಬಳಲಿ ಹಿಂದಿರುಗಿ—ಭ್ರಮೆಗೊಂಡ ೧೬

ಬರುವ ಮಾರ್ಗದೊಳೊಂದು ಮರದಲ್ಲಿ ಕುಳಿತು
ಹರಹರ ಎಂದು ವಿಶ್ರಮಿಸುತಲಿನಿತು
ಅರಸನೊಳೆಂದುದು ನಿಷ್ಫಲವಾಯಿತು
ಪರಿಪರಿಯಲಿ ಚಿಂತಿಸಿ ಬಾಯಾರಿದು[1] ॥
ಕರಗಿ [2]ಮರುಗುತ್ತ—ಇರಲಿತ್ತ[2] ೧೭

ಕುಂಡಿನೀಪುರದೊಳು ಭೀಮರಾಯನು ಭೂ
ಮಂಡಲವನು ಪಾಲಿಸುವ ವೇಳ್ಯದೊಳು[3]
ಕುಂಡಲಿ ಶಯನನ ವರದಲಿ ಪಡೆದನು
ಪುಂಡರೀಕಾಂಬಕಿಯಾಗಿಹ ಮಗಳನು ॥
ಕೊಂಡಾಡಿ ಪುರದಿ—ಮೆರೆದನೆ ೧೮

ದಮಋುಷಿ ಮತದೊಳು ಸುತೆಗೆ ನಾಮವನು
ದಮಯಂತಿಯೆಂದು ನಿಶ್ಚಯಿಸಿ ಭೂಮಿಪನು
ಸುಮಶರನರಗಿಣಿಯಿಂದ[4] ನೂರ್ಮಡಿಯಾಗಿ
ಅಮಿತ ಶೋಭಿಸುತಿಹ ಚೆಲುವ ನಿರೀಕ್ಷಿಸಿ ॥
ಭ್ರಮೆಗೊಂಡರಾಗ[5]—ಜನರೆಲ್ಲ ೧೯

1 ಚಿಂತಿಸಿದನು ಭ್ರಾಂತು. 2 ಮನಮರುಗುತಿರಲಿತ್ತ. 3 ಆಳಿರುವ ಸಮಯದಿ.
4 ನರಗಿಣಿಯರ. 5 ಭ್ರಮೆಗೊಂಡಾಪುರದ.

ಅಂತಃಪುರದೊಳಿರ್ಪ ಭೀಮನ ಮಗಳು
ದಂತಿಗಮನೆ ದಮಯಂತಿ ಎಂಬವಳು
ಕಂತುವಿನುರುಬೆಯೊಳೇಳುತ್ತ ಬೀಳುತ್ತ
ಚಿಂತಿಸುವದ ಕಂಡು ಸಲಹಿದ ಶುಕನಂದು ॥
ಅಂತರವರಿತು—ನುಡಿಸಿದ ೨೦

ಏನಿದೇನಿದು ನೃಪತನುಜೆಯೆ ಕೇಳು
ಮಾನಸ ಕಳವಳಗೊಳುತಿದೆ ತಾಳು
ಆನನ ಬಾಡಿದ ಪರಿಯು ಪೇಳೆನ್ನೊಳು
ಕಾಮಶರದ ಬಾಧೆಯೆಂದು ತೋರುವುದನು ॥
ಮಾನವ ತ್ಯಜಿಸಿ—ವಚಿಸೀಗ[1] ೨೧

ಪಾಡೇನು ನುಡಿವುದು ಶುಕ ಶಿರೋಮಣಿಯೆ
ಮಾಡಲಿಲ್ಲವು ಲಗ್ನ ಪಿತ ಮಮ[2]ಗಣಿಯೆ
ಹೂಡುವ ಸುಮಶರ ಸ್ಮರನೆಡೆಬಿಡದೀಗ
ನಾಡಿನ ಮಾತಲ್ಲ ಕೇಳು ಸುಡುವುದು ॥
ಬಾಡವನಂದದಲಿ—ಶಿವ ಬಲ್ಲ ೨೨

ನಾರೀಮಣಿಯೆ ಮನದೀ ಪರಿಭವವ
ತೋರದೆ ಇರು ತವ ಮನಕೆ ಬೋಧಿಸುವ
ಚಾರು ಪುರುಷರತ್ನವ ನೋಡಿ ಬಹೆನೆಂದು
ವಾರಿಜಮುಖಿಗಭಿವಂದಿಸಿ ವಹಿಲದಿ ॥
ಭೋರನೆ ಪಥವಿಡಿದು—ನಡೆದನು ೨೩

ಮೇದಿನಿಯೊಳಗೆಲ್ಲ ಬೇಗನೆ[3] ಪೋಗಿ
ಶೋಧಿಸಿ ಗೋಚರಿಸದೆ ಬೆರಗಾಗಿ
ಮೋದವಳಿದು ಹಂಸ ಕುಳಿತಿಹ ಮರಕಾಗಿ
ಆದರಿಸುತ ಬಂದು ತನಗೆ ತಾನೆನಲು ವಿ ॥
ಪಾದದಲಿ ನುಡಿದ—ದುಗುಡದಿ ೨೪

1 ಯೋಚಿಸಿದ. 2 ಮಾಡಲಿಲ್ಲವು ಪಿತ ರಘುಣಾನ. 3 ಬೇಗಧಿ.

ನಾರಿ ಪುರುಷರೆಂಬ ವಾರ್ತೆಯಿದೇನು
ಭೂರಿ ಸಂತಾಪದ ಕಾರಣಗಳನು
ವೀರ ನೀ ಪೇಳ ನಿನ್ನಾಗಮಗಳನು ಶ್ರೀ
ಭಾರತೀಪತಿ ವಾಹನನೊಳು ಬಹು ವಿ ॥
ಸ್ತಾರದಲಿ ನಿಜವನೊರೆದನೆ ೨೫

ಕಾಣದೆ ಚೆದುರನ ಪೋಗಿ ಪೇಳಿದರೆ
ಪ್ರಾಣವ ಕಳೆದುಕೊಂಬಳು ಬಹು ಶೂರೆ
ಪ್ರಾಣಕುಂದಿರುವಳು ತಾಮಸವಾದರೆ
ಕೇಣದೊಳೀ ಪರಿ ಶುಕನಿಗೆ ಹಂಸ ತ ॥
ದ್ವಾಣಿಯ ಕೇಳಿ—ನುಡಿಸಿದ ೨೬

ತರುಣಿಯರೊಳು ಚೆಲ್ವ[1] ಬೊಂಬೆಯಂತಿಹಳು
ಭರಿತ ಯೌವನದಿಂದ ಬೆಳಗುವಳವಳು
ಪರಿಣಯವಾಗದೆ ವಿರಹದಿಂದಳುವಳು
ಇರುವಳು ಕುಂಡಿನಪುರದೊಳು ಭೀಮನ ॥
ತರಳೆ ದಮಯಂತಿ—ಎನುತಲಿ ೨೭

ಗಿಣಿಯೆಂದ ನುಡಿಕೇಳಿ ಒದಗಿ ಪೇಳಿದನು
ಮಣಿಮಯ ಮಕುಟ ಮಂಡಿತ ಶೋಭಿತನು
ಗಣಿಸುವರಸದಳ ಫಣಿಪಗೆ ಸೊಬಗನು[2]
ಎಣೆಯಿಲ್ಲ ಜಗದೊಳು ನಿಷಧಪುರೇಶಗೆ ॥
ಗುಣದೊಳು ಪೆಸರವಗೆ—ನಳನೆಂದು ೨೮

ಜನಪನ ರೂಪವ ಬರೆದು ನಾ ಕೊಡುವೆ
ವನಿತೆಯಾಕೃತಿಯ ಪಾಲಿಸೆ ತೋರಿ ಬರುವೆ
ಮನುಜ ಜನ್ಮದ ನಿಧಿಯಾಕೆ[3] ಯಾಗುವದಿದು
ಘನ ಬೇಗ ಮರಳಿ ನಾವಿಲ್ಲಿಗೆ ಬರಬೇ ॥
ಕೆನುತ ನಿಶ್ಚಯಿಸಿ—ನಡೆದರು ೨೯

---

1 ರಂಗ. 2 ಸೋಲುವ. 3 ವನಜಯೋನಿಯ ನಿಧಿಯಂತೆ.

ತೋರಲು[1] ಪಟವ ತಂದೀಕ್ಷಿಸಿ ಜವದಿ
ಮಾರಸನ್ನಿಭ ಸಂಭ್ರಮಿಸುತ ಮನದಿ
ತೋರು ತೋರೀ ಚೆಲುವೆಯ ನೀ ಕರುಣದಿ
ಮೂರು ಜನ್ಮದಿ ನಾ ಮರೆಯೆನೆನಲು[2] ಹಂಸ ॥
ಸಾರಿ ನಾ ಬರುವೆ—ಕ್ಷಮಿಸೆಂದ ೩೦

ಅತ್ತಲು ಶುಕನೈದಿ ಚಿತ್ರವ ಬೇಡಿ
ಹಸ್ತದಿ ನಳನ ಸೌಂದರ್ಯವ ನೋಡಿ
ಚಿತ್ತಜನುರುಬೆಗೆ ಚಿತ್ತ ಚಂಚಲವಾಗೆ
ಮತ್ತಕಾಶಿನಿ ಬಿದ್ದು ಹೊರಳಿದಳವಳಿಗೂ[3]
ಉತ್ತಮ ತಡೆಯೆಂದು—ನಡೆದರು ೩೧

ಮುನ್ನಿನ ಕುರುಹನು ನೆನೆದು ಖೇಚರರು
ಉನ್ನತ ಮರಕ್ಕೈತಂದು ಕೂಡಿದರು
ಚೆನ್ನಾಗಿ ಒಪ್ಪಿದರೆನುತಲೆ ಈರ್ವರು
ಅನ್ಯೋನ್ಯದಿಂದಲಿ ಹರುಷವ ತಾಳುತ
ಮನ್ನಿಸಿ ಪುರಗಳಿಗೆ—ನಡೆದರು[4] ೩೨

ಅರಸ ಮೆಚ್ಚಿದನೆಂದು ಆ ಸತಿಗೆನಲು
ತರುಣಿ ಒಪ್ಪಿದಳೆಂದು ದೊರೆಗೆ ಸೂಚಿಸಲು
ಸ್ಮರನುಪಹತಿಗುರುಬೆಗೆ ಬೆರಗಾಗಲು
ಮರಳಿ ಧೈರ್ಯವ ತಾಳಿಯತುಲ ವಿಕ್ರಮವನು[5]
ಧರಿಸಿ ನಿಜಮಂತ್ರಿಗೊರೆಯಲು ೩೩

ಮಂತ್ರಿ ಲಾಲಿಸು ಮತಿವಂತ ನೀ ಪೋಗಿ
ಅಂತರವರಿತು ನಿರಂತರವಾಗಿ
ಸಂತತ ಭೀಮನ ಸುತೆಯನು ದೃಢವಾಗಿ
ಸಂತೋಷದಲಿ ಕೇಳಿ ಬರಬೇಕೆಂದೆನಲಾತ ॥
ನಿಂತು ಕೈಮುಗಿದು—ನಡೆದನ[6] ೩೪

---

1 ನೋಡಲು. 2 ಜನ್ಮಕ್ಕೆ ಮರೆಯೆನು ಎನೆ. 3 ಬೀಳ್ದೊರೆದಳವನಿಗೇ. 4 ಉನ್ನತ ಹರುಷದಲಿ ಪುರಕಾಗ. 5 ಯತುಲ ಬಲದಿ ಬಂದು. 6 ಬಿನ್ನಯಿಸಿ ಹೊರಟಾಗ.

ನಡೆದನು ನೈಷಧ ಸೇವಕನಂದು
ಕಡು ಬೇಗ ಕುಂಡಿನ ನಗರಕೆ ಬಂದು
ಪೊಡವಿಪಾಲಕನನ್ನು ಕಂಡು ವಂದಿಸಲಂದು
ಬೆಡಗಿನ ಪೀಠವನೀಯೆ ಕುಳ್ಳಿರೆಂದು ॥
ಕೊಡಿಸಿ ವೀಳ್ಯವನು—ತೆಗೆತಂದು ೩೫

ಕುಶಲವೆ ನಳಮಹಾರಾಜಶೇಖರಗೆ
ಕುಶಲವೆ ಪ್ರಜೆ ಪರಿವಾರ ಮಂತ್ರಿಗಳಿಗೆ
ಕುಶಲವೆ ರಾಷ್ಟ್ರದೊಳಖಿಳ ವಾಸಿಗಳಿಗೆ
ಕುಶಲವೆ ಲಾಲಿಸು ತವ ಪುರದೊಳಗೆ ॥
ಕುಶಲವೆ ನಿಮಗೆಲ್ಲ—ವಸತಿಗೆ ೩೬

ಉಸುರು ನೀನಿಲ್ಲಿಗೆ ಬಂದ ಕಾರ್ಯವನು
ಅಸಮ ಸಾಹಸನೇತಕೆ ಕಳುಹಿದನು
ವಸುಧೆಯೊಳಿನ್ನಿಂದಾಗುವ ಬಗೆಯನು
ವಿಷಮವಿಲ್ಲದೆ ಮಾಡುವೆ ಯೋಚನೆಯನು ॥
ಬೆಸಗೊಂಡ ನೃಪಗೆ—ನುಡಿದನು ೩೭

ನಿಮ್ಮಯ ಮಗಳನು ಕೇಳಿ ಬಾರೆಂದು
ಎಮ್ಮೊಡೆಯನು ಎನ್ನ ಕಳುಹಿದನಿಂದು
ಸಮ್ಮತವಾದರೆ ಪಾಲಿಸಬೇಕೆಂದು
ಸಮ್ಮುಖದಲಿ ನಿಂತು ಕೇಳಿದ ಸಚಿವಗೆ ॥
ತನ್ಮನವರಿತು—ಉಸುರಿದ[1] ೩೮

ಕುಶಲದಿ ಕುವರಿಯನೀವೆನು ನಾನು
ಎಸಗುವೆ ಪರಿಣಯ ಸಂಶಯವೇನು
ಪುಸಿಯಲ್ಲ ಮಾತೆನ್ನ ದೃಢವು ಬೇಕೆನುತಲೆ[2]
ಕುಸುಮ ಸಂಭವನೇ ಸಾಕ್ಷಿಯೀ ವಚನಕೆ ॥
ಉಸುರು ನೀ ಪೋಗಿ—ನಿಜವನ್ನು[3] ೩೯

1 ತನ್ಮನದೊಳಗರಿಂತಳವಳಿಂದು. 2 ಹೇಳಿದ ಮಾತಿಗೆ ದೃಢ ಬೇಕೆ. 3 ನಿಜವಾಗಿ.

ಬಂದು ಪೇಳಲು ಸಚಿವೇಂದ್ರ ಬೇಗದಲಿ
ಮಂದಹಾಸದಿ ನಳ ತಿಳಿದು ತೋಷದಲಿ
ಬಂಧು ಬಾಂಧವರನು ಕೂಡಿ ಒದಗುತಲಿ
ಸುಂದರ ಸಕಲಾಭರಣ ಭೂಷಿತನಾಗಿ ॥
ಚಂದದಿ ದಿಬ್ಬಾಣ[1]—ಪೊರಟನೆ ೪೦

ಮನ್ನಿಸಿ ಪಾಠಕರಿರಲು[2] ಪೂರ್ವದಲಿ
ಕನ್ನೆಯರಗಣಿತ ನಡು ಬಳುಕುತಲಿ
ಕನ್ನಡಿ ಕಲಶವ ಪಿಡಿದೆಡಬಲದಲಿ
ಚಿನ್ನದ ಸತ್ತಿಗೆ ಪಿಡಿದತಿಶಯದಲಿ ॥
ಮುನ್ನಾಗಿ ನಡೆದ—ಗುಣಶಾಲಿ ೪೧

ವಾರಣ ಹಯರಥವಿರಲೊಂದು ಕಡೆಗೆ
ಭೇರಿ ನಗಾರಿ ವಾದ್ಯಗಳೊಂದು ದೆಸೆಗೆ
ಧಾರಿಣೀಸುರ ವೇದಗಳೊಂದು ಸಾರಿಗೆ
ಚಾರುತರದ ಚಾಮರವನು ಬೀಸುತ ॥
ಭೋರನೆ ಭೀಷ್ಮಕನ—ಪುರಕಾಗಿ ೪೨

ಬಂದ ದಿಬ್ಬಣವನ್ನು ಕಂಡು ಚಾರಕರು
ಎಂದರಾ ಪುರವರಗರಿತು ನೋಡಿದರು
ಒಂದಾಗಿ ಮಿತ್ರ ಸಮಸ್ತರನೊಡಗೊಂಡು
ಬಂದಿದಿರ್ಗೊಳ್ಳೆ ಬಿಡಾರವ ಕೊಡಿಸಿದ ॥
ಅಂದವ ಪೊಗಳಲಳವಲ್ಲ ೪೩

ಪಕ್ಷರಹಿತವಾಗಿ ವಿಸ್ತಾರವಾದ[3]
ನಕ್ಷತ್ರವಪರಿಮಿತದಿ[4] ಶೋಭಿಸುವ
ಲಕ್ಷ ಮಂದಿರಗಳ ಮಧ್ಯದಿ ನಾಕದ
ಲಕ್ಷಣದಲಿ ಈಕ್ಷಿಸಿ ರಾಜಿಸುವುದ ॥
ತತ್‌ಕ್ಷಣ ಗೋಚರಿಸುತಿರಲಿತ್ತು ೪೪

---

1 ಬಂಧು ಬಳಗದಿ. 2 ಪಾಸಕರಿಡಲು. 3 ನಿಷ್ಕಳವಾದ. 4 ನಕ್ಷತ್ರಾಧಿಪನಿಗೆ ಅಮಿತ.

ಸುರಪ ಮಾರುತ ಶಿಖಿ ವರುಣರು ಭ್ರಮಿಸಿ
ಮರಳಿ ದೇವತೆಗಳ ವೇಷವ ಧರಿಸಿ
ಬರಲಿವರನು ನೃಪ ಕಂಡು ಭಕ್ತಿಯೊಳೆದ್ದು
ಎರಗಿ ವಂದಿಸುವುದ ಕಾಣುತ ಪ್ರೇಮದಿ ॥
ಹರಸಿ ಪೇಳಿದರು—ತ್ವರಿತದಿ[1] ೪೫

ರಾಜಶಿಖಾಮಣಿ ಪೇಳುವೆ ನಿನಗೆ
ರಾಜಿಪ ಈ ನಾಲ್ವರೊಳೊರ್ವನಿಗೆ
ರಾಜೀವನೇತ್ರೆಯ ಮದುವೆಯಾಗುವ ಹಾಗೆ
ವ್ಯಾಜವಿಲ್ಲದೆ ನೀ ಪೋಗಿ ಮಾತಾಡಿಸು
ರಾಜಸ ಗುಣನಿಧಿಯೇ—ಬರಬೇಕು ೪೬

ಹೇಗೆ ನಾ ಪೋಗಲಿ ಭಯವಿಲ್ಲದೀಗ
ನಾಗವೇಣಿಯ ಕಾಂಬುದಕೆನಲಾಗ
ಬೇಗ ತಮ್ಮಯ ನಿಜ ರೂಪವ ತೋರಲು
ನಾಗವರೂಥವ ದೇಶಿಸಿ ಕಳುಹಲು ॥
ಸಾಗಿ ಸತಿಮಣಿಯ—ನುಡಿಸಿದ ೪೭

ಸುಳಿಗುರುಳಿನ ಚೆಲ್ವೆ ವರಹಂಸಗಮನೆ
ಕಲಕೀರವಾಣಿ ಕೋಮಲೆ ಇಭಯಾನೆ
ನಳನೊಳು ಮನವಿಟ್ಟು ಇರುವ ಯೋಚನೆ ಬಿಟ್ಟು
ಬಳಿಕ [2]ನಳನ ಪೋಲ್ವ ಜನರು ಕರೆಸಿದರು ॥
ಅಳವಲ್ಲ[2] ಭಾಗ್ಯಕ್ಕೆಣೆಯಿಲ್ಲ ೪೮

ದೇವಾಧಿಪತಿ ಸಿರಿಯೊಳಗೆ ಸಂಪನ್ನ
ಪಾವಕನತಿ ಚೆಲುವನು ಗುಣರತ್ನ
ಆವನ ಭಯದಿಂದ ವರುಣಾದಿಗಳನ್ನ
ಈ ವಿಧ ಮಹಿಮರನೊಲಿಸಿಕೊಂಡರೆ ನಿನ್ನ ॥
ಠೀವಿಯೇನೆಂಬೆ—ಶಶಿಬಿಂಬೆ ೪೯

1 ಪುರೋಹಿತ. 2 ನಾ ಪೇಳುವ ಜನರನ್ನ ಸ್ವೀಕರಿಸಿದರಳವಲ್ಲ.

ಪಾಕಶಾಸನ ಮೊದಲಾದವರೊಳಗೆ
ಏಕನಿಗಿಡು ಮಾಲೆಯನು ನೀ ಬಾಲೆ
ಲೋಕ ಮೂರೊಳಗಿಹ ಜನರು ಮನ್ನಿಸುವರು
ನಾಕವಾಸಿಗಳನವರತ ವಂದಿಸುವರು ॥
ಶ್ರೀಕರ ಲಲಿತಾಂಗಿ—ನುಡಿದಳು ೫೦

ಈ ರೀತಿಯವರ ಕೊಂಡಾಡುವೆ ಯಾಕೆ
ಕ್ರೂರ ಚಂಚಲವಾಯಿತು ದೃಢಮನಕೆ[1]
ವೀರ ನೀ ದಣಿದೆ ಸುಮ್ಮನೆ ಈ ಕೆಲಸಕೆ
ವೀರಸೇನನ [2]ಸುಕುಮಾರನು ಇಲ್ಲದೆ ॥
ಬೇರೆ ಪುರುಷರನು—ಆಗ್ವಳಲ್ಲ[2] ೫೧

ನರರ ಪಾಡನು ಈಗರಿತುಕೋ ಮನದಿ
ಸ್ಥಿರವಲ್ಲ ಮನುಜರ ಬಾಳುವೆ ಮುದದಿ
ಮೆರೆಯಬಹುದು ನಿನಗಮರರ ಲೋಕದಿ
ಧರಿಸು ಈ ವಚನವೆಂದೆನಲತಿ ದುಗುಡದಿ[3] ॥
ಜರೆದು ಪೇಳಿದಳು—ತ್ವರಿತದಿ ೫೨

ನಾಕಿಗಳಿಗೆ ರಕ್ತ ಮೇಲೆಂಬ ಲಿಖಿತ
ಸಾಕು ನಿನ್ನಯ ನಿಜವರಿತೆನು ಗುಪಿತ
ಆ ಕುರಿಗಳು ನಿಷಧೇಶಗೆ ಕಪ್ಪವ
ಏಕೋಭಾವದಿ ತಂದು ಕೊಡುವರು ನಿಖಿಳರು ॥
ಸಾಕು ನೀನತ್ತ—ಕಡೆ ಸಾಗು ೫೩

ಎಂದ ಮಾನಿನಿ ಮಾತ ಕೇಳುತಾಕ್ಷಣದಿ
ಬಂದು ಆ ಮಹಿಮರೊಳೆನಲು[4] ವಿಸ್ಮಯದಿ
ಮಂದಗಾಮಿನಿಯೊಪ್ಪುವದಿಲ್ಲ ಸರ್ವಥಾ
ಸಿಂಧೂರಚರಣೆಯ ನೀವೇ ವರಿಸಿರಿನ್ನು[5] ॥
ಹಿಂದಿರುಗಿ ಪುರಕೆ—ತೆರಳುವೆ ೫೪

---

1 ಕ್ರೂರ ಚಂಚಲನಹ ಮಮಮನ ದೃಢಕೆ. 2 ಸುಕುಮಾರನಲ್ಲದೆ ಬೇರೆ ಪುರುಷರಿಗನುವಾಗುವವಳಲ್ಲ. 3 ಧರಿಸುವದೆಂದು ಈ ವಚನದಿ ಕ್ರೋಧದಿ. 4 ಆ ಮಹಿಮರೆನಲು.
5 ಸಿಂಧೂರಘವರಗಿಣಿಯೀವೆನ್ನೊಲಿಸಿರೆಂದು,

ಎನುತಲಾ ವಾರ್ತೆಯ ಕೇಳುತಲವರು
ಘನಪರಾಕ್ರಮಿಯೊಳು ದೃಢದಿ ಪೇಳಿದರು
ಮನದೊಳು ಕಪಟವು ಇನಿತಿಲ್ಲ ತಿಳಿದೆವು
ವಿನಯದಿ ಪರಿಣಯವೆಸಗಿ ಸೌಖ್ಯದೊಳಿರು[1] ॥
ಎನುತನಿಮಿಷರು—ಮೆರೆದರು ೫೫

ಮದುವೆ ಮಂಟಪದೊಳು ನಳನೆಡಬಲದಿ
ತ್ರಿದಶರುಗಳು ಮದುವಳಿಗರ[2] ತೆರದಿ
ಒದಗಿ ಕುಳ್ಳಿರುವುದನೀಕ್ಷಿಸಿ ಕ್ಷಿಪ್ರದಿ
ಇದರೊಳು ವ್ಯಾಜವುಂಟೆನುತಲೆ ದುಗುಡದಿ ॥
ಚದುರೆ ತಿರುಗಿದಳಾ—ಸಮಯದಿ ೫೬

ಎಸೆದು ರಂಜಿಪ ಸಭಾಮಂಡಲ[3]ದೊಳಗೆ
ಅಸಮ ಸಾಹಸಿಗಳು ಭ್ರಮಿಸಿದ ಬಗೆಗೆ
ಕುಸುಮ ಬಾಣನ ಬಾಧೆ ಸೈರಿಸಲಾರದೆ
ವಸತಿಯಾಗಿಹರೆಲ್ಲ ವಶ್ಯತಿಲಕ[4]ವಿಟ್ಟು ॥
ಶಶಿಮುಖಿಯ ನೋಡಿ—ಕುಳಿತರು ೫೭

ಶಾರದೆ ದೆಸೆಯಿಂದ ವ್ಯಾಜವ ತಿಳಿದು
ವಾರಿಜನಯನೆ ಅನುಮಾನವ ತೊರೆದು
ಓರೆಗಣ್ಣಲಿ ನೋಡಿ ನಾಚುತ್ತ[5] ನಡುಗುತ್ತ
ಸಾರದಿ ನೈಷಧ ಭೂಪನ ಕೊರಲಿಗೆ ॥
ಹಾರವನಿಕ್ಕಿದಳೆ—ದಮಯಂತಿ ೫೮

ರಮಣೀಯವಾಗಿಹ ಲಗ್ನಮಂದಿರದಿ
ದ್ಯುಮಣಿಯಂತೆಸೆವ ಸಭಾಮಂಟಪದಿ
ಸಮಯದಿ ಪಿತ ಭೀಮ ನಳನಿಗೆ ಮಗಳನು
ರಮಣಿ ಸಹಿತ ಬ್ರಹ್ಮ ಸಭೆಗೆ ವಂದಿಸಿ ಕೇಳಿ ॥
ಸುಮುಹೂರ್ತದಿ ಧಾರೆ—ಎರೆದನು ೫೯

---

1 ವೆಸಗಿರು ಸೌಖ್ಯದಿ. 2 ಮದುವಣಿಗನ. 3 ಸಭಾಮಂದಿರ. 4 ವ್ಯಾಸತಿಲಕ.
5 ನೋಡುತ ಸರಿ.

ಮುದದಿಂದ ಹಸೆಮಣೆ ಮೇಲ್ವಾಸಿಸಲಿ
ವಧುವರರನು ಕುಳ್ಳಿರಿಸಿ ಕೌತುಕದಿ
ಬುಧರು ಚೋದ್ಯವ ತಾಳಿ ನೋಡಲು ಗಗನದಿ
ಸುದತಿಯರೆಲ್ಲರು ಪಾಡುತ ಪೊಗಳುತ ॥
ವಿಧವಿಧವಾರತಿಯಾ—ಬೆಳಗಿರೆ ೬೦

ಹತ್ತಿರಕ್ಕೈತಂದು ಕೂಡಿದ ಜನರು
ಮುತ್ತಿನಕ್ಷತೆಯಿಟ್ಟು ಹರಸಿದರವರು
ಮತ್ತೆ ವಿಳಂಬದಿ ಲಾಜಹೋಮವ ಗೈದು
ಉತ್ತಮ ಷಡ್ರಸ ಭೋಜನವನು ನೃಪ ॥
ಹಸ್ತದಿ ಕೊಡಿಸಿದನು—ಹಿತವಾಗಿ ೬೧

ಉಭಯರ ಬಂಧು[1] ಬಾಂಧವರನೆಲ್ಲರನು
ಸಭೆ ಸರ್ವರ ಪರಿಹರಿಸಿ ರಥವನು
ವಿಭವದಿ ಸತಿಯೊಡಗೂಡಿಯೆ[2] ಸ್ವಗೃಹಕೆ
ಸೊಬಗಿನಿಂದಲಿ ವಾದ್ಯರಭಸದೊಳೈತಂದು ॥
ಶುಭವೇಳ್ಯದಿ[3] ಪುರವ—ಹೊಗಿಸಿದ ೬೨

ಶುಚಿಯ ಪ್ರತಿಷ್ಠಿಸಿ ನಾಲ್ಕನೆ ದಿನದಿ
ಉಚಿತದಿ ಅರಿಸಿನ ಎಣ್ಣೆಯ ಮಾಡಿ
ರಚಿಸಿ ಚತುರ್ಥಿಯ ಹೋಮವ ವರ ಕುಂಭ
ಕುಚೆಯರು ತಾಂಬೂಲಾದಿಗಳನು ಕೊಟ್ಟು ॥
ಸುಚರಿತಗೆರಗಿದರು—ಮನವಿಟ್ಟು ೬೩

ಪುರದೊಳಗಿರುತಿಹ ಬೀದಿ ಬೀದಿಯೊಳು
ಇರುವ ವಿಧಾನ ತೋರಣ ಕುರುಜುಗಳು
ಪರಿಪರಿಯೊಳಲಂಕರಿಸುತ ಪಥದೊಳು
ಅರಸನ ಭಾವವ ನೋಡುತ ತವಕದಿ ॥
ಪುರವಾಸಿಗಳಿರಲು—ಹರುಷದಿ ೬೪

1 ಉಭಯರುಬಂದ. 2 ಸತಿಸಹ ಒಡಗೊಂಡು. 3 ಶುಭವಾಗಿಪ್ಪ.

ಕನಕನಿರ್ಮಿತ ನವರತ್ನದ ಮಣೆಯ
ದಿನಕರನಂತೆ ಶೋಭಿಪ ದಂಡಿಗೆಯ
ವನಿತೆ ಸಹಿತವೇರಿ ನಗರ ಪ್ರವೇಶಕೆ
ಘನತರೋತ್ಸಾಹದಿ ಹೊರಟನೆ ದಿವಿಜರು ॥
ಜನರು ನೋಡಿದರು—ಬರುವಾಗ ೬೫

ಬಾಲವೃದ್ಧರು ಮಿಕ್ಕ ಭೂಮಿ ಪಾಲಕರು
ಲೋಲ ಲೋಚನೆಯರು ಲಲಿತಾಂಗಿಯರು
ಸಾಲು ದೀವಿಗೆ ಸಹ ಮರುಸು ಬಾಣಗಳಿಂದ
ಮೇಲು ಮೇಲಾಗಿಹ ಸಕಲ ಸಂಭ್ರಮದಿ ॥
ಶೂಲಿಗೆ ಸಮನಾಗಿ—ಬರುತಿರ್ದ ೬೬

ಸೃಷ್ಟಿಪಾಲಕನಿಗೆ ಎರಕವಾಗಿರುವ
ಪಟ್ಟವಾಳುವದಕ್ಕೆ ಯೋಗ್ಯವಾಗಿರುವ
ಪಟ್ಟದರಸಿ ಸಹ ಬರಲು ನೋಡುತಲಂದು
ಪಟ್ಟಣ[1] ವಾಸಿಗಳೆಲ್ಲರು ಪೊಗಳಲು ॥
ಪಟ್ಟಣವ ಪೊಗುತ[2]—ಬರಲಂದು ೬೭

ದಂಪತಿಗಳು ಕೂಡಿ ಮರುದಿವಸದಲಿ
ಸಂಪಗೆ ಮಲ್ಲಿಗೆ ಮುಡಿದು ತೋಷದಲಿ
ತಂಪಿಸಿಯೋಕುಳಿಯನ್ನು ನಿವಾಳಿಸಿ
ಸೊಂಪಿನಿಂ ಸಹಭುಂಜಿಸಿ ಸೌಖ್ಯದಿ ಗುಣ ॥
ಸಂಪನ್ನ ಸುಖದಿ—ಮೆರೆದನೆ ೬೮

## 276. ಧ್ರುವಚರಿತೆ

ಶಾರದೆ ಗಜವದನಗೆ ಕೈಯ ಮುಗಿದು
ವಾರಿಜಾಕ್ಷನ ಗುರುಹಿರಿಯರ ನೆನೆದು
ಓರಂತೆ ಪೂಜಿಪೆ ದಯೆದೋರಿ ಒಲಿದು
ಕಾರುಣ್ಯದಿಂದ ರಕ್ಷಿಸಬೇಕು ತಿಳಿದು ॥
ಧಾರಿಣಿಯೊಳು ಧ್ರುವ ಜನಿಸುತ ಪೋಗಿ
ನಾರಾಯಣನನು ಒಲಿಸಿ ಮೇಲಾಗಿ

---

1 ಇಷ್ಟ. 2 ರಚಿಸಿ.

ಸೇರೆ ಪದವಿಗದ ವಿಸ್ತರವಾಗಿಯೆ
ಧಾರಿಣಿಯಲಿ ಪೇಳುವೆ ಲೇಸಾಗಿ ॥
ಪೂರಾ ದಯೆ ನನ್ನೊಳಿರಬೇಕು ೧

ಉತ್ತಮವಾಗಿಹ ಪಟ್ಟಣದೊಳಗೆ
ಉತ್ತಾನಪಾದನೆಂದೆಂಬ ಭೂಪತಿಗೆ
ಪತ್ನಿ ಸುನೀತೆ ಸುರುಚಿಯೆಂಬರವಗೆ
ಸ್ವಸ್ಥದೊಳಿರಲೀರ್ವರ್ ಪತ್ನಿಯರೊಳಗೆ ॥
ಪುತ್ರರಿರ್ವರು ಧ್ರುವ ಹಿರಿಯ ಹೆಂಡತಿಗೆ
ಮತ್ತೆ ಸುರುಚಿಗುತ್ತಮನಿರೆ ಕಡೆಗೆ
ಮತ್ಸರವೇರಲು ಸುರುಚಿ ಧ್ರುವನಿಗೆ
ಇತ್ತಳು ವಿಷದ ಹಾಲನು ಕೊಟ್ಟ ಬಗೆಗೆ ॥
ಸಿತ್ಯಾತ್ಮನ ನೆನೆದು—ಕುಡಿದನು ೨

ಆತನು ಧ್ರುವನೆಂಬ ನಾಮ ಪಟ್ಟರಲು
ಮಾತೆ ಸುರುಚಿ ಕರೆದವನಿಗೆ ಕೊಡಲು
ನೂತನವಾಗಿಹ ವಿಷ ಕಜ್ಜಾಯಗಳು
ಪ್ರೀತಿಯಿಂದಲಿ ನಾರಾಯಣ ಎಂದು ತಿನಲು ॥
ಯಾತಕಿವನು ಸಾಯನು ವಿಷ ತಿಂದು
ಖ್ಯಾತಿ ತಳೆದಳಾಶ್ಚರ್ಯ ಪಟ್ಟಂದು
ಘಾತಿಸುವದು ಎಂತಿವನನಿನ್ನೆಂದು
ನೂತನ ಚಿಂತೆಯ ತಾಳಿದಳಂದು ॥
ಆತ ಹರಿದಯದಿ—ಬಳೆದನು ೩

ಒಂದು ದಿವಸ ಸಭೆಯೊಳು ಒಡ್ಡೋಲಗದಿ
ತಂದೆ ಸುರುಚಿ ಸಮೀಪದೊಳಿರೆ ಜವದಿ
ಬಂದನಲ್ಲಿಗೆ ಬಾಲಕನು ಸಂತಸದಿ
ನಿಂದು ನೋಡಿದ ಜನಕನ ಸಿಂಹಾಸನದಿ ॥
ತಂದೆ ತನ್ನನು ಕುಳ್ಳಿರಿಸೆಂದೆನಲು
ವಂದಿಸಿಯಳಲುತ ಬಾಲನು ನಿಲಲು
ಚೆಂದದಿ ಕರವೆತ್ತಿ ಪಿತ ಕುಳ್ಳಿಸೆನಲು
ಮಂದಗಾಮಿನಿಯೇನೆನುವಳೊ ಎನುತಲೆ ॥
ನೊಂದನು ಮನದಿ—ಅರಸನು ೪

ಕಂಗಳೊಳಗೆ ಸುರುಚಿಯು ಕಿಡಿಗೊಳುತೆ
ಮಂಗ ನೀ ಪಟ್ಟಕ್ಕೆ ಯೋಗ್ಯನೆ ಎನುತ
ರಂಗನ ಭಜಿಸಿ ನೀ ಬರಬೇಕೆನ್ನುತ್ತ
ಸಂಗಡೆನ್ನುದರದಿ ಪುಟ್ಟಿದ ಮತ್ತಾ ॥
ಬಂಗಾರಿನ ಸಿಂಹಾಸನವೇರಿ
ಸಂಗಡ ರಾಜ್ಯಪಾಲನೆ ಮಾಡು ಮಾಲ
ಹೇಂಗಿಲ್ಲಿಗೈತಂದೆ ಪೇಳೆಂದು ನಾರಿ
ನುಂಗಲಾರದೆ ರೋಷದಲಿ ನೂಕಿದಳು ಬೆ ॥
ಹಂಗಿಸಲಿ ಬಾಲ—ಪೊರಟನು ೫

ಅಳುತ ಬೀಳುತಲೇಳುತಲಿ ಸಭೆಯೊಳಗೆ
ಇಳಿವ ಕಣ್ಣೀರೊರಸುತ ಬಂದ ಬಗೆಗೆ
ಬಲು ಚಿಂತೆ ತಾಳಿದರೆಲ್ಲ ಸಭೆಯೊಳಗೆ
ಹಲವು ದುಃಖದಿ ಬಂದ ಧ್ರುವ ತಾಯಿಯೆಡೆಗೆ ॥
ಎಲೆ ಬಾಲನೆ ಏಕಳುವೆ ನೀನೆನುತ
ಇಳೆಯೊಳಾರ್ ಬಡಿದರು ಏನಾಯ್ತೆನುತ
ಚೆಲುವೆ ಸುನೀತೆಯು ಕೇಳಲು ಮತ್ತಾ
ಸುಲಲಿತಾಂಗಿಯರೆಲ್ಲ ನುಡಿದರು ವಿವರದಿ ॥
ನಲಿಯುತ್ತ ಧ್ರುವನು—ನಡೆದನು ೬

ಬಂದನು ಸಭೆಗೆ ಬಾಲನು ನಲಿಯುತ್ತ
ನಿಂದನು ಸಿಂಹಾಸನದ ಕರೆಯಲಿ ತಾ
ತಂದೆ ತನ್ನನು ತೊಡೆಯಲಿ ಕುಳ್ಳಿಸೆನುತ
ಚೆಂದದ ಕೈಯೆತ್ತಿ ಅಳುವಾಗ ಮತ್ತಾ ॥
ಹಿಂದಕೆ ಕೈಯೆತ್ತಿ ಸುರುಚಿ ನೂಕಿದಳು
ಮಂದರಧರನ ನೀ ಭಜಿಸಿ ಬಾರೆನಲು
ಮುಂದೆ ತನ್ನುದರದಿ ಜನಿಸೆಂದೆನಲು
ನೊಂದುಕೊಳುತ ಧ್ರುವನ್ನೈತಂದನೆನುತ ॥
ಎಂದರಲ್ಲಿರುವ—ಸತಿಯರು ೭

ಆ ಮಾತ ಕೇಳಿ ಸುನೀತೆ ಮರುಗಿದಳು
ತಾಮಸಗೊಳದೆ ಹಿಂದಾಗ ಮೂರ್ಛಿಸಲು
ಭೂಮಿಯಿಂದೆದ್ದು ಅಳಲಿ ಪೇಳ್ದಳವಳು
ಸ್ವಾಮಿಯೆ ಗತಿ ನಿನಗೆನುತ ಪೇಳಿದಳು ॥
ನೀ ಮಗನಳದೇ ಪೋಗಿ ಸ್ವಾಮಿಯನು
ಕ್ಷೇಮದಿ ಭಜಿಸಿ ಬಾರೈ ಪೋಗು ನೀನು
ಆ ಮಹಾತ್ಮನು ರಕ್ಷಿಸುವ ನಿನ್ನುವನು
ಕಾಮನ ಪಿತ ರಕ್ಷಿಸುವನು ಎನುತಲೆ ॥
ನೇಮಿಸಿದಳು ತಾಯಿ—ಮಗನಿಗೆ ೮

ಇಂತು ಪೇಳುತ್ತ ಸುನೀತೆ ಮನದೊಳಗೆ
ಚಿಂತಿಸಿದಳು ಬಾಲ ನೀ ವನದೊಳಗೆ
ಪಿಂತು ಸೈರಿಪೆ ಹಶು ತೃಷೆ ಬೆಶಿಲೊಳಗೆ
ಸಂತಯಿಸುವರಾರು ದಿನದಿನದೊಳಗೆ ॥
ತಿಂತಿಣಿಯೊಳು ಹುಲಿ ಕರಡಿ ಸಿಂಹಗಳು
ಎಂತು ತಿನ್ನದೆ ಉಳಿಸುವವು ನೀ ಹೇಳು
ಇಂತು ಸಣ್ಣವ ಹೇಗೆ ಭಜಿಸುವೆ ಕೇಳು
ಎಂತೀ ಕಾರ್ಯವಾಗುವದೆಂದೆನುತ ಮ ॥
ಹಾಂತ ದುಃಖದಲಿ—ಮರುಗಲು ೯

ಮಾತೇ ಚಿಂತೆಯು ಬಿಟ್ಟು ಕೇಳು ಮಾತುಗಳ
ಪಿತಕ್ಕೆ ಅಳಲುವೆ ಸ್ವಾಮಿ ಪಾದಗಳ
ಪ್ರೀತಿಯಿಂದಲಿ ನೋಡಿ ಬಹೆ ಬೇಗ ಕೇಳ
ಪಿತಕ್ಕೆ ಗೊಡವೆ ಅಂಜಲು ಬೇಡ ಬಹಳ ॥
ಆತನ ಭಜಿಸದಿದ್ದರೆ ಈ ದೇಹ
ಪಿತಕೆ ಧರೆಯಲಿ ಬಳಿವ ಸಮ್ಮೋಹ
ಭೀತಿಯ ಬಿಡು ಎಂದೆನುತಲೆ ಹೋಹ
ಆತನು ಪೊರಡಲು ನೋಡಿ ನಾರಿಯರೆಲ್ಲ ॥
ಮಾತನಾಡಿದರು—ಮರುಗುತ್ತ ೧೦

ಯಾರಪ್ಪ ಬಾಲನ ತಪಕೆ ಕಳುಹಿದರು
ದಾರಿಯೊಳಾತ ಪೋಪನು ಬಲು ಜೋರು
ಪೂರೈಸಿ ಬಹನೆಂತು ತಪವನೀ ಕುವರ

ನಾರಿಯರೆಲ್ಲರು ಮರುಗುವ ಸಾರ ॥
ಸಾರಿದ ಮುಂದಕೆ ಧ್ರುವ ಪಥದೊಳಗೆ
ನಾರದ ಮಹಾಋಷಿ ಬಂದನಿದಿರಿಗೆ
ಸಾರುವುದೆತ್ತಲು ತರಳನೆ ನಿನಗೆ
ಆರು ಪೇಳಿದರೀ ಬುದ್ಧಿಯನೆನುತಲೆ ॥
ದೂರೆನ್ನೊಡನೆಲ್ಲಿ—ಸಮವಾಗಿ ೧೧

ಮುನಿಯ ಮಾತನು ಕೇಳಿ ನುಡಿದನು ಧ್ರುವನು
ಮನದಿ ಸಂತೋಷಿಸಿ ಪಿತನೆಡೆಗಾನು
ವಿನಯದಿ ಪೋಗಲು ಸುರುಚಿ ತನ್ನುವನು
ಧ್ವನಿಮಾಡಿ ನೂಕಿದಳ್ ಬಂದೆ ತಪಕಾನು ॥
ನೀನು ಹರಿಯನೊಲಿಸುತ್ತಲೆ ಬಂದು
ಜನಿಸೆನ್ನುದರದಿ ಪೇಳಿದಳೆಂದು
ಮನದಲಿ ಚಿಂತಿಸಿ ಅಳಲಿ ಪೇಳ್ದಂದು
ತನು ಬೆಂದುದು ಮುನಿ ಕೇಳಿದನಂದು ॥
ಎನುವ ಬಾಲಕನ—ಪಿಡಿದೆತ್ತಿ ೧೨

ಎತ್ತಿ ತೊಡೆಯಲಿ ಕುಳ್ಳಿಸಿ ಮುನಿ ಧ್ರುವನ
ಕತ್ತೆ ರಂಡೆಯು ಹೇಗೆ ಸೇರಿದಳವನ
ಉತ್ತಾನಪಾದನು ಹೇಗೆ ಕಳುಹಿದನು
ಪೆತ್ತ ತಾಯಿಯ ಮನಸ್ಸಿನ ಧೈರ್ಯವೇನು ॥
ಅತ್ಯಾಶ್ಚರ್ಯಪಟ್ಟನು ಮನದೊಳಗೆ
ನಿತ್ಯತೃಪ್ತನ ಭಜಿಸುವೆ ನೀ ಹೇಗೆ
ಸುತ್ತಲು ಮೃಗಗಳು ಕಾಡಿನ ಒಳಗೆ
ಮತ್ತೆ ತಪವು ಅಕ್ಷೇಮವು ನಿನಗೆ ॥
ಸ್ವಸ್ಥದಿ ನೀ ಮನೆಗೆ—ನಡೆಯೆಂದ ೧೩

ಆ ಮಾತಂತಿರಲಿ ನಾರದ ಮುನೀಶ್ವರನೆ
ನೀ ಮನವಿಟ್ಟು ರಕ್ಷಿಸಬೇಕು ತಾನೆ
ಕಾಮಪಿತನ ಭಜಿಸುವ ಮಾನವೇನೈ
ಪ್ರೇಮದಿ ತಿಳಿಸಿ ಕಳುಹು ನೀ ನಾರದನೆ ॥
ಭೂಮಿಯೊಳಗೆ ಬಲು ಸಾಹಸಿಯಿವನು
ತಾಮಸಗೊಳದೆ ಕೊಟ್ಟುಪದೇಶವನು

ನೀ ಮಧುವನಕೆ ಪೋಗುವುದಿನ್ನು ತಾನು
ಪ್ರೇಮದಿ ತೆರಳುವೆ ನಿನ್ನ ರಕ್ಷಿಪನು ॥
ಸಾಮಧಾನದಲಿ—ಮುರವೈರಿ ೧೪

ತೆರಳಿದ ಧ್ರುವನ ಸಂತಯಿಸಿ ನಾರದನು
ಸರಿದನುತ್ತಾನಪಾದನ ಪುರವನ್ನು
ಭರದಿಂದ ಇದಿರ್ಗೊಂಡು ಭೂಪ ಮುನಿಯನು
ಬರವೆತ್ತಲಿಂದ ಬಂದಿರಿ ಕಾರ್ಯವೇನು ॥
ಅರುಹುವೆ ಭೂಪನೆ ನೀನೀ ತೆರದಿ
ಮರುಗಲು ಕಾರಣವೇನೆಂದು ಜವದಿ
ಒರೆಯಬೇಕೆನ್ನೊಳು ಭರದಿ ವೃತ್ತಾಂತವ
ಬರುವ ಕಣ್ಣೀರನೊರಸಿ ನೀ ದಯದಿ ॥
ಪರಟೆಸು ಪರಿಯು—ತನಗಾಗಿ ೧೫

ಏನ ಹೇಳಲಿ ಮುನಿವರನೆ ಸಂಗತಿಯ
ಮಾನಿನಿ ಸುರುಚಿಯು ನಡೆಸಿರ್ದ ಪರಿಯ
ಹೀನ ಬುದ್ಧಿಯೊಳು ಬಾಲನ ನೂಕಿ ಇಳೆಯು
ಕಾನನಕಟ್ಟಿದಳೇನೆಂಬೆ ಕಥೆಯ ॥
ನೀನಿದಕೊಂದು ಪಥವ ಹೇಳೆನಲು
ಸಾನುರಾಗದಿ ಮುನಿಪದದಿ ಬಿದ್ದಿರಲು
ಏನು ಚಿಂತೆಯು ತಾಳದೆ ಇಹನೆನಲು
ದಾನವಾರಿಯ ನೋಡಿ ಧ್ರುವ ಬೇಗ ಬಹನೆಂದು ॥
ತಾ ನುಡಿದು ಮುನಿಪ—ತೆರಳಿದ ೧೬

ಈ ರೀತಿಯೊಳು ಮುನಿ ನುಡಿ ಕೇಳಿ ಧ್ರುವನು
ಸಾರಿದ ಬೇಗದಿ ಮಧುವನಾಂತವನು
ಸಾರುವ ನದಿಯೊಳು ಸ್ನಾನ ಮಾಡುವನು
ಸಾರಿಸಿ ವನದ ಮಧ್ಯದಿ ನೆಲಗಳನು ॥
ನಾರದನುಪದೇಶದ ಕ್ರಮಗಳಲಿ
ಸಾರವಾಗಿಹ ಹಣ್ಣು ತಿನಲು ತಿಂಗಳಲಿ
ಮೂರು ದಿವಸಕೊಮ್ಮೆ ಫಲದಾಹಾರದಲಿ
ಮೂರು ತಿಂಗಳುಗಳ ಕಳೆಯುತ್ತಲಿ ಬಳಿ ॥
ಕೇರಿಸಿದ ತಪವನಣುಗನು ೧೭

ಆರು ದಿವಸಕೊಮ್ಮೆ ಫಲದಾಹಾರದಲಿ
ಮೂರು ತಿಂಗಳ ಮೇಲೆ ನವದಿನಗಳಲಿ
ನೀರಾಹಾರದೊಳಿರ್ದ ಧ್ರುವನು ವನದಲಿ
ಸಾರುವ ವಾಯುವಾಹಾರದಿಂದಿರಲು ॥
ಮೂರು ಲೋಕದೊಳುಬ್ಬಸವೇರಿದುದು
ಧಾರಿಣಿಯೊಳು ಉರಿಯೇಳುತಲಿಹುದು
ಸಾರುತಲೆಲ್ಲರು ಸುರಪಗೆ ನುಡಿದು
ದೂರು ಕೊಡಲು ತಪಕೆಡಿಸಲೈದುವದು ॥
ಆರ್ರೈ ಬಾಲಕಗೆ—ಸರಿಯಿನ್ನು ೧೮

ಅಷ್ಟ ದಿಕ್ಪಾಲರು ಪೋಗಿರೆಂದೆನುತ
ಕೆಟ್ಟ ಬಾಲನ ತಪ ಕೆಡಿಸಿ ಬಾರೆನುತ
ಅಟ್ಟಿದನೆಲ್ಲರ ಸುರಪ ಬಲಸಹಿತ
ತಟ್ಟನೆ ಬಂದರು ಶರಗಳ ಕೊಳುತ ॥
ತೊಟ್ಟರು ಬಾಣವ ಯಮದಂಡವಸಿತ್ತು
ಕುಟ್ಟಿ ಎಳೆವರತ್ತಿತ್ತಲು ಸುತ್ತು
ಗಟ್ಟಿದಂಡವು ಮುರಿಯಲು ಬೆದರಿತ್ತು
ಸೃಷ್ಟಿಸಿದರು ಮಾಯಗಳನು ಮತ್ತು ॥
ಸುಟ್ಟಿತು ಧರೆ ಧ್ರುವನ—ತಪಸ್ಸಿಗೆ ೧೯

ಬಲುತರ ಮಾಯಕಗಳ ರಚಿಸಿದರು
ಮಳೆ ಮಿಂಚು ಸಿಡಿಲೆಲ್ಲ ಬಂದು ಮುತ್ತಿದರು
ಹುಲಿ ಕರಡಿಯು ಸಿಂಹ ಕಾಡು ಕೋಣಗಳು
ಬಲುವುಪಟಳಗೊಟ್ಟು ಸುಟ್ಟು ಓಡಿದವು ॥
ಗೆಲಲರಿಯದೆಯೆಲ್ಲರು ವೋಡಿದರು
ಬಲುತರ ಧ್ರುವ ತಪ ತೀರಿಸೆಲ್ಲವರು
ಸುಲಭವಿಲ್ಲಪವೆಂದಜಗುಸುರಿದರು
ಉಳಿಸಲರಿಯದು ತನ್ನಿಂದಲೆಂದವ ಸಹ ॥
ಬಳಿಗೈದಿ ಹರಿಗೆ—ನುಡಿದರು ೨೦

ಸರುವ ಅನ್ಯಾಯವಾಯಿತು ತನ್ನಿಂದೆನುತ
ತರಳನ ಬಚ್ಚಿಸಿದೆನು[1] ತಾನೆಂದೆನುತ
ತೆರಳಿ ನೀವ್ ಪೋಪೆ ನಾನೆಂದು ಹರಿ ನಗುತ
ಗರುಡನ ನೆನೆದು ಏರಿದ ಪೊರಮಡುತ ॥
ಬರುತಲೆ ಇಳಿದು ಬಾಲನಿಗಿದಿರಾಗಿ
ಧರಿಸಿದ ಶಂಖಚಕ್ರವು ಸಹಿತಾಗಿ
ಅರಿಯದೆ ಬಾಲನು ಸ್ತುತಿಗೈಯಲಾಗಿ
ತ್ವರಿತದೊಳಕ್ಷಿಗೆ ಮಿಂಚಿನಂತಾಗಿ ॥
ತೆರೆದು ನೋಡಿದನು—ಹರಿಯಾಗಿ ೨೧

ಸ್ತುತಿಮಾಡಲರಿಯದೆ ಊರ್ಧ್ವದೃಷ್ಟಿಯೊಳು
ಅತಿ ಮನ ಬೆದರಿದು ಬಾಲ ನಿಂತಿರಲು
ಮತಿಯಿಲ್ಲವೆಂದು ಕೈಯಿಂದ ಶಂಖದೊಳು
ಸುತನಂತೆ ಹೊಳೆವ ಮುಖಕೆ ಒರಸಿರಲು ॥
ಪಿತನೇಕೆನ್ನನು ಸಲಹಿದೆಯೆಂದು
ಜೊತೆಯೊಳೆ ನಿನ್ನೊಡನೆಯೆ ಬಹೆನೆಂದು
ಮಥಿಸಿದೆ ದುಷ್ಟರ ಸಜ್ಜನರಿಂದು
ಸ್ತುತಿಮಾಡುವರ ನೀ ಸಲಹಬೇಕೆಂದು ॥
ಅತಿ ಸಂತೋಷದಲಿ—ನುಡಿದನು ೨೨

ಕೇಶವ ಮಾಧವ ಹರಿ ಕೃಷ್ಣ ಎಂದು
ವಸುದೇವನ ಸುತ ಅಜಪಿತನೆಂದು
ದೇಶದೊಳೆಲ್ಲರ ಸಲಹುವನೆಂದು
ದೋಷವಿಲ್ಲದೆ ನೀ ಹತ್ತವತಾರಿಯೆಂದು ॥
ಈ ಸಮಯದೊಳೆನ್ನ ರಕ್ಷಿಪುದೆನಲು
ನಾಶಪಡುವರೆಲ್ಲ ನೆನೆಯದೆ ಜನರು
ಈಶನ ಸಖ ನೀನೆ ಸಲಹೆಂದೆನಲು
ಹೇಸದೆ ಸ್ತುತಿಸಿದ ಬಲು ಚೆಂದದೊಳು ॥
ಆ ಸಕಲ ಹೃದಯದಿರುವನ ೨೩

1 ಬಚ್ಚಿಸು—ಆಯಾಸಪಡಿಸು.

ಎರಗಿ ಸ್ತುತಿಸಿದ ಬಾಲನನೆತ್ತಿ ಕರದಿ
ಸೆರಗಿಂದ ಉದ್ದಿದ[1] ಹುಡಿಯನ್ನು ಭರದಿ
ಹರಿ ತನ್ನ ತೊಡೆಲಿ ಕುಳ್ಳಿರಿಸುತ್ತಾದರದಿ
ತೆರಳಿ ನೀ ರಾಜ್ಯಪಾಲಿಸು ಬಾಲ ಜವದಿ ॥
ಸ್ಮರಿಸು ತನ್ನನು ಷೋಡಶಶದಶಸಾವಿರ
ವರುಷ ರಾಜ್ಯವ ನೀನಾಳಿಯನಂತರ
ವಿರಚಿಸಿ ಕೊಡುವೆನು ಧ್ರುವಲೋಕದರಸ
ಸರಿಯಾಗಿಯೆ ನೀನಾಳು ಎನ್ನನು ನಿನ ॥
ಗರುವಾಗದೆ ಸಾಯದೊರವಿತ್ತ ೨೪

ಏತಕೀ ಮಾತ ನನ್ನೊಡನೆ ಪೇಳುವದು
ಏತಕ್ಕೆ ರಾಜ್ಯ ಪಾಪತ್ವ ಕಟ್ಟುವದು
ಭೂತಳದೊಳು ಬಾಳಿ ನಿನ್ನ ಸೇರುವದು
ಪ್ರೀತಿಯಿಂದಲಿ ರಾಜ್ಯ ಪಾಲಿಸಿ ಕಳಿದು ॥
ಏತಕ್ಕೆನೆ ನೃಪನಾಗುತವೊಲಿದು
ಪ್ರೀತಿಯಿಂದಲಿ ರಾಜ್ಯವಾಳುತ ಕಳಿದು
ನೂತನವಾಗಿಹ ಪದವಿಗೆ ಬಹುದು
ಈ ತೆರದಲಿ ನೀ ಪೋಗಿ ಬಾಳೆನ್ನುತ ॥
ಖ್ಯಾತ ಶ್ರೀಹರಿಯು—ಸರಿದನು ೨೫

ಬಿದ್ದು ಭೂತಳಕೆ ತತ್‌ಕ್ಷಣಕಾಗ ಧ್ರುವನು
ಎದ್ದು ನೋಡಿದ ಹರಿಯನು ಕಾಣದವನು
ಬಿದ್ದಳಲಿದನು ಭೂತಳದಿ ಬಾಲಕನು
ಆದ್ದಾಯಿತೆನುತ ಸಂತಸದಿ ಬರಲವನು ॥
ಗದ್ದಲದಲಿ ನಡೆತರಲು ಪಥದಲಿ
ಎದ್ದು ನೋಡಲು ಸತಿಯರು ನಿಂತಿರಲು
ನಿದ್ದೆ ತಾಳುತ್ತ ಸುನೀತೆ ನೋಡಿದಳು
ಎದ್ದು ಬಂದನು ಮೃತನಾದ ಬಾಲಕನೆಂದು ॥
ಶುದ್ಧಿಯ ತಿಳಿಸಿದರು—ಅರಸಗೆ ೨೬

1 ಉದ್ದು—ಉಜ್ಜು.

ಬಂದ ಸುನೀತೆಯ ತರಳನೆಂದೆನುತ
ಬಂದನುತ್ತಾನಪಾದನ ಮಗನೆನುತ
ಬಂದನು ಸುರುಚಿಯಗ್ರಜೆ ಬಾಲನೆನುತ
ಬಂದನು ತಪಕೆ ಪೋಗಿಹ ಬಾಲನೆನುತ ॥
ಬಂದ ಶ್ರೀಕೃಷ್ಣನ ಭಕ್ತನೆಂದೆನುತ
ಬಂದನ್ನೈವರುಷದ ಹುಡುಗನೆಂದೆನುತ
ತಂದರೆಲ್ಲರು ಹೂವುಗಳನು ಮತ್ತಾ
ಚಂದದಿ ನಗರವ ಶೃಂಗರಿಸುತ್ತ ॥
ಬಂದನು ಪುರಕೆ—ಧ್ರುವನಂದು ೨೭

ತಂದೆಯ ಪದಕೆರಗಿದನು ತತ್‌ಕ್ಷಣದಿ
ನಿಂದು ನೋಡಿದ ಸುರುಚಿಯು ತನ್ನ ಮನದಿ
ಬಂದ ಕೋಪವ ತಡವರಿಸುತ ಜವದಿ
ವಂದಿಸಿದನು ಪಾದಗಳಿಗೆ ಸಂತಸದಿ ॥
ಚಂದದಿ ಬಾಳಿರು ಎಂದು ಹರಸಿದಳು
ಬಂದನು ತಾಯಿಯು ಎಡೆಗಾ ಕ್ಷಣದೊಳು
ಮುಂದೆ ಸುರಿಯಲಾ ಮೊಲೆಯೊಳು ಪಾಲು
ವಂದಿಸಿದನು ಧ್ರುವನಡಿಗಳ ಬೇಗದಿ ॥
ಕಂದನ ತೆಗೆದಪ್ಪಿ—ಹರುಷದಿ ೨೮

ಪೋಗಿ ಇಲ್ಲಿಂದ ಮತ್ತಾದ ಸಂಗತಿಯ
ಬೇಗದಿಂದರುಹು ಎನ್ನೊಡನೆಯೀ ಪರಿಯ
ಹೋಗಿ ತಪವ ಗೈದೆಯೆಂಬ ಸಂಗತಿಯ
ಆಗುವ ಹಶು ತೃಷೆ ಹೇಗೆ ಸೈರಿಸಿದೆ ॥
ಆಗಳು ಬಳಸಿದರಾರು ಶ್ರಮಿಸಿದರು
ಹೇಗೆ ತಪವಗೈದೊಲಿಸಿದೆ ಉಸುರು
ಬೇಗ ಬಂದನೊ ಹರಿಯೇನ ಪೇಳಿದನು
ನಾಗಶಯನನೇನಭಯವಿತ್ತನು ಎಂ ॥
ಬಾಗಮವ ಪೇಳಿ—ಪೋಗಳೀಗ ೨೯

ಹರಿಯೊಲಿದನು ಬೇಗ ತನಗಿತ್ತಭಯವ
ಅರುಹುವೆ ತಪವ ಕೇಳದರ ವಿವರವ
ವರ ಧ್ರುವಲೋಕ ನವೀನ ಪದವಿಯು

ವರ ಮೇಲಧಿಕವಾರು ಸಾವಿರ ವರುಷ ॥
ಪರಿಪಾಲಿಸು ರಾಜ್ಯವೆಂದು ಕೊಟ್ಟಿಹನು
ತೆರಳಿದೆನಿತ್ತಲು ತಾಯಿಯೆ ನಾನು
ಪರಿಪಾಲಿಪ ಶ್ರೀ ವಿಷ್ಣು ನಮ್ಮವನು
ದುರಿತ ಹೋದುದು ಸೌಖ್ಯದಿ ಬಾಳುವ ಎಂದು ॥
ಅರುಹಿದ ಧ್ರುವನು—ಪರಿಯೆಲ್ಲ ೩೦

ಪುತ್ರನ ಸಲಹಿಕೊಂಡಿಹಳಾ ಸುನೀತೆ
ಉತ್ತಾನಪಾದನ ಮನದಿಹ ಮಮತೆ
ವಿಸ್ತಾರವೆಲ್ಲ ಪೇಳುವದೇನ ಘನತೆ
ಮತ್ತೆ ಲಗ್ನಕೆ ಕನ್ನಿಕೆಯ ಹುಡುಕುತಲೆ ॥
ಧಾತ್ರಿಯೊಳಗೆ ಸಂಚರಿಸುತ ಪೋಗಿ
ಮಿತ್ರಾಕ್ಷಿಯು ಸುತೆಯನು ಲೇಸಾಗಿ
ಇತ್ತಪೆನೆಂದು ಪೇಳಲು ಬರಲಾಗಿ
ಪುತ್ರನ ಪುರಸಹ ಸಿಂಗರವಾಗಿ ॥
ಮತ್ತಾ ದಿಬ್ಬಣದಿ—ಪೊರಟರು ೩೧

ಸೇರಿ ಪಟ್ಟಣಕೆ ದಿಬ್ಬಣದವರೆಲ್ಲ
ಭೋರೆಂಬ ವಾದ್ಯ ಘೋಷದಿ ಬಂದರೆಲ್ಲ
ಧಾರೆ ಮಾಂಗಲ್ಯವ ಕಳುಹಿದನೆಲ್ಲ
ನಾರಿಯು ಕರಕೊಂಡು ಧ್ರುವ ಸಹಿತೆಲ್ಲ ॥
ವೀರ ಧ್ರುವನು ಸತಿಸಹಿತ ಸೌಖ್ಯದಲಿ
ಮಾರಪಿತನ ನೆನೆಯುತ ಭಕ್ತಿಯಲಿ
ಧಾರಿಣಿಯಲಿ ಎಲ್ಲರು ಪೊಗಳುತಲಿ
ಸೂರ್ಯನ ಕಿರಣದಂತೆಸೆಯೆ ಪಟ್ಟಣವೆಲ್ಲ ॥
ವೀರ ಧ್ರುವ ಕುಳಿತ—ಬಗೆಯಲ್ಲಿ ೩೨

ತಂದೆ ರಾಜ್ಯದ ಪಟ್ಟವನು ಕಟ್ಟಿ ಧ್ರುವಗೆ
ಚಂದದಿ ಪೋದನು ತಪಕದರೊಳಗೆ
ತಂದೆಯಿಂದಧಿಕವಾಗಿಯೆ ರಾಜ್ಯದೊಳಗೆ
ಕಂದ ಧೀರನು ಎಂದು ಪೇಳ್ದರಾ ಕಡೆಗೆ ॥
ನೊಂದದೆಲ್ಲರನು ಸಲಹಿ ರಾಜ್ಯವನು
ನಿಂದ್ಯಮಾಡದೆ ನಡೆಸಿದ ಧರೆಯುವಷ್ಟು

ಒಂದು ದಿವಸ ಬೇಟೆಗೆ ಉತ್ತಮನು
ಮುಂದೆ ಪೋಗಲು ಯಕ್ಷ ಕೊಂದ ಶುದ್ಧಿಯ ಕೇಳಿ ॥
ಬಂದಳು ಸುರುಚಿ—ಕ್ಷಣಕಾಗ ೩೩

ಪೊರಟು ಬರಲಿಕಾಗ ಪಥದಿದಿರಿನೊಳು
ಉರಿವ ಕಾಳ್ಕಿಚ್ಚಿಲಿ ಭಸ್ಮವಾಗಿರಲು
ಅರುಹಲು ಶುದ್ಧಿಯ ಧ್ರುವಗೆ ಬೇಗದೊಳು
ಕೆರಳಿದನಾಕ್ಷಣ ಕೊಲುವೆನೆಂದೆನಲು ॥
ಪರಿಪರಿ ಶಸ್ತ್ರಾಸ್ತ್ರಗಳನು ಕೊಂಡು
ಭರದಿಂದಶ್ವವೇರುತ ಮುಂಕೊಂಡು
ಧುರಕಿದಿರಾಗುತ ಯಕ್ಷನೊಳಂದು
ತರಹರಿಸದೆ ಶರವರ್ಷವ ಸುರಿಸಿದ ॥
ನೊರೆವುದೇನವನ—ಪರಿಯನು ೩೪

ಹಲವಂಗದಲಿ ಕಾದಿ ಗೆಲುವಾಗದಿರಲು
ಬಲುತರ ಮಾಯಕಗಳ ರಚಿಸಿದರು
ಮಳೆ ಮಿಂಚು ಸಿಡಿಲು ಕತ್ತಲೆ ಸಹ ಬರಲು
ಜಲಜನಾಭನ ನೆನೆದಸ್ತ್ರವ ಬಿಡಲು ॥
ತೊಲಗಿತು ಮಾಯಕಗಳು ತತ್ಕ್ಷಣದಿ
ಬಲು ಬಲವನು ಗೆಲಿದನು ರೋಷದಲಿ
ಜಲಧಿ ಬತ್ತಿದುದೆಲ್ಲ ಇಳೆ ಸುಡೆ ಭರದಿ
ಬಲುತರ ಯುದ್ಧದ ರಭಸವೆಂದೆನುತಲೆ ॥
ನಲಿಯುತ ಮನು ಮೊಮ್ಮನೆಡೆಗಾಗಿ ೩೫

ತರಳ ನೀನೇಕೆ ಪಾಪತ್ವ ಕಟ್ಟುವುದು
ಹರಿಯ ಭಕ್ತರಿಗಿದು ಯೋಗ್ಯವೆ ಸಹಿಸು
ತರಿವುದುಚಿತವಲ್ಲ ಪೋಗು ನೀ ತಿಳಿಸು
ಅರುಹಲಾಕ್ಷಣ ಧ್ರುವ ಮನದೊಳಗರಿದು ॥
ತೆರಳಿದನಾಕ್ಷಣ ಪಟ್ಟಣಕಂದು
ಸರಿಯಾಗಿ ರಾಜ್ಯವ ಪಾಲಿಸಿ ನಿಂದು
ಧರೆಯೊಳೆಲ್ಲರು ಪೊಗಳುತಲವ ಮುಂದು
ಸ್ಮರಿಸುತ ಸ್ವಾಮಿಯ ಭಕ್ತಿಯಿಂದವನಿ ಪಟ್ಟ ॥
ಹರುಷದಿಂದಾಳುತಿರುತಿರ್ದ ೩೬

ಮಂಗಲಂ ಉತ್ತಾನಪಾದನ ಸುತಗೆ
ಮಂಗಲಂ ಸುನೀತೆಯ ತರಳನಾದವಗೆ
ಮಂಗಲಂ ಸುರುಚಿಯಗ್ರಜೆಯ ಬಾಲನಿಗೆ
ಮಂಗಲಂ ಧರೆಜನ ಪೊಗಳುವಾತನಿಗೆ ॥
ಮಂಗಲಂ ಶ್ರೀಹರಿಭಕ್ತನಾದವಗೆ
ಮಂಗಲಂ ಕೃಷ್ಣನ ಭಜಿಸಿದ ಧ್ರುವಗೆ
ಮಂಗಲಂ ಜಯ ಜಯ ಮಂಗಲಂ ಶುಭಕರ
ಶೃಂಗಾರದೊಳಿಹ ಅರಸಗೆ ಸತಿಯರು ॥
ಮಂಗಲಾಕ್ಷತೆಯ—ತಳಿದರು ೩೭

ಇಂತು ಈ ಧ್ರುವಚರಿತೆಯ ಪೇಳ್ದ ಜನಕೆ
ಸಂತತ ಪಾಪನಾಶನವಹುದದಕೆ
ನಿಂತಿಹ ಉಡುಪಿಯ ಕೃಷ್ಣನು ಜನಕೆ
ಸಂತತಿ ಸೌಭಾಗ್ಯವೀವನು ಮನಕೆ ॥
ಗೊಂತಾಗಿಹುದೊರೆದೆನು[1] ತಪ್ಪೊಪ್ಪ
ತಾಂ ತಿಳಿದವನಲ್ಲವನೆದುರಿಪ್ಪ
ಅಂತಾ ಚಲತವ ಹರಿಪೆಸರಿಪ್ಪ
ನಿಂತಿಹ ಬಾಲದುರ್ಗೆಯ ನೆನೆದೊರೆದೆನು ॥
ಮಂತ್ರಾಕ್ಷತೆ ತಳಿದು—ಸಲಹನ್ನ ೩೮

## 277. ರಾಮಕೃಷ್ಣ ಚರಿತೆ

ಶ್ರೀರಮಾಧವನು ಆ ವಾರಿಜೆಯೊಡಗೂಡಿ
ಭೂರಿ ಸುಖದೊಳಿದ್ದ ವಾರಿಧಿಶಯನ ಪ

ದಶಶಿರದೈತ್ಯನು ಲೋಕವ ಬಾಧಿಸೆ
ದಶರಥಗುದಿಸಿದ ದಶರಥ ರಾಮ
ವಸುಧೆಯ ಭಾರವ ಕಳೆಯಲು ಕಂಸನ
ಅಸುವ ಹೀರಲು ಬಂದ ವಸುದೇವ ಕೃಷ್ಣ ೧

1 ಗೊಂತಾಗು—ಗೊತ್ತಾಗು.

ರಾಮನು ಲಕ್ಷ್ಮಣ ಭರತ ಶತ್ರುಘ್ನರ
ಸ್ತೋಮದಿ ರಂಜಿಪ ದಶರಥ ರಾಮ
ಭಾಮಿನಿ ದೇವಕಿ ರೋಹಿಣಿಗುದಿಸಿದ
ರಾಮನು ಸಹಿತಲೆ ವಸುದೇವ ಕೃಷ್ಣ ೨

ಕೌಶಿಕನಧ್ವರ ಪಾಲನಕೈದಿದ
ಕುಶಲದಿ ಸಲಕ್ಷ್ಮಣ ದಶರಥ ರಾಮ
ವಿಶ್ವವಿನೋದದಿ ನಂದಗೋಕುಲದಲಿ
ವಿಶ್ವದೊಳಾಡಿದ ವಸುದೇವ ಕೃಷ್ಣ ೩

ಮುನಿಯೊಡನೈತಂದು ವನದಲಿ ತಾಟಕಿ
ದನುಜೆಯ ಕೊಂದನು ದಶರಥ ರಾಮ
ಜನನಿಯಂದದಿ ಬಂದು ಮೊಲೆ ಕೊಟ್ಟ ಪೂತನಿ
ಯನು ಮಡುಹಿದ ವರ ವಸುದೇವ ಕೃಷ್ಣ ೪

ಋಷಿಗಳ ಯಜ್ಞವ ಕೆಡಿಸುವೊಡೈತಂದ
ಅಸುರರ ಮಡುಹಿದ ದಶರಥ ರಾಮ
ಎಸೆದು ಗೋಕುಲದಲಿ ನಂದ ಯಶೋದೆಗೆ
ಶಿಶುತನ ತೋರಿದ ವಸುದೇವ ಕೃಷ್ಣ ೫

ಮುನಿಯುಪದೇಶದಿ ಕಲಿತನು ಮಂತ್ರದಿ
ಘನ ಧನುರ್ವಿದ್ಯೆಯ ದಶರಥ ರಾಮ
ವನಿತೆ ಯಶೋದೆಗೆ ನರಶಿಶು ನಾಟಕ
ತನವ ಕಾಣಿಸಿದಂಥ ವಸುದೇವ ಕೃಷ್ಣ ೬

ಜ್ಞಾನ ಮಾರ್ಗಂಗಳ ಮುನಿಗಳಿಗರುಹಿದ
ಜ್ಞಾನಸ್ವರೂಪನು ದಶರಥ ರಾಮ
ಮಾನಿನಿಯರುಗಳ ಮನೆಮನೆ ಬೆಣ್ಣೆಯ
ತಾನೆಳೆದುಂಡನೆ ವಸುದೇವ ಕೃಷ್ಣ ೭

ಧರಣಿಜೆ ಸೀತೆಯ ಮದುವೆಗೆ ಜನಕನ
ಪುರಕೆ ಬಂದಿಹನಂದಾ ದಶರಥ ರಾಮ
ನೆರೆಮನೆ ಮುಮ್ಮನೆ ಬೀದಿಗಳೊಳಗೆಲ್ಲ
ಹರಿದೊಲಿದಾಡಿದ ವಸುದೇವ ಕೃಷ್ಣ ೮

ಭೂಪರ ದಣಿಸಿದ ಚಾಪವ ನೋಡುತ
ಕೋಪದಿ ಮುರಿದನೆ ದಶರಥ ರಾಮ
ಗೋಪಿಗೆ ತನ್ನಯ ಬಾಯಲಿ ವಿಶ್ವ ಸ್ವ
ರೂಪವ ತೋರಿದ ವಸುದೇವ ಕೃಷ್ಣ ೯

ಧರಣಿಸುತೆಯ ವೈವಾಹದಿ ಕೋಸಲ
ಪುರಕೆ ಸಾರಿದ ಜಯ ದಶರಥ ರಾಮ
ದುರುಳ ಕಾಳಿಂಗನ ಮರ್ದಿಸಿ ತತ್ಸತಿ
ಯರಿಗೊಲಿದನು ವರ ವಸುದೇವ ಕೃಷ್ಣ ೧೦

ಪರಶುರಾಮನು ಬಂದು ಕಾಳಗವಿತ್ತೊಡೆ
ಕರದ ಬಿಲ್ಲೆಳೆದನಾ ದಶರಥ ರಾಮ
ತರುಣಿ ದೇವಕಿ ಬಂದು ಒರಲಿಗೆ ಕಟ್ಟಲು
ಮರಗಳ ಮುರಿದ ಶ್ರೀ ವಸುದೇವ ಕೃಷ್ಣ ೧೧

ಅಜಸುತ ಪಟ್ಟವ ಕಟ್ಟಲು ಯತ್ನಿಸೆ
ಸ್ವಜನರ ತ್ಯಜಿಸಿದ ದಶರಥ ರಾಮ
ಅರ್ಜುನರಿರ್ವರಿಗೆ ಮೋಕ್ಷವಿತ್ತನು ವರ
ಸಜ್ಜನನೆನಿಸಿದ ವಸುದೇವ ಕೃಷ್ಣ ೧೨

ತಂದೆಯ ವರವನು ಸಲಿಸಲು ವನಕಾಗಿ
ಬಂದ ಲಕ್ಷ್ಮಣ ಕೂಡಿ ದಶರಥ ರಾಮ
ನಂದಗೋಕುಲದಲಿ ಧನದನ ಸುತರಿಗಾ
ನಂದವಿತ್ತನು ವರ ವಸುದೇವ ಕೃಷ್ಣ ೧೩

ವನದಲಿ ಲಕ್ಷ್ಮಣ ಸೀತೆಯರೊಡಗೊಂಡು
ಮುನಿಗಳೊಳಾಡಿದ ದಶರಥ ರಾಮ
ವನಿತೆಯರೊಡಗೂಡಿ ಜಲಕ್ರೀಡೆಗಳನಾಡಿ
ವನಧಿಗೈತಂದನಾ ವಸುದೇವ ಕೃಷ್ಣ ೧೪

ದಂಡಕಾರಣ್ಯಕೆ ಬಂದ ಮಾಯಾಮೃಗ
ಕಂಡು ಬೆನ್ನಟ್ಟಿದ ದಶರಥ ರಾಮ
ಹಿಂಡು ಗೋವಳರೊಡನಾಡುತ ಗೋವುಗಳ
ತಂಡ ಕಾದನು ಬಲ ವಸುದೇವ ಕೃಷ್ಣ ೧೫

ಮೃಗವನು ಬಯಸಿದ ಸೀತೆಯು ರಾವಣ
ತೆಗೆದು ಕದ್ದೊಯ್ದನು ದಶರಥ ರಾಮು
ಬಗೆಬಗೆ ಲೀಲೆಗಳಿಂದ ಗೋವಳರೊಳು
ಸೊಗಸಿನಿಂದಾಡಿದ ವಸುದೇವ ಕೃಷ್ಣ ೧೬

## 278. ಪಾರಿಜಾತ ಹಾಡು

ಗುರುಗಣಪತಿ ಶಾರದೆಯರಡಿಗೆರಗುತ್ತ
ಹರಿಹರ ಕಮಲಜೋದ್ಭವಗೆರಗಿ
ಹರಿಹರ ಕಮಲಜೋದ್ಭವಗೆರಗುತ ಪೇಳ್ವೆ
ಕರುಣದಿ ಜನರಿದ ಲಾಲಿಪುದು—ಮುದದಿಂದ ೧

ಧಾರಿಣೀಪತಿ ಪರೀಕ್ಷಿತನೊಂದು ದಿನವೊಳು
ವಾರಿಧಿ ಶಯನನ ಕಥನವನು
ವಾರಿಧಿಶಯನನ ಕಥೆಕೇಳಿ ದಣಿಯದೆ
ಭೂರಿ ಸಂಭ್ರಮದಿಂದ ಶುಕನೊಡನೆ—ಬೆಸಗೊಂಡ ೨

ಸುರ ಪಾರಿಜಾತ ಬಂತೆಲ್ಲಿಂದ ಧರಣಿಗೆ
ಕರುಣದಿಂದೆನಗದನರುಹಬೇಕು
ಕರುಣದಿಂದೆನಗದನರುಹಬೇಕೆನೆ ಕೇಳಿ
ಹರುಷದಿ ನುಡಿದನು ಋಷಿವರನು—ಕೃಪೆಯಿಂದ ೩

ದ್ವಾರಕಾ ಪಟ್ಟಣದೊಳಗೆ ಶ್ರೀಕೃಷ್ಣನು
ನಾರಿ ರುಕ್ಮಿಣಿಯೊಡನೊಪ್ಪಿರಲು
ನಾರಿ ರುಕ್ಮಿಣಿಯೊಡನೊಪ್ಪಿರೆ ನಾರದ
ನಾರಾಯಣ ಎಂದು ಬರುತಿರಲು—ಮುದದಿಂದ ೪

ಎದ್ದು ಬೇಗದಿ ಕೃಷ್ಣ ಇದಿರ್ಗೊಂಡು ಕರೆತಂದು
ಗದ್ದುಗೆಯಿತ್ತುಪಚರಿಸುತಲೆ
ಗದ್ದುಗೆಯಿತ್ತುಪಚರಿಸಿ ಮುನಿಯ ಪಾದ
ಶುದ್ಧೋದಕದಿಂದ ತೊಳೆಯಿಸಿದ—ಕರದಿಂದ ೫

ಪಾದಪೂಜೆಯ ಗೈದು ಮಂಗಳಾರತಿಯೆತ್ತಿ
ಮಾಧವ ಬೆಸಗೊಂಡ ಮುನಿವರನ
ಮಾಧವ ಬೆಸಗೊಂಡ ಮುನಿವರ ಲಾಲಿಸು
ಮೇದಿನಿಯೊಳಗೇನು ವರ್ತಮಾನ—ನುಡಿ ಎಂದ ೬

ದೇವ ಲಾಲಿಸು ನಾನು ದೇವಲೋಕದಿಂದ
ಭೂವಳಯಕೆ ಬರಬೇಕೆನುತ
ಭೂವಳಯಕೆ ಬರಬೇಕೆನುತಲೆ ಬಂದೆ
ದೇವಲೋಕದ ವೃಂದಾವನದೊಳಗೆ—ಬರುತಿರ್ದೆ ೭

ಸುರಪಾರಿಜಾತವ ಕಂಡು ನಾ ಭ್ರಮಿಸುತ್ತ
ಭರದಿ ತಂದೆನು ದೇವ ನೋಡೆನುತ
ಭರದಿ ತಂದೆನು ದೇವ ನೋಡೆನುತಲೆ ಮುನಿ
ಹರಿಯ ಕೈಗಿತ್ತನು ಪುಷ್ಪವನು—ಹರುಷದಿ ೮

ಮುನಿಪ ನೀ ಲಾಲಿಸು ಪುಷ್ಪದ ಮಹಿಮೆಯ
ಘನ ಬೇಗ ಎನಗೆ ನೀ ಪೇಳಬೇಕು
ಘನಬೇಗ ಎನಗೆ ನೀ ಪೇಳಬೇಕಿದು ಆರ್ಗೆ
ವಿನಯದಿ ಮುಡಿಸಲಿನ್ನೇನಹುದು—ಪೇಳಬೇಕು ೯

ವನಜಲೋಚನ ನಿನ್ನ ಮಡದಿ ರುಕ್ಮಿಣಿಗಿದ
ವಿನಯದಿ ಮುಡಿಸಲು ಪುತ್ರರನು
ವಿನಯದಿ ಮುಡಿಸಲು ಪುತ್ರರ ಪಡೆವಳು
ಮನದಿ ಶಂಕಿಸದಿದ ಮುಡಿಸೊ ನೀನು—ಸುಮವನು ೧೦

ಎನೆ ಕೇಳ್ದು ಶ್ರೀಕೃಷ್ಣ ಪುಷ್ಪವ ಮಡದಿಗೆ
ಘನ ಬೇಗ ಮುಡಿಸಿ ಸಂತೋಷದಲಿ
ಘನ ಬೇಗ ಮುಡಿಸಿ ಸಂತೋಷದೊಳಿರುತಿರೆ
ಮುನಿಪತಿ ತೆರಳಿದ ಸುರಪುರಕೆ—ಘನ ಬೇಗ ೧೧

ಇತ್ತಲೀ ಪರಿಯಿಂದಲಿರಲೊರ್ವ ಸಖಿ ಬಂದು
ಸತ್ಯಭಾಮೆಗೆ ನಮಿಸಿ ಪೇಳಿದಳು
ಸತ್ಯಭಾಮೆಗೆ ನಮಿಸಿ ಪೇಳಿದಳವಳಾಗ
ಮತ್ತಕಾಶಿನಿ ನಿನ್ನ ಕಾಂತ ತಾನು—ವನಿತೆಗೆ ೧೨

ಸುರಮುನಿ ತಂದಿತ್ತ ಸುರಪಾರಿಜಾತವ
ತರುಣಿ ರುಕ್ಮಿಣಿಗದ ಮುಡಿಸಿದನು
ತರುಣಿ ರುಕ್ಮಿಣಿಗದ ಮುಡಿಸಿದ ಸುಳ್ಳಲ್ಲ
ಸರಸಿಜಾಂಬಕ ತಾನೆ ಕರದಿಂದ—ಹರುಷದಿ ೧೩

ಹುಸಿಯೊ ದಿಟವೊ ಪೇಳು ಸಖಿ ನೀನು ಕಂಡಯೊ
ಕುಸುಮವೆಂತಿಹುದದು ಪೇಳೆನಗೆ
ಕುಸುಮವೆಂತಿಹುದದು ಪೇಳು ನೀ ನಿಜವಾಗಿ
ಎಸಳುಗಂಗಳ ಬಾಲೆ ಬೇಗದಲಿ—ನಿಜವಾಗಿ ೧೪

ಕುಸುಮ ಶೋಭಿಸುವುದು ಬಿರಿದಾಗ ಪರಿಮಳ
ಪಸರಿ ಲೋಕಕ್ಕೆಲ್ಲ ಸೆದವು
ಪಸರಿ ಲೋಕಕ್ಕೆಲ್ಲ ಎಸೆದವು ಕುಸುಮದಿ
ಎಸಳುಗಳೇಳಾಗಿ ತೋರುವದು—ನಿಜವಾಗಿ ೧೫

ಬಾಲೆಯು ನುಡಿ ಕೇಳ್ದು ಭಾವೆಯು ಒಡಲೊಳು
ಶೂಲ ಬಂದೆರಗಿದ ತೆರನಾಗಿ
ಶೂಲ ಬಂದೆರಗಿದ ತೆರದಿ ಮೂರ್ಛಿಸುತೆದ್ದು
ಬಾಲಕಿ ಕ್ಲೇಶದಿ ನುಡಿದಳಾಗ—ಸಖಿಯೊಳು ೧೬

ಕಾಂತಂಗೆನ್ನೊಡನಿಷ್ಟು ಮಮತೆಯಿಲ್ಲದ ಮೇಲೆ
ಕಾಂತೆ ನಾನಿನ್ನೆಂತು ಬಾಳುವೆನು
ಕಾಂತೆ ನಾನಿನ್ನೆಂತು ಬಾಳುವೆ ನುಡಿ ಜಾಣೆ
ಕಾಂತೆಯರೆಲ್ಲರ ಸಮನಾಗಿ—ನಡೆಸದೆ ೧೭

ಪುಂಡತನವೆ ಗೈದು ರುಕ್ಮಿಣೀ ಗೃಹದಲ್ಲಿ
ಪುಂಡರೀಕಾಕ್ಷನು ನಿತ್ಯದೊಳು
ಪುಂಡರೀಕಾಕ್ಷನು ನಿತ್ಯದೊಳಿರುವನು
ಹೆಂಡಿರೆಲ್ಲರ ತಾನು ಮನ್ನಿಸದೆ—ಸತಿಯೊಳು ೧೮

ಸುರಪಾರಿಜಾತದೊಂದೆಸಳನಾದರೆನಗೆ
ಕರೆದೀಯದರು ತೋರಬಾರದೇನೆ
ಕರೆದೀಯದಾದರು ತೋರಬಾರದ ಮೇಲೆ
ಧರಣಿಯೊಳ್ ಬಾಳಿರಲಾರೆ ನಾನು—ಸಖಿ ಕೇಳು ೧೯

ಎಂದು ಸರ್ವಾಭರಣಂಗಳ ತೆಗೆದಳು
ಇಂದಿರಾಕ್ಷಿಯು ಬೊಟ್ಟು ಕೆದರಿ ಮತ್ತೆ
ಇಂದಿರಾಕ್ಷಿಯು ಬೊಟ್ಟು ಕೆದರಿ ಕುಪ್ಪಸವನ್ನು
ಮಂದಗಮನೆ ಹರಿದು ಬಿಸುಟಳಾಗ—ಚಲದಿಂದ ೨೦

ಮಲಿನ ವಸ್ತ್ರವನುಟ್ಟು ಭೂಷಣಗಳ ಬಿಟ್ಟು
ನಳಿನಾಕ್ಷಿ ಕದಹಾಕಿ ಮಂಚದಲಿ
ನಳಿನಾಕ್ಷಿ ಕದಹಾಕಿ ಮಂಚದಿ ಮಲಗುತ್ತ
ಚಲಗೊಂಡಳುಣ್ಣದೆ ಬಸವಳಿದು—ನಳಿನಾಕ್ಷಿ ೨೧

ನಾರಿಯೀ ಪರಿಯೊಳಗಿರೆ ಸಖಿ ಬೇಗದಿ
ವಾರಿಜಾಕ್ಷನೊಳ್ಳೈದಿ ಪೇಳಿದಳು
ವಾರಿಜಾಕ್ಷನೊಳ್ಳೈದಿ ಪೇಳ್ದಳು ಹರಿ ನಿನ್ನ
ನಾರಿ ಸತ್ಯಭಾಮೆ ಚಲದಿಂದ—ಇರುವಳು ೨೨

ಅನ್ನ ಪಾನವ ಬಿಟ್ಟು ಉಡಿಗೆ ತೊಡಿಗೆ ಬಿಟ್ಟು
ಕಣ್ಣ ನೀರನು ತುಂಬಿ ಮಂಚದಲಿ
ಕಣ್ಣ ನೀರನು ತುಂಬಿ ಮಂಚದಿ ಪವಡಿಸಿ
ಕನ್ನೆ ಬಾಗಿಲ ಹಾಕಿ ಮಲಗಿದಳು—ಹರಿ ಕೇಳು ೨೩

ಎಂದ ಮಾತನು ಕೇಳಿ ಗೋವಿಂದ ಬೇಗದಿ
ಬಂದು ಬಾಗಿಲ ಮುಂದೆ ನಿಂದು ತಾನು
ಬಂದು ಬಾಗಿಲ ಮುಂದೆ ನಿಂದು ಚಿಂತಿಸುತೆಂದ
ಮಂದಗಮನೆ ಎಲ್ಲಿಗೈದಿದೆಯೋ—ನುಡಿಯೆಂದ ೨೪

ಎಲ್ಲಿ ಪೋದೆಯೊ ಎನ್ನ ಫುಲ್ಲಲೋಚನೆ ಬಾಲೆ
ಚೆಲ್ವೆಯರಸಿ ದೇವಿ ಎನ್ನೊಡನೆ
ಚೆಲ್ವೆಯರಸಿ ದೇವಿ ಎನ್ನೊಡನೇಕೆಂದು
ಸೊಲ್ಲಿಸಿ ಮಾತುಗಳಾಡದಿಂತು—ಚಲದಿಂದ ೨೫

ಮುನಿದ ಕಾರಣವೇನು ವನಜಲೋಚನೆ ಪೇಳು
ಘನವೇನೆ ನೀನೆನ್ನ ಬಳಲಿಸಲು
ಘನವೇನೆ ನೀನೆನ್ನ ಬಳಲಿಸದಿರು ನಿನ್ನ
ಮನದ ಬಯಕೆಗಳ ಸಲ್ಲಿಸುವೆ—ಸತಿ ಕೇಳು ೨೬

ಎಂದಿನ ಪರಿ ಬಂದು ಚುಂಬಿಸಿ ಮೋಹದಿ
ಚೆಂದಿರ ಮುಖಿ ಮಾತನಾಡೆನುತ
ಚೆಂದಿರಮುಖಿ ಮಾತನಾಡೆಲೆ ಶುಕವಾಣಿ
ಸುಂದರಾಂಗಿಯೆ ಮದಗಜಗಮನೆ—ಹರುಷದಿ ೨೭

ಕಂಬುಕಂಧರೆ ನಿತ್ಯಕಲ್ಯಾಣ ಗುಣಶೀಲೆ
ಸಂಭ್ರಮದೊಳಗೊಂದು ಮಾತನಾಡೆ
ಸಂಭ್ರಮದೊಳಗೊಂದು ಮಾತಾಡೆ ಮೋಹನೆ
ಇಂಬಾಗಿ ಸಂಗೀತ ಹಾಡು ಬಾಲೆ—ಗುಣಶೀಲೆ ೨೮

ಝಣ ಝಣತ್ಕಾರದಿ ಬಾ ಮೋಹನಾಕಾರೆ
ಮೃಣ ಮೃಣ ರವದಿಂದ ನಾಟ್ಯದೊಳು
ಮೃಣ ಮೃಣ ರವದಿಂದ ನಾಟ್ಯದೋರುತ ಬಂದು
ಘಣ ಘಣ ಕೃತಿಯಿಂದ ಸರಸದಿಂದ—ಮಾತನಾಡು ೨೯

ಎನ್ನಿಂದ ತಪ್ಪಿತು ಬಾಗಿಲ ತೆರೆ ಬಾಲೆ
ಇನ್ನಾರ ಮಾತನು ಕೇಳಿ ನಾನು
ಇನ್ನಾರ ಮಾತನು ಕೇಳಿ ಸಿನ್ನಯ ಮಾತ
ಮನ್ನಿಸಿ ಕೇಳಿದಿಷ್ಟವಸೀವೆ—ಗುಣಶೀಲೆ ೩೦

ಬಾಗಿಲ ದ್ವಾರದಿ ದನಿದೋರುವಾತನು
ಬೇಗದೊಳಾರೆಂದು ನುಡಿಯೊ ನೀನು
ಬೇಗದೊಳಾರೆಂದು ನುಡಿಯೆನೆ ನಳಿನಾಕ್ಷಿ
ಬೇಗನೆ ನುಡಿದನು ವನಿತೆಯೊಳು—ಸರಸದಿ ೩೧

ನೀರೆ ಕೇಳಾರೊಂದು ಜನವನು ಕಟ್ಟಿಯೆ
ವಾರಿಜಾಕ್ಷಿಯ ತಂದ ಧೀರ ಕಾಣೆ
ವಾರಿಜಾಕ್ಷಿಯ ತಂದ ಧೀರ ಕಾಣೆಲೆ ಬಾಲೆ
ದ್ವಾರವ ತೆರೆದೊಂದು ಮಾತನಾಡೆ—ಸರಸದಿ ೩೨

ಕ್ರೂರ ಕಾಳಿಂಗನ ಹೆಡೆಯ ತುಳಿದು ಬಂದ
ಭೂರಿ ವಿಕ್ರಮ ನಾನು ಕೇಳು ಬಾಲೆ
ಭೂರಿ ವಿಕ್ರಮ ನಾನು ಕೇಳೆಲೆ ಗುಣರನ್ನೆ
ಭೂರಿ ತೋಷದಿ ದ್ವಾರ ತೆರೆ ಬಾಲೆ—ತ್ವರಿತದಿ ೩೩

ಭೂರಿ ವಿಕ್ರಮನಾದವರೊಳ್ಳಿತು ಉರಗನ
ಊರೊಳಾಡಿಸಿಕೊಂಡು ಪೋಗು ನೀನು
ಊರೊಳಾಡಿಸಿಕೊಂಡು ಪೋಗು ಪೋಗೆನೆ ಕೇಳಿ
ಶೌರಿ ಭಾವೆಯೊಳಿಂತು ನುಡಿದನಾಗ—ನಯದಿಂದ ೩೪

ಸರಸಿಜಮುಖಿ ಕೇಳು ಶಕಟ ಧೇನುಕ ಮುಖ್ಯ
ಮುರುಳರ ಗೆಲಿದಂಥ ಪುರುಷ ಕಾಣೆ
ಮುರುಳರ ಗೆಲಿದಂಥ ಪುರುಷನೆಂದೆನೆ ಕೇಳಿ
ತರುಣಿ ಭಾಮಾದೇವಿ ನುಡಿದಳಾಗ—ಬಹು ಬೇಗ ೩೫

ಮುರುಳರ ಗೆಲಿವ ಪರಾಕ್ರಮಿಯಾದರೆ
ಧರಣಿ ಪಾಲಕನೊ ನೀ ಮುರಹರನೋ
ಧರಣಿ ಪಾಲಕನೊ ನೀ ಮುರಹರನೋ ಎಂದು
ಪರಿಯನು ನಿಜವಾಗಿ ಅರುಹೀಗಲೆ—ಕರುಣದಿ ೩೬

ಎಂದ ಮಾತನು ಕೇಳಿ ಗೋವಿಂದನೆಂದನು
ಮಂದಗಾಮಿನಿ ನಿನ್ನ ಕಾಂತ ಕಾಣೇ
ಮಂದಗಾಮಿನಿ ನಿನ್ನ ಕಾಂತನೆಂದೆನೆ ಕೇಳಿ
ಬಂದು ಬಾಗಿಲ ಭಾಮೆ ತೆಗೆದಳಾಗ—ಬಲು ಬೇಗ ೩೭

ಬಂದು ಮಂಚದಿ ಪವಡಿಸಿದಳು ಕ್ಲೇಶದಿ
ಮಂದಗಾಮಿನಿ ಬಲು ಕ್ರೋಧದೊಳು
ಮಂದಗಾಮಿನಿ ಬಲು ಕ್ರೋಧದೊಳಿರುತಿರೆ
ಮಂದರಧರ ಬಂದು ಬಿಗಿದಪ್ಪಿ—ನುಡಿದನು ೩೮

ಏನಾಯಿತೆಲೆ ಕಾಂತೆ ಯಾರಿಂದ ನಿನಗಿಂಥ
ಮಾನಹಾನಿಗಳಾಯ್ತು ಎಂದೆನುತ
ಮಾನಹಾನಿಗಳಾಯಿತೆನೆ ಕೇಳಿ ಸತಿಯೊಳು
ಮಾನಿನೀಮಣಿ ಭಾವೆ ನುಡಿದಳಾಗ—ಕ್ಲೇಶದೊಳು ೩೯

ಒರಿಯ ಕಾಂತೆಯೊಳೊಂದು ಹಿರಿದು ಸಂತಸದಿಂದ
ತರುಣಿ ರುಕ್ಮಿಣಿಯೊಳು ಸರಸದಿಂದ
ತರುಣಿ ರುಕ್ಮಿಣಿಯೊಳು ಸರಸದಿಂದಿರುತಿಂದು
ಬರಿದೇತಕಿಲ್ಲಿಗೆ ಬಂದೆ ಹೇಳು—ಸಖಿ ನೀನು ೪೦

ಈಗ ನಾ ತಿಳಿದೆನು ನಿನ್ನಂತರಂಗವ
ಹೂಗೊಂದ ಕೊಡದಿರ್ದ ವ್ಯಸನವೆ
ಹೂಗೊಂದ ಕೊಡದಿರ್ದ ವ್ಯಸನವೆ ಮನದಲ್ಲಿ
ಹೋಗುವ ನಾಕಕ್ಕೆ ಸುಮುಕಾಗಿ—ನಡೆಯೆಂದ ೪೧

ಸಕಲಾಭರಣದ ಪೆಟ್ಟಿಗೆಗಳ ತಂದು
ಸಕಲವ ಧರಿಸುತ್ತ ಆ ಕ್ಷಣವೆ
ಸಕಲವ ಧರಿಸುತ್ತಲಾಕ್ಷಣ ದಿವ್ಯದೆ
ರಕವಾದ ರಥವನು ತರಿಸಿದ—ಸೊಬಗಿಂದ ೪೨

ರಮಣ ರಮಣಿಯರು ಅಮಿತ ಸಂತೋಷದಿ
ಗಮಿಸಲು ಭರದಲ್ಲಿ ಬಳಿಕಂದು
ಗಮಿಸಲು ಭರದಲ್ಲಿ ಬಳಿಕಂದು ಪಥದಲ್ಲಿ
ಅಮರಾರಿ ನರಕ ದಾನವನಂದು—ತಡೆದನು ೪೩

ಎಲ್ಲಿಗೆ ಪೋಗುವೆ ಕಳ್ಳ ಕೃಷ್ಣನೆ ನೀನು
ನಿಲ್ಲು ನಿನ್ನಯ ಗುಂಡಿಯೆಲುಗಳನು
ನಿಲ್ಲು ನಿನ್ನಯ ಗುಂಡಿಯೆಲುಗಳ ಮುರಿವೆನು
ಸಲ್ಲದು ಪಥದೊಳು ನಡೆಯುವುದು—ಎನುತಲೆ ೪೪

ನಾಶ ಮಾಡುತ ನಿನ್ನ ರಮಣಿಯ ಕೊಂಡೊಯ್ದು
ವಾಸವ ಸಭೆಯಿಂದ ಮಿಗಿಲಾಗಿ
ವಾಸವ ಸಭೆಯಿಂದ ಮಿಗಿಲಾಗಿ ಗೃಹದೊಳು
ತೋಷದಿಂದಾಳುವೆ ನೋಡೆಂದನು—ದುರುಳನು ೪೫

ದುರುಳನಾಡಿದ ಮಾತ ಹರಿಯು ಕೇಳುತಲಾಗ
ದುರುಳನೆ ನಿನ್ನೆಲುಗಳನೆಲ್ಲ
ದುರುಳನೆ ನಿನ್ನೆಲುಗಳ ಮುರಿಯುತ ಬೇಗ
ಭರದಿ ಭೂತಕೆ ತೃಪ್ತಿಪಡಿಸುವೆನು—ಬಳಿಕಾನು ೪೬

ಕ್ಷೀರ ಮೊಸರು ಬೆಣ್ಣೆ ಕದ್ದು ತಿಂದುಂಡಂತೆ
ತೀರದೆನ್ನೊಳು ಯುದ್ಧ ಘೋರ ನೀನು
ತೀರದೆನ್ನೊಳು ಯುದ್ಧ ಘೋರ ನೀ ತೊಲಗೆಂದು
ತೋರ ವೃಕ್ಷದಿ ಪೆಟ್ಟು ಹೊಡೆದನಾಗ—ಹರಿಗಂದು ೪೭

ಹೊಡೆದ ಪೆಟ್ಟನು ಸೈರಿಸುತಲೆ ಶ್ರೀಕೃಷ್ಣನು
ನುಡಿದನು ರೋಷದಿ ನರಕನೊಳು
ನುಡಿದನು ರೋಷದಿ ದಡಿಗ ದಾನವನಿಗೆ
ಕಡುತರ ಮಂತ್ರಾಸ್ತ್ರವೆಲ್ಲವನು—ಬಿಡಲೆಂದು ೪೮

ಬಿಟ್ಟ ಮಂತ್ರಾಸ್ತ್ರವನೆಲ್ಲವ ತರಿಯುತ್ತ
ಸಿಟ್ಟಿನಿಂದಲೆ ಖಳ ಹರಿಗೊದ್ದನು
ಸಿಟ್ಟಿನಿಂದಲೆ ಖಳ ಹರಿಗೊದ್ದ ಪುಕಲಾಗ
ಪುಟ್ಟ ಕೈಯಲಿ ಚಕ್ರ ತಿರುಹಿಟ್ಟನು—ಹರಿಯಾಗ ೪೯

ಹರಿಯ ಚಕ್ರವ ಕಂಡು ಭರದಿಂದ ಖಳನಾಗ
ತ್ವರಿತದಿಂದೋಡುತ್ತಲಾ ಕ್ಷಣದಿ
ತ್ವರಿತದಿಂದೋಡುತ್ತಲಾಗ ಬೆನ್ನೊಳು ಬಂದು
ಭರದಿ ಚುಚ್ಚಿತು ಮೈ ಸರ್ವಾಂಗದೊಳು—ದುರುಳಂಗೆ ೫೦

ದುಷ್ಟ ರಕ್ಕಸನು ಸಾಯುವನಿನ್ನು ಎನುತಲೆ
ಅಷ್ಟರೊಳ್ ಭಾಮೆಯು ಬಳಿಕಲಾಗ
ಅಷ್ಟರೊಳ್ ಭಾಮೆಯು ಬಳಿಕಾಗ ಹರಿಯೊಳು
ಗುಟ್ಟಿನಿಂದಲೆ ನಿಂದು ಪೇಳಿದಳು—ಕಾಂತನೊಳು ೫೧

ಪ್ರಾಣವಲ್ಲಭ ಮಾತ ಲಾಲಿಸಿ ಕೇಳಿನ್ನು
ಖೂಳನ ಪ್ರಾಣವ ಕಾಯುಲೀಗ
ಖೂಳನ ಪ್ರಾಣವ ಕಾಯ್ದರೇನಾದೀತು
ಪೇಳೆಂಪಳಾಕೆ ಬೇಗದೊಳಂದು—ಹರಿಯೊಳು ೫೨

ಒರೆದ ನಿನ್ನಯ ಮಾತನು ಕೇಳ್ದೆ ಸಂತೋಷ
ವೆರಸಿದೆ ನಿನ್ನ ಮಾನಸದಿರವ
ವೆರಸಿದೆ ನಿನ್ನ ಮಾನಸದಿರವೀ ಖಳನ
ಉರದ ಜೀವವ ಬಿಡಬೇಕು ಎಂದು—ಹರುಷದಿ ೫೩

ಕರೆದು ದುಷ್ಟನ ನೀನು ಭರದಿ ಓಡಲು ಬೇಡ
ಭರವಸೆಯಲಿ ನಿನ್ನ ಪ್ರಾಣವನು
ಭರವಸೆಯಲಿ ನಿನ್ನ ಪ್ರಾಣವ ಬಿಡುವೆನು
ತ್ವರಿತದಿ ಸುಖಿಸು ನೀ ಸದನದೊಳು—ಹರುಷದಿ ೫೪

ದುರುಳ ದಾನವನನ್ನು ಕಳುಹಿಸಿ ಆಗಲೆ
ಭರದಿಂದ ನಡೆದರು ಸುರಪುರಕೆ
ಭರದಿಂದ ನಡೆದರು ಸುರಪುರಕೆನುತಲೆ
ಹರುಷದಿ ನಲಿನಲಿದಾಡುತಲೆ—ಜತೆಯೊಳು ೫೫

ದೇವಲೋಕದ ದ್ವಾರವನು ಕಾಯ್ವ ಚಾರರ
ಘೋರನೆ ಕಂಡು ತಾ ಬೆಸಗೊಳುತ
ಘೋರನೆ ಕಂಡು ತಾ ಬೆಸಗೊಂಡು ಮುಂದಕೆ
ದಾರಿಯ ಹಿಡಿಯುತ ಗಮಿಸಿದರು—ಬಳಿಕಾಗ ೫೬

ದೇವಲೋಕದ ಬಾಗಿಲನು ದಾಟಿ ಮುಂದಕೆ
ಸಾವಕಾಶದಿ ನಡೆದೈದುತಿರೆ
ಸಾವಕಾಶದಿ ನಡೆದೈದಲು ದಿವ್ಯದ
ಪಾರಿಜಾತದ ಪರಿಮಳವೆಸೆಯೆ—ಸತಿಗಂದು ೫೭

ರಮಣ ಲಾಲಿಸಿ ಕೇಳು ಸುಮದ ಪರಿಮಳವನ್ನು
ಗಮಗಮಿಸುತಿದೆ ಶೋಧಿಸಿ ನೋಡುವ
ಗಮಗಮಿಸುತಿದೆ ಶೋಧಿಸಿ ನೋಡುವ ಎಂದು
ಉಮೆಯರಸನ ಸಖನೊಡನೆಂದಳು—ಭಾಮೆಯಂದು ೫೮

ಇಂತು ಮುಂದೈತರುತಿರೆ ಕಂಡು ಚರನೊರ್ವ
ಮುಂತೆ ನಡೆದು ಪೇಳ್ದ ಸುರಪಾಲಗೆ
ಮುಂತೆ ನಡೆದು ಪೇಳ್ದ ಸುರಪಗೆ ಶ್ರೀಕೃಷ್ಣ
ನಂತೆ ಭಾಮಾದೇವಿ ಸಹಿತಲೆ—ಬರುವರು ೫೯

ಹರಿ ಬಂದ ವಾರ್ತೆಯ ಕೇಳುತ ಸುರಪನು
ಹರುಷದಿ ಸಿಂಹಾಸನದಿಂದೆದ್ದು
ಹರುಷದಿ ಸಿಂಹಾಸನದಿಂದಲೆ ಎದ್ದು
ಪೊರಟನು ಸಂಭ್ರಮದಿಂದ ತಾನು—ತ್ವರಿತದಿ ೬೦

ಬಂದಿದಿರ್ಗೊಂಡಾಗ ಹರಿಯನು ಸುರಪನು
ಚಂದದಿ ಕರವ ಪಿಡಿದು ಬೇಗ
ಚಂದದಿ ಕರವ ಪಿಡಿದು ಬೇಗ ಕೊಂಡೊಯ್ದು
ಚಂದದ ಸಭೆಗೆನೆ ಕರೆತಂದನು—ಸುರಪನು ೬೧

ಕರೆದು ವಿಷ್ಟರದಿ ಕುಳ್ಳಿರಿಸಿ ಪೂಜಿಸಿ ಬೇಗ
ಭರದಿಂದ ಕೃಷ್ಣನ ಪಾದವನು
ಭರದಿಂದ ಕೃಷ್ಣನ ಪಾದವ ತೊಳೆದರ್ಘ್ಯ
ವರ ಜಲ ಪ್ರೋಕ್ಷಿಸಿ ಶಿರಕೆ ಬೇಗ—ಹರುಷದಿ ೬೨

ಸುರಪನ ಸತಿ ಬಂದು ವರ ಸತ್ಯಭಾಮೆಯು
ಕರೆದು ಮಾತಾಡಿಯೆ ಉಪಚರಿಸಿ
ಕರೆದು ಮಾತಾಡಿಯೆ ಉಪಚರಿಸುತ ಮತ್ತೆ
ಭರದಿಂದ ಕ್ಷೇಮ ಕುಶಲವಾರ್ತೆಯ—ಕೇಳ್ದಳಂದು ೬೩

ಮುರಮಥನನೆ ನಿನ್ನೊಳೊರೆದ ದೂರುಗಳಂತೆ
ಪರಿಹರಿಸಿದೆಯ ಎನ್ನಯ ಭೀತಿಯ
ಪರಿಹರಿಸಿದೆಯ ಎನ್ನಯ ಭೀತಿಯನು ನೀನು
ಹರುಷದಿಂದೊರೆಯಬೇಕದ ನನಗೆ—ಮುದದಿಂದ ೬೪

ಲಾಲಿಸು ಸುರಪಾಲ ಖೂಳನರಕನನ್ನು
ತೋಳ ಸತ್ತ್ವವನೆಲ್ಲ ಭಂಗಿಸಿದೆ
ತೋಳ ಸತ್ತ್ವವನೆಲ್ಲ ಭಂಗಿಸಿ ಮತ್ತಿನ್ನು
ಲೀಲೆಯಿಂದಲಿಯಿಲ್ಲಿ ಬಂದೆನೆಂದ—ಹರಿಯಂದು ೬೫

ಹರಿಯೆಂದ ಮಾತನು ಕೇಳುತ್ತ ಸುರಪನು
ಪರಮ ಸಂತೋಷದ ಜಲಧಿಯಲಿ
ಪರಮ ಸಂತೋಷದ ಜಲಧಿಯೊಳ್ಮುಳುಗುತ
ಕರುಣದಿಂದಲಿ ಹರಿಪಾದವನು—ಪಿಡಿದಂದು ೬೬

ಭೋಜನವನು ತೀರಿಸುವ ಅತಿ ಹರುಷದಿ
ರಾಜಮುಖಿಯು ಸಹಿತಿಂದೀಗ
ರಾಜಮುಖಿಯು ಸಹ ಭುಂಜಿಸಿ ಇರಿ ನೀವು
ರಾಜಸಭೆಯೊಳು ಕೆಲವು ದಿನ—ಸುಖವಾಗಿ ೬೭

ಕೃಷ್ಣ ಭಾಮೆಯರಂದು ಒಟ್ಟಾಗಿ ತಿರುಗುತ
ಪುಟ್ಟ ಪಾರಿಜಾತದೆಡೆಗಾಗ
ಪುಟ್ಟ ಪಾರಿಜಾತದೆಡೆಗಾಗ ಗಮಿಸಿದರು
ಅಷ್ಟ ಭಾಗ್ಯಗಳನು ನೋಡುತಳೆ—ಜತೆಯಾಗಿ ೬೮

ನಾರಿ ಭಾಮೆಗೆ ದಿವ್ಯವಾದ ಕಮಲವನು
ತೋರಿಸಿದನು ಕಡು ಪ್ರೀತಿಯಲಿ
ತೋರಿಸಿದನು ಕಡು ಪ್ರೀತಿಯೊಳ್ ಕಮಲವ
ನೀರೆ ನೀ ತೆಕ್ಕೊಳ್ಳೆ ಬೇಗದಲಿ—ಮುದದಿಂದ ೬೯

ಆಗದಾಗದು ಸಲ್ಲ ಬಯಸಿದ ಸುಮವನ್ನು
ಬೇಗನೆ ಕೊಡು ಎನುತಲೆ ಚಲವ
ಬೇಗನೆ ಕೊಡು ಎನುತಲೆ ಚಲವನು ಮಾಡಿ
ನೀಗಿದಳ್ ಕಣ್ಣ ನೀರುಗಳನ್ನು—ವ್ಯಸನದಿ ೭೦

ಇತ್ತ ನೋಡಬಲೆ ಕಸ್ತೂರಿ ಮಲ್ಲಿಗೆಯನು
ಒತ್ತಾಗಿ ಸಂಪಗೆ ಮೊಗ್ಗೆಯನು
ಒತ್ತಾಗಿ ಸಂಪಗೆ ಮೊಗ್ಗೆಯ ತೆಕ್ಕೊಳ್ಳೆ
ಚಿತ್ತಾರದ ಬೊಂಬೆ ತೆಕ್ಕೊಳೆಂದು—ನುಡಿದನು ೭೧

ಪತಿಕೆನ್ನನು ಭ್ರಮಿಸುವೆ ನೀರ ನೀನಿಂದು
ಪ್ರೀತನೆಂದುಸುರಿದೆ ಅತಿ ಮೋಹದಿ
ಪ್ರೀತನೆಂದುಸುರಿದೆ ಅತಿ ಮೋಹದಿಂದಲಿ
ನೂತನದಾ ಸುಮ ಕೊಡು ಎಂದಳು—ರಮಣನೊಳು ೭೨

ನೋಡು ನೋಡೆಲೆ ಬಾಲೆ ಪಾರಿಜಾತದ ವೃಕ್ಷ
ಪಾಡ ನೀನತಿಮುದದಿಂದಲೆಲ್ಲ
ಪಾಡಾಗಿ ನೀನತಿ ಮುದದಿಂದಲೆಲ್ಲವ
ನೋಡು ನೋಡೆಂದನು ಹರುಷದಲಿ—ಸತಿಯೊಳು ೭೩

ಬೇಕಾದ ಪುಷ್ಪವ ನೀ ಕೊಯ್ದುಕೊಳ್ಳೆಂದು
ಸಾಕಾರ ವೃಕ್ಷವ ತೋರಿಸುತ
ಸಾಕಾರ ವೃಕ್ಷವ ತೋರಿಸುತಲೆ ಬೇಗ
ಆ ಕಮಲಾನನೆ ಕೊಯ್ದಳಾಗ—ಸುಮವನು ೭೪

ಸಂತೋಷದಿಂದಲೆ ಮುಡಿದು ನಲ್ಲನೊಳೆಂದಳ್
ಕಾಂತ ನಾವೀ ವೃಕ್ಷ ತೆಗೆದುಕೊಂಡು
ಕಾಂತ ನಾವೀ ವೃಕ್ಷ ತೆಗೆದುಕೊಂಡೊಯ್ಯುವ
ದೆಂತು ಪೇಳೆಂದಳು ಪ್ರಿಯದಿಂದ—ವರನೊಳು ೭೫

ಆಗದಾಗದು ನಲ್ಲೆ ಪಾರಿಜಾತದ ವೃಕ್ಷ
ಬೇಗದಿ ಕೊಂಡು ಪೋದರೆ ನಾವು
ಬೇಗದಿ ಕೊಂಡು ಪೋದರೆ ನಾವು ಸುರಪನು
ಯೋಗಿಗಳಂತೆ ಕುಪಿತನೆಂದ—ಸತಿಯೊಳು ೭೬

ಎಷ್ಟು ಪೇಳಿದರು ಎನ್ನಯ ಮನದೊಳಗಿದ್ದ
ಇಷ್ಟವ ಸಲಿಸಿ ನೀವ್ ಕೊಡಿರೆಂದು
ಇಷ್ಟವ ನೀವು ಸಲ್ಲಿಸಿ ಕೊಡಿರೆಂದು ಹರಿ
ಕೃಷ್ಣಾ ವಾಸುದೇವಾ ಎಂದಳು—ಹರಿಯೊಳು ೭೭

ನಾರಿ ನೀ ಚಲವ ಮಾಡದೆ ಎನ್ನ ಜತೆಯಿಂದ
ಸಾರಿ ಬಂದರೆ ಲೇಸು ಲೇಸೆನುತ
ಸಾರಿ ಬಂದರೆ ಲೇಸು ಲೇಸು ಎಂದೆನುತಲೆ
ಭೋರನೆ ಪೊರಟನು ತ್ವರಿತದಿಂದ—ಮುರವೈರಿ ೭೮

ಕಣ್ಣ ನೀರನು ತುಂಬಿ ಬಿರಿದು ಬಿಕ್ಕಳುತಲೆ
ಚೆನ್ನಾಗಿ ಮುಡಿದ ಸುಮವನೆಲ್ಲ
ಚೆನ್ನಾಗಿ ಮುಡಿದ ಸುಮವನೆಲ್ಲ ಬಿಕ್ಕುತ್ತಾ
ಉನ್ನತದಲಿ ಪೊರಡದೆ ಇದ್ದಳು—ಭಾಮೆಯಂದು ೭೯

ತರುಣಿಯ ಚಲವನು ಪರಿಕಿಸಿ ಕೃಷ್ಣನು
ವರ ಪಾರಿಜಾತದ ವೃಕ್ಷವನು
ವರ ಪಾರಿಜಾತದ ವೃಕ್ಷವ ಕೀಳುತ್ತಾ
ಭರಿತ ಸಂತೋಷದಿ ಪೊರಮಟ್ಟನು—ಜತೆಯಿಂದ ೮೦

ಪೊರಟ ಕಾಲದೊಳಾಗ ಚಾರರು ಬೇಗದಿ
ಸುರಪಗೆ ವಿಸ್ತರಿಸಿದರೆಲ್ಲವ
ಸುರಪಗೆ ವಿಸ್ತರಿಸಿದ ಸಂಗತಿಯನು
ಭರದಿ ಕೇಳುತಲಾಶ್ಚರ್ಯದಲಿ—ಶಚೀಪತಿ ೮೧

ಯಾರದೇನಾಶ್ಚರ್ಯ ನಾಕದ ಒಳಗಿದ್ದ
ಪಾರಿಜಾತದ ವೃಕ್ಷವನು ಕಿತ್ತು
ಪಾರಿಜಾತದ ವೃಕ್ಷವನು ಕಿತ್ತು ಹೋದರೆ
ದಾರಿಯಿನ್ನೇನೆಂದು ತಾನೆಂದನು—ಶಚೀವರನು ೮೨

ಪೋಗಿ ಕೇಳುವೆನೆಂದು ಇಂದ್ರನು ವಹಿಲದಿ
ನಾಗಶಯನನಿರ್ಪೆಡೆಗಾಗ
ನಾಗಶಯನನಿರ್ಪೆಡೆಗಾಗ ಬೇಗದಿ
ಪೋಗಿ ಕೇಳಿದನು ಶ್ರೀ ಹರಿಯೊಳಂದು—ಮಘವನು ೮೩

ಕಾಮಜನಕ ನೀವಿರ್ವರು ಬಂದು ಪ್ರೇಮದಿ
ಪಾರಿಜಾತದ ವೃಕ್ಷವನು ಕಿತ್ತು
ಪಾರಿಜಾತದ ವೃಕ್ಷವನು ಕಿತ್ತುಕೊಂಡೀಗ
ಭೋರನೆ ಗಮಿಸುವದಿದು ತರವೇ—ಹರಿ ಎಂದ ೮೪

ಸಾಕು ಸಾಕೆಲೆ ಮಂಕು ಇಂದ್ರನೆ ಜೋಕೆಯೊಳ್
ನಾಕಕೆ ತೆರಳು ನೀ ಶೀಘ್ರದಲಿ
ನಾಕಕೆ ತೆರಳು ನೀ ಶೀಘ್ರದಿ ನಿನ್ನಯ
ಪೋಕತನವ ನಿಲಿಸುವೆನೆಂದನು—ಹರಿಯಂದು ೮೫

ಸಾಕು ಮಾಧವ ಮಾತು ವೃಕ್ಷವ ಬಿಟ್ಟು ನೀವ್
ಜೋಕೆಯೊಳ್ ತೆರಳ್ವದು ಲೇಸೆನುತ
ಜೋಕೆಯೊಳ್ ತೆರಳ್ವದು ಲೇಸೆಂದು ಸುರಪನು
ಆ ಕಮಲಾಸನ ಪಿತಗೆಂದನು—ಕೋಪಿಸುತ್ತ ೮೬

ಆ ರೀತಿ ಮಾತಿಂದ ಭೂರಿ ರೋಷವ ತಾಳಿ
ಪ್ರೇರಿಸಲಸ್ತ್ರಸಂಕುಲವನ್ನು
ಪ್ರೇರಿಸಲಸ್ತ್ರ ಸಂಕುಲವನ್ನು ಬಿಟ್ಟನು
ಭೋರನೆ ಸುರಪ ಮೂರ್ಛಿತನಾದನು—ಧರೆಯೊಳು ೮೭

ಸುರಪಾರಿಜಾತದ ವೃಕ್ಷವ ಕೊಂಡು ಮುಂ
ಬರಿದರು ಅತಿ ರಭಸದೊಳಿರ್ವರು
ಸರಿದರು ಅತಿರಭಸದೊಳಿರ್ವರೈತಂದು
ಭರಿತ ಸಂಭ್ರಮದಲಿ ಪುರ ಹೊಕ್ಕರು—ಹರುಷದಿ ೮೮

ಭಾಮೆಯಂಗಳದಲ್ಲಿ ನೆಟ್ಟದರನು ಬೇಗ
ಭೂರಿ ಕಾರುಣ್ಯದಿಂದಿರುತಿರಲು
ಭೂರಿ ಕಾರುಣ್ಯದಿಂದಿರುತಿರೆ ಮನದಲ್ಲಿ
ನಾರಿ ರುಕ್ಮಿಣಿಯಲ್ಲಿ ಸುಮ ಬಿದ್ದಿತು—ಬಾಗುತಂದು ೮೯

ಅರುಣೋದಯದೊಳೆದ್ದು ಭರದಿ ರುಕ್ಮಿಣಿ ಬಂದು
ಭರದಿಂದ ಸುಮವನು ಹೆಕ್ಕುತಲೆ
ಭರದಿಂದ ಸುಮವನು ಹೆಕ್ಕುತ್ತ ಪೋದಳು
ವರ ಸತ್ಯಭಾಮೆ ಬಂದಿಂತೆಂದಳು—ವ್ಯಸನದಿ ೯೦

ಯಾವೆ ನೀ ಸುಮವನ್ನು ಚೋರರಂದದಿ ಹೆಕ್ಕಿ
ಜಾರುವೊಡಿದು ಎಲ್ಲಿಗೆಂದೆನುತ
ಜಾರುವೊಡಿದು ಎಲ್ಲಿಗೊಯ್ವೆ ಎನಲು ಕೇಳಿ
ಘೋರನೆ ರುಕ್ಮಿಣಿಯಿಂತೆಂದಳು—ಭಾಮೆಗಂದು ೯೧

ನುಡಿಯದಿರೆಲೆ ನೀನು ಕಡುಜಾಣೆಯೆಂಬುದ
ದೃಢವಾಗಿ ಬಲ್ಲೆನಾನೆಂದೆನುತ
ದೃಢವಾಗಿ ಬಲ್ಲೆ ನಾನೆಂದೆಂಬುದ ಕೇಳು
ತೊಡನೆ ಕೃಷ್ಣನು ಬಂದಿಂತೆಂದನು—ಸತಿಯರೊಳು ೯೨

ಏತಕೆ ಪೊಯ್ದಾಡಿಕೊಂಬಿರಿ ನೀವಿನ್ನು
ಪ್ರೀತಿಯಿಂದಲಿ ಸಮ ಮಾಡಿಕೊಂಡು
ಪ್ರೀತಿಯಿಂದಲಿ ಸಮ ಮಾಡಿ ಮುಡಿರಿ ಎಂದು
ನೂತನದಲಿ ಪೇಳ್ದನಿಂತೆಂದು—ಸತಿಯರ್ಗೆ ೯೩

ಮಂಗಲಂ ಮಂಗಲಂ ಹರಿಹರಾದ್ಯರಿಗೆಲ್ಲ
ಮಂಗಲಂ ಸುರವರ ಗುರುವರಗೆ
ಮಂಗಲಂ ಸುರವರ ಗುರುವರಗೆನ್ನುತ್ತ
ಸಂಗಡಿರ್ದಾರು ಸತಿಪತಿಯರಂದು—ಜತೆಯಿಂದ ೯೪

## 279. ರಾವಣ ಮಂಡೋದರಿ ಸಂವಾದ

**ರಾವಣಾಂತಃಪುರದಿ ತನ್ನ**
**ಪ್ರಾಣಕಾಂತೆ ಮಂಡೋದರಿಯು**
**ಕೂಡೆ ನುಡಿದ ರಾವಣ ವಿ**
**ನೋದದ ಮಾತ—ವಿನೋದದ ಮಾತ** ೧

ಎನ್ನ ಮನವ ಒಲಿಸುವಂಥ
ಕನ್ನಡಿಯ ಮುಖದವಳ
ನಿನ್ನ ಮೇಲೆ ತರುವೆ ನೋಡೆ
ಸನ್ನುತದಿಂದ—ಸನ್ನುತದಿಂದ ೨

ಧರೆಯೊಳಗೆ ಎನ್ನಿಂದಲೆ
ಮೇಲಾಗಿ ಇದ್ದವರಿಲ್ಲ
ಹೇಳಬೇಕು ಎಂದಳಾಗ
ಪ್ರಾಣಕಾಂತಗೆ—ಪ್ರಾಣಕಾಂತಗೆ ೩

ಹೆಣ್ಣಿನೊಡನೆ ಹೇಳುವಂಥ
ಬಣ್ಣಗಾರನಲ್ಲ ನಾನು
ಪನ್ನಂಗಧರನ ಪಡೆದ
ಪುಣ್ಯಪುರುಷನು—ಪುಣ್ಯಪುರುಷನು ೪

ಪುಣ್ಯಪುರುಷ ನೀನಾದರೆ
ಚೆನ್ನಾಗಿದ್ದರೆನ್ನೊಳಗೆ ಪೆರ
ವೆಣ್ಣಗೆ ಕಣ್ಣಿಡುವುದು
ಸನ್ನುತವಲ್ಲ—ಸನ್ನುತವಲ್ಲ ೫

ಋಷಿಗಳ ಆಶ್ರಮದಲ್ಲಿ
ದಶರಥ ಶ್ರೀರಾಮನಾಳ್ವ
ಶಶಿಮುಖಿಯ ತರುವೆ ನೋಡೆ
ಬಿಸಜಲೋಚನೆ—ಬಿಸಜಲೋಚನೆ ೬

ರಾಮ ರಾಮ ಎಂದು ಎರಡು
ಕಿವಿಯ ಮುಚ್ಚಿ ಮಂಡೋದರಿಯು
ನಾರಿ ಜಾನಕಿಯ ಗೊಡವೆ
ಬೇಡ ಎಂದಳು—ಬೇಡ ಎಂದಳು ೭

ಅಸುರವೇಷವನ್ನೆ ಮರೆಸಿ
ಋಷಿಯ ವೇಷವನ್ನೆ ಧರಿಸಿ
ಶಶಿಮುಖಿಯ ತರುವೆ ನೋಡೆ
ಬಿಸಜಲೋಚನೆ—ಬಿಸಜಲೋಚನೆ ೮

ಶಶಿಮುಖಿ ಜಾನಕಿಯನ್ನು
ಕುಶಲದಿಂದ ನೀವ್ ತಂದರೆ
ದಶಶಿರಕ್ಕೆ ಹಾನಿಗೈವ
ದಶರಥ ರಾಮ—ದಶರಥ ರಾಮ ೯

ಹಾಸಿಯೆಂಬುದಿಲ್ಲ ಎನಗೆ
ಆ ನೀರೊಳಗಾಡುವಂಥ
ಮೀನ ಮೊಸಳೆ ಹಿಡಿವುದುಂಟೆ
ನೀ ನೋಡೆ ಕಾಂತೆ—ನೀ ನೋಡೆ ಕಾಂತೆ[1] ೧೦

ಕೆರೆಯೊಳಾಡುತಿರುವ ಮಕರ
ಕೆರೆಯ ತುಂಬಲ್ಲದೆ ಮೇಲೆ
ಕ್ಷಣಮಾತ್ರ ಜೀವಿಪುದುಂಟೆ
ನೀ ನೋಡೊ ಕಾಂತ—ನೀ ನೋಡೊ ಕಾಂತ ೧೧

ಗಿಡದೊಳಗಾಡುವ ಅಳಿಲ
ಹುಲಿಯು ಬಂದು ಹಿಡಿವುದುಂಟೆ
ದುರುಳತನದ ಮಾತು ತಮಗೆ
ತರವಲ್ಲ ಕಾಂತ—ತರವಲ್ಲ ಕಾಂತ ೧೨

ಹತ್ತು ಸಾವಿರದ ಆನೆ
ಒಟ್ಟಾದ ಕಾಳಗದೊಳು
ಹುಚ್ಚು ಮೃಗವು ಸುಳಿವದುಂಟೆ
ನೀ ನೋಡೊ ಕಾಂತ—ನೀ ನೋಡೊ ಕಾಂತ ೧೩

ಬುದ್ಧಿವಂತ ಬೇಟೆಗಾರ
ಇದ್ದಮೇಲೆ ಹುಲಿಯು ತಾನು
ಇದ್ದರೇನು ಹದ್ದಿಗಿಂತ
ಕಡೆಯೇನೆ ಕಾಂತೆ—ಕಡೆಯೇನೆ ಕಾಂತೆ ೧೪

1 ಕಾಣೆ ರಮಣಿ ನೀ—ಕಾಣೆ ರಮಣಿ ನೀ.

ಪಟ್ಟಾಭಿರಾಮನಾಳುವ
ಪಟ್ಟದರಸಿಯ ನೀ ತಂದರೆ
ಹುಟ್ಟು ಬಿಡಿಸಿ ನೂಕುವನು
ಪಟ್ಟಾಭಿರಾಮ—ಪಟ್ಟಾಭಿರಾಮ ೧೫

ಬಳೆಗಾರರಂಗಡಿಯಲಿ
ಹೊಳೆಯುವಂಥ ತ್ರಿಜಗದ
ಮಣಿಯ ಕಡಗ ಮುತ್ತಿನ ಮಣಿ
ಸರಿಯೆ ನೀ ನೋಡು—ಸರಿಯೆ ನೀ ನೋಡು ೧೬

ಕಡೆದ ಮುತ್ತಿನ ಮಣಿಯು ಮೂಸಾ
ಕಿಟ್ಟಿನಲ್ಲಿ ಬಿದ್ದ ಮೇಲೆ
ಕಾಜಿಗಿಂತ ಕಡೆಯಲ್ಲವೆ
ಹೆಟ್ಟಿನ ಕಾಂತ—ಹೆಟ್ಟಿನ ಕಾಂತ ೧೭

ಕೆಟ್ಟ ಕಡಮೆ ಮಾತುಗಳ
ಇಂದೆನ್ನೊಡನೆ ಆಡದಿರು ಎ
ನ್ನಂತರಂಗಕೆ ಸುಳಿಯದಿರು
ಎಂದ ರಾವಣ—ಎಂದ ರಾವಣ ೧೮

ಇನಿಯನೆ ಇದೆಲ್ಲ ಮಾತ
ಮೀರಿದ ಮೇಲೆನ್ನ ಪ್ರಾಣ
ಉಳಿಯುವದುಂಟೇ ಎನ್ನುತ್ತ
ಚರಣಕೆರಗುತ—ಚರಣಕೆರಗುತ ೧೯

ಚರಣಕೆ ಎರಗಿದ ಸತಿಯು
ಕರವ ಓಡಿದಿರಿಸಿಕೊಂಡು
ಪುರಹರನ ಕರುಣ ನಮಗೆ
ಇರಲಿ ಎಂದನು—ಇರಲಿ ಎಂದನು ೨೦

## 280. ಶ್ರೀಕೃಷ್ಣ ಬಾಲಲೀಲೆ

ಶ್ರೀಲತಾಂಗಿ ಗುರುಮಹೇಶ
ಬಾಲಗಣಪರ । ಭಜಿಸಿ । ಬಾಲಗಣಪರ
ಜಾಲವಲ್ಲ ಪೇಳ್ವೆ ಕೃಷ್ಣ
ಬಾಲಲೀಲಾ ಕಥೆಯ ಸಾರ ಪ

ನಂದಗೋಕುಲದಲ್ಲಿ ಹರಿಯು
ಚಂದದಿಂದಲಿ । ತಾನು । ಚಂದದಿಂದಲಿ
ಮಂದಮತಿಗಳನ್ನು ಕೊಲಲು
ನಂದಕಂದನಾಗಿ ಬರಲು ೧

ಘನ ಬಲಾಢ್ಯ ಕಂಸನೊಂದು
ದಿನದಿ ಸಭೆಯೊಳು । ಇರಲು । ದಿನದಿ ಸಭೆಯೊಳು
ಮುನಿಕುಲೇಶ ನಾರದಾಂಕ
ದನುಜಹರನ ಪಾಡಿ ಬರಲು ೨

ವಾರಿಜಾಕ್ಷ ದುರುಳಶಿಕ್ಷ
ಮಾರಜನಕನೆ । ಸ್ವಾಮಿ । ಮಾರಜನಕನೆ
ಘೋರ ದುರಿತ ಧ್ವಂಸ ಎನುತ
ನಾರದಾಂಕ ಮುಂದುವರಿದ ೩

ಋಷಿಯ ಬರವ ನೋಡಿ ಕಂಸ
ನಸಮ ತೇಜದಿ । ಜವದಿ । ಅಸಮ ತೇಜದಿ
ಕುಶಲದಿಂದ ಕರೆದು ತಂದು
ಪೊಸ ವಿಲಾಸ ಪೂಜೆಗೈದ ೪

ತಾನು ಕೇಳ್ದ ಪೊಸತು ವರ್ತ
ಮಾನವೇನಯ್ಯ । ಜೀಯ । ನೀನು ಪೇಳಯ್ಯ
ಮಾನನಿಧಿಯೆ ಪೇಳು ಎನಲು
ಮೌನಿವರ್ಯ ಪೇಳ್ದನದಕೆ ೫

ಕೊಲಲು ನಿನ್ನ ಕೃಷ್ಣರೂಪ
ತಳೆದು ಲಕ್ಷ್ಮೀಶ । ರೂಪ । ತಳೆದು ಲಕ್ಷ್ಮೀಶ
ಚೆಲುವೆ ನಿನ್ನ ಭಗಿನಿಗುದಿಸಿ
ಬಳೆವ ನಂದಗೋಕುಲದಲಿ ೬

ಇದರ ಪೇಳಲಾಗಿ ಹೀಗೆ
ಒದಗಿ ಬಂದೆನು । ಕಂಸ । ಒದಗಿ ಬಂದೆನು
ವಧಿಸುವ ಪ್ರಯತ್ನವನ್ನು
ಚದುರಿನಿಂದ ನೋಡು ನೀನು ೭

ಎಂದು ಸೂಚಿಸುತ್ತ ಮುನಿಪ
ಸಂದು ತೆರಳಿದ । ಜವದೊ । ಳಂದು ತೆರಳಿದ
ಮಂದಮತಿಯು ಕೇಳ್ದು ಶೋಕ
ದಿಂದ ನುಡಿದ ಹೀಗೆ ಮನದಿ ೮

ಮಾಡಲೇನು ಎಂಥಾ ಕಷ್ಟ
ಕೂಡಿತಯ್ಯಯ್ಯೋ । ಆಹಾ । ಕೂಡಿತಯ್ಯಯ್ಯೋ
ಮಾಡಿದ ಪ್ರಯತ್ನವೆಲ್ಲ
ರೂಢಿಯಲ್ಲಿ ವ್ಯರ್ಥವಾಯ್ತು ೯

ಎಂತು ಕೊಲಲಿ ಶತ್ರುವನ್ನು
ಚಿಂತೆ ತಡೆಯದು । ಮನದಿ । ಚಿಂತೆ ತಡೆಯದು
ಅಂತಕಾರಿ ಬಲ್ಲನೆನುತ
ಭ್ರಾಂತನಾಗಿ ಮರುಗುತಿರಲು ೧೦

ಅನಿತರೊಳಗೆ ಭಗಿನಿಯಾದ
ದನುಜೆ ಪೂತನಿ । ಬಂದು । ದನುಜೆ ಪೂತನಿ
ವಿನಯದಿಂದಲಗ್ರಭವಗೆ
ಮಣಿದು ಪೇಳ್ದಳಂದು ಹೀಗೆ ೧೧

ಅಣ್ಣ ಲಾಲಿಸೆನ್ನ ನುಡಿಯ
ನಿನ್ನ ವದನವು । ಕುಂದಿ । ನಿನ್ನ ವದನವು
ಖಿನ್ನತನದಿ ಬಾಡಿದೇಕೆ
ಎನ್ನಲಿ ಬಣ್ಣಿಸು ಪೂರ್ತಿ ೧೨

ಒಂದನುಳಿಯದಂತೆ ಕಂಸ
ಬಂದ ವ್ಯಸನವ । ಸರ್ವ । ಬಂದ ವ್ಯಸನವ
ಚಂದದಿಂದ ಪೇಳಲಾಗ
ವಂದಿಸುತ್ತ ಪೇಳ್ದಳಸುರೆ ೧೩

ಬಿಡು ಬಿಡಿನ್ನು ವ್ಯಸನವನ್ನು
ಕಡುಧೀರ ನೀನು । ಕೇಳು । ಕಡುಧೀರ ನೀನು
ಮಡುಹಿ ಕೊಡುವೆ ನಾನು ನಂದ
ಹುಡುಗನಾದ ಕೃಷ್ಣನನ್ನು ೧೪

ಎನುತ ಧೈರ್ಯವನ್ನು ತಿಳುಹಿ
ಮನದಿ ಯೋಚಿಸಿ । ದುರುಳೆ । ಮನದಿ ಯೋಚಿಸಿ
ಸ್ತನಕೆ ಬಿಡದೆ ವಿಷವ ಪೂಸಿ
ಮುನಿದು ಪೊರಟಳಂದು ಖತಿಸಿ ೧೫

ಕಪಟ ರೂಪವನ್ನು ತಳೆದು
ಚಪಲತನದಲಿ । ಬಳಿಕ । ಚಪಲತನದಲಿ
ಅಪಹರಿಸುತ ಶಿಶುಗಳನ್ನು
ಗುಪಿತದಿಂದ ಬಂದಳಸುರೆ ೧೬

ನಿತ್ಯನಿರ್ಮಲಾಂಗ ಮಾಯಾ
ಸೂತ್ರಧಾರಿಯು । ಹರಿಯು । ಸೂತ್ರಧಾರಿಯು
ಕೃತ್ಯವನ್ನು ತಿಳಿದು ಮನದಿ
ದೈತ್ಯೆಯ ಹತ್ತಿರಕೆ ಬರಲು ೧೭

ಅಸುರೆ ನೋಡಿ ಪೇಳ್ದಳಾಗ
ಶಿಶುವೆ ಬಾರಿತ್ತ । ಇತ್ತ । ಶಿಶುವೆ ಬಾರಿತ್ತ
ಬಿಸಿಯ ಮೊಲೆಹಾಲನ್ನು ಕೊಡುವೆ
ಹಸುಳೆ ನಿನಗೆ ಮುತ್ತು ಕೊಡುವೆ ೧೮

ರಕ್ಕಸಿ ಹಿಗೆಂದು ತಾನು
ಚಿಕ್ಕ ಪ್ರಾಯದ । ಮಗುವ । ಚಿಕ್ಕ ಪ್ರಾಯದ
ತಕ್ಕಯಿಸುತ ಮೊಲೆಯನುಣಿಸಿ
ಸೊಕ್ಕಿನಿಂದ ನೋಡುತಿರಲು ೧೯

ಸೆಳೆದು ತಿಂದ ಕೃಷ್ಣನವಳ
ಮೊಲೆಯ ಹಾಲನು । ಬಿಡದೆ । ಮೊಲೆಯ ಹಾಲನು
ಬಳಲುತಿರ್ದು ದನುಜೆ ಬಹಳ
ತಿಳುಹಿಕೊಂಡಳೆಲವೋ ಬಾಲ ೨೦

ತಡೆಯಲಾರೆ ನೋವನಿಂದು
ಬಿಡುಬಿಡಾದರೆ । ಹುಡುಗ । ಬಿಡುಬಿಡಾದರೆ
ಮಿಡುಕಿಸುತ್ತ ತನ್ನ ದಣಿಸಿ
ಕೆಡಿಸಬೇಡ ಬರಿದೆ ಭ್ರಮಿಸಿ ೨೧

ಆರಬೇಡ ಬಿಡನು ಮೊಲೆಯ
ಕ್ಷೀರವ ತಾನು । ತಿನದೆ । ಕ್ಷೀರವ ತಾನು
ಭೂರಿ ಮಕ್ಕಳನ್ನು ಕೊಂದ
ಸಾರವನ್ನು ತೋರು ಮುಂದೆ ೨೨

ಅತ್ತಿತ್ತ ನೋಡುತ್ತ ಕುಚವ
ನೊತ್ತಿ ಸೆಳೆಯುತ । ಮತ್ತು । ಒತ್ತಿ ಸೆಳೆಯುತ
ದೈತ್ಯೆಯನ್ನು ಕೆಡಹಿಸಿ ಹಾ
ರುತ್ತಲೆದೆಯನೊತ್ತಿ ಒಡಿದು ೨೩

ಘೋರ ದನುಜೆಯನ್ನು ಕೊಲಲು
ವಾರಿಜಾಕ್ಷನು । ನೋಡಿ । ವಾರಿಜಾಕ್ಷನು
ಭೂರಿ ಹರುಷದಿಂದ ದಿವಿಜ
ವಾರ ನುತಿಸುತಿರಲು ಪಾಡಿ ೨೪

ಹಲವು ಬಾಲಲೀಲೆಗಳನು
ಜಲಜಾಕ್ಷ ತೋರೆ । ಬಿಡದೆ । ಜಲಜಾಕ್ಷ ತೋರೆ
ಖಳ ವೈರಿ ತಾನೊಂದು ದಿನದೆ
ಹಲವು ಲೂಟಿಯನ್ನು ಗೊಳಿಸೆ ೨೫

ಭರದಿ ನಂದಗೋಪಿ ತನ್ನ
ತರಳನ ತಂದು । ಬಿಗಿದು । ತರಳನ ತಂದು
ಒರಳಿನಲ್ಲಿ ಸಿಲುಕಿಸಲ್ಕೆ
ಹರಿಯು ಮರುಗುತಿರ್ದನದಕೆ ೨೬

ಮೆಲ್ಲ ಮೆಲ್ಲನೆಳೆಯುತೊರಳ
ಫುಲ್ಲನಾಭನು । ತಾನು । ಫುಲ್ಲನಾಭನು
ಅಲ್ಲಿ ಕಾಂಬ ವೃಕ್ಷದೆಡೆಗೆ
ನಿಲ್ಲದೈದೆ ಪೊರಳಿ ಹೊರಳಿ ೨೭

ಹರಿಯು ದೇಹ ಸ್ಪರ್ಶವಾಗೆ
ಮರವು ಮುರಿಯಲು । ಭರದಿ । ಮರವು ಮುರಿಯಲು
ಧರಣಿ ಮೂರು ಬಿರಿವ ತೆರದೊ
ಘುರುಳಿ ಶಬ್ದವಾಗೆ ಮರಳಿ ೨೮

ಒಗೆದು ಬಂದರದರಿಂದಲಿ
ಸುಗುಣರೀರ್ವರು । ಭಟರು । ಸುಗುಣರೀರ್ವರು
ನಗುತ ಹರಿಯು ನೋಡಿ ಕೈಯ
ಮುಗಿದು ಬಹಳ ಪೊಗಳಲಿಂತು ೨೯

ಹರನ ಮಿತ್ರ ಜಯ ಪವಿತ್ರ
ಸರಸಿಜನೇತ್ರ । ಕೃಷ್ಣ । ಸರಸಿಜನೇತ್ರ
ಪೊರೆವುದೆನುತ ನಿಜವನರುಹಿ
ತೆರಳಲು ಗಂಧರ್ವರತ್ತ ೩೦

ನಂದಗೋಪಿ ತಿಳಿದು ಹುಡುಕ
ಲಂದು ಕೃಷ್ಣನ । ಮಗನ । ಸುಂದರಾಂಗನ
ಬಂದು ಕಂಡಳಂದು ಮರದ
ಬಂಧನದೊಳು ಸಿಲುಕಿದವನ ೩೧

ಮೃಡ ಮಹೇಶ ಶಿವನೆ ಮರದ
ಬುಡದಲ್ಲಿ ಬಂದು । ಹೀಗೆ । ಬುಡದಲ್ಲಿ ಬಂದು
ಹುಡುಗನಿರ್ಪ ಸಮಯದಲ್ಲಿ
ಕೆಡೆದುದಲ್ಲೇ ವೃಕ್ಷ ಮರಳಿ ೩೨

ತಿಳುಹಿ ಫಲವೇ ಮಗನು ಸಾಯ
ದುಳಿದಿರ್ಪನೆಂತು । ಆಹಾ । ಉಳಿದಿರ್ಪನೆಂತು
ತಳುವದೆ ಮಾಡಿರುವ ಪುಣ್ಯ
ದೊಲವು ತನಗೆ ಸೇರ್ದುದಿಂತು

ಕೆಟ್ಟ ಭಾವದಿಂದ ಬರಿದೆ
ಕಟ್ಟಿ ಬಿಗಿದೆನು । ಇವನ । ಕಟ್ಟಿ ಬಿಗಿದೆನು
ಎಷ್ಟು ನೋವಾಯ್ತುಯ್ಯಯ್ಯೋ ಹಾ
ಕೃಷ್ಣ ಬೇಗ ಬಾರೊ ಮನೆಗೆ ೩೪

ಎಂದು ಕಣ್ಣನೀರ ತುಂಬಿ
ನಂದಗೋಪಿಯು । ತಾನು । ನಂದಗೋಪಿಯು
ಕಂದನನ್ನು ಎತ್ತಿಕೊಳುತ
ಬಂದಳು ಸಂತೋಷದಿಂದ ೩೫

ಇಂತೆನುತ್ತ ತೆರಳಲಾಗ
ಕಾಂತೆಯರೆಲ್ಲ । ಒಡನೆ । ಕಾಂತೆಯರೆಲ್ಲ
ಸಂತಸದಲಿ ಗೋಪಿ ಮೋಹ
ವಾಂತು ಕೃಷ್ಣಂಗೆಂದಳಲ್ಲಿ ೩೬

ಆರು ವರ್ಷ ಕಳೆಯೆ ಮುದ್ದು
ವಾರಿಜಾಕ್ಷನು । ತಾನು । ವಾರಿಜಾಕ್ಷನು
ಬೇರೆ ಮನೆಯ ನುಸುಳಿ ಮತ್ತೆ
ಯಾರು ತಿಳಿಯದಂದದಲ್ಲಿ ೩೭

ಬಿಸಿಯ ಹಾಲ ಸೇವಿಸುತ್ತ
ಮೊಸರ ಭಾಂಡವ । ಕೆಡಹಿ । ಮೊಸರ ಭಾಂಡವ
ನಸುನಗುತ್ತ ಬೆಣ್ಣೆಯನ್ನು
ಕುಶಲದಿಂದ ಮೆದ್ದು ಬರಲು ೩೮

ಉದಯದಲ್ಲಿ ಸತಿಯರೆಲ್ಲ
ಮುದದೊಳೇಳುತ । ಜವದಿ । ಮುದದೊಳೇಳುತ
ದಧಿಯ ಕಡೆಯಲೆಂದು ಬಂದು
ಹದನವೆಲ್ಲ ಕಂಡರಂದು ೩೯

ರುಂಡಮಾಲಾಧರನೆ ಶಿವನೆ
ಕಂಡೆವು ಹೀಗೆ । ಬಗೆಯ । ಕಂಡೆವು ಹೀಗೆ
ಭಂಡರಾರೋ ಮೊಸರ ಕುಡಿದು
ಭಾಂಡವನ್ನೆ ಕೆಡೆದರಿಲ್ಲಿ ೪೦

ಸಣ್ಣ ಮಕ್ಕಳಿಹರು ಹಾಲು
ಬೆಣ್ಣೆಯ ಕೇಳಿ । ಹಾಲು । ಬೆಣ್ಣೆಯ ಕೇಳಿ
ಎಣ್ಣಿಸಲ್ಕೆ ಕೊಡುವುದೇನಾ
ಪುಣ್ಯಫಲವೇ ಹೊಸತು ಕಥನ ೪೧

ಒರೆದಳೋರ್ವ ನಂದಗೋಪ
ತರಳ ಕೃಷ್ಣನು । ಚೋರ । ತರಳ ಕೃಷ್ಣನು
ಸರಿದು ಬಂದು ಕಳ್ಳತನವ
ವಿರಚಿಸುತ್ತ ಪೋದನವ್ವ ೪೨

ದೂರಬೇಕು ಗೋಪಿಯೊಡನೆ
ಚೋರ ಕೃಷ್ಣನ । ಹದನ । ಚೋರ ಕೃಷ್ಣನ
ವಾರತೆಯನು ತಿಳಿಯೆ ನಿಜ ಕು
ಮಾರಗೆ ಶಿಕ್ಷಿಸುವಳವಳು ೪೩

ಒಂದುಗೂಡಿ ಸತಿಯರೆಲ್ಲ
ಬಂದು ತವಕದಿ । ಭರದಿ । ಬಂದು ತವಕದಿ
ನಂದಗೋಪಿಯನ್ನು ಕಾಣು
ತ್ತೆಂದರು ಹೀಗೆಂದು ಮಾತ ೪೪

ತಾಳಲಾರೆವಮ್ಮ ನಿನ್ನ
ಬಾಲಕೃಷ್ಣನ । ಬಗೆಯ । ಬಾಲಕೃಷ್ಣನ
ಹಾಲು ಮೊಸರು ಬೆಣ್ಣೆ ತಿಂದು
ಕೇಳಲು ನಾನಲ್ಲವೆನುವ ೪೫

ಬುದ್ಧಿಯನ್ನು ಪೇಳಿ ಮಗನ
ತಿದ್ದಿಸು ನೀನು । ತಾಯೆ । ತಿದ್ದಿಸು ನೀನು
ಸುದ್ದಿಯನ್ನು ಪೇಳಲಾಗಿ
ಹೊದ್ದಿ ಬಂದೆವಿಲ್ಲಿಗಾಗಿ ೪೬

ಸುದತಿಯರಿರ ನೀವು ಮನದಿ
ಬೆದರಬೇಡಿರೌ । ನೀವು । ಬೆದರಬೇಡಿರೌ
ಚದುರ ಕೃಷ್ಣ ನಿಮ್ಮ ತಂಟೆ
ಗೊದಗದಂತೆ ಮಾಳ್ಪೆನವನ ೪೭

ನಿಮ್ಮ ಮನೆಗೆ ತೆರಳಿ ನೀವು
ಸುಮ್ಮನೆ ಇಂದು । ಬೇಗ । ಸುಮ್ಮನೆ ಇಂದು
ಬ್ರಹ್ಮಪಿತನ ಕರೆದು ಪೇಳ್ದ
ಳೊಮ್ಮೆಗವನ ಸಂತವಿಡುತ ೪೮

ಬೇಡ ಮಗನೆ ಬರಿದೆ ತಂಟೆ
ಮಾಡದಿರಿನ್ನು । ತಂಟೆ । ಮಾಡದಿರಿನ್ನು
ಕೇಡುಗಾರ ನೀನೆನುತ್ತ
ಲಾಡುತಿಹರು ನಿನ್ನನಿತ್ತ ೪೯

ತಾಯೆ ಕೇಳು ಹೀಗೆ ವ್ಯರ್ಥ
ಬಾಯಾರ ಬೇಡ । ಗಡ । ಬಾಯಾರ ಬೇಡ
ಆಯಿತಾಯಿತಪ್ಪ ತಂಟೆ
ಗೈಯದಿರುವೆ ಮುಂದೆ ನಾನು ೫೦

ಅಸುರವೈರಿಯೊಂದು ದಿನದೆ
ಹಸಿದೆ ನಾನೆಂದು । ತಾನು । ಹಸಿದೆ ನಾನೆಂದು
ಕುಸಿಯದೆ ಭೋಜನವನು ಪಾ
ಲಿಸುವುದೆನುತ ಕೇಳಲಾಗ ೫೧

ನಿಲ್ಲು ಸ್ವಲ್ಪ ತಡೆಯೊ ಆಗ
ಲಿಲ್ಲ ಊಟಕೆ । ಆಗ । ಲಿಲ್ಲ ಊಟಕೆ
ಒಳ್ಳಿತಾದ ಮೇಲಾಹಾರ[1]
ವಿಲ್ಲದಿನಿತು ತೃಪ್ತಿಯಹುದೆ ೫೨

ಸಿಟ್ಟಿನಿಂದ ಹರಿಯು ಕ್ಲೇಶ
ಬಟ್ಟು ತವಕದಿ । ಕ್ಲೇಶ । ಬಟ್ಟು ತವಕದಿ
ಥಟ್ಟನೈದಿ ಬೀದಿಯಲ್ಲಿ
ಮುಷ್ಟಿ ಮುಷ್ಟಿ ಮಣ್ಣ ಮೆಲಲು ೫೩

1. ಮೆಲ್ಲಾಹಾರ,

ಸಣ್ಣಮಕ್ಕಳ್ಳೈದಿ ಗೋಪಿ
ಯನ್ನು ಕಾಣುತ । ಗೋಪಿ । ಯನ್ನು ಕಾಣುತ
ನಿಮ್ಮ ಪುಟ್ಟ ಬಾಲಕೃಷ್ಣ
ಮಣ್ಣ ಮೆದ್ದು ಕುಣಿದನವ್ವ ೫೪

ಅಹುದೆ ಹೀಗೆನುತ್ತಲಾಕೆ
ವಹಿಲದಿ ಬಂದು । ಬಳಿಕ । ವಹಿಲದಿ ಬಂದು
ಕುಹಕ ಕೃಷ್ಣ ಮಣ್ಣ ಮೆಲಲು
ಬಹಳ ಸವಿಯೆ ನಿನಗೆ ಪೇಳೊ ೫೫

ಎನ್ನುವೆ ಯಾಕವ್ವ ಮಣ್ಣ
ತಿನ್ನಲಿಲ್ಲವು । ನಿಜವು । ತಿನ್ನಲಿಲ್ಲವು
ಎನ್ನುತ ಬಾಯ್ದೆರೆದು ತೋರ್ದ
ನುನ್ನತ ವಿಶ್ವಾಕಾರವನು ೫೬

ಪಾಪಹರನ ಬಗೆಯ ನಂದ
ಗೋಪಿ ಕಂಡಳು । ಮನದಿ ತಾಪಗೊಂಡಳು
ಶ್ರೀಪತಿ ಮಹಾತ್ಮ ಪುಣ್ಯ
ರೂಪ ಜಯವೆನುತ್ತಲಿರಲು ೫೭

ತಿಳಿದು ಸುತನ ಬಗೆಯ ಮನದಿ
ನಳಿನನೇತ್ರೆಯು । ಪೊಗಳಿ । ನಳಿನನೇತ್ರೆಯು
ನಿಳಯದಲ್ಲಿ ಸೌಖ್ಯವಾಗಿ
ನೆಲಸುತಿರಲು ವಿನಯದಿಂದ ೫೮

ಹರುಷದಿಂದಲೊಂದು ದಿವಸ
ತರುಣೀ ನಿವಹವು । ತಾವು ತರುಣೀನಿವಹವು
ಸರಸವಾದ ಜಲವಿಹಾರ
ವಿರಚಿಸಲ್ಕೆ ಪೊರಟಾಗ ೫೯

ಮುತ್ತು ರತ್ನ ಜರಿಯ ಪೊಸತು
ವಸ್ತ್ರ ರವಕೆಯು । ಪೊಸತು । ವಸ್ತ್ರ ರವಕೆಯು
ಕಸ್ತೂರಿ ಕಮ್ಮೆಣ್ಣೆ ಪುನುಗು
ಪ್ರಸ್ತುತ ಕುಂಕುಮದ ಪುಡಿಯು ೬೦

ಕನ್ನಡಿ ಬಾಚಣಿಗೆ ಸರ್ವ
ಸನ್ನಾಹಗೂಡಿ । ನೋಡಿ । ಸನ್ನಾಹಗೂಡಿ
ಕನ್ನೆಯರ್ಕಳ್ಳೈದಲೊಟ್ಟು
ಮನ್ನಿಸುತ್ತ ಪ್ರೇಮವಿಟ್ಟು ೬೧

ಚಾರು ತಂಪಿನಿಂದಲೆಸೆವ
ನೀರನು ಹೊಕ್ಕು । ನಕ್ಕು । ನೀರನು ಹೊಕ್ಕು
ಸೀರೆ ರವಕೆಯನ್ನು ಮರದೊ
ಳೇರಿಸುತ್ತಲೊಗ್ಗಿನಿಂವ ೬೨

ತಳಮಳಿಸುತ ಜಲದೊಳೆಸೆವ
ಸುಳಿವ ಮೀನ್ಗಳ । ನೋಡಿ । ಸುಳಿವ ಮೀನ್ಗಳ
ತೊಲಗಿಸುತ್ತ ಕೈಯೊಳಂದು
ಜಲವಿಹಾರವೆಸಗುತಿರಲು ೬೩

ಫುಲ್ಲನಾಭ ಕೃಷ್ಣನರಿತು
ಮೆಲ್ಲಮೆಲ್ಲನೆ । ಬಂದು । ಮೆಲ್ಲ ಮೆಲ್ಲನೆ
ನಿಲ್ಲದವರ ವಸ್ತ್ರವ ಕೈ
ಗೊಳ್ಳುತಾಗ ಮರವನೇರಿ ೬೪

ಅಂಬುಜಾಕ್ಷ ಹರಿಯು ಮರದ
ಕೊಂಬೆಯ ಮೇಲೆ । ಮರದ । ಕೊಂಬೆಯ ಮೇಲೆ
ಸಂಭ್ರಮದಲಿ ನಿಂತು ಕಂಡ
ಕುಂಭಕುಚೆಯರಾಟಗಳನು ೬೫

ಮುಗುದೆಯವರು ಜಲವಿಹಾರ
ಮುಗಿಸಿ ಬೇಗದಿ । ಮುದದಿ । ಮುಗಿಸಿ ಬೇಗದಿ
ತೆಗೆದುಕೊಳಲು ವಸ್ತ್ರಗಳನು
ನಗುತ ನೋಡಿ ಕಾಣದಿರಲು ೬೬

ಒಟ್ಟು ಕಾಣವೆಮ್ಮ ವಸನ
ವಿಟ್ಟುದೆಲ್ಲವು । ವಸನ । ವಿಟ್ಟುದೆಲ್ಲವು
ಭ್ರಷ್ಟರಾರೋ ಕದ್ದರಕಟ
ಕಷ್ಟಕಾಲ ಬಂದುದಮಮ ೬೭

ಬಾಲೆಯರ್ಕಳಿನಿತು ವ್ಯಸನ
ತಾಳಿ ಕಾಣಲು । ವ್ಯಸನ । ತಾಳಿ ಕಾಣಲು
ಶಾಲೆಗಳನು ಕದ್ದು ಮರದ
ಮೇಲೆ ಕುಳಿತು ನಗುವ ಹರಿಯು ೧೮

ಅಕ್ಕ ನೋಡು ನಮ್ಮ ವಸನ
ಟಕ್ಕುತನದಲಿ । ಕದ್ದು । ಟಕ್ಕುತನದಲಿ
ಇಕ್ಕೊ ಕಳ್ಳ ಕೃಷ್ಣ ಮರದಿ
ನಕ್ಕು ನಮ್ಮ ನೋಳ್ಪನಲ್ಲೆ ೧೯

ಕೊಡು ಕೊಡೆಮ್ಮ ವಸ್ತ್ರಗಳನು
ಹುಡುಗ ಕೃಷ್ಣನೆ । ನೀನು । ಹುಡುಗ ಕೃಷ್ಣನೆ
ತಡೆಯದಿನಿತು ಕಳ್ಳತನವ
ನಡೆಸಬಹುದೆ ಭಂಡತನದಿ ೨೦

ಕೊಳದಿ ಸ್ವಲ್ಪ ನಿಲ್ಲಿ ನೀವು
ನಳಿನಮುಖಿಯರು । ನೀವು । ನಳಿನಮುಖಿಯರು
ಗಳಿಗೆ ನಾಲ್ಕರಲ್ಲಿ ಕೊಡುವೆ
ತಳುವದಾನು ವಸ್ತ್ರಗಳನು ೨೧

ಕಮಲನಯನ ತಡೆಯಲೇಕೊ
ಸಮಯವ ನೀನು । ಹೀಗೆ । ಸಮಯವ ನೀನು
ನಮಗೆ ಬಹಳ ಚಳಿಯು ಕಾಂಬು
ದಮಮ ದಣಿಸಬೇಡ ನಮ್ಮ ೨೨

ಕೈಯ ಮುಗಿದು ಬೇಡಿರಿ ದ
ಮ್ಮಯ್ಯ ಎನುತಲಿ । ಹಾ ದ । ಮ್ಮಯ್ಯ ಎನುತಲಿ
ಸುಯ್ಯಬೇಕು ಕೊಡುವೆ ಬೊಬ್ಬೆ
ಗೈಯಲೇಕೆ ನೀವು ವ್ಯರ್ಥ ೨೩

ತರಳ ನಿನಗೆ ನಮ್ಮ ಮೇಲೆ
ಕರುಣವಿಲ್ಲವೆ । ನಿನಗೆ । ಕರುಣವಿಲ್ಲವೆ
ಚರಣಕೆರಗಲಾಪೆವಿದಕೊ
ಮರುಗಿಸಬೇಡೆಮ್ಮ ನೀನು ೨೪

ಎತ್ತಿ ಕರವ ಬೇಡಿಕೊಳಲು
ವಸ್ತ್ರವನೀವೆ । ನಿಮಗೆ । ವಸ್ತ್ರವನೀವೆ
ಇತ್ತ ಬನ್ನಿ ಸತಿಯರೆಲ್ಲ
ಚಿತ್ತದಲ್ಲಿ ಮರುಗಬೇಡಿ ೭೫

ಕೇಳುತದರನೊಂದು ಕರವ
ಮೇಲೆ ನೆಗಹಲು । ಕೈಯ । ಮೇಲೆ ನೆಗಹಲು
ಸಾಲದಿನಿತು ಎರಡು ಕೈಯ
ಮೇಲಕೆತ್ತಿಕೊಂಬುದೆನುತ ೭೬

ಇಂತು ಬಹಳ ಲೀಲೆಗಳನು
ಕಂತು ಜನಕನು । ತೋರಿ । ಕಂತುಜನಕನು
ಕಾಂತೆಯರಿಗೆ ವಸನವಿತ್ತು
ಮುಂತೆ ಕಳುಹಲವರ ಮನೆಗೆ ೭೭

ವನಿತೆಯರೊಳೀ ಲೀಲೆಗಳನು
ದನುಜ ವೈರಿಯು । ಬೀರ್ದು । ದನುಜ ವೈರಿಯು
ಘನ ವಿನೋದದಿಂದ ಭಕ್ತ
ಜನರ ಕಾಪಾಡುತ್ತಲಿರಲು ೭೮

ಮಂಗಳಾಯತಾಕ್ಷ ಮಹಾ
ಲಿಂಗ ಸಖನಿಗೆ । ಮಹಾ । ಲಿಂಗಸಖನಿಗೆ
ಅಂಗನೆಯರು ತಾವು ಕೂಡಿ
ಮಂಗಳಾರತಿಯನು ಬೆಳಗೆ ೭೯

ತರಣವಾರ ನಿಶಿಯೊಳಿದರ
ಬರೆದು ಮುಗಿಸಿದೆ । ಇದರ । ಬರೆದು ಮುಗಿಸಿದೆ
ತಿರುಪತೀಶ ನಾಮಧರನು[1]
ಶಿರಗಳ[2] ನಿವಾಸದಲ್ಲಿ ೮೦

---

1. ಇದರ ಕರ್ತೃ ವೆಂಕಟರಮಣ. 2. ಶಿರಗಳ—ತಲೆಂಗಳ. ಇದು ಕಾಸರಗೋಡು ತಾಲೂಕಿನ ಬಾಯಾರು ಎಂಬ ಗ್ರಾಮದಲ್ಲಿದೆ.

ಸಾಂಗದಲ್ಲಿ ಶೋಭಿಪ ತ
ಲಿಂಗಳವಾಸ । ಮಹಾ । ಲಿಂಗನ ದಾಸ
ವಿಂಗಡಿಸುತಲೀಶ್ವರ ತ
ತ್ಸಂಗತಿಗಳ ಪೇಳ್ದ ತೆರದಿ ೮೧

ಕಚಚತುರಂಗ ರಮಣಿಯಾಗೋ
ನಿಚಯ ಭರಿತನು । ಬಹಳ । ವಚನ ಪ್ರೌಢನು
ಪ್ರಚುರ ರಾಜರಾಜ ದ್ರವ್ಯ
ವಚಲದ ಮಹಾತ್ಮ ಪುರುಷ ೮೨

ವಾಣಿ ಗಂಗಾಧರನ ಮಗನ
ಸೂನು ಮುಖ್ಯರ । ಮಗನ । ಸೂನು ಮುಖ್ಯರ
ಶ್ರೀನಿವಾಸ ನಿತ್ಯದಲ್ಲಿ
ಸಾನುರಾಗದಿಂದ ಪೊರೆವ ೮೩

ಮನುಜರ್ ಸರ್ವರುಮೊಂದೆ ಜಾತಿ ಮನುಜತ್ವಂದಾಳ್ದ ನೋಟಕ್ಕೆ, ತನ್ಮನುಜತ್ವೋದಯಮೆಯ್ದೆ ಸಂಸ್ಕೃತಿಯಿನಕ್ಕುಂ, ಸಂಸ್ಕೃತಿ ಪ್ರಾಪ್ತಿ ಸಾಧನ ಸಂಸ್ಕಾರಮೆಯುಗ್ರಮಾನ್ಯಮದರಿಂ, ಸಂಸ್ಕಾರದೊಳ್ ಸುಪ್ರಭಾವನೆಯುಂ ರಂಜನೆಯುಂ ಸಮುದ್ಭವಿಸುಗುಂ ಶೋಭಾನದಿಂ ಗಾನದಿಂ

## ಭಾಗ—ಎರಡು

# ಪರಾಮರ್ಶೆ

ಅಧ್ಯಾಯಂಗಳು

1. ಹವ್ಯಕ ವಿಚಾರ.
2. ಶೋಭಾನೆಗಳು—ಲಕ್ಷಣ, ಪ್ರಾಚೀನತೆ.
3. ಧಾಟಿ ಮತ್ತು ಛಂದಸ್ಸು.
4. ಶೋಭಾನೆ—ಶುಭಕಾರ್ಯ.

# ಅಧ್ಯಾಯ : 1

# ಹವ್ಯಕ ವಿಚಾರ

[ಹವ್ಯಕರು—ಅವರ ಗೋತ್ರ, ಸೂತ್ರ, ಶಾಖೆ, ದೇವರು, ಜೀವನ ವಿಚಾರ—ಪುರಾಣೇತಿಹಾಸಗಳ ಹಿನ್ನೆಲೆ—ಹವ್ಯಕ ಶಬ್ದ ಶೋಧನೆ—ಅಹಿಕ್ಷೇತ್ರದಿಂದ ಆಗಮನ—ಶ್ರೀ ಶಂಕರಾಚಾರ್ಯರ ಧರ್ಮ ಪ್ರಭಾವನೆ—ಸಂಸ್ಕೃತಿ—ಶಿಷ್ಟಾಚಾರ—ವೈಶಿಷ್ಟ್ಯಗಳು—ಅಡಿಟಿಪ್ಪಣಿ.]

ಹವ್ಯಕರು ಕರ್ನಾಟಕ ಸೀಮಾತಳದಲ್ಲಿ ಪ್ರಾಚೀನ ಕಾಲದಿಂದಲೇ ಇದ್ದವರೆಂಬುದಕ್ಕೆ ಆಧಾರಗಳಿವೆ. ಇವರು ಸಪ್ತರ್ಷಿಗಳ ಗೋತ್ರವುಳ್ಳವರು. ಮುಖ್ಯವಾಗಿ ಯಜುಶ್ಶಾಖೆಯವರು, ಬೋಧಾಯನ ಸೂತ್ರದವರು. ಷಟ್ಕರ್ಮನಿರತ ಸ್ಮಾರ್ತ ಸಂಪ್ರದಾಯದ ಬ್ರಾಹ್ಮಣ ಸಮಾಜದವರು. 'ಏಕಂ ಸದ್ವಿಪ್ರಾಃ ಬಹುಧಾ ವದಂತಿ' ಎಂಬ ಋಗ್ವೇದ ಸೂಕ್ತಿಯಂತೆ ಪರವಸ್ತು ಪರಮಾತ್ಮನೊಬ್ಬನನ್ನೆ ವಿವಿಧ ರೂಪಗಳಲ್ಲಿ ಆರಾಧಿಸುವವರು. ಇವರ ನಿತ್ಯೋಚ್ಚಾರಣೆಯ ಶ್ಲೋಕವೊಂದು ಹೀಗಿದೆ—

ಆಕಾಶಾತ್ ಪತಿತಂ ತೋಯಂ ಯಥಾ ಗಚ್ಛತಿ ಸಾಗರಮ್
ಸರ್ವದೇವ ನಮಸ್ಕಾರಃ ಕೇಶವಂ ಪ್ರತಿ ಗಚ್ಛತಿ

ಅಂದರೆ, ಬಾನಿನಿಂದ ಮಳೆಯಾಗಿ ಬಿದ್ದ ನೀರು ಹೇಗೆ ಕಡಲನ್ನೆ ಸೇರುವುದೋ ಹಾಗೆಯೇ ಯಾವ ದೇವರಿಗೆ ನಮಸ್ಕಾರ ಸಲ್ಲಿಸಿದರೂ ಅದೆಲ್ಲವೂ ಕೇಶವನಿಗೇ ಸಲ್ಲುವುದು. ಇದರ ಅರ್ಥವನ್ನು ನಂಬಿಕೊಂಡು ಅಗ್ನಿ, ಶಿವ, ದುರ್ಗೆ, ಗಣಪತಿ, ಸುಬ್ರಹ್ಮಣ್ಯ, ವಿಷ್ಣು, ಸೂರ್ಯ—ಎಂಬ ಸಪ್ತದೇವತೆಗಳನ್ನೂ ಅಭೇದ ರೂಪದಲ್ಲಿ ಆರಾಧಿಸತಕ್ಕವರು. ಆದುದರಿಂದಲೇ ದೇಶ, ಕಾಲ, ಜನ ಭೇದದ ನಡುವೆ ಹೊಂದಿಕೊಂಡು ಬಾಳುವ ಸಹಜ ಗುಣವನ್ನು ಪಡೆದವರು. ತಮ್ಮ ವೈದಿಕ ವೃತ್ತಿಯೊಂದಿಗೆ ಕರ್ಣಾಟಕದಲ್ಲಿ ಕೃಷಿಜೀವನವನ್ನೂ ನಡೆಸಿಕೊಂಡು ಬಂದವರು. ಗದ್ದೆಯುಳುಮೆಯೊಂದು ಹೊರತಾಗಿ ಅಡಕೆ, ತೆಂಗು, ಬಾಳೆ ಮುಂತಾದವುಗಳ ಬೇಸಾಯವೇ ಇವರ ಮುಖ್ಯ ಕೃಷಿ ವಿಷಯಗಳು. ಸಾಹಿತ್ಯೋಪಾಸನೆಗೂ ಅಷ್ಟೇ ಮಹತ್ತ್ವ ಇವರಲ್ಲಿ.

ಕಾಲಸ್ಥಿತಿಗೆ ಅನುಗುಣವಾಗಿರತಕ್ಕ ಪ್ರಗತಿಪ್ರವಾಹದಲ್ಲಿ ಬಂದ ಇವರು ಈಗೀಗ ವಿವಿಧವಾದ ಲೌಕಿಕ ಜೀವನದ ವೃತ್ತಿ ಪ್ರವೃತ್ತಿಗಳಲ್ಲಿ ನಿರತರಾಗಿ ಕರ್ಣಾಟಕದಲ್ಲಿ ಮಾತ್ರವಲ್ಲದೆ, ಅಖಿಳ ಭಾರತದಲ್ಲಿ ಮತ್ತು ವಿದೇಶಗಳಲ್ಲಿಯೂ ಉದ್ಯೋಗಸ್ಥರಾಗಿ

ದ್ದಾರೆ. ಕರ್ನಾಟಕದಲ್ಲಿ ಹವ್ಯಕರು ಮುಖ್ಯವಾಗಿ ಕಾಸರಗೋಡು ತಾಲೂಕು ಕೂಡ ಸೇರಿದಂತೆ ಎಣಿಸಬಹುದಾದ ದಕ್ಷಿಣ ಕನ್ನಡ, ಉತ್ತರ ಕನ್ನಡ, ಶಿವಮೊಗ್ಗ ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಕೊಡಗು, ಚಿಕ್ಕಮಗಳೂರು ಮತ್ತಿತರ ಕಡೆ ವಿರಳವಾಗಿ ನೆಲಸಿದ್ದಾರೆ. ಹವ್ಯಕರ ವಿಪಿಕ್ತ ಜನಗಣತಿಯಾಗಿಲ್ಲವಾದರೂ ಇವರ ಸಂಖ್ಯೆ ಸುಮಾರು ಐದು ಲಕ್ಷಕ್ಕೆ ಕಡಮೆಯಿಲ್ಲವೆಂದು ಭಾವಿಸಬಹುದು. ಹವ್ಯಕರು ಹಿಂದೆಯೇ ನೆಲೆನಿಂತ ಕರ್ನಾಟಕ ಭೂಪ್ರದೇಶಕ್ಕೆ ಗೋರಾಷ್ಟ್ರ ಪ್ರದೇಶವೆಂದು, ಗೋಕರ್ಣ ಮಂಡಲವೆಂದು ಹೆಸರುಗಳಿದ್ದವು. ಇಂದು ಕೂಡ ಪರಶುರಾಮ ಕ್ಷೇತ್ರದಲ್ಲಿ ನಡೆಸುವ ಸಂಕಲ್ಪ ಮಂತ್ರದಲ್ಲಿ ಈ ಹೆಸರುಗಳು (ಗೋರಾಷ್ಟ್ರದೇಶೇ ಗೋಕರ್ಣ ಮಂಡಲೇ ಪರಶುರಾಮ ಕ್ಷೇತ್ರೇ—ಎಂದು) ಉಚ್ಚಾರಣೆಗೊಳ್ಳುತ್ತವೆ. 'ಹವ್ಯ' (ಹವಿಕ) ಎಂದೂ ಈ ಪ್ರದೇಶಕ್ಕೆ ಹೆಸರಿದ್ದುದಾಗಿ ತಿಳಿದುಬರುತ್ತದೆ. ದೇವತೆಗಳಿಗೆ ವೈಶ್ವದೇವದ ಮೂಲಕ ವಿಶೇಷವಾಗಿ ಹವ್ಯ (ಹವಿಸ್ಸು) ಈ ಪ್ರದೇಶದಲ್ಲಿ ಸಲ್ಲುವುದರಿಂದಾಗಿ 'ಹವ್ಯ' ಎಂಬ ಹೆಸರು ಬಂದುದೆಂದು ಹೇಳಲಾಗಿದೆ—

ಹವ್ಯಾನಿ ಯತ್ರ ದೀಯಂತೇ ದೇವತಾಭ್ಯೋ ವಿಶೇಷತಃ
ತತೋ ಹವ್ಯ ಇತಿ ಖ್ಯಾತಃ ದೇಶೋ ಗೋರಾಷ್ಟ್ರನಾಮಕಃ[1]

'ಹವ್ಯ ಏವ ಹವ್ಯಕಃ ಸ್ವಾರ್ಥೇ ಕ ಪ್ರತ್ಯಯಃ' ಎಂಬ ವಿವರಣೆಯಂತೆ 'ಹವ್ಯ' ಎಂಬುದೇ 'ಹವ್ಯಕ'ವಾಗಿ ಅದೇ ಹೆಸರಿನ ದೇಶವಾಚಕವೂ ಅಲ್ಲಿ ಪ್ರಸಿದ್ಧವಾದ ಜನವರ್ಗವಾಚಕವೂ ಆಯಿತು. ಈ ಹವ್ಯಕೋತ್ಪತ್ತಿಗೆ ಮೂಲ ಕಾರಣನು ಪರಶುರಾಮನೆಂದು ಹೇಳಲಾಗಿದೆ. ಪೌರಾಣಿಕ ಹಾಗೂ ಐತಿಹಾಸಿಕ ಎಂಬೆರಡೂ ಹಿನ್ನೆಲೆಗಳಿಂದ ಹವ್ಯಕೋತ್ಪತ್ತಿ ವಿದಿತವಾಗುತ್ತದೆ.

ವ್ಯಾಸರ್ಷಿ ಪ್ರಣೀತ ಸ್ಕಂದ ಪುರಾಣದೊಳಗಣ ಉತ್ತರ ಸಹ್ಯಾದ್ರಿ ಖಂಡವು 34 ಅಧ್ಯಾಯಗಳಿಂದ ಕೂಡಿ, ಸುಮಾರು 1500 ಶ್ಲೋಕಗಳಿರುವ ಗ್ರಂಥಭಾಗ. 'ಗ್ರಾಮನಿರ್ಣಯ' ಎಂತಲೂ ಈ ಭಾಗಕ್ಕೆ ಹೆಸರಿದೆ. ಈ ಗ್ರಂಥಾಧಾರದ ಕೆಲವು ಮುಖ್ಯಾಂಶಗಳಿವು—

ಹಿಂದೆ ಕೃತಯುಗದಲ್ಲಿ ಪರಶುರಾಮನು ದುಷ್ಟರಾಜರನ್ನೆಲ್ಲ ಮರ್ದನ ಮಾಡಿ, ಒಂದು ಮಹಾಯಾಗವನ್ನು ಕೈಗೊಂಡನು. ಕಾಶ್ಯಪನು ಆ ಯಾಗಕ್ಕೆ ಹೋತೃವಾಗಿದ್ದನು. ಅವಭೃಥಾನಂತರ, ಪರಶುರಾಮನು ತಾನು ಜಯಿಸಿದ ಸಮುದ್ರವೇ ಮೇರೆಯಾಗಿರುವ ಭೂಮಿಯನ್ನೆಲ್ಲ ಕಾಶ್ಯಪನಿಗೆ ಅರ್ಪಿಸಿದನು. ತಾನು ದಾನವಾಗಿ ಕೊಟ್ಟ ನೆಲದಲ್ಲಿರಬಾರದೆಂದು ಪಶ್ಚಿಮ ಸಮುದ್ರ ತೀರಕ್ಕೆ ಬಂದನು. ಅನಂತರ, ಉತ್ತರದಲ್ಲಿ ನಾಸಿಕಾ ತ್ರಿಯಂಬಕದಿಂದ ದಕ್ಷಿಣದ ಕನ್ಯಾಕುಮಾರಿ ವರೆಗಿನ ಕಡಲ

ತಡಿಯ ಭೂಭಾಗವನ್ನು ಸಮುದ್ರರಾಜನಿಂದ ಪಡೆದುಕೊಂಡನು. ಆ ಪ್ರದೇಶವನ್ನು ಏಳು ಭಾಗಗಳಾಗಿ ವಿಂಗಡಿಸಿದನೆಂದು ಹೇಳಲಾಗಿದೆ—

ವಿರಾಟಂ ಚ ವರಾಟಂ ಚ ಮರಾಟಂ ಕೊಂಕಣಂ ತಥಾ
ಹವಿಗಂ ತೌಳವಂ ಚಾಥ ಕೇರಳಂ ಚೇತಿ ಸಪ್ತಕಂ[3]

ಈ ಪರಶುರಾಮ ಸೃಷ್ಟಿಯಲ್ಲಿ ಬ್ರಾಹ್ಮಣರಿರಲಿಲ್ಲ. ಅಲ್ಲಿದ್ದ ಬೆಸ್ತರಿಗೆ ನೈರ್ಮಲ್ಯ ಸದಾಚಾರಗಳನ್ನು ಕಲಿಸಿ, ಶುದ್ಧೀಕರಿಸಿ, ಜನಿವಾರಗಳನ್ನು ತೊಡಿಸಿ ಬ್ರಾಹ್ಮಣರನ್ನಾಗಿ ಮಾಡಿದನು. ಅನಂತರ, "ಈ ಭೂಭಾಗದಲ್ಲಿ ಮಳೆ ಬೆಳೆಗಳು ಸಮೃದ್ಧವಾಗುವವು. ದುರ್ಭಿಕ್ಷ ತಲೆದೋರದು. ನಿಮಗೇನಾದರೂ ಆಪತ್ತು ಬಂದರೆ, ನೀವೆಲ್ಲರೊಟ್ಟಾಗಿ ನನ್ನನ್ನು ಕರೆಯಿರಿ. ಒಡನೆಯೆ ಬಂದು ನಿಮ್ಮ ಕಷ್ಟ ಪರಿಹಾರ ಮಾಡುವೆನು"— ಹೀಗೆಂದು ಅಭಯವಿತ್ತು ಪರಶುರಾಮನು ಶ್ರೀ ಮಹಾಬಲೇಶ್ವರನ ದರ್ಶನಕ್ಕಾಗಿ ಗೋಕರ್ಣಕ್ಕೆ ತೆರಳಿದನು. ಈ ನೂತನ ಬ್ರಾಹ್ಮಣರು ತಮ್ಮ ಪೂರ್ವ ವಾಸನೆಯ ಕೀಳ್ತನದ ಚಪಲದಿಂದ ಪರಶುರಾಮನನ್ನು ಪರೀಕ್ಷಿಸಲು ಉದ್ಯುಕ್ತರಾದರು. ಕಾರಣ ವಿಲ್ಲದೆ, ಆತನನ್ನು ಸ್ಮರಿಸಿ ಕರೆದರು. ಪರಶುರಾಮನು ಬಂದು, ತನ್ನನ್ನು ಪರೀಕ್ಷಿಸ ಲೆಂದು ಮಿಥ್ಯಾಕಾರಣದಿಂದ ಕರೆದುದಕ್ಕಾಗಿ ಕೋಪಗೊಂಡು ಆ ಬ್ರಾಹ್ಮಣರನ್ನು ಶಪಿಸಿದನು. 'ನೀವೆಲ್ಲ ಬ್ರಾಹ್ಮಣ್ಯದಿಂದ ಭ್ರಷ್ಟರಾಗಿ ಅಭಕ್ಷ್ಯ ಭಕ್ಷಣ, ಅಪೇಯ ಪಾನ, ಅನೀತಿ ವ್ಯವಹಾರಗಳಿಂದ ಕೆಟ್ಟುಹೋಗಿ'—ಎಂದು ಶಪಿಸಿ, ಮಹೇಂದ್ರ ಗಿರಿಯ ಕಡೆಗೆ ತೆರಳಿದನು. ಇದರಿಂದ ಗೋಕರ್ಣ ಮಂಡಲವು ಬ್ರಹ್ಮಸತ್ತ್ವಹೀನ ವಾಗಿ ಹವ್ಯಕವ್ಯಗಳಿಲ್ಲದ ಭೂಪ್ರದೇಶವಾಯಿತು.

ಮುಂದೆ ಕದಂಬ ಕುಲದ ರಾಜನಾದ ಮಯೂರ ಶರ್ಮನ (ಕ್ರಿ.ಶ. 325–345) ಪ್ರಯತ್ನದಿಂದ ಪುನಃ ಈ ಪ್ರದೇಶವು ಬ್ರಾಹ್ಮಣರ ನೆಲೆಯಾಗಿ ಹವ್ಯಕವ್ಯಗಳು ಸರಿಯಾಗಿ ನಡೆಯುವಂತಾದವು. ಮಯೂರ ಶರ್ಮನು ಬ್ರಾಹ್ಮಣ ಕುಲದವನೇ ಆಗಿದ್ದು ಕ್ಷತ್ರಿಯತ್ವವನ್ನು ಕೈಗೊಂಡು ದಿಗ್ವಿಜಯವನ್ನು ಸಾಧಿಸಿ ರಾಜ್ಯವಾಳಿದ ಕದಂಬ ವಂಶದ ಐತಿಹಾಸಿಕ ಪುರುಷನು. ಇವನು ಉತ್ತರದಿಂದ ಅಹಿ ಕ್ಷೇತ್ರದಿಂದ 32 ಬ್ರಾಹ್ಮಣ ಕುಟುಂಬಗಳನ್ನು ಈ ಪ್ರದೇಶಕ್ಕೆ ಕರೆತಂದು ನೆಲೆ ನಿಲ್ಲಿಸಿದುದಾಗಿ ಪೂರ್ವೋಕ್ತ ಸಹ್ಯಾದ್ರಿಖಂಡದಲ್ಲಿ ಹೇಳಿದೆ. ಈ ಸಂಗತಿಯನ್ನು ದೃಢಪಡಿಸುವ ಶಾಸನವೂ ಇದೆ. ಶಿವಮೊಗ್ಗ ಜಿಲ್ಲೆಯ ಗುಟ್ಟಿವಾಡಿಯಲ್ಲಿ ದೊರೆತ ಗಂಗರ ತಾಮ್ರ ಶಾಸನ (ಕ್ರಿ.ಶ. 904) ವ್ಯಕ್ತಪಡಿಸುವಂತೆ, ಅಹಿಚ್ಛತ್ರದಿಂದ ಬ್ರಾಹ್ಮಣರು ಬಂದು, ಬನವಾಸಿ ವಿಷಯದ ತಾನಗುಂದೂರಿನಲ್ಲಿ (ತಾಳಗುಂದದಲ್ಲಿ) ನೆಲಸಿದುದಾಗಿ ತಿಳಿದು ಬರುತ್ತದೆ[4]. ಇದಲ್ಲದೆ ಬೆಂಗಳೂರಿನ ವಿಧಾನಸೌಧದ ಪತ್ರಾಗಾರದಲ್ಲಿ ಛಾಯಾಚಿತ್ರ (ಮೈಕ್ರೊಫಿಲ್ಮ್) ರೂಪದಲ್ಲಿರುವ 'ಮಯೂರವರ್ಮ ಚರಿತ್ರಂ' ಎಂಬ ಕಾವ್ಯ ದಲ್ಲಿಯೂ ಇದು ನಿರೂಪಿತವಾಗಿದೆ[5].

'ಹವ್ಯಕ' ಎಂಬ ಶಬ್ದದ ವ್ಯುತ್ಪತ್ತಿಯನ್ನು ಹಾಗೂ ಹವ್ಯಕರ ಮೂಲವನ್ನು ಕುರಿತು ಬೇರೆ ಬೇರೆ ವಿದ್ವಾಂಸರು ಮಾಡಿರುವ ಚರ್ಚೆಗಳು ಬಹಳವಾಗಿವೆ. ಹವ್ಯಕರು ಕೇರಳದಿಂದ ಇತ್ತ ಬಂದವರು—ಎಂಬ ವಾದಸರಣಿಯೂ ಇದೆ. ತಾಳಗುಂದದ ಶಾಸನದ ಪ್ರಕಾರ, ಮುಕ್ಕಣ್ಣ ಕದಂಬನು ಅಹಿಚ್ಛತ್ರದಿಂದ ಮೂವತ್ತೆರಡು ಬ್ರಾಹ್ಮಣ ಕುಟುಂಬಗಳನ್ನು ಕರೆತಂದುದಾಗಿ ಹೇಳಿದೆ. ಸಂಜನಗೂಡು ಶಾಸನದಲ್ಲಿಯೂ ಈ ವಿಷಯವಿದೆ[6]. ಅಹಿಚ್ಛತ್ರ ಅಥವಾ ಅಹಿಕ್ಷೇತ್ರ ಎಂಬುದೇ ಹವ್ಯಕರ ಮೂಲಸ್ಥಾನ ಎಂಬುದರಲ್ಲಿ ಹೆಚ್ಚಿನ ವಿದ್ವಾಂಸರ ನಿರ್ಣಯದೊಲವು ಕಂಡುಬರುತ್ತದೆ.

ಮಹಾಭಾರತದ ಕಾಲದಲ್ಲಿ ದ್ರೋಣನು ತನ್ನ ಶಿಷ್ಯರ ನೆರವಿನಿಂದ ದ್ರುಪದನನ್ನು ಸೋಲಿಸಿ ಅವನ ಪಾಂಚಾಲ ದೇಶವನ್ನು ವಶಪಡಿಸಿದ್ದನು. ಪಾಂಚಾಲವು ಗಂಗಾ ನದಿಯ ಉತ್ತರ ಮತ್ತು ದಕ್ಷಿಣ ಎಂಬೆರಡು ಭಾಗಗಳಿಂದ ಕೂಡಿದ್ದಿತು. ಉತ್ತರ ಪಾಂಚಾಲವನ್ನು ದ್ರೋಣನು ತನಗಿಟ್ಟುಕೊಂಡು ದಕ್ಷಿಣ ಪಾಂಚಾಲವನ್ನು ದ್ರುಪದನಿಗೆ ಉದಾರತೆಯಿಂದ ಬಿಟ್ಟುಕೊಟ್ಟಿದ್ದನು. ಉತ್ತರ ಪಾಂಚಾಲವೆಂದರೆ ಈಗಿನ ರೋಹಿಲ ಖಂಡ. ಅಹಿಚ್ಛತ್ರ ಅದರ ರಾಜಧಾನಿ. ಛತ್ರಾವತಿ ಎಂದೂ ಅದಕ್ಕೆ ಹೆಸರಿದ್ದು ದಾಗಿ ಮಹಾಭಾರತದಲ್ಲಿ ಹೇಳಿದೆ. ಪಂಪ ಭಾರತದಲ್ಲಿಯೂ ಪಾಂಚಾಲದ ರಾಜಧಾನಿ ಛತ್ರಾವತಿ ಎಂದೇ ಹೇಳಿದೆ. ಬರೇಲಿ, ರಾಮನಗರಗಳಿಂದ ಕೂಡಿದುದು ಅಹಿಚ್ಛತ್ರ ಪ್ರದೇಶ[7]. ದೇವತೆಗಳಿಗೆ ಹವ್ಯಾರ್ಪಣೆಯೇ ಪ್ರಧಾನವಾಗಿರುವ ಪ್ರದೇಶವಾಗಿಯೂ ಆ ಹೆಸರಿನ ಜನವರ್ಗ ವಾಚಕವಾಗಿಯೂ 'ಹವ್ಯಕ' ಎಂಬ ಶಬ್ದನಿಷ್ಪತ್ತಿ ಸಹ್ಯಾದ್ರಿ ಖಂಡೋಕ್ತವಾಗಿ ವಿದಿತವಾಗಿದೆಯಷ್ಟೆ ? ಕೆಲವರು ಹವ್ಯ ಕವ್ಯಗಳನ್ನು—ಎಂದರೆ ದೇವತೆಗಳಿಗೆ ಸ್ವಾಹಾಕಾರದಿಂದ ಹವ್ಯವನ್ನೂ ಪಿತೃಗಳಿಗೆ ಸ್ವಧಾ ಶಬ್ದದಿಂದ ಕವ್ಯ ಗಳನ್ನೂ ಅರ್ಪಿಸತಕ್ಕವರು—ಎಂಬ ಅರ್ಥದಿಂದ 'ಹವ್ಯಕ' ಶಬ್ದದ ಮೂಲವನ್ನು ಹೇಳುತ್ತಾರೆ. ಆದರೆ, ಇವೆರಡನ್ನು ಹವ್ಯಕರಲ್ಲದ ಬ್ರಾಹ್ಮಣರೂ ಆಚರಿಸುತ್ತಾರೆ. ಆದರೆ ಅವರನ್ನು 'ಹವ್ಯಕ'ರೆನ್ನುವುದಿಲ್ಲ. ಆದುದರಿಂದ ಈ ನಿಷ್ಪತ್ತಿ ಸಮಂಜಸ ವೆನಿಸುವುದಿಲ್ಲ. ಅಹಿಕ್ಷೇತ್ರದವರು ಎಂಬ ಅರ್ಥದಿಂದಲೇ ಈ ಶಬ್ದ ಬಂದಿರಬೇಕೆನಿಸು ತ್ತದೆ. ಅಹಿಕ್ಷೇತ್ರ ಯಾವುದು ? ಎಂಬ ಬಗೆಗೂ ತುಂಬ ಚರ್ಚೆಗಳಿವೆ. ಈ ಅಹಿಕ್ಷೇತ್ರವು ಗೋದಾವರೀ ತೀರದ ದಕ್ಷಿಣದಲ್ಲಿರುವ ಅಹಿಚ್ಛತ್ರವಲ್ಲ—ಎಂದು ಗೋವಿಂದ ಪೈಗಳು ಸ್ಪಷ್ಟಪಡಿಸಿದ್ದಾರೆ[8]. ಅವರು 'ಪ್ರಪಂಚ ಹೃದಯ' ಎಂಬ ಸಂಸ್ಕೃತ ಗ್ರಂಥದಲ್ಲಿ ಬಂದಿರುವ ಕೂಪಕ, ಕೇರಲ, ಮೂಷಿಕ, ಆಲುವ, ಪಶು, ಕೊಂಕಣ, ಪರಕೊಂಕಣ—ಎಂಬ ಏಳು ಭೂಪ್ರದೇಶಗಳೆಂದು ತಿಳಿಸಿ ಇವು ಕ್ರಮವಾಗಿ ಈಗಿನ ತಿರುವಾಂಕೂರು, ಕೊಚ್ಚಿ, ಮಲಬಾರ, ತುಳುನಾಡು, ಹವಿಕ, ದಕ್ಷಿಣ ಕೊಂಕಣ ಉತ್ತರ ಕೊಂಕಣ ಪ್ರದೇಶಗಳೆಂದು ತಿಳಿಸಿರುತ್ತಾರೆ. ಇವುಗಳಲ್ಲಿ 'ಪಶು' ಎಂಬುದು ಈಗಿನ ಉತ್ತರ ಕನ್ನಡ ಜಿಲ್ಲೆಯ ಭಾಗವೆಂದಿದ್ದಾರೆ. ಈ ಭಾಗಕ್ಕೆ 'ಗೋರಾಷ್ಟ್ರ'

ಎಂದು ಹೆಸರಿದ್ದುದರಿಂದ 'ಪಶು' ಎಂಬ ದೇಶವಾಚಕವು ಉತ್ತರ ಕನ್ನಡ ಜಿಲ್ಲೆಯ ಪ್ರದೇಶ ಸೂಚಕವೆಂದು ದೃಢವಾಗುವುದೆಂದು ಹೇಳಿದ್ದಾರೆ. ಕರ್ಣಾಟ—ಕರ್ಣಾಟಕ, ವನವಾಸ—ವನವಾಸಕ ಆಗಿರುವಂತೆ 'ಪಶು' ಎಂಬುದು ಕ ಪ್ರತ್ಯಯ ಸೇರಿ 'ಪಶುಕ' ಆಗಿ ಕಾಲಕ್ರಮೇಣ ಪಶುಕ—ಪಯಿಕ (ಪಯ್ಕ)—ಪಯಿಗ—ಹಯಿಗ—ಹೈಗ—ಹೈವ (ಹೈವೆ) ಎಂಬ ರೂಪಾಂತರಗಳನ್ನು ತಾಳಿದುದಾಗಿ ವಿವರಣೆ ಮಾಡಿದ್ದಾರೆ. ಗೋವಿಂದ ಪೈ ಅವರ ಈ ದಿಶೆಯ ಶಬ್ದ ಸಂಶೋಧನೆಯಲ್ಲಿ ಅಹಿಚ್ಛತ್ರಕ್ಕೂ ಹವಿಕರಿಗೂ ಸಂಬಂಧ ಕಾಣುವುದಿಲ್ಲ.

ಹಿಂದೆ ಮದ್ರಾಸ್ ಸರಕಾರ ಪ್ರಕಟಿಸಿರುವ ಗಜೆಟಿಯರಿನಲ್ಲಿ 'ಹವ್ಯಕ' ಶಬ್ದದ ಮೂಲ ಕನ್ನಡವ ಎಂಬಂತೆ ವಿವರಿಸಲಾಗಿದೆ. ಅದರ ಪ್ರಕಾರ, ಈ ಪ್ರದೇಶವು ಪರಶುರಾಮ ಕ್ಷೇತ್ರವಾಗಿದ್ದು ಇದಕ್ಕಿದ್ದ ಇನ್ನೊಂದು ಹೆಸರು ನಾಗರಖಂಡ. ನಾಗರು ಎಂಬ ಜನವರ್ಗದವರ ಪ್ರದೇಶವೇ ನಾಗರಖಂಡ. "ಇವರು ಹಾವುಗಳಲ್ಲ, ಮನುಷ್ಯರೇ. ಸರ್ಪಲಾಂಛನದವರು ಇರಬಹುದೆ"ಂದು ಗೋವಿಂದ ಪೈಗಳು ತರ್ಕಿಸಿ ನಿರ್ಣಯಿಸಿದ್ದಾರೆ. 'ನಾಗ' ಎಂಬುದರ ಅಚ್ಚಗನ್ನಡದ ರೂಪ ಪಾವು (ಹಾವು). ಇದನ್ನು ದೇಶವಾಚಕವಾಗಿ ಗಣಿಸಿ, ಅಂತಹ ನಾಡಿನಲ್ಲಿ ಹುಟ್ಟಿದವನು ಎಂಬ ಅರ್ಥದ 'ಇಗ' ಪ್ರತ್ಯಯ (ಕನ್ನಡಿಗ ಎಂಬಂತೆ) ಹಚ್ಚಿದಾಗ ಪಾವಿಗ (ಹಾವಿಗ) ಆಗಬಹುದು. ಅದು ಮುಂದೆ ಇಕ್ಕವಲಾಗಿ ಪವಿಗ, ಪವಿಕ, ಹವಿಕ, ಹವ್ಯಕ ಎಂದು ಕೊನೆಗೆ ಸಂಸ್ಕೃತೀಕರಣಗೊಂಡಿತು. ಹಾಗೆಯೇ ಪವಿಗ—ಪೈಗ—ಹೈಗ (ಹೈದ) ಎಂದು ಕನ್ನಡದಲ್ಲಿಯೇ ಮಾರ್ಪಾಟುಗಳನ್ನು ತಾಳಿತು—ಎಂಬೀ ಅಭಿಪ್ರಾಯವನ್ನು ಗಜೇಟಿಯರಿನಲ್ಲಿ ಕೊಡಲಾಗಿದೆ. ಈ ವಿವರಣೆ ಯುಕ್ತಿಯುಕ್ತವಾಗಿಯೆ ಕಾಣುವುದಾದರೂ ಇಲ್ಲಿ 'ನಾಗರ' ಎಂಬುದಕ್ಕೆ ಬದಲಾಗಿ ಅಥವಾ ಇತರರು ಹೇಳಬಹುದಾದಂತೆ 'ಗೋಕರ್ಣ ಮಂಡಲ' ಎಂಬ ಶಬ್ದದಲ್ಲಿ ಮೊದಲನೆಯದಾದ ಗೋಕರ್ಣ ಎಂಬ ಶಬ್ದಕ್ಕೆ ಹಾವು ಎಂಬರ್ಥವಿದ್ದರೂ ಅದಕ್ಕೆ ಬದಲಾಗಿ, 'ಪಾವು' (ಹಾವು) ಎಂಬ ಹೆಸರು ಈ ಪ್ರದೇಶಕ್ಕೆ ಇತ್ತೆಂಬುದಕ್ಕೆ ಆಧಾರವಿಲ್ಲ. ಅಹಿಕ್ಷೇತ್ರದಿಂದ ಬಂದವರು ಹವಿಕರೆಂಬುದಕ್ಕೆ ಆಧಾರವಿರುವುದರಿಂದ ಅದೇ ಈ ಶಬ್ದದ ಮೂಲವಿರಬೇಕು ಎನಿಸುತ್ತದೆ.

ಅಹಿಕ್ಷೇತ್ರ ಅಥವಾ ಅಹಿಚ್ಛತ್ರ ಎಂಬ ಸಂಯುಕ್ತ ಶಬ್ದದಲ್ಲಿ ಮೂಲ ಶಬ್ದ 'ಅಹಿ'. ಅದರ ಮುಂದಿನದು ರೂಢಾರ್ಥಕವಾದು. 'ಅಹಿ' ಎಂಬುದಕ್ಕೆ ಕ ಪ್ರತ್ಯಯ ಸೇರಿದಾಗ 'ಅಹಿಕ' ಎಂದಾಗುವುದು. ಮುಂದೆ ಇದು ಭಾಷಾ ಶಾಸ್ತ್ರದ ನಿಯಮದಂತೆ ಅಕ್ಷರ ಸ್ಥಾನಪಲ್ಲಟಗೊಂಡು ಅಹಿಕ—ಹಇಕ—ಹಯಿಕ (ಹೈಕ), ಹವಿಕ ಆದುದಾಗಿ ಕಂಡುಬರುತ್ತದೆ. ಅಹುದು—ಹೌದು, ಅರಲು—ಅಲರು, ಅಸಗ—ಅಗಸ—ಇವು ಸ್ಥಾನಪಲ್ಲಟಕ್ಕೆ ಉದಾಹರಣೆಗಳು. 'ಹೈಕ' ಎಂಬಲ್ಲಿ ಮೂಲವಾಗಿ 'ಹೈ' ಎಂಬುದಿದ್ದು

ಕೊಂಡು ಹೈವ, ಹೈಗ (ಹೈಹಯ) ಮುಂತಾದ ರೂಪಗಳಾದುದನ್ನು ಕಾಣುತ್ತೇವೆ. ಈ 'ಹವಿಕ' ಎಂಬುದು ಮತ್ತೆ ಸಂಸ್ಕೃತೀಕರಣಗೊಂಡು 'ಹವ್ಯಕ' ಎಂಬ ರೂಪ ತಾಳಿದುದು ಕಂಡುಬರುತ್ತದೆ.

ಕೆಲವು ವಿದ್ವಾಂಸರು 'ಅಹೀಕ' ಎಂದು ದೀರ್ಘಮಧ್ಯಕವಾಗಿ ಮೂಲ ಶಬ್ದವನ್ನು ರೂಪಿಸಿಕೊಂಡು ಅದೇ 'ಹವೀಕ' ಎಂದು ಮಧ್ಯದೀರ್ಘಾನ್ವಿತವಾಗಿಯೇ ಶಬ್ದರೂಪವನ್ನು ಸಾಧಿಸುತ್ತಾರೆ ಮತ್ತು ಪ್ರಯೋಗಿಸುತ್ತಾರೆ.[9] ಗತಾನುಗತಿಕವಾಗಿ ಇವನ್ನೆ ಇನ್ನಿತರರು ಅನುಸರಿಸಿರುವುದುಂಟು.[10] ವಾಸ್ತವವಾಗಿ ಕಾರ್ಣಾಟಿಕ, ಕೃಷಿಕ, ದೈಹಿಕ, ಐಹಿಕ, ಮಾನಸಿಕ—ಮುಂತಾದ ಉದಾಹರಣೆಗಳಲ್ಲಿ ಕ ಪ್ರತ್ಯಯ ಅಥವಾ ಇಕ ಪ್ರತ್ಯಯ ಸೇರಿದಾಗ ದೀರ್ಘ ಬರುವುದು ಕಂಡುಬಂದಿಲ್ಲ. ಆದುದರಿಂದ ಅಹಿಕ—ಹವಿಕ ಎಂಬುದೇ ಸರಿಯಾದ ರೂಪ ; ಅಹೀಕ—ಹವೀಕವಲ್ಲ. ಹೀಗೆ ಅಹಿಕ್ಷೇತ್ರದ ಮೂಲದವರೆಂಬ ಅರ್ಥದಲ್ಲಿ ಹವಿಕರಾದುದು ಕಂಡುಬರುತ್ತದೆ. ಇದು ಮುಂದೆ 'ಹವ್ಯಕ' ಎಂದಾಯಿತು. ಪ್ರಕೃತ, ಅಹಿಕ್ಷೇತ್ರದ ಬ್ರಾಹ್ಮಣ ಕುಟುಂಬಗಳನ್ನು, ಮೊದಲೇ 'ಹವ್ಯ'ವೆನಿಸಿದ್ದ ಈ ಪ್ರದೇಶಕ್ಕೆ ಕದಂಬ ರಾಜನಾದ ಮಯೂರ ಶರ್ಮನು ಕರೆತಂದ ಕಥಾವಿವರ ಸಹ್ಯಾದ್ರಿ ಖಂಡದಲ್ಲಿ ಕಂಡುಬರುತ್ತದೆ. ಅದರ ಸಾರಾಂಶವಿದು—

ಪಾರ್ವತೀ ಪರಮೇಶ್ವರರ ಶಕ್ತ್ಯಂಶದಿಂದ ಕದಂಬನೆಂಬ ರಾಜನು ಜನಿಸಿ ರಾಜ್ಯವಾಳುತ್ತಿದ್ದನು. ಅವನ ವಂಶದಲ್ಲಿ ಬಂದ ವಸು ಎಂಬ ಅರಸನ ಮಗಳಾದ ಸುಶೀಲಾ ಎಂಬವಳನ್ನು ಸೂರ್ಯವಂಶದ ಹೇಮಾಂಗನೆಂಬ ರಾಜನು ವರಿಸಿದನು. ಸುಶೀಲೆ ಗರ್ಭಿಣಿಯಾಗಿ ಪಿತಾರಿಷ್ಟಯೋಗವುಳ್ಳ ಬಾಲಕನಿಗೆ ಜನ್ಮವಿತ್ತಳು. ಇದರಿಂದ ಹೇಮಾಂಗನು ಸತ್ತುಹೋದನು. ರಾಜ್ಯವೆಲ್ಲ ಶತ್ರುಗಳ ವಶವಾಯಿತು. ಸುಶೀಲೆ ತನ್ನ ಮಗುವಿನೊಂದಿಗೆ ಸಹ್ಯಾದ್ರಿಗೆ ಬಂದಳು. ಶುಕ್ತಿಮತಿ ಎಂಬ ನದೀ ತೀರದಲ್ಲಿದ್ದಳು. ಅಲ್ಲಿಗೆ ವಸಿಷ್ಠನು ಬಂದು, ಆಕೆಗೆ ಕಷ್ಟನಿವಾರಣೆಗಾಗಿ ಸೋಮವಾರ ವ್ರತವನ್ನು ಉಪದೇಶಿಸಿದನು. 'ನಿನ್ನ ಮಗನು ಮಯೂರ ವರ್ಮನೆಂದು ಪ್ರಸಿದ್ಧನಾಗುವನು' ಎಂದು ಹೇಳಿದನು. ಆಕೆ ಅದರಂತೆ ಸೋಮವಾರ ವ್ರತವನ್ನು ಕೈಗೊಂಡು ಕೋಟಿ ಲಿಂಗನನ್ನು ಪೂಜಿಸುತ್ತಿದ್ದಳು. ಆ ಮಗುವಿಗೆ ವಸಿಷ್ಠನು ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿಸಿದನಲ್ಲದೆ, ವೇದಶಾಸ್ತ್ರವನ್ನೂ ಧನುರ್ವಿದ್ಯೆಯನ್ನೂ ಕಲಿಸಿಕೊಟ್ಟನು. ಮುಂದೆ ಮಯೂರವರ್ಮನು ಚಿತ್ರಾಂಗಿ ಎಂಬಾಕೆಯನ್ನು ವರಿಸಿದನು. ಹಿಂದೆ ಭಾರ್ಗವರಾಮನಿಂದ ಸಾಧಿತವಾದ ರಾಜ್ಯಕ್ಕೆಲ್ಲ ಒಡೆಯನಾಗಿ ಜಯಂತೀನಗರವನ್ನು ರಾಜಧಾನಿಯಾಗಿ ಮಾಡಿಕೊಂಡು ರಾಜ್ಯವಾಳುತ್ತಿದ್ದನು.

ಹೀಗಿರಲು ಕಶ್ಯಪನು ಅವನ ರಾಜ್ಯಕ್ಕೆ ಬಂದನು. ಅವನ ರಾಜ್ಯದಲ್ಲಿ ಬ್ರಾಹ್ಮಣರಿದ್ದಿಲ್ಲ. ಬ್ರಾಹ್ಮಣರು, ಯಜ್ಞಕ್ರಿಯೆಗಳು, ಧರ್ಮಕಾರ್ಯಗಳು,

ದೇವತಾರ್ಚನೆ, ಶಾಸ್ತ್ರಕಥೆ, ಪಂಚಯಜ್ಞ, ಗೋಪೂಜೆ, ಅಶ್ವತ್ಥಸೇವೆ, ತುಲಸಿ— ಇವಿಲ್ಲದ ಕಡೆ ಒಂದು ದಿನವೂ ಇರಬಾರದು ಎಂಬ ನೀತಿಯನ್ನು ಹೇಳಿದಾಗ, ಮಯೂರ ವರ್ಮನು ಬಾಡಿದ ಮುಖದಿಂದ 'ಅದಕ್ಕೆ ನಾನೇನು ಮಾಡಲಿ ?' ಎಂದು ಕೇಳಿದನು. ಆಗ ಕಶ್ಯಪನು—

ಗಚ್ಛ ತಾತ ಮಹಾ ಪ್ರಾಜ್ಞ ಮೇರೋರ್ದಕ್ಷಿಣತಃ ಶುಭಂ
ಅಹಿಚ್ಛತ್ರ ಇತಿ ಖ್ಯಾತೋ ವಿಪ್ರಾಣಾಮಾದಿ ಮಂಡಲಂ
ತತ್ರ ಷಟ್ಕರ್ಮನಿರತಾಃ ಸರ್ವಶಾಸ್ತ್ರವಿಶಾರದಾಃ
ಬ್ರಾಹ್ಮಣಾಃ ಬಹವಃ ಸಂತಿ ತಾನಾನಯ ಮಹೀಪತೇ (ಅಧ್ಯಾಯ 4)

'ಎಲೈ ರಾಜನೇ ನೀನು ತಡಮಾಡದೆ ಮೇರುಪರ್ವತದ ದಕ್ಷಿಣಕ್ಕಿರುವ ಅಹಿಚ್ಛತ್ರಕ್ಕೆ ಹೋಗು. ಅದು ಬ್ರಾಹ್ಮಣರ ಆದಿಸ್ಥಳ. ಅಲ್ಲಿ ಷಟ್ಕರ್ಮ (ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪರಿಗ್ರಹ) ನಿರತರೂ ಸರ್ವಶಾಸ್ತ್ರಗಳನ್ನು ತಿಳಿದವರೂ ಆಗಿರುವ ಬ್ರಾಹ್ಮಣರಿದ್ದಾರೆ. ಅವರನ್ನು ಕರೆದು ತಾ'—ಎಂದು ಹೇಳಿದನು. ಅನಂತರ ಕಶ್ಯಪನು ಗೋದಾವರಿಯ ಕಡೆಗೆ ತೆರಳಿದನು. ಇದೇ ಸಹ್ಯಾದ್ರಿ ಖಂಡದ ಮೂವತ್ತೆರಡನೆ ಅಧ್ಯಾಯದಲ್ಲಿ ಇನ್ನೊಂದು ಬಗೆಯ ನಿರೂಪಣೆ ಕಂಡುಬರುತ್ತದೆ. ಅದು ಹೀಗಿದೆ—

ಮಯೂರವರ್ಮನು ಯಥಾರೀತಿಯಾಗಿ ಒಮ್ಮೆ ದೇವೇಂದ್ರನ ಸಭೆಗೆ ಹೋಗಿದ್ದನು. ಸಭೆ ಮುಗಿಸಿ ಹೊರಗೆ ಬರುವಷ್ಟರಲ್ಲಿ ತನ್ನ ಕರವಸ್ತ್ರವನ್ನು ಅಲ್ಲೇ ಮರೆತುದು ಗೊತ್ತಾಯಿತು. ಅದನ್ನು ತರುವುದಕ್ಕಾಗಿ ಅಲ್ಲಿಗೆ (ಅಂದರೆ ತಾನು ಕುಳಿತಿದ್ದ ಕಡೆಗೆ) ಹೋದಾಗ, ಆ ಸ್ಥಳವನ್ನು ಮಂತ್ರೋದಕ ಪಂಚಗವ್ಯಗಳಿಂದ, ಗೋಮಯದಿಂದ ಶುದ್ಧೀಕರಿಸುತ್ತಿದ್ದುದನ್ನು ಕಂಡು, ತಾನು ಅಷ್ಟೊಂದು ಅಶುಚಿ ಹೇಗೆ ? ಎಂಬುದನ್ನು ತಿಳಿಯಲೆಂದು ಇಂದ್ರನನ್ನೆ ಪ್ರಶ್ನಿಸಿದನಂತೆ. ಅದಕ್ಕೆ ಇಂದ್ರನು—'ಹೌದು, ನೀನಾಳುವ ರಾಜ್ಯದಲ್ಲಿ ಬ್ರಾಹ್ಮಣರಿಲ್ಲದಿರುವುದರಿಂದ ಹವ್ಯ ಕವ್ಯಗಳು, ದೇವಪೂಜೆ, ವ್ರತ, ಹೋಮ, ದಾನಾದಿ ಕ್ರಿಯೆಗಳು ಸರಿಯಾಗಿ ನಡೆಯದಿವೆ. ಇದರಿಂದ ನೀನೊರ್ವ ಅಸ್ಪೃಶ್ಯನಾಗಿರುವೆ, ಎಂದನಂತೆ. ಹಾಗಾದರೆ ಇದಕ್ಕೇನು ಪರಿಹಾರ ? ಎಂದು ಕೇಳಿದಾಗ, ಇಂದ್ರನು ಅಹಿಚ್ಛತ್ರದಿಂದ ಪರಿಶುದ್ಧ ಬ್ರಾಹ್ಮಣವರ್ಗದವರನ್ನು ಕರೆತಂದು, ವಿಧಿ ವಿಹಿತ ಕರ್ಮಗಳನ್ನು ಆಚರಿಸುವಂತೆ ಸೂಚಿಸಿದನಂತೆ. ಆದುದರಿಂದ ಮಯೂರವರ್ಮನು ಅಹಿಚ್ಛತ್ರಕ್ಕೆ ತೆರಳಿದನು. ಅಲ್ಲಿಯ ಬ್ರಾಹ್ಮಣರನ್ನೊಲಿಸಿ, ಕರೆತರಲು ಸಾಹಸಪಡಬೇಕಾಯಿತು.

ಮಯೂರವರ್ಮನು ಅಹಿಚ್ಛತ್ರದ ಬ್ರಾಹ್ಮಣರ ನಡುವೆ ನೂರು ಶಿಷ್ಯರಿಂದ ಕೂಡಿದ ಹಾಗೂ ಅಗ್ನಿಶಿಖೆಯಂತೆ ತೇಜಸ್ವಿಯಾದ ಸುಮೇಧನೆಂಬವನನ್ನು ಕಂಡನು.

ಎಂಟು ತಿಂಗಳ ಕಾಲ ಅವನ ಸೇವೆ ಮಾಡಿದನು. ಆತನು ಮೆಚ್ಚಿ ವೇದ ವೇದಾಂಗ ಪಾರಗರೂ ಷಟ್ಕರ್ಮನಿರತರೂ ಇಂದ್ರಿಯನಿಗ್ರಹವುಳ್ಳವರೂ ನಾನಾ ಗೋತ್ರಜರೂ ಮಂತ್ರಶಾಸ್ತ್ರ ಪ್ರವೀಣರೂ ಪುತ್ರಕಳತ್ರ ಶಿಷ್ಯವರ್ಗವುಳ್ಳವರೂ ಆದ ಸ್ವಶಿಷ್ಯರನ್ನು ಒಪ್ಪಿಸಿದನು. ಮಯೂರವರ್ಮನು ಅವರನ್ನು ತನ್ನ ರಾಜ್ಯಕ್ಕೆ ಕರೆತಂದು ಬೇರೆ ಬೇರೆ ಅಗ್ರಹಾರಗಳನ್ನು ಅವರಿಗಾಗಿ ನಿರ್ಮಿಸಿಕೊಟ್ಟು ನೆಲೆ ನಿಲ್ಲಿಸಿದನು. ಹಲವು ಕಾಲ ಕಳೆದ ಮೇಲೆ ಮಯೂರವರ್ಮನು ತನ್ನ ರಾಜ್ಯವನ್ನು ಮಂತ್ರಿಗಳಿಗೆ ವಹಿಸಿಕೊಟ್ಟು ಬಾಲಕ ಚಂದ್ರಾಂಗದನನ್ನು ಪಟ್ಟಣದಲ್ಲಿ ಬಿಟ್ಟು ತಪಸ್ಸಿಗೆ ತೆರಳಿದನು. ಆಗ ಅಲ್ಲಿದ್ದ ಹವಿಕರು 'ಈ ರಾಜಪುತ್ರನು ಇನ್ನೂ ಚಿಕ್ಕವನಿದ್ದಾನೆ. ಈ ಮಂತ್ರಿಗಳು ನಮಗೇನೂ ಮಾನ್ಯತೆ ನೀಡರು. ನಾವೇಕೆ ಇನ್ನಿಲ್ಲಿ ನಿಲ್ಲಬೇಕು ?' ಎಂದುಕೊಂಡು ತಮ್ಮ ಹಿಂದಿನ ಕ್ಷೇತ್ರಕ್ಕೆ ಹಿಂದಿರುಗಿದರು. ಆದರೆ ಗೋರಾಷ್ಟ್ರದಲ್ಲಿ ನೆಲಸಿದವರು ಆಚಾರಶೀಲರಲ್ಲ ವೆಂದು ತಿರಸ್ಕೃತರಾಗಿ ದೇಶದ ಹೊರಗಣ ಭಾಗದಲ್ಲಿದ್ದರು. ಚಂದ್ರಾಂಗದನು ಮುಂದೆ, ಪುನಃ ಅಹಿಕ್ಷೇತ್ರಕ್ಕೆ ಹೋಗಿ ಅವರನ್ನು ಮತ್ತೊಮ್ಮೆ ಕರೆತಂದನೆಂದು ಪುರಾಣದಲ್ಲಿ ಹೇಳಿದೆ. ಸಹ್ಯಾದ್ರಿ ಖಂಡದ 32ನೆಯ ಅಧ್ಯಾಯದಲ್ಲಿ ನಿರೂಪಿತವಾದ ಪ್ರಕಾರ, ಮಯೂರವರ್ಮನ ಪುತ್ರ ತ್ರಿನೇತ್ರ ಕದಂಬನು ತನ್ನ ರಾಜ್ಯದಲ್ಲಿದ್ದ ಬಹುಮಂದಿ ಬ್ರಾಹ್ಮಣರನ್ನು ಮಿತ್ರನಾದ ಚಂಡಸೇನನ ರಾಜ್ಯಕ್ಕೆ ಅವನ ಅಪೇಕ್ಷೆಯಂತೆ ಕಳುಹಿ ಕೊಟ್ಟನು. ಮತ್ತು ತನ್ನ ತಂಗಿ ಕನಕಾವತಿಯನ್ನು ಚಂಡಸೇನನ ಪುತ್ರನಾದ ಲೋಕಾದಿತ್ಯನಿಗೆ ಮದುವೆ ಮಾಡಿಕೊಟ್ಟನು. ಆ ಕಾಲದಲ್ಲಿ ಹುಬ್ಬಾಸಿಗನೆಂಬ ದುಷ್ಟನಿಂದ ಪೀಡಿತರಾಗಿ ಬ್ರಾಹ್ಮಣರೆಲ್ಲ ರಾಜ್ಯದಿಂದ ಓಡಿಹೋಗಿದ್ದರು. ಲೋಕಾದಿತ್ಯನು ಹುಬ್ಬಾಸಿಗನನ್ನು ಕೊಂದು, ರಾಜ್ಯವನ್ನು ನಿಷ್ಕಂಟಕಗೊಳಿಸಿದನು. ಅನಂತರ ಪರಾಶರ ಮುನಿಗಳ ಆದೇಶದಂತೆ ಲೋಕಾದಿತ್ಯನು ಬ್ರಾಹ್ಮಣರಿರುವಲ್ಲಿಗೆ ಹೋಗಿ ಬ್ರಾಹ್ಮಣೋತ್ತಮರಾದ ಭಟ್ಟಾಚಾರ್ಯರ ಸೇವೆಮಾಡಿ, ಅವರು ಸ್ವತಃ ಮತ್ತಿತರ ಬ್ರಾಹ್ಮಣ ಕುಟುಂಬಗಳೊಂದಿಗೆ ತನ್ನ ರಾಜ್ಯಕ್ಕೆ ಬರುವಂತೆ ಮಾಡಿದನು. ಯಜ್ಞ ಸಭಾಮಧ್ಯದಲ್ಲಿ ಭಟ್ಟಾಚಾರ್ಯನಿಂದ ಬೋಧಿತನಾದ ರಾಜನು ಆ ಬ್ರಾಹ್ಮಣರಿಗೆ ಏಳು ಬಗೆಯ ಸಂಕೇತನಾಮಗಳನ್ನಿಟ್ಟನು. ಇದರಿಂದ—ಸಭಾಹಿತ, ಮಧ್ಯಸ್ಥ, ಯಾಜಿ, ಅವಭೃಥ, ಭಟ್ಟ, ತಾಂತ್ರಿಕ, ಪ್ರಭು (ಹೆಗಡೆ)—ಎಂಬಿವು ಹವ್ಯಕರ ಸಂಕೇತ ನಾಮಗಳಾದವು. ಇವರನ್ನೆಲ್ಲ ಒಟ್ಟಿಗೆ 'ಹವ್ಯಕರು' ಎಂದು ಕರೆಯಲಾಯಿತು.

ಹವ್ಯಕಾಶ್ಚೇತಿ ವಿಪ್ರಾಣಾಂ ನಾಮಧೇಯಂ ಚಕಾರ ಸಃ (ಅ. 33, ಶ್ಲೋಕ 46) ಈ 'ಹವ್ಯಕ' ಎಂಬ ಸಂಸ್ಕೃತ ಶಬ್ದವೇ ಅಪಭ್ರಂಶ ಹೊಂದುತ್ತ ಹವಿಕ, ಹೈವ, ಹೈಗ—ಎಂಬ ರೂಪಗಳನ್ನು ತಾಳಿತು—ಎಂದು ಒಂದು ಬಗೆಯ ಅಭಿಪ್ರಾಯ.[11]

ಕಾಲಕ್ರಮೇಣ ಶ್ರೀ ಶಂಕರಾಚಾರ್ಯರು ವೈದಿಕಧರ್ಮದ ಸದಾಚಾರಗಳಿಂದ ಕೂಡಿದ, ಸೂರ್ಯ—ಗಣಪತಿ—ಅಂಬಿಕಾ—ಶಿವ—ವಿಷ್ಣು ಎಂಬ ಪಂಚಾಯತನ

ಪೂಜೆಯನ್ನು ಪುರಸ್ಕರಿಸುವ ಉದಾರ ಪಂಥದ, ಅದ್ವೈತ ತತ್ತ್ವವನ್ನು ಜನತೆಗೆ ಬೋಧಿಸುತ್ತ ಗೋಕರ್ಣ ಮಂಡಲಕ್ಕೆ ಬಂದು ಧರ್ಮಪ್ರಭಾವನೆಗೊಳಿಸಿದರು. ಗೋಕರ್ಣದಲ್ಲಿ ಶ್ರೀ ರಘೂತ್ತಮ ಮಠವನ್ನು ಸ್ಥಾಪಿಸಿ, ತಮ್ಮ ಶಿಷ್ಯರಾದ ಶ್ರೀ ವಿದ್ಯಾನಂದಾಚಾರ್ಯರನ್ನು ಈ ಶ್ರೀಮಠದ ಪರಂಪರೆಯಲ್ಲಿ ಮೊದಲನೆ ಪೀಠಾಧೀಶ ರನ್ನಾಗಿ ನೇಮಿಸಿ, ಇವರನ್ನು ಗೋಕರ್ಣ ಮಂಡಲಾಧೀಶರನ್ನಾಗಿ ಸಾರಿದರು. ತಮ್ಮ ಈ ಗುರುಪೀಠದಲ್ಲಿ ಆರೂಢರಾದ, ಉಕ್ತಲಕ್ಷಣಗಳಿಂದ ಕೂಡಿದ, ಪರಿವ್ರಾಜಕರು ಯಾರಿದ್ದರೂ ಅವರನ್ನು ನಾವೆಂತಲೇ (ಶ್ರೀ ಶಂಕರ ಭಗವತ್ಪಾದರೆಂತಲೇ) ತಿಳಿಯ ತಕ್ಕದ್ದೆಂದು ಸಾರಿದರು. ಹವ್ಯಕರು ಈ ಗುರು ಪರಂಪರೆಗೆ ಸಹಜವಾದ ಅನುಯಾಯಿ ಗಳಾಗಿ ಧಾರ್ಮಿಕ ಮಾರ್ಗದರ್ಶನವನ್ನು ಪಡೆಯುತ್ತ ಬಂದಿದ್ದಾರೆ. ಈ ಅವಿಚ್ಛಿನ್ನ ಗುರು ಪರಂಪರೆಯಡೇ ಆದುದು ಶ್ರೀ ರಾಮಚಂದ್ರಪುರ ಮಠ.

## ಸಂಸ್ಕೃತಿ – ಶಿಷ್ಟಾಚಾರ

ಭಾರತ ದೇಶದಲ್ಲಿ ಪ್ರಾಚೀನ ಕಾಲದಿಂದಲೇ ಉದಾತ್ತ ಸಂಸ್ಕೃತಿ ಅಭಿವೃದ್ಧಿ ಗೊಂಡು ಪರಿಪಕ್ವ ಸ್ಥಿತಿಗೆ ಮುಟ್ಟಿದೆ. ವೇದ ಉಪನಿಷತ್ತು ಪುರಾಣಗಳಲ್ಲಿ, ಕಾವ್ಯ ಶಾಸ್ತ್ರ ಕಲೆಗಳಲ್ಲಿ ಅಭಿವ್ಯಕ್ತವಾಗುತ್ತ ಬಂದಿರುವ ಈ ಹಿಂದೂ ಸಂಸ್ಕೃತಿಯ ಅನೇಕ ಉತ್ತಮ ಲಕ್ಷಣಗಳು ಹವಿಕರಲ್ಲಿ ಈ ಕಾಲದಲ್ಲಿ ಕೂಡ ಎದ್ದು ಕಾಣುತ್ತವೆ. ಇವು ಇತರರಿಗೂ ಅನುಸರಣೀಯ. ಉತ್ತರ ಕನ್ನಡ ಜಿಲ್ಲೆಯ ಹವಿಕರಿಗೆ ಸೀಮಿತಗೊಳಿಸಿ, ಅವರ ಉಡಿಗೆ ತೊಡಿಗೆ, ತಿಂಡಿ ತೀರ್ಥ, ಮನೆ ಮಟ, ಪಾತ್ರೆ ಪಡಿಗೆ, ಅಳತೆ ತೂಕ, ಕಾಯಿಲೆ ಕಷಾಯ, ಮದುವೆ ಮುಂಜಿ, ಬಂಜೆ ಮತ್ತು ವಿಧವೆಯರ ಸ್ಥಿತಿ, ಕರ್ಮಫಲ, ಮುಕ್ತಿ, ದೇವರು ದಿಂಡರು, ಬೇಸಾಯ ಕೆಲಸ, ಆಟ ಪುರುಸೊತ್ತು, ಮನೆ ಮಾತು, ಬಂಧು ಬಳಗ, ಹೆಸರು ಅಡ್ಡ ಹೆಸರು, ಸಾಮಾಜಿಕ ವ್ಯವಸ್ಥೆ, ಸ್ವಭಾವ, ಸಂಬಂಧ ಸಂಪರ್ಕ, ವಿದ್ಯಾಬುದ್ಧಿ — ಎಂಬ ಉಪಶೀರ್ಷಿಕೆಗಳಿಂದ ಶ್ರೀಮತಿ ಶಾಲಿನಿ ರಘುನಾಥ್ ಅವರು ಹವ್ಯಕರ ಸಂಸ್ಕೃತಿಯನ್ನು ತಮ್ಮ ಪುಸ್ತಕದಲ್ಲಿ ಈ ಮೊದಲೇ ನಿರೂಪಿಸಿರುತ್ತಾರೆ.[12] ಅವುಗಳ ಪುನರಾವೃತ್ತಿ ಇಲ್ಲಿ ಅನುಚಿತ. ಪ್ರಸ್ತುತ ಪ್ರತಿಪಾದನೆ ಸಮಗ್ರ ಹವ್ಯಕರ ಸಂಸ್ಕೃತಿ ಶಿಷ್ಟಾಚಾರಗಳಿಗೆ ಸಂಬಂಧಿಸಿರುವುದರಿಂದ ಕೆಲವು ಹೆಚ್ಚಿನ ಅಂಶಗಳನ್ನು ನಿರೂಪಿಸುವುದು ಇಲ್ಲಿ ಆವಶ್ಯಕ.

## ವೈಶಿಷ್ಟ್ಯಗಳು

ಹವಿಕರಲ್ಲಿ ಋಗ್ವೇದಿಗಳು ಮತ್ತು ಸಾಮವೇದಿಗಳು ವಿರಳ. ಹೆಚ್ಚಿನವರು ಕೃಷ್ಣಯಜುರ್ವೇದೀಯ ಬೌಧಾಯನ ಸೂತ್ರದವರು. ವಿಜಯನಗರ ಸ್ಥಾಪನಾಚಾರ್ಯ ರಾದ ವಿದ್ಯಾರಣ್ಯರು (1302–1387) ಮತ್ತು ಸಾಯಣಾಚಾರ್ಯರು ಹವ್ಯಕರಾಗಿದ್ದು

ಕೃಷ್ಣಯಜುರ್ವೇದೀಯ ಬೌಧಾಯನೀಯ ಸೂತ್ರದವರೆಂದು ತಿಳಿದುಬಂದಿದೆ.[13] ಹವ್ಯಕರ ಆಚಮನ ಮಂತ್ರ ಇತರರಿಗಿಂತ ಭಿನ್ನವಾಗಿದೆ. ಇತರರು ಕೇಶವಾಯ ಸ್ವಾಹಾ, ನಾರಾಯಣಾಯ ಸ್ವಾಹಾ, ಮಾಧವಾಯ ಸ್ವಾಹಾ – ಎಂದು ಪೌರಾಣಿಕವಾಗಿ ಶ್ರೀಮನ್ನಾರಾಯಣ ನಾಮೋಚ್ಚಾರಣೆಯಿಂದ ಆಚಮನ ಮಾಡುತ್ತಾರೆ. ಆದರೆ, ಹವಿಕರು ಋಗ್ವೇದಾಯ ಸ್ವಾಹಾ, ಯಜುರ್ವೇದಾಯ ಸ್ವಾಹಾ, ಸಾಮವೇದಾಯ ಸ್ವಾಹಾ – ಎಂಬ ವೇದಸಂಜ್ಞಾರ್ಥಕ ಮಂತ್ರದಿಂದ ದ್ವಿರಾಚಮನ ಮಾಡುತ್ತಾರೆ. ವೇದಗಳನ್ನು ಸ್ಮರಿಸುತ್ತ ಆಚಮನ ಮಾಡಬೇಕೆಂಬ ಸೂಚನೆ ಮಹಾಭಾರತದಲ್ಲಿ ಬಂದಿದೆ.[14] ಅನಂತರದ ಅಂಗನ್ಯಾಸ ಮಂತ್ರಗಳೂ ಇತರರಿಗಿಂತ ಬೇರೆ. ಅಥರ್ವ ವೇದಾಯ ನಮಃ, ಇತಿಹಾಸ ಪುರಾಣೇಭ್ಯೋ ನಮಃ – ಎಂದು ಮುಂದುವರಿಯುತ್ತದೆ. ಹಿಂದೆ ಸಕಲ ಸ್ಮಾರ್ತರ ಗುರುಮಠವಾಗಿ ಶೃಂಗೇರಿಯ ಶಾರದಾ ಪೀಠವೂ ಹವ್ಯಕರ ಗುರುಮಠವಾಗಿ ಗೋಕರ್ಣದ ರಘೂತ್ತಮ ಮಠವೂ ಆದ್ಯಶಂಕರಾಚಾರ್ಯರಿಂದಲೇ ಸ್ಥಾಪನೆಗೊಂಡವು. ಈ ರಘೂತ್ತಮ ಮಠದ ಪ್ರಾರಂಭೋತ್ಸವವನ್ನು ಗೋಕರ್ಣದ ಅಶೋಕವನದಲ್ಲಿ ನೆರವೇರಿಸುವಾಗ ಶಂಕರಾಚಾರ್ಯರು ಅಲ್ಲಿಯ ಬಂಡೆಗಲ್ಲಿನ ಮೇಲೆ ಸ್ವಹಸ್ತದಿಂದ 'ರಾಮ' ಎಂದು ಬರೆದರಂತೆ. ಅದೇ ಹವ್ಯಕರ ಗುರುಮಠದ ಮುದ್ರಿಕೆಯಾಯಿತೆಂದು ತಿಳಿದುಬರುತ್ತದೆ. ಉಪನಯನ ವಿವಾಹಾದಿ ಕ್ರಿಯಾಕಲಾಪ ಗಳಲ್ಲಿಯೂ ಹವ್ಯಕರ ಸಂಪ್ರದಾಯದಲ್ಲಿ ಕೆಲವು ವಿಶೇಷತೆಗಳಿವೆ, ಅವುಗಳಲ್ಲಿ ವಿವಾಹದ ಸಂದರ್ಭದಲ್ಲಿ ಪುರೋಹಿತರು ಪಠಿಸುವ 'ಮಂತ್ರಬಿನ್ನಹ' ಎಂಬುದೊಂದು. ಅದೊಂದು ಸೊಗಸಾದ ವೈದಿಕ ರೀತಿಯ ಸ್ವಾಗತ ಭಾಷಣದಂತಿದೆ. ಹವ್ಯಕೇತರ ಸಂಪ್ರದಾಯದಲ್ಲಿ ಅದು ಕಂಡುಬರುವುದಿಲ್ಲ. ಇಲ್ಲಿ 'ಬಿನ್ನಹ' ಎಂಬುದು 'ವಿಜ್ಞಾಪನ' ಎಂಬುದರ ತದ್ಭವವಾಗಿದ್ದರೂ ಅದು ಸಂಸ್ಕೃತ ಸಮಾಸ ರೂಪ ತಾಳಿರುವುದು ಒಂದು ವೈಶಿಷ್ಟ್ಯವಾಗಿದೆ.

## ಆತಿಥ್ಯ ವೈಶಿಷ್ಟ್ಯ

'ಅತಿಥಿ ದೇವೋ ಭವ' ಎಂಬ ಗುರೂಪದೇಶ ವಾಕ್ಯವನ್ನು ಚರಿತಾರ್ಥಗೊಳಿಸು ವುದರಲ್ಲಿ ಹವಿಕರು ಹಿಂದೆ ಬೀಳುವವರಲ್ಲ. ಯಾರೇ ಆಗಿರಲಿ, ಯಾವ ಜಾತಿಯ ವೃತ್ತಿಯ ವ್ಯಕ್ತಿಯೇ ಇರಲಿ, ಮನೆಗೆ ಬಂದನೆಂದರೆ ಆತನನ್ನು ಬರಮಾಡಿಗೊಂಡು, ಕ್ಷೇಮ ಕುಶಲ ಪ್ರಶ್ನೆ ಕೇಳಿ, ಕುಳ್ಳಿರಲು ಹೇಳಿ, ಆಸರಿಗೆ (ಬಾಯಾರಿಕೆಗೆ) ಪಾನೀಯ ನೀಡುವುದು ಪದ್ಧತಿ. ಊಟದ ಹೊತ್ತಿಗೆ ಬಂದರೆ ಊಟ ಮಾಡಿಸದೆ ಬಿಡರು. ಬಂದ ಕಾರ್ಯವನ್ನು ಅವರೇ ಹೇಳುವಂತೆ ಅವಕಾಶ ಮಾಡುವರು. ಹೊರಡುವಂತೆ ಕಂಡರೆ, ನಿಲ್ಲಲು ಒತ್ತಾಯ ಮಾಡುವರು.ಆದರೂ ಹೊರಟರೆ, ಮತ್ತೆ ಬರಹೇಳುವರು. ಅತಿಥಿಯ ಇಷ್ಟಪೂರ್ತಿಯನ್ನು ಮಾಡಲು ಹಿಂದೆ ಮುಂದೆ ನೋಡರು. ಬಂದ ಅತಿಥಿ ಭಗ್ನಾಶೆಯಿಂದ ಹೋದರೆ, ತನಗೆ ಕೇಡೆಂಬ ಅರಿವು ಗೃಹಸ್ಥನಿಗಿರುತ್ತದೆ—

ಅತಿಥಿರ್ಯತ್ರ ಭಗ್ನಾಶೋ ಗೃಹಾತ್ ಪ್ರತಿನಿವರ್ತತೇ
ಸ ದತ್ವಾ ದುಷ್ಕೃತಂ ತಸ್ಯ ಪುಣ್ಯಮಾದಾಯ ಗಚ್ಛತಿ (ಪಂಚತಂತ್ರ)

ಅತಿಥಿಯು ಆಶಾಭಂಗಗೊಂಡು ಹಿಂದೆರಳಿದರೆ, ಆತನ ಪಾಪವೆಲ್ಲ ಈ ಗೃಹಸ್ಥನಿಗೆ ಬರುವುದಲ್ಲದೆ, ಇವನ ಪುಣ್ಯವನ್ನು ಅವನು ಒಯ್ಯುತ್ತಾನೆ— ಎಂಬ ನಂಬಿಕೆ ನಮ್ಮ ಪೂರ್ವಿಕರ ಸಂಸ್ಕೃತಿಗೆ ಸೇರಿದ್ದು. ಆದುದರಿಂದಲೇ ಅತಿಥಿ ತಿರಸ್ಕರಣೀಯನಲ್ಲ. ಮಾನ್ಯನು. ಅಷ್ಟೇ ಅಲ್ಲ, ಅತಿಥಿಯನ್ನು ಅಲಕ್ಷ್ಯಮಾಡುವವನ ಮನೆಗೆ ಹೋಗ ಬಾರದೆಂದು ನೀತಿ ಸಾರಿಹೇಳುತ್ತದೆ —

ನಾಭ್ಯುತ್ಥಾನಕ್ರಿಯಾ ಯತ್ರ ನಾಲಾಪಾ ಮಧುರಾಕ್ಷರಾಃ
ಗುಣದೋಷ ಕಥಾ ನೈವ ತತ್ರ ಹರ್ಮ್ಯೇ ನ ಗಮ್ಯತೇ

'ಯಾವ ಮನೆಗೆ ನಾವು ಹೋದಾಗ ಆ ಮನೆಯವರು ಇದಿರೆದ್ದು ಸ್ವಾಗತಿಸುವುದಿಲ್ಲವೋ ಇನಿದಾಗಿ ಮಾತಾಡುವುದಿಲ್ಲವೋ ಗುಣದೋಷಗಳ ವಿಚಾರವಾಗಿ ಹೇಳುವುದಿಲ್ಲವೋ ಅಂತಹ ಮನೆಗೆ ಹೋಗಬಾರದು'. ಇಂತಹ ವಿಷಯದಲ್ಲಿ ಮಹಾಭಾರತದ ಒಂದು ಆದರ್ಶ ಘಟನೆಯಿದೆ—

ಅತಿಶಯವಾದ ಬಡತನದಿಂದ ನೊಂದ ದ್ರೋಣನು ಮಗನಾದ ಅಶ್ವತ್ಥಾಮನನ್ನು ಕೂಡಿಕೊಂಡು ನಾಡು ನಾಡನ್ನು ತೊಳಲಿ, ಕೊಡುಗೈಯ ಪರಶುರಾಮನಲ್ಲಿಗೆ ಹೋದನು. ದ್ರವ್ಯಾರ್ಥಿಯಾದ ಅತಿಥಿಯಾಗಿ ಬಂದ ದ್ರೋಣನನ್ನು ಕಂಡು ಪರಶುರಾಮನು ಕನಕ ಪಾತ್ರಕ್ಕೆ ಉಪಾಯವಿಲ್ಲದೆ ಮೃತ್ಪಾತ್ರದಲ್ಲಿಯೆ ಅರ್ಘ್ಯಪಾದ್ಯಗಳನ್ನಿತ್ತನು. ಕೊಡಲು ಅವನಲ್ಲಿ ಇನ್ನೇನಿದೆ ? —

ಒಡಮೆಯನರ್ಥಿಗಿತ್ತೆನವನೀತಳಮಂ ಗುರುಗಿತ್ತೆನೀಗಳೊಂ
ದಡಕೆಯುಮಿಲ್ಲ, ಕೈಯೊಳಿರೆದಂ ಶ್ರುತಪಾರಗನೆಂತು ಸಂತಸಂ
ಬಡಿಸುವೆಂ....[15]

ಪರಶುರಾಮನಿಗೆ ಮನಸ್ಸಿನಲ್ಲಾದ ತೊಳಲಾಟ ಅಷ್ಟಿಷ್ಟಲ್ಲ. 'ಇದ್ದ ಒಡವೆಯೆಲ್ಲ ಬೇಡುವವರಿಗೆ ಕೊಟ್ಟು ಮುಗಿದಿದೆ. ಗೆದ್ದು ಪಡೆದ ಭೂಮಿಯನ್ನೆಲ್ಲ ಕಾಶ್ಯಪಾದಿ ಬುಧರಿಗೆ ಕೊಟ್ಟಾಗಿದೆ. ಒಂದು ಅಡಕೆಯೂ ಈಗ ಇಲ್ಲವಾಗಿದೆ. ಕೈನೀಡಿ ಯಾಚಿಸುತ್ತಿರುವವನು ವೇದ ಪಾರಂಗತನಾಗಿದ್ದು ಸುಪಾತ್ರನೇ ಸರಿ. ಇವನನ್ನು ಹೇಗೆ ಸಂತೋಷಪಡಿಸಲಿ ?—ಎಂದುಕೊಂಡು ಪರಶುರಾಮನು ಅತಿಥಿಯೂ ಯಾಚಕನೂ ಆದ ದ್ರೋಣನಿಗೆ ಧನುರ್ಬಾಣಗಳನ್ನು ಕೊಟ್ಟನಂತೆ. ದ್ರೋಣನಿಗೆ ಅದರಿಂದ ತೃಪ್ತಿಯಾಯಿತು. ಯೋಗ್ಯ ಪಾತ್ರನಿಗೆ ಆತನು ಬಯಸಿದ್ದನ್ನೆ ಕೊಟ್ಟೆನೆಂದು ಪರಶುರಾಮನಿಗೆ ಜೀವನ ಸಾರ್ಥಕ್ಯದ ಭಾವನೆಯಾಯಿತು. ಇಂತಹ ಸಾಂಸ್ಕೃತಿಕ ಪರಂಪರೆಯನ್ನು ಕಾಪಾಡಿಕೊಂಡಿರುವ ಹವಿಕರ ಆತಿಥ್ಯ ಕ್ರಮವು ವಿಶಿಷ್ಟವಾದುದು.

ಉತ್ತರ ಕನ್ನಡ ಶಿವಮೊಗ್ಗ ಜಿಲ್ಲೆಗಳ ಹವಿಕರ ಮನೆಗಳ ಚಾವಡಿಯಲ್ಲಿ ಚಾಪೆ, ಜಂಬುಕಾನ, ಕಂಬಳಿಗಳನ್ನು ಹಾಸಿ, ದಿಂಬುಗಳನ್ನು ಇಟ್ಟಿರುತ್ತಾರೆ. ಅತಿಥಿಯೋ ನಂಟರಿಷ್ಟರೋ ಬಂದಾಗ, ಸಂತೋಷದಿಂದ ಇದಿರೆದ್ದು 'ಬನ್ನಿ' ಅಥವಾ 'ಬಂದಿರೊ' ಎನ್ನುತ್ತಾರೆ. ಇದು ಆದರದಿಂದ ಮಾತಾಡಿಸುವ ವಿಧಾನ. ಕುಳಿತುಕೊಳ್ಳಲು ಹೇಳುತ್ತಾರೆ. ಕುಳಿತುಕೊಳ್ಳಲು ಮೊದಲೇ ಹಾಸಿರದಿದ್ದರೆ ಹೊಸತಾಗಿ ಚಾಪೆ ಬಿಡಿಸಿ ಜಂಬುಕಾನ, ಕಂಬಳಿ ಹಾಸುತ್ತಾರೆ. ಮನೆಯ ಯಜಮಾನಿತಿ ಒಂದು ಅಥವಾ ಎರಡು ತಂಬಿಗೆಗಳಲ್ಲಿ ನೀರನ್ನು (ಅರ್ಘ್ಯಪಾದ್ಯಗಳಿಗಾಗಿ) ತಂದಿಟ್ಟು ಮಂಡಿಯೂರಿ ನಮಿಸುತ್ತಾಳೆ. 'ಕಾಲು ಮೊಗಗಳನ್ನು ತೊಳೆದುಕೊಳ್ಳಿ' ಎಂಬುದೇ ಈ ನಡೆವಳಿಯ ಅರ್ಥಸೂಚಿ. ಕಾಲ್ತೊಳೆದು ಬಂದನಂತರ ಆಸರಿಗೆ (ಬಾಯಾರಿಕೆಯನ್ನು ಪರಿಹರಿಸುವ ಪಾನೀಯ) ಕೊಡಲಾಗುತ್ತದೆ. ಸ್ನಾನಕ್ಕೆ ಹೋಗಲು ಹೇಳುವ ವೇಳೆ ಎರಡು ಬೈರ್ವಾಸಗಳನ್ನು ಕೊಡಲಾಗುತ್ತದೆ. ಸ್ನಾನದ ಅನಂತರ ಸಂಧ್ಯಾವಂದನೆಗೆ ಆಸ್ಪದ ಮಾಡಲಾಗುತ್ತದೆ. ಅತಿಥಿಯೊಂದಿಗೆ ಕುಳಿತು ಸಹಭೋಜನ ನಡೆಯುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ಹವಿಕರ ಆತಿಥ್ಯಕ್ರಮದಲ್ಲಿ ಒಂದೆರಡು ಕಡೆ ತುಸು ವ್ಯತ್ಯಾಸವಿದೆ. ಬಂದವರ ಮುಖದರ್ಶನವಾದೊಡನೆ, 'ಏನು' ಎಂದು ಕೇಳುವುದು ಅತಿಥಿ ಆದರದ ಮೊದಲನೆಯ ಕ್ರಮ. ಹಾಗೆ ಕೇಳಲಿಲ್ಲವಾದರೆ ತಪ್ಪಾಗುವುದಲ್ಲದೆ, ಬಂದವರಿಗೆ ಅಪಮಾನವೆನಿಸುವುದು ; ಅವರಿಂದ ದೋಷಾರೋಪಣೆಗೆ ಕಾರಣವಾಗುವುದು. ಅತಿಥಿದೇವನ ಕೋಪಕ್ಕೆ ಎಡೆಯಾಗುವುದು. 'ಏನು' ಕೇಳಿದ ಅನಂತರ, ಅರ್ಘ್ಯ ಪಾದ್ಯಗಳಿಗಾಗಿ ತಂಬಿಗೆಗಳಲ್ಲಿ ನೀರನ್ನು ತಂದಿಡಲಾಗುವುದು. ಆಸರಿಗೆ ಬೆಲ್ಲ ನೀರು, ತಂದಿಡಲಾಗುವುದು. ಎಳನೀರನ್ನು (ಬೊಂಡವನ್ನು) ತಂದುಕೊಡುವುದೂ ವಿರಳವಾಗಿ ಇದ್ದದ್ದೆ. ಚಹಾ ಕಾಫಿಗಳ ಬಳಕೆ ಈಚೆಯದು. ವಿವಾಹಾದಿ ಸಮಾರಂಭಗಳಲ್ಲಿ ಯಜಮಾನನು ಕ್ರಿಯೆಗಳನ್ನು ಸಾಂಗವಾಗಿ ಮುಗಿಸಿದ ಅನಂತರ, ಬ್ರಹ್ಮಸಭೆ ಸಮಸ್ತರೂ ಮಡಿ ಹಚ್ಚಿ ಕುಳಿತು ಭೋಜನ ಸ್ವೀಕರಿಸುವಂತೆ ಪ್ರಾರ್ಥಿಸಿ, ಎರಡು ತಂಬಿಗೆ ತುಂಬ ನೀರನ್ನು ಸಭೆಯ ಮುಂದಿಟ್ಟು ನಮಸ್ಕರಿಸುತ್ತಾನೆ. ಕುಳಿತವರೆಲ್ಲ ಎದ್ದು ನಿಂತೊಡನೆ ಚಾಪೆ ಜಂಬುಕಾನಗಳನ್ನು ಮಡಚಿ ತೆಗೆದು, ನೆಲ ಗುಡಿಸಿದಂತೆಲ್ಲ ಹವಿಕರು ತಾವಾಗಿಯೇ ಹಂತಿ ಹಿಡಿದು ಕುಳಿತುಕೊಳ್ಳುವರು. ಕುಡಿ ಬಾಳೆಲೆ ಕೊಡಲಾಗುವುದು. ಊಟಕ್ಕೆ ಕುಡಿ ಬಾಳೆಲೆ ಕೊಡುವುದು ಕೂಡ ಅತಿಥಿ ಗೌರವದ ಸಂಕೇತ. ಅಭಿಘಾರವಾದ ಅನಂತರ ಶಾಕ ಪಾಕ ಅನ್ನಗಳನ್ನು ಬಡಿಸಿದ ಮೇಲೆ ಮತ್ತು ಮನೆಯ ಯಜಮಾನನು ಎಲ್ಲರಿಗೂ ಹಸ್ತೋದಕ ನೀಡಿದ ಮೇಲೆಯೇ ಉಣಲು ಪ್ರಾರಂಭವಾಗುವುದು. ಕೊನೆಗೆ ಎಲ್ಲರೂ ಏಳುವುದೂ ಒಟ್ಟಿಗೆ. ಈ ಶಿಷ್ಟಾಚಾರವನ್ನು ಕಡೆಗಣಿಸಿರುವ ಇಂದಿನವರು—ಮುಖ್ಯವಾಗಿ ನಗರವಾಸಿಗಳು, ಎಲೆಗೆ ಬಡಿಸಿದೊಡನೆಯೇ ಪಶುಪ್ರಾಯರಾಗಿ ಮುಕ್ಕಲು ತೊಡಗುತ್ತಾರೆ ! ಕುಳಿತ ಎಲ್ಲರ ಊಟ

ಮುಗಿಯುವುದರೊಳಗಾಗಿ ಎಂಜಲಲೆ ಬಿಟ್ಟೆದ್ದು ನಡೆಯುತ್ತಾರೆ. ಆದರೆ ಊಟ ದಲ್ಲಿಯೂ ಅನುಶಾಸನವಿರುವುದನ್ನು ಸಂಪ್ರದಾಯ ಬದ್ಧ ಭೋಜನದಲ್ಲಿ ಕಾಣಬಹುದು.

ಹವಿಕರ ಸಮಾರಂಭದ ಭೋಜನಗಳಲ್ಲಿ ಬಡಿಸುವ ಅಚ್ಚಗನ್ನಡದ ಭೋಜ್ಯ ವಸ್ತುಗಳು ಅನೇಕ. ಅವನ್ನು ಬಡಿಸುವುದಕ್ಕೂ ನಿಶ್ಚಿತ ಕ್ರಮವುಂಟು. ಊಟ ಪ್ರಾರಂಭವಾದೊಡನೆ ಅನುಕ್ರಮವಾಗಿ ಸಾರು, ಕೊದಿಲು (ಹುಳಿ, ಮುದ್ದೆಹುಳಿ), ಅನಂತರ ಪಾಯಸಗಳು ಹಾಗೂ ಸಿಹಿ ಪದಾರ್ಥಗಳು, ಆ ಮೇಲೆ ಮೇಲೋಗರ (ಕಾಯಿ ಹುಳಿ), ಕೊನೆಗೆ ಮೊಸರು ಅಥವಾ ಮಜ್ಜಿಗೆ. ಈ ಅನುಕ್ರಮವು ವೈದ್ಯಕೀಯ ವಾಗಿಯೂ ಸರಿಯಾದುದೆಂದು ಅಭಿಪ್ರಾಯಪಡುತ್ತಾರೆ. ಎರಡು ಬಗೆಯ ಪಾಯಸ ವನ್ನು ಉಣ್ಣುವಷ್ಟು ಬಡಿಸದಿದ್ದರೆ ಹವಿಕರ ಶುಭ ಸಮಾರಂಭ ತೃಪ್ತಿಕರವೆನಿಸದು. ಸಮಾರಂಭದ ಭೋಜನ ಸಭೆಯಲ್ಲಿ ಚೋರ್ಣಿಕೆ-ವೃತ್ತ-ಗದ್ಯಗಳನ್ನು ಹೇಳುವುದು, 'ಹರಹರ ಮಹಾದೇವ' ಘೋಷಣೆ — ಇವು ಇದ್ದೇ ಇರುತ್ತವೆ. ಹವ್ಯಕೇತರರಲ್ಲಿ ಮೊದಲು ಹುಳಿ, ಅನಂತರ ಸಾರು ಇರುತ್ತದೆ. ಮೇಲೋಗರ (ಮಜ್ಜಿಗೆ ಹುಳಿ) ಇಲ್ಲ ದಿರುವ ಭೋಜನಗಳೆ ಅಧಿಕ. ಪಾಯಸ ಬಡಿಸುವ ಪ್ರಮಾಣವೆಂದರೆ, ಒಮ್ಮೆಗೇ ಎರಡು ಬೆರಳಿನಲ್ಲಿ ನೆಕ್ಕುವಷ್ಟು ಮಾತ್ರ! ಹೀಗೆನ್ನುವಾಗ ಓದುಗರು—ಇದೇನೂ ನಿಂದಿಸುವ ಸಂಗತಿಯಲ್ಲ ; ವಾಸ್ತವಿಕವಾದ ಸಂಗತಿಯ ನಿರೂಪಣೆ ಮಾತ್ರವೆಂದರಿಯ ಬೇಕು.

## ವಿವಾಹ ವೈಶಿಷ್ಟ್ಯ

ವರದಕ್ಷಿಣೆಯ ಪಿಡುಗೆಂಬುದು ಹವ್ಯಕರಲ್ಲಿ ಇಲ್ಲವೇ ಇಲ್ಲ. ವರಾನ್ವೇಷಣೆಯೂ ಬಲು ಕಡಮೆ. ಅದು ಈಗೀಗ ಕಾಲಪ್ರಭಾವದಿಂದ ಕಾಲಿಡತೊಡಗಿದೆಯಷ್ಟೆ. 'ನ ರತ್ನಮನ್ವಿಷ್ಯತಿ ಮೃಗ್ಯತೇ ಹಿ ತತ್'16 ಎಂಬ ಕಾಳಿದಾಸ ಸೂಕ್ತಿಯಂತೆ ರತ್ನವು ತನ್ನನ್ನು ಸ್ವೀಕರಿಸುವವನನ್ನು ಅರಸುವುದಿಲ್ಲ. ಅದೇ ಹುಡುಕಲ್ಪಡುತ್ತದೆ. ಕನ್ಯಾ ರತ್ನವೂ ಹಾಗೆಯೇ. ವರನ ಕಡೆಯವರೇ ಕನ್ಯಾನ್ವೇಷಣೆ ಮಾಡುತ್ತಾರೆ ; ಹೆಣ್ಣನ್ನು ಕೇಳುತ್ತಾರೆ. ಹವ್ಯಕರ ಶೋಭಾನೆಗಳಲ್ಲಿ ಹೆಣ್ಣನ್ನು ಕೇಳುವ ಹಾಡುಗಳಿವೆಯಲ್ಲದೆ ಗಂಡನ್ನು ಕೇಳುವ ಹಾಡುಗಳಿಲ್ಲ. ವರನ ಕಡೆಯವರು ವರದಕ್ಷಿಣೆ ಅಷ್ಟು ಕೊಡಿ, ಇಷ್ಟು ಕೊಡಿ ಎಂದು ವಿವಾಹ ಪೂರ್ವದ ಶರ್ತವೊಡ್ಡುವುದಿಲ್ಲ. ಹಾಗೇನಾದರೂ ಕೇಳುವುದು ಆತ್ಮಗೌರವಕ್ಕೆ ಹಾನಿಯೆಂದು ಹವ್ಯಕ ಮಹಾನುಭಾವರು ತಿಳಿಯುತ್ತಾರೆ. ಆದರೆ ಕನ್ಯೆಯ ತಂದೆ ಸ್ವೇಚ್ಛೆಯಿಂದಲೇ ಬಳಿವಳಿಗಳನ್ನು ಧಾರಾಳವಾಗಿ ಕೊಟ್ಟ ಉದಾಹರಣೆಗಳು ಶೋಭಾನೆಗಳಲ್ಲಿವೆ. ಅಂತೂ ಹವ್ಯಕರಲ್ಲಿ ಈ ವಿಷಯದಲ್ಲಿ ಶೋಷಣೆ ಎಂಬುದಿಲ್ಲ. ಪ್ರಾಚೀನ ಕಾಲದಲ್ಲಿ ಅಂತೂ ಗಂಡಿನ ಕಡೆಯವರೇ ಹೆಣ್ಣು ಕೇಳಳು ಹೋಗುತ್ತಿದ್ದುದು ಸ್ಪಷ್ಟ. ಅಂತಹ ಸಂದರ್ಭದಲ್ಲಿ ಕನ್ಯೆಯ ಪಿತನಿಗೆ

ಶುಲ್ಕವನ್ನು ಕೊಡುವ ಪದ್ಧತಿಯೂ ವಿರಳವಾಗಿ ಇದ್ದಿರಬೇಕೆನಿಸುತ್ತದೆ. ವರನ ಕಡೆಯುವರು ಶ್ರೀಮಂತರಾಗಿ, ವಧು ಅತಿಶಯ ಸುಂದರಿ ಗುಣಸಂಪನ್ನೆಯಾಗಿ, ವಧುವಿನ ತಂದೆ ಬಡವನಾಗಿ ಇದ್ದ ಸಂದರ್ಭದಲ್ಲಿ ವರನ ಕಡೆಯುವರಿಂದ ಧನಸಹಾಯವಾದುದು ಇರಬಹುದು. ಆದರೆ ನೀತಿಶಾಸ್ತ್ರವು ಕನ್ಯಾಶುಲ್ಕವನ್ನು ಖಂಡಿಸುತ್ತದೆ —

ಶುಲ್ಕೇನ ಯೇ ಪ್ರಯಚ್ಛಂತಿ ಸ್ವಸುತಾಂ ಲೋಭಮೋಹಿತಾಃ
ಪತಂತಿ ನರಕೇ ಘೋರೇ ಘ್ನಂತಿ ಚಾಸಪ್ತಮಾತ್ ಕುಲಂ

ಅಂದರೆ ಲೋಭ ಮೋಹಿತರಾಗಿ (ಹಣದ ಆಸೆಯಿಂದ) ಕನ್ಯಾಶುಲ್ಕವನ್ನು ಸ್ವೀಕರಿಸಿ ಯಾರು ಮಗಳನ್ನು ಮದುವೆ ಮಾಡಿಕೊಡುತ್ತಾರೋ ಅವರು ಘೋರ ನರಕಕ್ಕೆ ಬೀಳುವರಲ್ಲದೆ ಏಳು ತಲೆಯ ವರೆಗೆ ಕುಲನಾಶಕರಾಗುತ್ತಾರೆ. ಇದರಿಂದ ಕನ್ಯಾಶುಲ್ಕ ಸ್ವೀಕಾರ ಅದೆಷ್ಟು ನಿಂದ್ಯವಾಗಿತ್ತೆಂದು ಗೊತ್ತಾಗುತ್ತದೆ. ಆದರೆ, ಸ್ತ್ರೀಯರಿಗೆ ಪುರುಷಸಮಾನವಾದ ಸ್ಥಾನಮಾನಗಳಿಗೆ ಹೋರಾಟ ನಡೆಯುತ್ತಿರುವ ಆಧುನಿಕ ಕಾಲದಲ್ಲಿ, ವರದಕ್ಷಿಣೆಯ ಮಹಾಭಾರದ ಅನೀತಿ ವಧೂವರರನ್ನು ಮಾತ್ರವಲ್ಲದೆ, ಉಭಯ ಕುಲಗಳನ್ನೂ ಮುಳುಗಿಸುತ್ತಿರುವುದು ಕಂಡುಬರುತ್ತದೆ. ಇದರಿಂದಲೇ ಕನ್ಯೆಯ ಹಾಗೂ ಮಹಿಳೆಯರ ಘನತೆ ಇಳಿಯುವಂತಾಗಿದೆ. ಹವಿಕರಲ್ಲಿ ಈ ಬಗೆಯ ಕಳಂಕ ಇನ್ನೂ ಒಳಹೊಗದಿರುವುದೊಂದು ವಿಶೇಷ. ಹವಿಕರ ವಿವಾಹವೆಂಬುದು ಸಂಭ್ರಮಯುಕ್ತವೂ ಹೌದು, ಸರಳವೂ ಹೌದು. ಆದರೆ ಶಾಸ್ತ್ರಬದ್ಧ. ಅದನ್ನು ಮೀರಿ ನಡೆಸುವ ವಿವಾಹಕ್ಕೆ ಸಮಾಜದ ಪುರಸ್ಕಾರವಿಲ್ಲ. ವಿವಾಹಕ್ಕೆ ಮೊದಲು, ವಧೂವರರು ಜೊತೆಯಾಗುವುದು, ಒಟ್ಟಿಗೆ ಅಲ್ಲಲ್ಲಿಗೆ ಹೋಗಿ ಸ್ನೇಹವೃದ್ಧಿಗೆ ಆಸ್ಪದ ಕೊಡುವುದು ಹವಿಕರಿಗೆ ಹೇಯವಾದುದು. ಇತರರಲ್ಲಿ ಇದು ಆಧುನಿಕತೆಯ ಕುರುಹು, ಪ್ರಗತಿಯ ಸಂಕೇತ. ಆದರೆ ಹವ್ಯಕರ ದೃಷ್ಟಿಯಿಂದ ಅಶಿಷ್ಟ ವ್ಯವಹಾರ.

## ಹವಿಕರ ಭಾಷೆ

ಹವಿಕರು ಅಚ್ಚಗನ್ನಡಿಗರು. ಇವರು ಮಾತಾಡುವ ಕನ್ನಡವು ಪ್ರಚಲಿತವಾಗಿರುವ ಹೊಸಗನ್ನಡಕ್ಕಿಂತ ಬೇರೆಯಾಗಿದ್ದು, ಇದು ಹಳಗನ್ನಡದ ಹಾಗೂ ಪೂರ್ವದ ಹಳಗನ್ನಡದ ಹಲವು ಛಾಯೆಗಳನ್ನು ಒಳಗೊಂಡಿದೆ. ಹವಿಕರ ಕನ್ನಡವನ್ನು ಒಂದು ಉಪಭಾಷೆಯೆಂದು ಕರೆಯಬಹುದು. ಆದರೆ ಇದು ಏಕರೂಪವಾಗಿಲ್ಲ, ಪ್ರಾದೇಶಿಕ ವ್ಯತ್ಯಾಸಗಳಿಂದ ಕೂಡಿದೆ. ಶಿವಮೊಗ್ಗ ಉತ್ತರ ಕನ್ನಡ ಜಿಲ್ಲೆಗಳ ಹವಿಕ ಕನ್ನಡದಲ್ಲಿ ಹೋಲಿಕೆ ಹೆಚ್ಚು. ಆದರೂ ಸೀಮೆ ಸೀಮೆಗೂ ಕೆಲ ಕೆಲವು ವ್ಯತ್ಯಾಸಗಳಿವೆ. ದಕ್ಷಿಣ ಕನ್ನಡ ಜಿಲ್ಲೆಯ ಹವಿಕರ ಕನ್ನಡದಲ್ಲಿಯೂ ಬೇರೆ ಬೇರೆ ಸೀಮೆಗೆ ಅನುಗುಣವಾಗಿ ಒಳಮಾರ್ಪಾಟುಗಳಿವೆ. ಉತ್ತರ ಕನ್ನಡ ಜಿಲ್ಲೆಯ ಹವಿಕರ ಉಪಭಾಷೆಯನ್ನು ಕುರಿತು, ಘನ ಪ್ರಬಂಧವನ್ನು ರಚಿಸಿ, ಶ್ರೀ ಕೆ. ಜಿ. ಶಾಸ್ತ್ರೀ ಅವರು ಪಿಎಚ್.ಡಿ.

ಪದವಿ ಪಡೆದಿದ್ದಾರೆ. ಈ ಸಮಗ್ರ ಹವ್ಯಕ ಭಾಷೆಯಲ್ಲಿ ದೇಶೀ ಶಬ್ದಗಳು ವಿಪುಲವಾಗಿದ್ದು, ಪ್ರಚಲಿತ ಕನ್ನಡದ ಶಬ್ದಸಂಪತ್ತಿಗೆ ಪೋಷಕವಾಗುವಂತಿದೆ. ಇದನ್ನು ಲಕ್ಷಿಸಿದ ಪರಿಣಾಮವಾಗಿ ಒಂದೆರಡು ಹವ್ಯಕ ಶಬ್ದಕೋಶಗಳು ರಚಿತವಾಗಿ ಪ್ರಕಟಿಗೊಂಡಿವೆ. ಅವುಗಳಲ್ಲಿ 'ಹವ್ಯಕ ಪದ ಸಂಚಯ'[17] ಎಂಬುದು ಎಲ್ಲ ಕಡೆಗಳ ಹವಿಕರ ಆಡುಮಾತುಗಳಿಂದ ಸಂಗ್ರಹಿಸಲಾದ ಶಬ್ದಗಳ ಅರ್ಥಕೋಶ. ಇದು ಮೊತ್ತಮೊದಲು 'ಅನನ್ಯ ದೇಶೀ ಕೋಶ' ಎಂಬ ಹೆಸರಿನಿಂದ ಪ್ರಬುದ್ಧ ಕರ್ಣಾಟಕದಲ್ಲಿ (ಸಂಪುಟ 46, ಸಂಚಿಕೆ 2 ಮತ್ತು 3) ಹೊರಬಂತು. ಮತ್ತೆ 1972ರಲ್ಲಿ 'ಹವ್ಯಕ ಪದ ಸಂಚಯ'ವಾಗಿ ಸಟೀಕವಾಗಿ ಪ್ರಕಟಗೊಂಡು ಇದೀಗ 1982ರಲ್ಲಿ ದ್ವಿತೀಯ ಮುದ್ರಣವಾಗಿ ಬಂದಿದೆ. ಇದು ಕಂದಪದ್ಯದಲ್ಲಿ ಕಕಾರಾಂತ, ಗಕಾರಾಂತ ಮುಂತಾಗಿ ಶಬ್ದಗಳ ಅಂತ್ಯಾಕ್ಷರಲಕ್ಷಿತವಾಗಿ ರಚಿತವಾದುದು. ಇದರಲ್ಲಿ 786 ಪ್ರಾತಿಪದಿಕ ಅವ್ಯಯಾದಿಗಳೂ 198 ಧಾತುರೂಪಗಳೂ ಸಮಾವೇಶವಾಗಿವೆ. ಒಂದು ಉದಾಹರಣೆ—

ಬಾವಿಮಿಣಿಯೆಂದು ಪೇಳ್ವರ್
ಬಾವಿಯ ಹಗ್ಗಕ್ಕೆ, ಬತ್ತಿ ನೆಣೆಯೆಂದೆನಿಕುಂ
ಬೇವುದ ತೊಳಸುವ ಸಾಧನ
ಮಾವುದದೇ ದಾಣೆ, ಸೀಂತ್ರಿ ಕೆಣಿಯೆನೆ ತಂತ್ರಂ (ಪದ್ಯ 86)

(ಬಾವಿ ಮಿಣಿ—ಬಾವಿಯ ಹಗ್ಗ. ನೆಣೆ—ದೀಪದ ಬತ್ತಿ. ದಾಣೆ—ದೊಡ್ಡ ಪಾತ್ರೆಯಲ್ಲಿ ಅನ್ನ ಮುಂತಾದವು ಬೇಯುವಾಗ ತೊಳಸುವ ಸಾಧನ. ಸೀಂತ್ರಿ, ಕೆಣಿ (2)—ತಂತ್ರ.)

ಅನಂತರ ಪ್ರಕಟವಾದುದು ಹವ್ಯಕ-ಇಂಗ್ಲಿಷ್ ನಿಘಂಟು.[18] ಇದು ಕಿಟ್ಟೆಲರ ಕನ್ನಡ-ಇಂಗ್ಲಿಷ್ ನಿಘಂಟಿನ ಮಾದರಿಯಲ್ಲಿದೆ. ಕನ್ನಡದ ಅಕ್ಷರದಲ್ಲಿ ಅಕಾರಾದಿಯಾಗಿ ಶಬ್ದಗಳಿದ್ದು, ಅವಕ್ಕೆ ಇಂಗ್ಲಿಷಿನಲ್ಲಿ (ಇಂಗ್ಲಿಷ್ ಅಕ್ಷರದಲ್ಲಿ) ಉಚ್ಚಾರಣೆಯೊಂದಿಗೆ ಅರ್ಥವನ್ನು ಕೊಡಲಾಗಿದೆ. ಹವ್ಯಕರ ಭಾಷೆ ದೇಶೀ ಶಬ್ದ ಸಂಪದ್ಭರಿತವಾಗಿದೆಯೆಂಬುದಕ್ಕೆ ಈ ಎರಡು ಶಬ್ದಕೋಶಗಳೇ ಸಾಕ್ಷಿ.

ಉತ್ತರ ಕನ್ನಡದ ಹವ್ಯಕ ಭಾಷೆಯಲ್ಲಿಯ ಶಬ್ದಗಳಲ್ಲಿ ಜಾನಪದೀಯ ಲಕ್ಷಣ ಅಧಿಕವಾಗಿದೆ. ಅದರಂತೆ ಎಷ್ಟೋ ಶಬ್ದಗಳ ಸ್ವರಕ್ಕೆ ಯ, ವ—ವ್ಯಂಜನಗಳು ಸೇರಿಕೊಳ್ಳುತ್ತವೆ. ಆದರೆ ದಕ್ಷಿಣ ಕನ್ನಡದಲ್ಲಿ ಹಾಗಿಲ್ಲ. ಉದಾಹರಣೆ—

(ಉ.ಕ.) ತ್ವಾಟ, ಯಂಗಾ, ವಳ, ಯನಗೆ, ವುಪ್ಪರಿಗೆ, ವೋಡು
(ದ.ಕ.) ತೋಟ, ಎಂಗೊ, ಒಳ, ಎನಗೆ, ಉಪ್ಪರಿಗೆ, ಓಡು

ಜಿಲ್ಲೆಗಳೊಳಗಣ ಹವಿಕರ ನುಡಿಯಲ್ಲಿ ಕಾಣುವ ಉಚ್ಚಾರಣ ಭೇದಗಳನ್ನು ಬೇರೆ ಬೇರೆ

ಯಾಗಿ ಇಲ್ಲಿ ನಿರೂಪಿಸಲು ಸಾಧ್ಯವಿಲ್ಲ. ಪ್ರಕೃತ ದಕ್ಷಿಣ ಕನ್ನಡ ಜಿಲ್ಲೆಯ ಹವಿಕರ ಭಾಷೆಯ ಕೆಲವು ಲಾಕ್ಷಣಿಕ ವೈಶಿಷ್ಟ್ಯವನ್ನು ನಿರೂಪಿಸಬಹುದು—

1. ಭಾಷಾ ವಿಜ್ಞಾನಿಗಳು ದ್ರಾವಿಡ ಭಾಷೆಗಳ ವಿಶೇಷ ಲಕ್ಷಣವನ್ನು ಹೇಳುತ್ತ ಇದರಲ್ಲಿ ಉತ್ತಮ ಪುರುಷ ಸರ್ವನಾಮ ಬಹುವಚನದಲ್ಲಿ ಎರಡು ರೂಪಗಳಿರುತ್ತವೆ—ಎಂದು ತಿಳಿಸಿದ್ದಾರೆ. ಅವುಗಳಲ್ಲಿ ಮಧ್ಯಮ ಪುರುಷ ಸೇರಿರುವುದು (ಸಮಾವೇಶಕ) ಒಂದು, ಮತ್ತು ಸೇರದೆ ಇರುವುದು (ಅಸಮಾವೇಶಕ) ಇನ್ನೊಂದು. ನಮ್ಮ ಹಳಗನ್ನಡದಲ್ಲಾಗಲಿ, ಹೊಸಗನ್ನಡದಲ್ಲಾಗಲಿ ಈ ಎರಡು ಬಗೆಯ ಸರ್ವನಾಮವಿಲ್ಲ. (ತುಳು ಭಾಷೆಯಲ್ಲಿದೆ.) ಹಳಗನ್ನಡದಲ್ಲಿ ಆಂ, ಹೊಸಗನ್ನಡದಲ್ಲಿ ನಾವು—ಇವೇ ಉತ್ತಮ ಪುರುಷ ಬಹುವಚನದ ಸರ್ವನಾಮಗಳು.

ಉದಾಹರಣೆ—

ನಾವು ಹೋಪೊ (ಮಧ್ಯಮ ಪುರುಷ ಸೇರಿ. ಇಲ್ಲಿ 'ಪೊ' ಎಂಬುದಕ್ಕೆ ಅನುನಾಸಿಕದ ಉಚ್ಚಾರಣೆಯಿದೆ). ಹೊಸಗನ್ನಡದಲ್ಲಿ 'ನಾವು ಹೋಗುವ' ಎಂದರ್ಥ. ಹವಿಕದಲ್ಲಿ ಮಧ್ಯಮಪುರುಷ ಸೇರದೆ—ಎಂಗೊ ಹೋವುತ್ತೆಯೊ (ದಪ್ಪ ಅಕ್ಷರಗಳಿಗೆ ಅನುನಾಸಿಕೋಚ್ಚಾರಣೆ).

ಹೀಗೆ ಇಲ್ಲಿ 'ಎಂಗೊ' ಎಂಬುದಕ್ಕೆ ನಾವು ಎಂದೇ ಅರ್ಥವಾದರೂ ಇದರಲ್ಲಿ ನೀನು ಅಥವಾ ನೀವು ಎಂಬುದು ಸೇರುವುದಿಲ್ಲ.

2. ಸ್ತ್ರೀಲಿಂಗದ ಏಕವಚನಕ್ಕೆ ನಪುಂಸಕ ಲಿಂಗದ ಏಕವಚನ ರೂಪವಿದೆ—ಅಕ್ಕ ಬಂತು, ಅಬ್ಬೆ ಮನೆಲಿ ಇದ್ದು, ಹೆಂಡತಿ ಅಡಿಗೆ ಮಾಡುತ್ತು. (ಅಕ್ಕ ಬಂದಳು, ತಾಯಿ ಮನೆಯಲ್ಲಿದ್ದಾಳೆ, ಹೆಂಡತಿ ಅಡಿಗೆ ಮಾಡುತ್ತಾಳೆ—ಎಂದು ಇವಕ್ಕೆ ಅರ್ಥ.)

ಲಕ್ಷ್ಮಿ, ಸರಸ್ವತಿ ಮುಂತಾದ ಸ್ತ್ರೀದೇವತೆಗಳಿಗೆ ಕನ್ನಡ ವ್ಯಾಕರಣ ಶಾಸ್ತ್ರದ ಪ್ರಕಾರ ನಪುಂಸಕ ಲಿಂಗದ ಪ್ರಯೋಗವಿದೆ. ಹವಿಕರಲ್ಲಿ ಇದು ಈಗಲೂ ಉಳಿದುಕೊಂಡಿದೆ. ತೆಲುಗಿನಲ್ಲಿಯೂ ಸ್ತ್ರೀವಾಚಕ ಶಬ್ದಗಳಿಗೆ ನಪುಂಸಕಲಿಂಗದ ಪ್ರಯೋಗವಿದೆ. ಸ್ತ್ರೀವಾಚಕ ಕೃಲ್ಲಿಂಗದ ಏಕವಚನಕ್ಕೆ ಸ್ತ್ರೀಪ್ರತ್ಯಯವಿದೆ—ಹೋದೋಳು (ಹೋದವಳು), ಬಂದೋಳು (ಬಂದವಳು)—ಇತ್ಯಾದಿ. ಆದರೆ, ಇವೇ ಕೃಲ್ಲಿಂಗಗಳ ಬಹುವಚನವು ನಪುಂಸಕ ಲಿಂಗದ ಬಹುವಚನವೇ ಆಗಿದೆ—ಉದಾಹರಣೆ: ಹೋದೋವು, ಬಂದೋವು. ಪುಲ್ಲಿಂಗದಲ್ಲಾದರೆ ಹೋದೋರು (ಹೋದವರು), ಬಂದೋರು (ಬಂದವರು) ಎಂಬುದಾಗಿ ಪುಲ್ಲಿಂಗ ರೂಪಗಳೇ ಇವೆ.

3. ಅಕಾರಾಂತ ಸ್ತ್ರೀಲಿಂಗೈಕವಚನದಲ್ಲಿ ನಾಮ ವಿಭಕ್ತಿಗಳು ಪುಲ್ಲಿಂಗದಂತೆಯೇ

ಇವೆ—ಉದಾಹರಣೆ : ಕಮಲ, ಕಮಲನ, ಕಮಲಂದ, ಕಮಲಂಗೆ, ಕಮಲನ, ಕಮಲನಲ್ಲಿ.

ಶಬ್ದಮಣಿದರ್ಪಣದಲ್ಲಿ ಹೇಳಿದ ಪ್ರಕಾರ, ಅಕ್ಕ, ಅವ್ವ, ಅಮ್ಮ—ಮುಂತಾದ ಅಕಾರಾಂತ ಸ್ತ್ರೀಲಿಂಗ ಶಬ್ದಗಳಿಗೆ ಪುಲ್ಲಿಂಗದ ಹಾಗೆಯೇ ನಾಮ ವಿಭಕ್ತಿಗಳು ಹತ್ತುತ್ತವ. ಈ ಲಕ್ಷಣವನ್ನು ಆಧುನಿಕರಲ್ಲಿ ಅನೇಕರು ಅಲಕ್ಷ್ಯದಿಂದ ಬದಿಗಿಟ್ಟು— ಅವ್ವ, ಕಮಲ, ಸುಮನ, ಮುಂತಾದ ಅಕಾರಾಂತ ಸ್ತ್ರೀಲಿಂಗ ಶಬ್ದಗಳನ್ನು 'ಳು' ಪ್ರತ್ಯಯ ಹಚ್ಚಿ ಪ್ರಯೋಗಿಸುತ್ತಿದ್ದಾರೆ. ಆದರೆ ಹವ್ಯಕರ ಕನ್ನಡದಲ್ಲಿ ಈ ವ್ಯಾಕರಣ ಮರ್ಯಾದೆ ಈಗಲೂ ಉಳಿದುಕೊಂಡಿದೆ.

4. ಅಕಾರಾಂತ ಪುಲ್ಲಿಂಗ–ಸ್ತ್ರೀಲಿಂಗಗಳೆರಡರಲ್ಲಿಯೂ ಪ್ರಥಮಾ ವಿಭಕ್ತಿ ಸೂಚಕವಾಗಿ ಅರ್ಧಾನುಸ್ವಾರ ಅಥವಾ ಅನುನಾಸಿಕೋಚ್ಚಾರಣೆ ಇದೆ—ಉದಾಹರಣೆ : ಅಕ್ಕ, ಅವ, ರಾಮ, ಶಂಕರ (ಈ ಶಬ್ದಗಳ ಅಂತ್ಯಾಕ್ಷರಗಳು ಅನುನಾಸಿಕಯುಕ್ತವಾಗಿ ಉಚ್ಚಾರಣೆಗೊಳ್ಳುತ್ತವೆ). ರನ್ನನು ತನ್ನ ಸಾಹಸಭೀಮ ವಿಜಯದಲ್ಲಿ 'ಕೃತಿಗೀಶ್ವರ ಚಕ್ರವರ್ತಿ ಸಾಹಸ ಭೀಮಂ' (ಅ. 1 – 32) ಎಂಬಲ್ಲಿ 'ಬಾಹು ವಿಕ್ರಮಿ ದುಶ್ಶಾಸನ ನಿನ್ನ ಮುಂದೆ ತೆಗೆವಂಮು' (ಅ. 7 – 32) ಎಂಬಲ್ಲಿ ಅಕಾರಂತ ಪುಲ್ಲಿಂಗದ ಪ್ರಥಮಾ ವಿಭಕ್ತಿಯಾಗಿ ಬಿಂದುವನ್ನಿಟ್ಟಿಲ್ಲ. ಕೃತಿಗೀಶ್ವರ, ದುಶ್ಶಾಸನ ಎಂಬಿವುಗಳ ಅಂತ್ಯಾಕ್ಷರ ಗಳು ಪ್ರತ್ಯಯ ರಹಿತವಾಗಿವೆ. ಅವಕ್ಕೆ ಅನುನಾಸಿಕೋಚ್ಚಾರಣೆ ಬಂದಿರಬೇಕಾಗು ತ್ತದೆ. ಈ ಉದಾಹರಣೆಗಳು ಆ ಕಾಲದ ಹವ್ಯಕ ಭಾಷೆಯ ಪ್ರಭಾವವಾಗಿರಲು ಸಾಧ್ಯವಿದೆ.

5. ಅಕಾರಾಂತ ನಪುಂಸಕಲಿಂಗದ ಹಾಗೂ ಅಕಾರಾಂತವಲ್ಲದ ಎಲ್ಲ ಲಿಂಗದ ಶಬ್ದಗಳಿಗೆ ಪ್ರಥಮಾ ವಿಭಕ್ತಿಯಲ್ಲಿ ವಿಭಕ್ತಿ ಸಂಜ್ಞಕವಾದ ಪ್ರತ್ಯಯವೂ ಇಲ್ಲ, ಧ್ವನಿಯೂ ಇಲ್ಲ—ಮರ, ನೆಲ, ಗುರು, ಸೀತೆ, ಪಾರ್ವತಿ, ಹೊಳೆ—ಇತ್ಯಾದಿ.

6. ಪುಲ್ಲಿಂಗ–ಸ್ತ್ರೀಲಿಂಗಗಳಲ್ಲಿ ದ್ವಿತೀಯಾ ಮತ್ತು ಷಷ್ಠೀ ವಿಭಕ್ತಿ ರೂಪಗಳು ಒಂದೇ. ರಾಮನ ದೆನಿಗೇಳು (ಇಲ್ಲಿ ರಾಮನನ್ನು ಎಂದು ದ್ವಿತೀಯಾ ವಿಭಕ್ತಿ). ರಾಮನ ತಮ್ಮ ಲಕ್ಷ್ಮಣ (ಇಲ್ಲಿ ರಾಮನ ಎಂದು ಷಷ್ಠೀ ವಿಭಕ್ತಿ). ಸೀತೆಯ ಬಪ್ಪಲೆ ಹೇಳು (ಸೀತೆಯನ್ನು ಬರಹೇಳು ಎಂದರ್ಥ. ಇಲ್ಲಿ 'ಸೀತೆಯ' ಎಂಬುದೂ ದ್ವಿತೀಯಾ ವಿಭಕ್ತಿಯಲ್ಲಿದೆ). ಹೀಗೆಯೇ—ಗಣಪತಿಯ, ಅಕ್ಕನ, ಗೋಪಾಲನ, ದಮಯಂತಿಯ —ಎಂಬ ರೂಪಗಳು ದ್ವಿತೀಯಾ ವಿಭಕ್ತಿಯವೂ ಹೌದು, ಷಷ್ಠಿಯೂ ಹೌದು.

ಅಕಾರಾಂತ ನಪುಂಸಕ ಲಿಂಗದಲ್ಲಿ ಮಾತ್ರ ದ್ವಿತೀಯೆಗೂ, ಷಷ್ಠಿಗೂ ಬೇರೆ ಬೇರೆ ರೂಪ—ಉದಾಹರಣೆ : ಮರವ (ದ್ವಿ.ವಿ.), ಮರದ (ಷ.ವಿ.).

7. ಬಹುವಚನ ಪ್ರತ್ಯಯಗಳಾಗಿ ಗೊ, ಮತ್ತು ಕ್ಕೊ—ಎಂಬಿವು (ಗಳ್, ಕಳ್ ಎಂಬಿವಕ್ಕೆ ಬದಲಾಗಿ) ಬರುತ್ತವೆ—ಜನಂಗೊ (ಜನರು), ಮರಂಗೊ (ಮರಗಳು).

ನಿಂಗೊ (ನೀವು), ಎಂಗೊ (ನಾವು), ಮಕ್ಕೊ (ಮಕ್ಕಳು), ಹೆಮ್ಮಕ್ಕೊ (ಹೆಂಗುಸರು), ಅಬ್ಬೆಕ್ಕೊ (ತಾಯಂದಿರು), ತಂಗೆಕ್ಕೊ (ತಂಗಿಯರು). ಸಂಬೋಧನೆ, ಅವಧಾರಣೆಗಳಲ್ಲಿ ಇವು ಬರುವುದಿಲ್ಲ—ಮಕ್ಕಳೇ, ಮರಂಗಳೇ, ಜನಗಳೇ ಇತ್ಯಾದಿ.

8. ಹ್ರಸ್ವಪೂರ್ವವಾದ ಹಲವು ಶಬ್ದಗಳಿಗೆ ಕಕಾರಾದಿ ಶಬ್ದಗಳು ಪರವಾದಾಗ ಆ ಕಕಾರಕ್ಕೆ ದ್ವಿತ್ವ ಬರುತ್ತದೆ— ಹನಿಕ್ಕಾಲು, ಮರಕ್ಕಾಲು, ನೊರೆಕ್ಕಾಯಿ, ಸೊರಕ್ಕಾಯಿ (ಸೋರೆಕಾಯಿ), ಮೊಳಕ್ಕಾಲು, ಮಡಿಕ್ಕೇರಿ, ಸರಕ್ಕಾರ, ಮದಕ್ಕರಿ (ಕುಷ್ಟರೋಗ), ಪಸೆಕ್ಕರೆ (ಹಸೆಗೆ ಕರೆ)—ಇತ್ಯಾದಿ.

9. ಹ್ರಸ್ವ ವ್ಯಂಜನದ ಮುಂದೆ ತನ, ತಿಕೆ ಎಂಬ ತದ್ಧಿತ ಪ್ರತ್ಯಯಗಳು ಬಂದಾಗ ಕೆಲವೆಡೆ ವ್ಯಂಜನ ಸಕಾರ ಸೇರಿಕೊಳ್ಳುತ್ತದೆ—(ಕನ್ನಡದ ಜಾನಪದ ಪ್ರಯೋಗದಲ್ಲಿಯೂ ಇಂತಹ ಪ್ರಯೋಗ ಉಂಟು) — ಬಡಸ್ತನ, ಬಡಸ್ತಿಕೆ, ದೊಡ್ಡಸ್ತಿಕೆ, ದೊಡ್ಡಸ್ತನ, ನಂಟಸ್ತಿಕೆ, ನಂಟಸ್ತನ—ಇತ್ಯಾದಿ.

ಪ್ರತ್ಯಯವಿಲ್ಲದೆಯೂ ಕ್ವಚಿತ್ಪ್ರಯೋಗವಿದೆ—ಕಸ್ತಲೆ (ಕತ್ತಲೆ), ಮೆಸ್ತಂಗೆ (ಮೆತ್ತಗೆ).

10. ಆಗು, ಹೋಗು ಎಂಬ ಧಾತುಗಳ ಕ್ರಿಯಾಪದ ರೂಪಗಳಲ್ಲಿ ಗಕಾರಕ್ಕೆ ಯಕಾರ ವಕಾರಗಳು ಬರುತ್ತವೆ—ಆಯಿದು (ಆಗಿದೆ), ಆವುತ್ತು (ಆಗುವುದು), ಹೋಯಿದ (ಹೋಗಿದ್ದಾನೆ), ಹೋವುತ್ತೆ (ಹೋಗುತ್ತೇನೆ). ಇತರ ಕಡೆಯೂ ಗಕಾರಕ್ಕೆ ಯಕಾರವಿದೆ—ಉದಾ. : ಮದುಮಗ—ಮದುಮಯ—ಮದುಮ್ಮಾಯ (ಮದಿಮ್ಮಾಯ). 'ಮದುಮಗಳು' ಎಂಬುದು 'ಮದು(ದಿ)ಮ್ಮಾಳು' ಎಂದಾಗಿದೆ. ಹೂವು ಎಂಬುದು ಹವಿಕರ ಕನ್ನಡದಲ್ಲಿ 'ಹೂಗು' ಆಗಿದೆ.

11. ವಿಧಿರೂಪಕ್ರಿಯೆಯಲ್ಲಿ ಒತ್ತಾಯದ ಸೂಚಕವೆನಿಸುವ ಪ್ರಯೋಗವಿದೆ. ಇದು ಪ್ರಥಮ ಪುರುಷಗಳಿಗೆ ಮಾತ್ರವಲ್ಲ, ಉತ್ತಮ ಪುರುಷಕ್ಕೂ ಅನ್ವಯಿಸುತ್ತದೆ—

ಪ್ರ.ಪು.—ಅವ ಓದಿಕ್ಕಲಿ, ಅದು ಓದಿಕ್ಕಲಿ
ಮ.ಪು.—ನೀನು ಓದಿಕ್ಕು, ನಿಂಗೊ ಓದಿಕ್ಕಿ
ಉ.ಪು.—ಆನು ಓದಿಕ್ಕಿತೆ (ಲೆಟ್ ಮಿ ರೀಡ್)
ಮ.ಪು. ಸಹಿತವಾದ ಉತ್ತಮ ಪುರುಷ—ನಾವು ಓದಿಕ್ಕುವೊ
ಮ.ಪು. ಬಿಟ್ಟು ಉತ್ತಮ ಪುರುಷ—ಎಂಗೊ ಓದಿಕ್ಕಿತೆಯೊ

(ತುಳು ಭಾಷೆಯಲ್ಲಿ ಈ ರೀತಿಯ ಪ್ರಯೋಗಗಳಿವೆ. ಆದರೆ, ಪ್ರಚಲಿತವಾದ ಕನ್ನಡ ಭಾಷೆಯಲ್ಲಿ ಕಂಡುಬರುವುದಿಲ್ಲ.)

12. ಭೂತಕಾಲದ ಪ್ರಯೋಗದಲ್ಲಿ ಅದ್ಯತನ (ಇದೀಗ ತಾನೆ) ಮತ್ತು ಅನದ್ಯತನ (ಸ್ವಲ್ಪಕಾಲಕ್ಕೆ ಮೊದಲೇ) ಎಂಬೆರಡು ವಿಧಗಳಿವೆ—

ಅದ್ಯತನ ಭೂತ—ತೋಟಕ್ಕೆ ಮಂಗಂಗೊ ಬಂದವು, ಕೃಷ್ಣ ಬಂದ
ಅನದ್ಯತನ ಭೂತ—ತೋಟಕ್ಕೆ ಮಂಗಂಗೊ ಬಯಿಂದವು, ಕೃಷ್ಣ ಬಯಿಂದ

ಅನದ್ಯತನ ಭೂತದ ಘಟನೆಯನ್ನು ದೃಢಪಡಿಸುವ ರೂಪವೂ ಇದೆ—ಕೃಷ್ಣ ಬಂದಿತ್ತಿದ್ದ, ಆನು ಮೊನ್ನೆಯೇ ತೋಟಕ್ಕೆ ನೀರು ತೋಂಕಿತ್ತಿದ್ದೆ.

13. ನಿಷೇಧಾರ್ಥದಲ್ಲಿ ಪ್ರಥಮ ಪುರುಷ ಏಕವಚನದ ಕ್ರಿಯಾಪದಕ್ಕೆ ಅತ್ವ ವಿರುತ್ತದೆ—ಪುಲ್ಲಿಂಗವಾಗಿದ್ದರೆ ಕೊನೆಯ ಅಕ್ಷರಕ್ಕೆ ಅನುನಾಸಿಕೋಚ್ಚಾರಣೆಯೂ ಇದೆ—ಅವ ಹೋಗ, ಇವ ಹೇಳ.

ಸಾಧಾರಣೀಕೃತ ನಿಷೇಧದಲ್ಲಿ ಅತ್ವಕ್ಕೆ ಅನುನಾಸಿಕವಿಲ್ಲ—ಇದರ ತಿಂಬಲಾಗ, ನಾಳೆ ಹೋಪಲಾಗ; ನಪುಂಸಕ ಲಿಂಗದಲ್ಲಿಯೂ ಅತ್ವಕ್ಕೆ ಅನುನಾಸಿಕವಿಲ್ಲ—ಅದು ಬಾರದ್ದೆ ಇರ (ಅದು ಬಾರದೆ ಇರದು), ಅದು ಕೊಡ (ಅದು ಕೊಡಲಿಕ್ಕಿಲ್ಲ).

ಮಧ್ಯಮ ಪುರುಷದ ನಿಷೇಧಕ್ರಿಯೆಯಲ್ಲಿ ಬೇಡ ಎಂಬ ಅರ್ಥದಲ್ಲಿ ಎಡ (ಅಡ) ಎಂಬುದು ಧಾತುಗೆ ಸೇರಿಕೊಳ್ಳುತ್ತದೆ. ಬಹುವಚನದಲ್ಲಿ 'ಎಡಿ' ಎಂಬುದು ಬರುತ್ತದೆ.

**ಏಕವಚನ**—ನೀನು ಬಯ್ಯೆಡ (ನೀನು ಬಯ್ಯಬೇಡ), ಮಕ್ಕೊಗೆ ಬಡಿಯೆಡ (ಮಕ್ಕಳಿಗೆ ಹೊಡೆಯಬೇಡ), ನೀರು ಕಚ್ಚಿ ಕುಡಿಯೆಡ (ನೀರನ್ನು ಕಚ್ಚಿ ಕುಡಿಯಬೇಡ).

**ಬಹುವಚನ**—ನಿಂಗೊ ಬಯ್ಯೆಡಿ (ನೀವು ಬಯ್ಯಬೇಡಿ), ನಿಂಗೊ ಹೋಗೆಡಿ (ನೀವು ಹೋಗಬೇಡಿ).

14. ಹಳಗನ್ನಡದಲ್ಲಿ ಕಂಡುಬರುವ 'ಅಂತೆ' ಎಂಬರ್ಥದ 'ಗಡ' ಎಂಬ ಅವ್ಯಯವು ಹವಿಕರ ನುಡಿಯಲ್ಲಿ 'ಅಡ' ಇಲ್ಲವೇ 'ಅಡೊ' ಎಂಬ ರೂಪದಲ್ಲಿದೆ—ಅಷ್ಟೊತ್ತಿಂಗೆ ಒಂದು ಕಾಕೆ ಬಂತಡೊ (ಬಂತಡ)—(ಅಷ್ಟು ಹೊತ್ತಿಗೆ ಒಂದು ಕಾಗೆ ಬಂತಂತೆ). ಆನು ಬರೆಯೆಕ್ಕಡೊ (ಬರೆಯೆಕ್ಕಡ)—(ನಾನು ಬರೆಯಬೇಕಂತೆ).

15. ಮಾಡಬೇಕು, ನೋಡಬೇಕು, ನಿಲ್ಲಬೇಕು, ಓದಬೇಕು—ಇತ್ಯಾದಿಗಳಲ್ಲಿ

ಬರುವ ಬೇಕು ಎಂಬುದು 'ಎಕ್ಕು' ಎಂಬ ರೂಪದಲ್ಲಿರುತ್ತದೆ—ಉದಾಹರಣೆ : ಮಾಡೆಕ್ಕು, ನೋಡಕ್ಕು, ನಿಲ್ಲೆಕ್ಕು, ಓದೆಕ್ಕು.

ಹಳಗನ್ನಡದಲ್ಲಿ ಇದು ಮಾಡವೇಳ್ಕುಂ, ನೋಡವೇಳ್ಕುಂ, ನಿಲ್ಲವೇಳ್ಕುಂ, ಓದವೇಳ್ಕುಂ—ಎಂಬ ರೂಪದಲ್ಲಿರುತ್ತದೆ.

ಇಂಥವಲ್ಲದೆ, ಹಲವು ಸಾಮಾಜಿಕ ಕ್ರಿಯಾವಿಧಿಗಳಿಗೆ (ಪ್ರಸ್ತಗಳಿಗೆ) ಹವಿಕರಲ್ಲಿ ಪ್ರಚಲಿತವಿರುವ ಹೆಸರುಗಳು ಇತರರಲ್ಲಿರುವುದಕ್ಕಿಂತ ಬೇರೆ. ಉದಾಹರಣೆ :

ಬಾರ್ಸ—ಅನ್ನಪ್ರಾಶನ. ನೂಲಮದುವೆ—ಉಪನಯನ.
ಸಟ್ಟುಮುಡಿ—ಗೃಹಪ್ರವೇಶ (ವಿವಾಹಕನ್ಯೆ ವರನ ಗೃಹವನ್ನು ಸೇರುವ ಸಮಾರಂಭ).
ಕಿರುಸಟ್ಟುಮುಡಿ—ಸಟ್ಟುಮುಡಿಯ ಮರುದಿನದ ಸಮಾರಂಭ.
ದಿಂಡು—ಗರ್ಭಾಧಾನ. ಕೋಡಿ—ಸೀಮಂತ. ಬೊಜ್ಜ—ಉತ್ತರಕ್ರಿಯೆ.

ಹೀಗೆ ಹವ್ಯಕ ಭಾಷೆಯ ಕೆಲವು ವೈಶಿಷ್ಟ್ಯವನ್ನು ತೋರಿಸಿಕೊಡಲಾಯಿತು. ದೇಶೀ ಶಬ್ದಗಳು, ಪದವಾಕ್ಯಗಳ ಬಳಕೆ, ನುಡಿಗಟ್ಟುಗಳು, ಗಾದೆಗಳು, ಅನುಭವೋಕ್ತಿಗಳು—ಇಂತಹ ಪ್ರತಿಯೊಂದು ದೃಷ್ಟಿಕೋನದಿಂದಲೂ ಹವ್ಯಕರ ವೈಶಿಷ್ಟ್ಯವನ್ನು ಪರಿಶೀಲಿಸಬಹುದು. ಈ ವೈಶಿಷ್ಟ್ಯಗಳನ್ನು ತೌಲನಿಕವಾಗಿ ಅಭ್ಯಾಸ ಮಾಡಿದಾಗ ಇವು ಕನ್ನಡದ ಪ್ರಾಚೀನ ರೂಪಗಳನ್ನು ಬಲುಮಟ್ಟಿಗೆ ಉಳಿಸಿಕೊಂಡಿರುವಂತೆ ಕಾಣುತ್ತವೆ, ಹವಿಕರ ನಡೆವಳಿ ಹಿಂದೂ ಸಂಸ್ಕೃತಿಯ ವಿಶೇಷವಾದ ಆದರ್ಶವನ್ನು ಎತ್ತಿ ಹಿಡಿಯುವಂತೆ ತೋರುತ್ತಿದೆಯಲ್ಲದೆ, ಈ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನೆಗೆ ದಿಕ್ಕು ಕಾಣಿಸುವಂತೆಯೂ ಭಾಸವಾಗುತ್ತದೆ.

## ಅಡಿ ಟಿಪ್ಪಣಿ

1 ಉತ್ತರ ಸಹ್ಯಾದ್ರಿ ಖಂಡ (ಸ್ಕಂದ ಪುರಾಣ), ಅಧ್ಯಾಯ 33, ಶ್ಲೋಕ 10.

2 ಮತಾನುವರ್ತಿ ಜನರ ಉಪಯೋಗಕ್ಕಾಗಿ ಈ ಗ್ರಂಥವನ್ನು ಸೊರಬ ತಾಲೂಕು ಹೊಸಬಾಳೆ ಗ್ರಾಮದ ಅನಂತ ಹೆಗಡೆಯವರು ಸಂಗ್ರಹಿಸಿರುತ್ತಾರೆ. ಈ ಗ್ರಂಥವನ್ನು ನಡಹಳ್ಳಿ ವೆಂಕಟೇಶ ಶರ್ಮರು ಪರಿಶೋಧಿಸಿ ಕನ್ನಡ ಟೀಕೆಯನ್ನು ಬರೆದು, ತಮ್ಮದೇ ಆದ ಲಕ್ಷ್ಮೀ ವಿಲಾಸ ಮುದ್ರಾಕ್ಷರ ಶಾಲೆಯಲ್ಲಿ ಅಚ್ಚುಮಾಡಿಸಿರುತ್ತಾರೆ. ಗ್ರಂಥಾಕೃತಿ 9 ಇಂಚು ಉದ್ದ ; ಮೂರೂವರೆ ಇಂಚು ಅಗಲ. ಪ್ರತಿಯೊಂದು ಪುಟದ ಪೂರ್ವಾರ್ಧದಲ್ಲಿ ಉದ್ದಕ್ಕೂ ಶ್ಲೋಕಗಳು ಅಚ್ಚಾಗಿವೆ, ಕೆಳಗಿನ ಅರ್ಧಭಾಗದಲ್ಲಿ ಶ್ಲೋಕಸಂಖ್ಯಾ ಸೂಚಿ

ಯೊಂದಿಗೆ ಗದ್ಯಾನುವಾದವಿದೆ. ಇದನ್ನು ಪ್ರಕೃತ ನೋಡಲು ಕೊಟ್ಟವರು ಶ್ರೀ ಎನ್ ಕೆ ಹೆಗಡೆ, ಮುಖ್ಯೋಪಾಧ್ಯಾಯರು, ಜನತಾ ವಿದ್ಯಾಲಯ, ಬೇಡ್ಕಣಿ, ಸಿದ್ದಾಪುರ ತಾಲೂಕು, ಉತ್ತರ ಕನ್ನಡ.

3 ಅದರಲ್ಲೇ, ಅ 1, ಶ್ಲೋಕ 42

4 ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್ಸ್, 1910, ಪುಟ 181.

5 ಇಂಡಿಯ ಆಫೀಸ್ ಲೈಬ್ರರಿ, ಸಂಸ್ಕೃತ ಲಿಪಿಪ್ರತಿ, ಸಂಖ್ಯೆ 4104

6 ಶಾಲಿನಿ ರಘುನಾಥ್—ಉತ್ತರ ಕನ್ನಡ ಜಿಲ್ಲೆಯ ಹವ್ಯಕರ ಹಾಡುಗಳು, ಪೀಠಿಕೆ ಪುಟ 4–10

7 ಕುರಡಿ ನಾರಾಯಣ ಶರ್ಮಾ—'ಹವ್ಯಕ ಸಮಾಜ' ಎಂಬ ಲೇಖನ, 'ಹವ್ಯಕ' ಬೆಳ್ಳಿ ಹಬ್ಬದ ವಿಶೇಷ ಸಂಚಿಕೆ (ಸಂಪುಟ 3, ಸಂಚಿಕೆ 2), 1968, ಪುಟ 29–32

8 ಗೋವಿಂದ ಪೈ—ಹೈಗ, ಹೈವೆ—ಎಂಬ ಲೇಖನ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ ಪತ್ರಿಕೆ, ಸಂಪುಟ 1. ಸಂಚಿಕೆ 3 ಮತ್ತು 4

9 ತೆಕ್ಕುಂಜ ಗೋಪಾಲಕೃಷ್ಣ ಭಟ್ಟ—'ಹವ್ಯಕ—ಹವೀಕ' ಎಂಬ ಲೇಖನ. 'ಹವ್ಯಕ' ಸಂಪುಟ 3, ಸಂಚಿಕೆ 2 ಮತ್ತು 'ಮಂಗಳೂರು ಹವೀಕರ ಆಡುನುಡಿ' ಎಂಬ ಲೇಖನ, ನವನೀತ ಎಂಬ ಗ್ರಂಥದಲ್ಲಿ

10 ಪಡಾರು ಮಹಾಬಲೇಶ್ವರ ಭಟ್ಟ—ಹವೀಕ ಎಂಬ ಕಿರುಹೊತ್ತಗೆ–3 ಲೇಖನಗಳ ಸಂಕಲನ.

11 ವೈದ್ಯ ಗ ಸು ಪಾಟೀಲ, ಬರಿಗೆ—ಹವ್ಯಕ ಸಮಾಜ ಮತ್ತು ಶ್ರೀಮಠದ ಸಂಕ್ಷಿಪ್ತ ಇತಿಹಾಸ, ಪುಟ 20.

12 ಶಾಲಿನಿ ರಘುನಾಥ—ಆರನೆಯದು, ಪೀಠಿಕೆ, ಪುಟ 10–30.

13 'ಹವ್ಯಕ' ಬೆಳ್ಳಿಹಬ್ಬದ ವಿಶೇಷ ಸಂಚಿಕೆ, 1.6.1968.

14 ಶ್ರೀ ಮನ್ಮಹಾಭಾರತ, ಸಂ. 31, ಪುಟ 6220.

15 ಪಂಪಭಾರತ, ಆಶ್ವಾಸ 2, ಪದ್ಯ 46.

16 ಕಾಳಿದಾಸ—ಕುಮಾರಸಂಭವ–ಸರ್ಗ 5, ಪದ್ಯ 45.

17 ಟಿ ಕೇಶವ ಭಟ್ಟ—ಹವ್ಯಕ ಪದ ಸಂಚಯ.

18 ಪ್ರೊ॥ ಎಂ. ಮರಿಯಪ್ಪ ಭಟ್ಟ—ಹವ್ಯಕ ಇಂಗ್ಲಿಷ್ ನಿಘಂಟು.

# ಅಧ್ಯಾಯ : 2

# ಶೋಭಾನೆಗಳು—ಲಕ್ಷಣ, ಪ್ರಾಚೀನತೆ

[ಸಂಗೀತ–ಸಾಹಿತ್ಯದಲ್ಲಿ ಮಾರ್ಗ, ದೇಶಿ ದೇಶಿಯಲ್ಲಿ ಶುದ್ಧ ಜಾನಪದ, ಶಿಷ್ಟ ಜಾನಪದ–ಶೋಭಾನೆಯು ಶುಭ ಮಹಿಮೆ–ಕೆಲವು ಶಬ್ದರೂಪ ನಿರ್ಣಯಗಳು (ಗೀತ-ಗೀತೆ, ಪದ-ಹಾಡು, ಸೊಲ್ಲು)–ಬೆದಂಡೆ- ಚತ್ತಾಣ (ಚಿತ್ರಾಯತನ)–ದೇಸಿಗಬ್ಬಗಳ ಬಗೆಗೆ ವಿದ್ವತ್ಕವಿಗಳಿಂದ ತಿರಸ್ಕಾರ ವಿಲ್ಲ–ಕಾವ್ಯಗಳಲ್ಲಿ ಶೋಭಾನೆಗಳ ಉಲ್ಲೇಖ, ಯಕ್ಷಗಾನ ಶೋಭಾನೆಗಳ ಮೂಲದ ಅಂಟಿಟ್ಟವೆ]

ಸಂಗೀತ, ಸಾಹಿತ್ಯ—ಎಂಬ ಹೃದ್ಯ ಲಲಿತಕಲೆಗಳಲ್ಲಿ 'ಮಾರ್ಗ' ಮತ್ತು 'ದೇಶಿ' ಎಂಬ ಎರಡು ವಿಭಾಗಗಳು ಪ್ರಾಚೀನ ಕಾಲದಿಂದಲೆ ಪ್ರಚಲಿತವಾಗಿವೆ. ಕಲಾವಿದರ ವಿಶೇಷ ಸಾಧನೆಗಳಿಂದ ಪುರಸ್ಕಾರಗೊಂಡು ವಿದ್ವದ್ರಂಜಕವಾದ ಸಂಗೀತ ಹಾಗೂ ಸಾಹಿತ್ಯ 'ಮಾರ್ಗ' ಎನಿಸಿತು. ಬೇರೆ ಬೇರೆ ಪ್ರದೇಶಗಳ ಜನಸಾಮಾನ್ಯರ ಅಭಿರುಚಿಗೆ ಅನುಗುಣವಾಗಿ ಅಪ್ರೌಢ, ಸಹಜ, ಸರಳ ರೂಪದಲ್ಲಿ ಅಭಿವ್ಯಕ್ತವಾಗುವ ಇವೆರಡೂ 'ದೇಶಿ' ಎನಿಸಿದವು.

ನಮ್ಮ ಕರ್ನಾಟಕದಲ್ಲಿ ಪ್ರಚಲಿತವಾಗಿರುವ 'ದೇಶಿ'ಯಲ್ಲಿಯೂ ನಾವು ಎರಡು ವಿಭಾಗ ಮಾಡಿಕೊಳ್ಳಬೇಕಾಗುತ್ತದೆ. ಅವುಗಳಲ್ಲಿ ಒಂದು ಜಾನಪದ. ಇದು ಸಂಗೀತದ ವಿಭಾಗವಾಗಿ ಗಾನ, ವಾದನ, ನೃತ್ಯ ವಿಧಾನ ವಿಶೇಷವುಳ್ಳದು. ಹಾಗೆಯೇ ಸಾಹಿತ್ಯದ ವಿಭಾಗವಾಗಿ ಹಾಡು, ಲಾವಣಿ, ಕತೆ, ಗಾದೆ, ನುಡಿಗಟ್ಟು ಮುಂತಾದ ರೂಪಗಳನ್ನುಳ್ಳದಾಗಿ ಅಭಿವ್ಯಕ್ತಿಯ ನುಡಿಗಳಲ್ಲಿ ಗ್ರಾಮ್ಯವು ಅಧಿಕವಾಗಿ ಇರುವಂತಹದು. ಇಂತಹ ಜಾನಪದ ಸಾಹಿತ್ಯದ ಸಂಗ್ರಹಣೆ, ಅಧ್ಯಯನ, ಸಂಶೋಧನೆ, ಗ್ರಂಥ ರಚನೆ, ಪ್ರಕಟನೆಗಳು ಈಗೀಗ ಸಮೃದ್ಧವಾಗಿ ನಡೆಯುತ್ತಿವೆ. ಪೂರ್ಣವಾಗಿ ಜಾನಪದವೂ ಅಲ್ಲದ, ಮಾರ್ಗವೂ ಅಲ್ಲದ ಇನ್ನೊಂದು ವರ್ಗವಿದೆ. ದಾಸ ವಾಙ್ಮಯವು ಸಾಹಿತ್ಯ ದೃಷ್ಟಿಯಿಂದ ಈ ವರ್ಗಕ್ಕೆ ಬರಬಹುದು. ಆದರೆ, ಅದರಲ್ಲಿರುವ ಭಕ್ತಿಗೀತಗಳು–ಕೀರ್ತನೆಗಳು ಮಾರ್ಗ ಸಂಗೀತಕ್ಕೆ ಹೊಂದಿಕೊಳ್ಳುತ್ತವೆ. ಸಾಹಿತ್ಯಕ್ಷೇತ್ರದಲ್ಲಿ ದಾಸ ವಾಙ್ಮಯಕ್ಕೊಂದು ವಿಶೇಷವಾದ ಸ್ಥಾನ ಸಲ್ಲುತ್ತ ಬಂದಿದೆ. ಕನ್ನಡದ ಯಕ್ಷಗಾನ ಪದಗಳು, ಹವ್ಯಕರ ಶೋಭಾನೆಗಳು ಗಾನಪದ್ಧತಿಯ ದೃಷ್ಟಿಯಿಂದ ಮತ್ತು ಸಾಹಿತ್ಯ ಸ್ವರೂಪದ ದೃಷ್ಟಿಯಿಂದ ಕೆಲವು ಮಟ್ಟಿಗೆ ಮಾರ್ಗವನ್ನೂ ಹೆಚ್ಚಿನ ಮಟ್ಟಿಗೆ ಜಾನಪದ ಲಕ್ಷಣವನ್ನೂ ಹೊಂದಿರುವ 'ದೇಶಿ'ಯ ವರ್ಗಕ್ಕೆ ಸೇರುತ್ತವೆ. ಇವನ್ನು 'ಜನಪ್ರಿಯ ಜಾನಪದ' ಎಂದು ಪರಿಗಣಿಸಬಹುದೆಂದು ಕೆಲವರ ಅಭಿಪ್ರಾಯ—"ಬ್ರಾಹ್ಮಣರ

ಸಂಪ್ರದಾಯದ ಹಾಡುಗಳನ್ನು ಶುದ್ಧ ಜನಪದವೆನ್ನದೆ, 'ಜನಪ್ರಿಯ ಜನಪದಗೀತ'ಗಳೆಂದು ಬೇರೆಯೇ ಇಟ್ಟು ಅಭ್ಯಾಸ ಮಾಡುವುದು ಒಳ್ಳೆಯದೆಂದು ಕಾಣುತ್ತದೆ.... ಇಂತಹ ವಿಭಜನೆ ಅನಿವಾರ್ಯವೆನಿಸುತ್ತದೆ." (—ಡಿ. ಲಿಂಗಯ್ಯ : ಕರ್ನಾಟಕ ಜನಪದ ಕಾವ್ಯಗಳು, 1976, ಪ್ರಸ್ತಾವನೆ, ಪುಟ 29). ಇಲ್ಲಿ ಹೇಳಿರುವಂತೆ, ವಿಭಜನೆ ಅವಶ್ಯವೇ ಸರಿ. ಆದರೆ 'ಜನಪ್ರಿಯ ಜನಪದಗೀತ' ಎಂಬುದಕ್ಕಿಂತ 'ಶಿಷ್ಟ ಜಾನಪದ' ಎನ್ನುವುದು ಸೂಕ್ತವೆಂದು ಸಕಾರಣವಾಗಿ ಇಲ್ಲಿ ಪರಿಗಣಿಸಲಾಗಿದೆ. ಯಕ್ಷಗಾನವನ್ನು ಕುರಿತು ಈಗೀಗ ಗೌರವಗ್ರಂಥಗಳ ರಚನೆ, ಅನುಭವ ಪ್ರಕಟನೆ, ವಿಚಾರ ಸಂಕಿರಣ, ವಿಮರ್ಶೆ, ಲೇಖನ, ಉಪನ್ಯಾಸಗಳು ನಡೆಯುತ್ತಿವೆ. ಯಕ್ಷಗಾನ ಕಲೆ ಈಗಲೂ ಜನಪ್ರಿಯವೂ, ಜನಾಕರ್ಷಕವೂ ಆಗಿರುವುದೇ ಇವಕ್ಕೆ ಕಾರಣ. ಆದರೆ, ಅಷ್ಟೇ ಮಹತ್ತ್ವವೂ, ಗೇಯಗುಣವೂ ಪರಂಪರೆಯ ಸಾಂಸ್ಕೃತಿಕ ಮೌಲ್ಯವೂ ಇರುವ ಸ್ತ್ರೀ ಸಾಹಿತ್ಯವೂ ಆಗಿರುವವು, 'ವನಿತಾ ವೇದ' ಎನಲು ಅರ್ಹವಾದವು ಈ ಶಿಷ್ಟ ಜಾನಪದವೆನಿಸುವ ಶೋಭನ ಗೀತಗಳು. ಇವನ್ನು ಹಾಡುವ ಪದ್ಧತಿ ಈಗ ಬಲು ಮಟ್ಟಿಗೆ ನಿಂತುಹೋಗಿರುವುದು ಈ ಸಾಹಿತ್ಯ–ಸಂಸ್ಕೃತಿ ಕ್ಷೇತ್ರಕ್ಕೆ ಆಗಿರುವ ದೊಡ್ಡ ನಷ್ಟ. ಆದುದರಿಂದಲೇ ಇದು ಈಗ ಮೂಲೆಗುಂಪಾಗಿದೆ.

ಯಕ್ಷಗಾನ ಪದಗಳಿಗೆಲ್ಲ ಅಲ್ಲಲ್ಲಿಯೆ ರಾಗ–ತಾಳ ಸೂಚನೆ ಇರುತ್ತದೆ. ಅವನ್ನು ಹಾಡುವಾಗ ರಾಗ–ತಾಳ–ವಾದನ–ನೃತ್ಯಗಳ ಸಂಯೋಜನೆಯಿರುತ್ತದೆ. ಆದರೆ, ಶೋಭಾನೆಗಳನ್ನು ಹಾಡುವಲ್ಲಿ ಇವಿಲ್ಲ. ಮದುವೆ, ಉಪನಯನ, ಪೂಜೆ, ಹೋಮಾದಿಗಳು ನಡೆಯುತ್ತಿರುವಾಗ, ಆಯಾ ಕ್ರಿಯೆಗಳಿಗೆ ಸಂಬಂಧಿಸುವ ವೈದಿಕ ಮಂತ್ರ ತಂತ್ರಗಳೊಂದೆಡೆಯಾದರೆ, ಆ ಕ್ರಿಯೆಗಳನ್ನೇ ವ್ಯಾಖ್ಯಾನಿಸುವಂತಿರುವ ಈ ಶೋಭಾನೆಗಳು ಇನ್ನೊಂದೆಡೆ. ಇವು ಶ್ರುತಿ ಸ್ಮೃತಿ ಪ್ರಣೀತ ಸಂಸ್ಕಾರ ನಿಯಮಗಳ ಕನ್ನಡದ ವ್ಯಾಖ್ಯಾನ ಮಹತ್ತ್ವವನ್ನು ತಾಳುತ್ತವೆ. ಇವನ್ನು ಹಾಡುವುದು ಬರಿಯ ಕಟ್ಟಳೆಯಲ್ಲ. ಶುಭ ಸಂಕೇತ. ಶೋಭಾನೆ ಹಾಡುವುದರಿಂದ ಅಶುಭ ಪರಿಹಾರ ಆಗುವುದೆಂಬ ನಂಬಿಕೆಯಿದೆ. ಈ ನಂಬಿಕೆಯಲ್ಲಿ ಸತ್ಯಾಂಶವೂ ಇದೆ :—

ಕ್ರಿ.ಶ. 1550ರಲ್ಲಿದ್ದ ವಾದಿರಾಜತೀರ್ಥರು, ಭರತಖಂಡದಲ್ಲೆಲ್ಲ ತೀರ್ಥಯಾತ್ರೆ ಮಾಡಿ 'ತೀರ್ಥಪ್ರಬಂಧ' ಎಂಬ ಸಂಸ್ಕೃತ ಗ್ರಂಥವನ್ನು ರಚಿಸಿದ್ದರಲ್ಲದೆ, ತಮ್ಮ ದೇಶ ಪರ್ಯಟನದಲ್ಲಿ ಅನೇಕ ಆಶ್ಚರ್ಯಕರ ಮಹಿಮೆಯನ್ನು ಮೆರೆದಿದ್ದಾರೆ. ಅವುಗಳಲ್ಲಿ ಇದೊಂದು—ಒಮ್ಮೆ ಒಂದು ವಿವಾಹ ಮಂಟಪದಲ್ಲಿ ವರನು ಸರ್ಪದಂಶದಿಂದ ಮೃತನಾದನಂತೆ. ಆಗ ಅಲ್ಲಿದ್ದ ವಾದಿರಾಜರು ಕನ್ನಡದಲ್ಲಿ 'ಲಕ್ಷ್ಮೀ ಶೋಭಾನೆ'ಯನ್ನು ರಚಿಸಿ, ಮದುಮಗನನ್ನು ಬದುಕಿಸಿ, ವಧೂವರರಿಗೆ ಸೌಭಾಗ್ಯ ಆಯುರ್ದಾಯಗಳನ್ನು ಕೊಟ್ಟರಂತೆ.[1]

'ಶೋಭಾನೆ' ಎಂದು ಪ್ರಸಿದ್ಧಿಯಿರುವ ಈ ವರ್ಗದ ಹಾಡನ್ನು ಮಂಗಲ ಗೀತ, ಶುಭಗೀತ, ಶೋಭನಗೀತ, ಶೋಭಾನೆ, ಶೋಭಾನ—ಎಂಬ ಹೆಸರುಗಳಿಂದ ಕರೆದಿದ್ದಾರೆ. ಜಾನಪದೀಯರು ಸೋಬಾನೆ, ಸೋಬಾನ, ಸೋಬಾನೆ ಪದ ಎನ್ನುತ್ತಾರೆ. 'ಶೋಭಾನ' ಎಂಬ ಸಂಸ್ಕೃತ ಶಬ್ದಕ್ಕೆ—ಅತಿಶಯ ಅಲಂಕಾರಮಯ, ಗ್ರಹ, ತಾವರೆ, ನೀತಿಯುತ, ಪುಣ್ಯಕರ, ವಿವಕ್ಷಿತ (ಹೇಳಲು ಇಷ್ಟವಾದುದು), ಶಿವ, ಶುಭ, ಶೋಭಿಸುವ, ಸುಂದರ, ಹೊಳೆಯುವ—ಎಂಬ ಅರ್ಥಗಳಿವೆ. ಶುಭ (ಮಂಗಳಕರ) ಎಂಬುದು ಇಲ್ಲಿ ಪ್ರಸ್ತುತವಾಗಿ ಕಾಣುತ್ತದೆ. ಹವ್ಯಕರಲ್ಲಿ ಇದು 'ಶೋಭಾನೆ' ಮತ್ತು 'ಶೋಭಾನ' ಎಂದೇ ಬಳಕೆಯಿರುತ್ತದೆ. ಸೋಬಾನ, ಸೋಬಾನ ಪದ ಎನ್ನುವ ವಾಡಿಕೆಯಿಲ್ಲ. ಜಾನಪದ ಗೀತಗಳಲ್ಲಿ ಬರುವ 'ಸೋಬಾನ' ಎಂಬುದರಲ್ಲಿ 'ಸೋ' ಎಂಬುದು, ಮತ್ತು 'ಸುವ್ವಿ' ಎಂಬುದು 'ಶಿವ' ಎಂಬ ಅರ್ಥವುಳ್ಳದೆಂದು ಅಭಿಪ್ರಾಯ ಪಡುತ್ತಾರೆ.[2]

ಕೆಲವು ಶೋಭಾನೆ ಹಾಡುಗಳಲ್ಲಿ—ಮುಖ್ಯವಾಗಿ ಆರತಿ ಬೆಳಗುವ ಧವಳಾರಗಳಲ್ಲಿ ಕೊನೆಗೆ ಪಲ್ಲವಿಯಂತೆ 'ಶೋಭಾನೆ' ಎಂಬ ಉಚ್ಚಾರಣೆ ಮಾಡುತ್ತಾರೆ. ಇದು ಮಂಗಲಕರ (ಶಿವ) ಎಂಬ ಅರ್ಥದ್ಯೋತಕವಾಗಿ ಕಾಣುತ್ತದೆ. 'ಶೋಭನ ಗೀತ' ಎಂಬಲ್ಲಿ 'ಗೀತ' ಎಂದರೆ 'ಹಾಡು' ಎಂದೇ ಅರ್ಥ. ಕೆಲವರು ಇದನ್ನು 'ಗೀತೆ' ಎಂದು ಎತ್ವಯುಕ್ತವಾಗಿ ಬಳಸುತ್ತಿದ್ದಾರೆ. ಲೋಕಗೀತೆ, ಜಾನಪದಗೀತೆ, ಭಾವಗೀತೆ, ಗೃಹಿಣೀಗೀತೆ ಎಂದು ಕೆಲರು ಪ್ರಯೋಗಿಸಿರುವುದು ಕಂಡುಬರುತ್ತದೆ. ಇದು ಸರಿಯೆ ? ಇಲ್ಲಿ ಸರಿಯಾದ ಶಬ್ದ ಯಾವುದು ಎಂಬ ವಿವೇಚನೆ ಅವಶ್ಯ.

## ಗೀತ–ಗೀತೆ ; ಪದ–ಹಾಡು

ಸಂಸ್ಕೃತದಲ್ಲಿ 'ಗೀತಂ' ಎಂಬುದು ಅಕಾರಾಂತ ನಪುಂಸಕ ಲಿಂಗದ ಶಬ್ದ. 'ಗೀಯತೇ'—ಹಾಡುವಂತಹದು ಎಂದು ಈ ಶಬ್ದದ ವ್ಯುತ್ಪತ್ತಿ. ಗೀತದ ಲಕ್ಷಣ ಹೀಗಿದೆ—

> ಧಾತು ಮಾತು ಸಮಾಯುಕ್ತಂ ಗೀತಮಿತ್ಯುಚ್ಯತೇ ಬುಧೈಃ
> ತತ್ರ ನಾದಾತ್ಮಕೋ ಧಾತುಃ ಮಾತುರಕ್ಷರ ಸಂಜ್ಞಕಃ[3]

ಈ ಲಕ್ಷಣದಂತೆ, ನಾದಾತ್ಮಕ ಅಕ್ಷರಾತ್ಮಕ—ಎರಡೂ ಆಗಿರುವುದು ಎಂದರೆ, ಹಾಡಲು ಅಳವಡುವ ಸಾಹಿತ್ಯಾಂಶವುಳ್ಳ ಪದ್ಯವೇ ಗೀತ—ಎಂದ ಹಾಗಾಯಿತು. 'ಗೀತಮೆನೆ ಗಾನಮೆನೆ ಪಾಡೆನಿಕ್ಕುಂ'[4] ಎಂದು ನಿಘಂಟಿನಲ್ಲಿ ಹೇಳಿದೆ. 'ಗೀತೆ' ಎಂಬುದು ಸಂಸ್ಕೃತದ 'ಗೀತಾ' ಎಂಬ ಆಕಾರಾಂತ ಸ್ತ್ರೀಲಿಂಗ ಶಬ್ದದ ಸಮಸಂಸ್ಕೃತ ರೂಪ. ಇದರ ವ್ಯುತ್ಪತ್ತಿ

ಕೂಡ 'ಗೀಯತೇ' ಎಂಬುದೇ ಆಗಿದ್ದರೂ ಗೀತ, ಗೀತೆ ಎಂಬೆರಡೂ ಒಂದೇ ಅಲ್ಲ. ಶಬ್ದಕಲ್ಪದ್ರುಮ, ವಾಚಸ್ಪತ್ಯ—ಮುಂತಾದ ಸಂಸ್ಕೃತ ನಿಘಂಟುಗಳ ಪ್ರಕಾರ ಗುರು ಶಿಷ್ಯ ಕಲ್ಪನೆಯಿಂದ ಆತ್ಮವಿದ್ಯೋಪದೇಶಕವೂ ಬ್ರಹ್ಮತತ್ತ್ವಮಯವೂ ಆದುದು 'ಗೀತೆ'. 'ಭಗವದ್ಗೀತೆ' ಇದಕ್ಕೆ ಮುಖ್ಯ ಉದಾಹರಣೆ. ಗಣೇಶ ಗೀತೆ, ಶಿವಗೀತೆ, ರಾಮಗೀತೆ, ಮುಂತಾದುವೆಲ್ಲ ಗೀತೆಗಳು. ಇನ್ನುಳಿದ ಲೌಕಿಕ ವಿಚಾರಗಳುಳ್ಳವು ಗೀತಗಳು. ಜಾನಪದಗೀತೆ, ಲೋಕಗೀತೆ, ಶೋಭನಗೀತೆ, ಭಾವಗೀತೆ, ಗೃಹಿಣೀ ಗೀತೆ—ಎಂಬಲ್ಲೆಲ್ಲ 'ಗೀತೆ' ಎಂಬುದು ಅಶುದ್ಧ ಪ್ರಯೋಗವೇ ಸರಿ. ಲಲಿತಕಲೆಗಳಲ್ಲಿ ಶ್ರೇಷ್ಠವಾದ 'ಸಂಗೀತ' ಎಂಬಲ್ಲಿ 'ಗೀತ' ಎಂಬ ರೂಪವಿದೆ. 'ಗೀತೆ' ಎಂಬುದಿಲ್ಲ. ಸಂಸ್ಕೃತದಲ್ಲಿ ಜಯದೇವ ಕವಿಯ 'ಗೀತಗೋವಿಂದ', ಬಿ.ಎಂ.ಶ್ರೀ.ಯವರ 'ಇಂಗ್ಲಿಷ್ ಗೀತಗಳು', ಬೇಂದ್ರೆಯವರ 'ಸಖೀಗೀತ', ವಿನಾಯಕರ 'ಸಮುದ್ರ ಗೀತಗಳು'—ಎಂಬಲ್ಲೆಲ್ಲ ಅಕಾರಾಂತವನ್ನೆ ಪ್ರಜ್ಞಾಯುಕ್ತವಾಗಿ ಅವರು ಪ್ರಯೋಗಿಸಿರುವುದು ಕಂಡುಬರುತ್ತದೆ.

'ಹಾಡು' ಎಂಬರ್ಥವನ್ನು ಕೊಡುವ ಇನ್ನೊಂದು ಶಬ್ದ 'ಪದ'. ದಾಸರ ಪದ, ಯಕ್ಷಗಾನಪದ, ಭಜನೆ ಪದ, ತುಂಡುಪದ, ಡೊಳ್ಳಿನ ಪದ, ಹಳ್ಳಿಯ ಪದ, ಮಕ್ಕಳ ಪದ, ಜೋಗುಳ ಪದ, ಸರ್ವಜ್ಞಪದ, ನಾಡ ಪದ—ಎಂಬಲ್ಲೆಲ್ಲ 'ಹಾಡು' ಎಂಬ ಅರ್ಥದಲ್ಲಿಯೆ 'ಪದ' ಬಳಕೆಯಾಗಿದೆ. ಸಂಸ್ಕೃತ ಶಬ್ದಕೋಶಗಳಲ್ಲಿ 'ಹಾಡು' (ಗೀತ) ಎಂಬರ್ಥದಲ್ಲಿ ಇದು ಕಂಡುಬರುವುದಿಲ್ಲ. ಆದರೆ ನಾಟ್ಯಶಾಸ್ತ್ರದಲ್ಲಿ ಗಾನಕ್ಕೆ ಪ್ರಶಸ್ತವಾದ ಛಂದೋರಚನೆಯನ್ನು ಪಾರಿಭಾಷಿಕವಾಗಿ ಪದ, ಜಾತಿ, ಅಕ್ಷರ—ಎಂದಿರುವುದಾಗಿ ತಿಳಿದುಬರುತ್ತದೆ.[5] 'ಜಾತಿ' ಎಂಬುದು ಮಾತ್ರಾಗಣ ನಿಬದ್ಧ ರಚನೆ (ಜಾತಿರ್ಮಾತ್ರಾಕೃತಾ ಭವೇತ್). ಅಕ್ಷರ (ಅಕ್ಕರ) ಎಂಬುದನ್ನು ಹಾಡೆಂಬ ಅರ್ಥದಲ್ಲಿ ಸರ್ವಜ್ಞನು ಬಳಸಿದ್ದಾನೆ—

ಪ್ರಾಸಿಲ್ಲದಕ್ಕರವ ತಾಸು ಹಾಡಿದರೇನು
ಸಾಸಿವೆ ಸುಣ್ಣ ಹದಮಾಡಿ—ಕಣ್ಣಿಂಗೆ
ಪೂಸಿಕೊಂಡಂತೆ—ಸರ್ವಜ್ಞ

ಕನ್ನಡದಲ್ಲಿ ಪ್ರಾಚೀನ ಕಾಲದಿಂದಲೆ, ಹಾಡುವುದಕ್ಕೊಪ್ಪುವ ರಚನೆಯನ್ನು, ಪಲ್ಲವಿಯಿಂದ ಕೂಡಿದುದನ್ನು 'ಪದ' ಎಂದು ತಿಳಿಯಲಾಗಿದೆ. ಪಲ್ಲವಿಯನ್ನು ನಾಗವರ್ಮನು 'ಪಲ್ಲವ' ಎಂದು ಕರೆದಿದ್ದಾನೆ—

ನಲ್ಲಳೆ, ಪದವಿಡುವೆಡೆಯೊಳ್
ಪಲ್ಲವದೊಳ್ ಪದದೊಳುಭಯ ಗಣ ಸಮನಾಗಲ್

ಸಲ್ಲಲಿತ ಕೀರ್ತಿಯಾದವು
ದಲ್ಲದೊಡಾ ಕೃತಿಗೆ ಹಾನಿ ತಪ್ಪದೆ ಬರ್ಕುಂ[6]

ಪಲ್ಲವಿಯುಕ್ತವಾಗಿ ಪದವನ್ನು (ಹಾಡನ್ನು) ರಚಿಸುವಾಗ ಆ ಪಲ್ಲವಿಯಲ್ಲಿಯೂ ಪದದಲ್ಲಿಯೂ ಗಣಗಳು ಒಂದೇ ರೀತಿಯವಾಗಿರಬೇಕು—ಎಂಬ ಛಂದೋನಿಯಮ ಇಲ್ಲಿ ಸೂಚಿತವಾಗಿದೆ. ಪಲ್ಲವಿಯು ಪದದ ಗರ್ಭ (ಪದಗರ್ಭಂ ತು ಪಲ್ಲವೀ). ಷಟ್ಪದಿ ಕಾವ್ಯಗಳ ಸಂಧಿ ಪ್ರಾರಂಭದಲ್ಲಿ ಒಂದು ಅರ್ಧ ಷಟ್ಪದಿಯಿದ್ದು, ಇದನ್ನು ಸೂಚನೆ ಪದ್ಯವೆಂದು ಅಥವಾ ಪಲ್ಲವಿಯೆಂದು ಕರೆಯಲಾಗಿದೆ. ಇದರಲ್ಲಿ ಆಯಾ ಸಂಧಿಯ ಕಥಾವಸ್ತು ನಿರೂಪಣೆಯಿರುತ್ತದೆ. ಈ ಪಲ್ಲವಿಯಲ್ಲಿ ನಿರೂಪಿಸಿದ ಕಥಾವಸ್ತುವಿನ ವಿಸ್ತರಣೆಯೇ ಸಂಧಿಯಲ್ಲಿ ಬರುವ ವಿಷಯ. ಪಲ್ಲವಿ—ಪದ ವಿಚಾರವೂ ಹಾಗೆಯೇ. ಪಲ್ಲವಿಯಲ್ಲಿ ಹೇಳಿದುದನ್ನು ಪದದಲ್ಲಿ ಅಂದರೆ ಹಾಡಿನ ನುಡಿಗಳಲ್ಲಿ ವಿಸ್ತರಿಸಿ ನಿರೂಪಣೆ ಮಾಡಿರುತ್ತದೆ. 'ಕವಿಜಿಹ್ವಾಬಂಧನ'ದಲ್ಲಿ ಇದನ್ನೆ ಹೇಳಿದೆ. ಪದ—ಪದ್ಯಗಳು ಮಾತ್ರಾಕ್ಷರಗಳ ನಿಯಮಗಳಿಂದಲೆ ಆಗಿದ್ದರೂ ಇವುಗಳೊಳಗೆ ವ್ಯತ್ಯಾಸವಿದೆ. ವೃತ್ತಾದಿ ಪ್ರೌಢ ರಚನೆ ಪದ್ಯ. ಪಲ್ಲವಿಯಿಂದ ಕೂಡಿ ಹಾಡುವುದಕ್ಕಾಗಿ ರಚಿತವಾದುದು 'ಪದ'. ಪದ್ಯ ಓದುಗಬ್ಬ, ಪದ ಹಾಡುಗಬ್ಬ. ದಾಸರ ಪದ, ಯಕ್ಷಗಾನ ಪದ, ತುಂಡುಪದ—ಎಂಬಲ್ಲೆಲ್ಲ 'ಹಾಡು' ಎಂಬರ್ಥದಲ್ಲಿಯೇ 'ಪದ' ಬಳಕೆಯಾಗಿದೆ. ಈ ಪದಗಳು ಪಲ್ಲವಿಯುಳ್ಳವೆಂದೆನಿಸಿದರೂ ವಿರಳವಾಗಿ ಪಲ್ಲವಿಯಿಲ್ಲದ ಪದಗಳೂ ಇರುತ್ತವೆ. 'ಪದವಿಡು' ಎಂಬುದು ಮಹಾಕವಿಗಳ ಪ್ರಯೋಗದಲ್ಲಿಯೂ ಇದೆ—

ಮಿಗೆ ಪದಮಿಡಲಱಿಯದ ನಾ
ಲಗೆವೆಱವರ್ ಸಲೆ ಸದರ್ಥಮಂ ಕಾಣದ ಪೋ
ಬಗೆಗುರುಡರ್ ಬಗೆವೊಡೆ ಕ
ಕಬ್ಬಿಗರಕ್ಕುಮೆ ಓದುಗೇಳದಕ್ಕರಗಿವುಡರ್[7]

ಇಲ್ಲಿ ಪದವಿಡು ಎಂಬುದಕ್ಕೆ ಕವಿತಾರಚನೆ ಮಾಡು ಎಂಬುದು ಸಾಮಾನ್ಯಾರ್ಥವಾದರೂ ಪದವನ್ನು (ಹಾಡನ್ನು) ಬರೆ—ಎಂಬುದು ವಿಶೇಷಾರ್ಥವಾಗಿ ಕಾಣುತ್ತದೆ. ಕವಿರಾಜಮಾರ್ಗ, ಕವಿಜಿಹ್ವಾಬಂಧನ—ಮುಂತಾದವುಗಳಲ್ಲೆಲ್ಲ ಪದ–ಪದ್ಯ ಎಂಬೆರಡನ್ನೂ ಜೊತೆಗೂಡಿ ತಿಳಿಸಲಾಗಿದೆ. ವೃತ್ತ–ಜಾತಿ–ಪದ ಎಂಬ ಮೂರು ಬಗೆಯ ರಚನಾ ವಿಚಾರ ಕವಿರಾಜಮಾರ್ಗದಲ್ಲಿದೆ.[8] ವೃತ್ತ ಅಕ್ಷರಗಣಾತ್ಮಕ, ಜಾತಿ ಮಾತ್ರಾಗಣಗಳಿಂದ ಆದುದೆಂದು ತಿಳಿಯಬಹುದು.

ಪದ ಮತ್ತು ಹಾಡು ಎಂಬಿವೆರಡೂ ಸಮಾನಾರ್ಥಕಗಳಾಗಿಯೇ ಕಾಣುತ್ತವೆ. 'ಪದ' ಎಂಬುದು 'ಪದನ' ಎಂತಲೂ ಬಳಕೆಯಾಗಿದೆ, ಹಂಗುಸರ ಶೋಭಾನೆಗಳಲ್ಲಿ

'ಪದನವ (ಪದನವನ್ನು, ಪದವನ್ನು) ರಚಿಸುವೆ' ಎಂಬ ಉಲ್ಲೇಖ ಎಷ್ಟೋ ಕಡೆಗಳಲ್ಲಿ ಬಂದಿದೆ. ಹೀಗಿದ್ದರೂ ಹವ್ಯಕರ ಬಳಕೆಯಲ್ಲಿ ಶೋಭಾನೆಗಳನ್ನು 'ಪದ' ಎನ್ನುವುದಿಲ್ಲ. (ಶೋಭಾನೆ ಪದ ಎನ್ನುವುದಿಲ್ಲ). ಪುರುಷರು ಹಾಡುವುದನ್ನು ಮಾತ್ರ 'ಪದ ಹೇಳುವುದು' ಎನ್ನಲಾಗುತ್ತಿದೆ. ಸ್ತ್ರೀಯರು ಹಾಡುವುದನ್ನು 'ಹಾಡು ಹೇಳುವುದು' ಎಂದು ನಿಶ್ಚಿತ ವಾಕ್ಪ್ರಯೋಗ ರೂಢಿವಡೆದಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಕೂಡ, 'ಹಾಡು' ಎಂಬುದನ್ನು ಇದೇ ಅರ್ಥದಲ್ಲಿ ಬಳಸುತ್ತಿರುವುದಾಗಿ ತಿಳಿದುಬರುತ್ತದೆ—

"ಗಂಡಸರೇ ರಚಿಸಿದ್ದರೂ ಹೆಂಗಸರು ಹೇಳಬೇಕಾದ ಪದ್ಯಗಳಿಗೆ ಮಾತ್ರ ಹಾಡುಗಳೆನ್ನುವುದು ನಮ್ಮ ಜಿಲ್ಲೆಯಲ್ಲಿ ರೂಢವಾದ ಅರ್ಥ".[9]

ಹಿಂದೆ ತಿಳಿಸಿದಂತೆ ಯಕ್ಷಗಾನದ ಪದ್ಯಗಳಿಗೆಲ್ಲ 'ಪದ' ಎಂದೇ ಸಂಜ್ಞೆ. ಅವನ್ನು ಹಾಡುವುದಕ್ಕೆ 'ಪದ ಹೇಳುವುದು' ಎನ್ನುತ್ತಾರೆ. ರಾಗ–ತಾಳ ಬದ್ಧವಾದ ಒಂದು ಪದದಲ್ಲಿ ನಾಲ್ಕೈದು ನುಡಿ (**stanza**) ಗಳಿರುತ್ತವೆ. ಈ ಒಂದೊಂದು ನುಡಿಗೂ 'ಪದ' ಎಂದೇ ಸಂಜ್ಞೆ. ಉದಾಹರಣೆ—ಕೇತಾರಗೌಳ ಅಷ್ಟತಾಳ—ಎಂಬ ಸೂಚನೆಯಿರುವ ಪದದಲ್ಲಿ ನಾಲ್ಕೋ ಐದೋ ನುಡಿಗಳಿರುತ್ತವೆ. ಹೀಗಿರುವುದನ್ನು ಐದು ಪದಗಳಿರುವ 'ಕೇತಾರಗೌಳ ಅಷ್ಟತಾಳದ ಪದ'—ಎನ್ನುತ್ತಾರೆ. ಆದರೆ ಶೋಭಾನೆಗಳಲ್ಲಿ ಪ್ರತಿಯೊಂದರಲ್ಲಿಯೂ ಇರುವ ನುಡಿಗಳು 'ಸೊಲ್ಲುಗಳು'. 'ಸೊಲ್ಲು' ಎಂದೇ ಇಲ್ಲಿ ಸಂಜ್ಞೆ. ಹವ್ಯಕ ಸ್ತ್ರೀಯರ ಉಚ್ಚಾರಣೆಯಲ್ಲಿ ಇದು 'ಸೂಲು' ಅಥವಾ 'ಸುಲು' ಎಂತಲೂ ಉಂಟು. ಸೊಲ್ಲಿನಲ್ಲಿರುವ ಪಾದಗಳಿಗೆ 'ಸಾಲುಗಳು' ಎನ್ನುತ್ತಾರೆ.

## ಶೋಭನಗೀತಗಳ ಪ್ರಾಚೀನತೆ

ಶೋಭಾನೆ ಹಾಡುಗಳಿಗೆ ಸಮಾಜದಲ್ಲಿ ಮದುವೆ ಮುಂತಾದ ಶುಭಕಾರ್ಯಗಳಷ್ಟೇ ಪ್ರಾಚೀನತೆಯಿದೆ. ಒಂದು ತ್ರಿಪದಿ ಶೋಭಾನೆಯ ಸೊಲ್ಲಿನಲ್ಲಿ ಹೀಗೆ ಹೇಳಿದೆ.

ಸೋಬಾನ ಪೇಳೋದ ಯಾರಮ್ಮ ಮಾಡಿದೊರು
ನಾರಾಯಣ ಬಲ್ಲ ಶಿವ ಬಲ್ಲ—ಸೋಬಾನಗಳ
ಸ್ವಾಮಿ ಈಶ್ವರನ ಮದುವೇಲಿ—ಸೋಬಾನಗಳು
ಆಗ್ಹುಟ್ಟಿ ಆಗ—ಬೆಳದವ[10]

ಇನ್ನೊಂದೆಡೆ ಹೀಗೆ ಹೇಳಿದೆ—

ಸೋಬಾನ ಶುಭಕಾರ್ಯ ಯಾವಲ್ಲಿ ಹುಟ್ಯಾವ
ಬಾಗೆಯುಳ್ಳವರ ಮನಿಯಾಗ । ಸೋ । ಶುಭಕಾರ್ಯ
ಆಗ ಹುಟ್ಯಾಗ—ಬೆಳದಾವ । ಸೋ ।[11]

ಪ್ರಪಂಚಕ್ಕೆ ಮಾತಾಪಿತರಾದ ಶಿವ ಪಾರ್ವತಿಯರ ಮದುವೆಯಲ್ಲಿ ಮೊತ್ತ ಮೊದಲು ಶೋಭಾನೆಗಳನ್ನು ಹಾಡಲಾಯಿತು—ಎಂಬುದು, ಭಾಗ್ಯಶಾಲಿಗಳ ಮನೆಯಲ್ಲಿ ಶುಭಕಾರ್ಯದೊಡನೆ ಶೋಭಾನೆ ಹಾಡು ಹುಟ್ಟಿ ಬೆಳೆಯಿತು ಎಂಬುದು—ಈ ಹಾಡುಗಳು ಹೇಗೆ ಅನಾದಿಯೆಂಬುದರ ಸೂಚಕವಾಗಿದೆ. ಈಗ ಕನ್ನಡ ಸಾಹಿತ್ಯದಲ್ಲಿ ಉಲ್ಲೇಖ ವಿರುವಂತೆ ಇವುಗಳ ಪ್ರಾಚೀನತೆಯನ್ನು ನೋಡೋಣ :

ಕನ್ನಡದಲ್ಲಿ ಉಪಲಬ್ಧವಾಗಿರುವ ಮೊತ್ತಮೊದಲ ಗ್ರಂಥ ಕವಿರಾಜಮಾರ್ಗ. ಇದರಲ್ಲಿ ಆ ಕಾಲಕ್ಕೆ ಹಿಂದೆಯೆ ರೂಢಿವಡೆದಿದ್ದ ಬೆದಂಡೆ, ಚತ್ತಾಣ,—ಎಂಬ ದೇಸಿ ಗಬ್ಬಗಳನ್ನು ಪ್ರಸ್ತಾವಿಸಲಾಗಿದೆ.[12] ಈ ಎರಡು ದೇಸಿ ಗಬ್ಬಗಳಲ್ಲಿ ಅಡಕವಾಗುವ ಛಂದಃಸ್ವರೂಪವನ್ನು ಕವಿರಾಜಮಾರ್ಗವೇ ಎರಡು ಕಂದಪದ್ಯಗಳಲ್ಲಿ ತಿಳಿಸಿದೆ. ಅವು ಹೀಗೆ—

ಕಂದಮುಮಮಳಿನ ವೃತ್ತಮು
ವೊಂದೊಂದೆಡೆಗೊಂಡು, ಜಾತಿ ಜಾಣೆಸೆಯೆ ಬೆಡಂ
ಗೊದಿವಱಿೊಳಮರೆ ಪೇೞಲ್
ಸುಂದರ ರೂಪಿಂ ಬೆದಂಡೆಗಬ್ಬಮದಕ್ಕುಂ

ಕಂದಂಗಳ್ ಪಲವಾಗಿರೆ
ಸುಂದರ ವೃತ್ತಂಗಳಕ್ಕರಂ ಚೌಪದಿ ಮ
ತ್ತಂ ದಲ್ ಗೀತಿಕೆ ತಿವದಿಗ
ಳಂದಂ ಬೆತ್ತೆಸೆಯೆ ಪೇೞೊ್ದಡದು ಚತ್ತಾಣಂ

ಬೆದಂಡೆ, ಚತ್ತಾಣಗಳ ವಿಚಾರವಾಗಿ ಸುಮಾರು ನಲ್ವತ್ತು ವರ್ಷಗಳಿಂದಲೇ ವಿದ್ವಾಂಸರು ಸಂಶೋಧನೆಗಳ ಚರ್ಚೆಗಳನ್ನು ಮಾಡುತ್ತ ಬಂದಿದ್ದಾರೆ. ಮುಳಿಯ ತಿಮ್ಮಪ್ಪಯ್ಯನವರು ತಮ್ಮ ಪಾರ್ತಿಸುಬ್ಬ ಕೃತಿಯಲ್ಲಿ (1945, ಪುಟ 34), ಮತ್ತು ಕವಿರಾಜಮಾರ್ಗವಿವೇಕ ಗ್ರಂಥದಲ್ಲಿ (1973, ಪುಟ 104–107), ತೀ. ನಂ. ಶ್ರೀಕಂಠಯ್ಯನವರು ತಮ್ಮ ಲೇಖನದಲ್ಲಿ (ಪ್ರಬುದ್ಧ ಕರ್ಣಾಟಕ, 1974, ಸಂಪುಟ 44–4, ಪುಟ 90–91, ಚತ್ತಾಣ ಮತ್ತು ಬೆದಂಡೆ), ಕುಕ್ಕಿಲ ಕೃಷ್ಣಭಟ್ಟರು 'ಕಮ್ಮಟದ ಕಿಡಿಗಳು' ಎಂಬಲ್ಲಿ (ಪ್ರ. ಕ. 53–3, 1971), ಡಾ॥ ಎಂ. ಚಿದಾನಂದ ಮೂರ್ತಿಯವರು ತಮ್ಮ 'ಸಂಶೋಧನ ತರಂಗ' ಎಂಬ ಗ್ರಂಥದಲ್ಲಿ (ಭಾಗ 1, ಪುಟ 245, 1966) ಮತ್ತು ಕವಿರಾಜಮಾರ್ಗ (ಐ.ಬಿ.ಎಚ್.) ಗ್ರಂಥಲೇಖನದಲ್ಲಿ (ಪುಟ 21–23, 1973), ಡಾ॥ ಡಂ. ಶ್ರೀ. ಮುಗಳಿಯವರು 'ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು' ಎಂಬ ಪುಸ್ತಕದಲ್ಲಿ (ಪುಟ 14, 1973), ಎಂ. ವಿ. ಸೀತಾರಾಮಯ್ಯ

ನವರು 'ಭಾರತೀಯ ಕಾವ್ಯಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ' ಎಂಬ ಉಪನ್ಯಾಸದಲ್ಲಿ (1974) ಮತ್ತು ತಮ್ಮ ಸಂಪಾದನೆಯ 'ಕವಿರಾಜಮಾರ್ಗ' ಗ್ರಂಥ ದಲ್ಲಿ (1969, ಟಿಪ್ಪಣಿಗಳು, ಪುಟ 133), ಟಿ. ಕೇಶವ ಭಟ್ಟರು 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ', ಸಂಪುಟ 1ರ ಲೇಖನದಲ್ಲಿ (1974, ಪುಟ 58–61) ಈ ವಿಷಯ ದಲ್ಲಿ ಚರ್ಚಿಸಿ ಆಗಿದೆ. 'ಬೆದಂಡೆ' ಎಂಬುದು 'ವೈದಂಡಿಕ'ದ ತದ್ಭವವೆಂಬುದು ನಿಜ. ಅದೊಂದು 'ಬಾಜನೆಗಬ್ಬ'. 'ಬಾಜನೆ' ಎಂಬುದು 'ವಾದನ'ದ ತದ್ಭವವೆಂದು ಒಂದು ಪಕ್ಷ (ಮುಳಿಯ, ಮುಗಳಿ, ಈ ಲೇಖಕ ಕೂಡ). 'ವಾಚನ'ದ ಅಪಭ್ರಂಶ ಶಬ್ದವೆಂದು ಇನ್ನೊಂದು ಅಭಿಪ್ರಾಯದವರು (ತೀ. ನಂ. ಶ್ರೀ. ಮುಂತಾದವರು) ಕೆಲವರು. 'ವಾದನ' ಎಂಬುದರ ತದ್ಭವವಾದರೆ, ಮುಳಿಯ ತಿಮ್ಮಪ್ಪಯ್ಯನವರು ಹೇಳಿರುವಂತೆ, ಅದು ಗಂಡುಸರ ಹಾಡಾಗಿರುವ ಯಕ್ಷಗಾನ ಪ್ರಸಂಗಗಳ ಸಾಹಿತ್ಯವೆನ್ನಬಹುದು. ಪಾಮರ ರಂಜಕವಾಗಿರುವ ಅದರ ಪದಗಳಲ್ಲಿ ಅಶ್ಲೀಲ ಶೃಂಗಾರ ವಿಷಯವಿರುವುದನ್ನು ಡಾ॥ ಚಿದಾನಂದ ಮೂರ್ತಿಯವರು ಆಧಾರಗಳಿಂದ ನಿರೂಪಿಸಿದ್ದಾರೆ. ಇಲ್ಲಿ ಅದರ ವಿಸ್ತೃತ ಚರ್ಚೆಗೆ ಅವಕಾಶ ಮಾಡಿಕೊಂಡಿಲ್ಲ.

'ಚತ್ತಾಣ'ವು 'ಚಿತ್ರಾಯತನ' ಎಂಬುದರ ತದ್ಭವವೆಂದು ತೀ. ನಂ. ಶ್ರೀ. ಅವರು ಅಭಿಪ್ರಾಯಪಟ್ಟಿದ್ದಾರೆ. ಕುಕ್ಕಿಲ ಕೃಷ್ಣಭಟ್ಟರು ಚತ್ತಾಣವು 'ಷಟ್ ಸ್ಥಾನ' ಎಂಬುದರಿಂದ ಬಂತೆಂದು ವಿವರಿಸಿದ್ದಾರೆ. ಚತ್ತಾಣದಲ್ಲಿ ಕಂದ, ವೃತ್ತ, ಅಕ್ಕರ, ಚೌಪದಿ, ಗೀತಿಕೆ, ತ್ರಿಪದಿ—ಎಂಬೀ ಆರು ಬಗೆಯ ಛಂದೋರೂಪಗಳಿಗೆ ಸ್ಥಾನವಿದೆ ಯೆಂದು ಕವಿರಾಜಮಾರ್ಗದಲ್ಲಿ ಹೇಳಿರುವುದನ್ನೆ ಲಕ್ಷ್ಯವಾಗಿಟ್ಟು ಇದನ್ನಿವರು 'ಷಟ್ ಸ್ಥಾನ ಕಾವ್ಯ' ಎಂದು ಕರೆದು, ಅದರ ತದ್ಭವವಾಗಿ 'ಚತ್ತಾಣ' ಎಂಬ ಹೆಸರಾದು ದೆಂದು ತಿಳಿಸಿದ್ದಾರೆ. ಪ್ರಕೃತ ನಮಗೆ ಚತ್ತಾಣವೆಂಬುದು ಅಲ್ಲಿ ಉಕ್ತವಾದ ಛಂದೋ ರೂಪಗಳ ದೃಷ್ಟಿಯಿಂದ ಹೆಂಗುಸರು ಹಾಡುವ ಶೋಭಾನೆಗಳು (ಶೋಭನಗೀತ ಸಾಹಿತ್ಯ) ಆಗಿರಬೇಕೆನ್ನಲು ಸಮರ್ಥನೆ ಕಂಡುಬರುತ್ತದೆ. ಪ್ರಾಚೀನ ಕಾಲದ ಶೋಭಾನೆಗಳಲ್ಲಿ ಹಲವು ಕಂದಗಳು, ಸುಂದರವಾದ ವೃತ್ತಗಳು ಇದ್ದಿರಲು ಸಾಧ್ಯ. ಇಂದಿಗೆ ಕೂಡ, ವಿವಾಹ ಮಂಟಪದಲ್ಲಿ ಹಿಡಿದ ತೆರೆಯ ಆಚೀಚೆ ವಧೂವರರು ವರಣ ಮಾಲಿಕೆ ಹಿಡಿದು ಪರಸ್ಪರ ಅವನ್ನು ತೊಡಿಸಲು ಮುಹೂರ್ತ ಸಾವಧಾನರಾಗಿರುವಾಗ, ಪುರೋಹಿತರು ವೃತ್ತರೂಪದಲ್ಲಿರುವ 'ಮಂಗಲಾಷ್ಟಕ'ವನ್ನು ಪಠಿಸುತ್ತಾರೆ. ಸ್ತ್ರೀಯರ ಸಭೆಯಲ್ಲಿ ಮಂಗಲಾಷ್ಟಕದ ಅರ್ಥವೇ ಉಳ್ಳ ಶೋಭಾನೆಗಳನ್ನು ಹಾಡುತ್ತಾರೆ. ಹಿಂದಿನ ಕಾಲದಲ್ಲಿ ಮುತ್ತೈದೆಯರು ಶೋಭಾನೆಗಳ ಭಾಗವಾಗಿಯೇ ಮಂಗಳಾರ್ಥಕ ವಾದ ವೃತ್ತಗಳನ್ನು ಹಾಡುತ್ತಿದ್ದರೆಂದು ತಿಳಿದುಬಂದಿದೆ. ಆದುದರಿಂದ ಶೋಭನ ಗೀತಗಳಲ್ಲಿ ವೃತ್ತಗಳೂ ಇರುತ್ತಿದ್ದುವೆಂಬುದು ಅಸಹಜವಾದ ಮಾತೇನೂ ಅಲ್ಲ. ಹಾಗೆಯೇ ಕಂದ ಪದ್ಯವೂ ಶೋಭಾನೆಗಳಲ್ಲಿ ವಿರಳವಾಗಿ ಕಂಡುಬಂದಿದೆ. ಒಂದನ್ನಿಲ್ಲಿ

ಉದಾಹರಿಸಬಹುದು—ಇದು ಸತ್ಯನಾರಾಯಣ ದೇವರಿಗೆ ಆರತಿ ಬೆಳಗುವ ಶೋಭಾನೆಯ ಒಂದು ಸೊಲ್ಲು—

ಆರತಿ ಸತ್ಯೇಶನಿಗೇ
ಆರತಿ ಭಕ್ತರ ನಿವಹವ ರಕ್ಷಿಸುವವಗೇ
ಆರತಿ ಲಕ್ಷ್ಮೀವರನಿಗೆ
ಆರತಿ ವರದಾತ ದೇವವಂದಿತ ಹರಿಗೇ
ಮಂಗಳಾರತಿಯಾ—ಬೆಳಗಿರೇ ॥

ಇದು ಕಂದಪದ್ಯವಾಗಿರುವ ಶೋಭಾನೆ ಹಾಡು. ಸೊಲ್ಲಿನ ಕೊನೆಗೆ ಮಂಗಳಾರತಿಯಾ ಬೆಳಗಿರೇ—ಎಂಬ ತ್ರಿಪದಿಮಕುಟ ಕಂಡುಬರುತ್ತದೆ. ಈ ಎರಡು ಉದಾಹರಣೆಗಳಿಂದ ವೃತ್ತ, ಕಂದಪದ್ಯಗಳು 'ಚತ್ತಾಣ' ಎಂಬ ದೇಸಿಗಬ್ಬದ ಪದ್ಯ ಘಟಕಗಳಾಗಿರುವುದು ಮತ್ತು ಶೋಭಾನೆ ಹಾಡಾಗಿಯೂ ಪ್ರಚಲಿತವಿರುವುದು ವಿದಿತವಾಗುತ್ತದೆ. ಕಂದ ಚತುರ್ಮಾತ್ರಾ ಗಣಗಳಿಂದಾದುದು. ಈ ನಾಲ್ಕು ಮಾತ್ರೆಯ ಗಣಗಳಿಂದ ಆಗುವ ಎಷ್ಟೋ ಹಾಡುಗಳು ಶೋಭಾನೆಗಳಲ್ಲಿ ಇದ್ದೇ ಇವೆ. ಚತುರ್ಮಾತ್ರೆಯ ಮೂರು ಘಟಕ ರೂಪಕತಾಳಕ್ಕೂ ಎರಡು–ನಾಲ್ಕರ ಘಟಕಗಳು ಏಕತಾಳ ಆದಿತಾಳಗಳಿಗೂ ಸರಿಯಾಗುತ್ತವೆಂಬುದು ತಾಳಬಲ್ಲವರಿಗೆ ಗೊತ್ತಿರುವ ಸಂಗತಿ.

ವೃತ್ತಗಳನ್ನು ಇಂದು ಕೂಡ ಬ್ರಾಹ್ಮಣ ಭೋಜನದ ವೇಳೆ ಹೆಂಗುಸರು ಕೂಡ, ಹಾಡಿ 'ಭೋಜನಕಾಲೇ ನಮಃ ಪಾರ್ವತೀಪತಯೇ ಹರಹರ ಮಹಾದೇವ' ಎಂದು ಉದ್ಘೋಷ ಮಾಡುತ್ತಾರೆ. ಆದುದರಿಂದ ಕಂದವೃತ್ತಗಳು ಶೋಭಾನೆ ಹಾಡುಗಳಲ್ಲಿ ಇದ್ದುದರಲ್ಲಿ ಏನೂ ಆಶ್ಚರ್ಯವಿಲ್ಲ. ಇನ್ನುಳಿದ ಚೌಪದಿ, ತ್ರಿಪದಿ ಹಾಗೂ ತ್ರಿಪದಿಯ ವಿಸ್ತರಣ ರೂಪಗಳಾದ ಗೀತಿಕೆ, ಅಕ್ಕರ (ಪಿರಿಯಕ್ಕರ ಮುಂತಾದವು) ಈಗಿನ ಶೋಭಾನೆಗಳಲ್ಲಿ ಯಥಾರೀತಿಯೂ, ಛಾಯಾ ರೀತಿಯೂ ಆಗಿ ಗೋಚರಿಸುತ್ತವೆ. ಅಷ್ಟೇ ಅಲ್ಲ; ತೀ.ನಂ.ಶ್ರೀ.ಯವರು ಹೇಳಿರುವ 'ಚತ್ರಾಯತನ'ವೇ ಚತ್ತಾಣ ವಾಗಿದ್ದರೆ ಅದು ಶೋಭಾನೆ ಹಾಡೆಂದು ಇನ್ನಷ್ಟು ದೃಢೀಕೃತವಾಗುತ್ತದೆ. 'ಚಿತ್ರಾ' ಎಂಬುದು ತ್ರಿಪದಿಯ ಪ್ರಭೇದ. ಚಿತ್ರಾ—ಆಯತನ (ಆಯತನ ಎಂದರೆ ಮನೆ ಅಥವಾ ಆಶ್ರಯಸ್ಥಾನವಷ್ಟೆ ?) ಎಂಬುದು ಶೋಭನಗೀತವೆಂಬುದು ಅಸಂಬದ್ಧದ ಮಾತಾಗದು. ಕನ್ನಡ ಸಾಹಿತ್ಯದ ಆದಿಕಾಲದಿಂದಲೇ ಪುರುಷರ ಗೀತಗಳಾಗಿ 'ಬೆದಂಡೆಗಬ್ಬಗಳು' ಹೆಂಗುಸರ ಹಾಡುಗಳಾಗಿ ಚತ್ತಾಣದ ರಚನೆಗಳೂ ಸಮೃದ್ಧವಾಗಿ ಆಗಿರಬೇಕು. ಇಂದೂ ಈ ಎರಡು ಬಗೆಯ ದೇಸಿಗಬ್ಬಗಳನ್ನು ನಾವು ಕಾಣುತ್ತೇವೆ. ಈ ದೃಷ್ಟಿಕೋನದಿಂದ ಇತರರೂ ಅನ್ವೇಷಣೆ ನಡೆಸಲಿ.

## ದೇಸಿಗಬ್ಬಗಳು ವಿದ್ವತ್ಕವಿಗಳಿಂದ ಅಲಕ್ಷಿತವಲ್ಲ

ಕನ್ನಡದ ವಿದ್ವತ್ಕವಿಗಳು ಜಾನಪದ ಗೀತಗಳನ್ನು ಸಂಪೂರ್ಣವಾಗಿ ಅಲಕ್ಷಿಸಿರುವರೆಂದು ಈಗಿನ ಕೆಲವರು ಜಾನಪದಾಭಿಮಾನಿಗಳು ಆಡಿಕೊಳ್ಳುವುದುಂಟು. ಮಧುರ ಕವಿಯ ಒಂದು ಪದ್ಯವನ್ನು ಅದಕ್ಕಾಗಿಯೇ ಉದಾಹರಿಸುತ್ತಾರೆ—

ಪಂಡಿತರುಂ ವಿವಿಧ ಕಳಾ
ಮಂಡಿರತುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್
ಕಂಡರ್ ಕೇಳ್ವೊಡೆ ಗೊರವರ
ಡುಂಡುಂಬಿಯ ಬೀದಿವರಿಯ ಬೀರನ ಕಥೆಯೇ[13]

ಇದು ಶ್ರೇಷ್ಠ ಕವಿ ಕಾವ್ಯಗಳ ಹಿರಿಮೆಯ ಪ್ರಶಂಸೆಯಲ್ಲದೆ, ಜಾನಪದ ಕವಿನಿಂದೆಯಲ್ಲ. ಪಂಡಿತ ಕವಿಗಳಿಂದ ಕುಕವಿಗಳೆಂದು ನಿಂದಿತರಾದವರು ಜಾನಪದ ಕವಿಗಳಲ್ಲ. ಕನ್ನಡದ ವಿದ್ವತ್ಕವಿಗಳು ಜನಪದ ಸಾಹಿತ್ಯವನ್ನು ಅದರ ಸೊಗಸಿಗಾಗಿ ಜನಪ್ರಿಯತೆಗಾಗಿ ಮೆಚ್ಚಿದ್ದಕ್ಕೆ ಕಾವ್ಯೋದಾಹರಣೆಗಳು ತುಂಬಾ ಇವೆ. ಕವಿರಾಜಮಾರ್ಗದಲ್ಲಿಯೇ ನೋಡಬಹುದು—ಚತ್ತಾಣ, ಬೆದಂಡೆ, ಪಗರಣ ನಿಂದೆ ಅಲ್ಲಿಲ್ಲ. ಅವುಗಳ ಸ್ವರೂಪ ನಿರೂಪಣವಿದೆಯಲ್ಲದೆ ಅವನ್ನು 'ಈಗಡಿನ ಸೆಗಳ್ತೆಯ ಕಬ್ಬದೊಳೊಡಂಬಡಂ ಮಾಡಿದರ್ ಪುರಾತನ ಕವಿಗಳ್'—ಎಂದು ಕವಿಗಳ ಮೆಚ್ಚುಗೆಯನ್ನೇ ಪ್ರಕಟಿಸಿದೆ. ಕುಕವಿ ನಿಂದಕರಲ್ಲಿ ಅತ್ಯಂತ ಸಮರ್ಥನಾದ ನೇಮಿಚಂದ್ರನು (ಕಾಲ : 1170) ಒನಕೆವಾಡನ್ನು ಪ್ರಸ್ತಾವಿಸಿ, ಅದನ್ನು ಹಾಡುವ ಹೆಂಡಿರ ವಿನೋದಕ್ಕೆ ಮಹಾರಾಜನು ಮೆಚ್ಚಿ ನಕ್ಕುದಾಗಿ ತಿಳಿಸಿದ್ದಾನೆ.[14] ಇವನಿಗಿಂತ ಪ್ರಾಚೀನನಾದ ಶಿವಮಾರ ಸೈಗೊಟ್ಟನು (ಕ್ರಿ. ಶ. 800) ಬರೆದ ಗಜಾಷ್ಟಕದ ಪ್ರಾಚುರ್ಯವನ್ನು ಓರ್ವ ಶಾಸನ ಕವಿ 'ಓವನಿಗೆ ಒನಕೆವಾಡುಮಾದುದೆ ಪೇಟ್ಟುಂ' ಎಂದಿದ್ದಾನೆ.[15] ಈ ಹೋಲಿಕೆಯ ಮೂಲಕ ಅವನು ಜನಪದ ಗೀತಗಳನ್ನು ತುಂಬ ಮೆಚ್ಚಿದ್ದಾನೆ—ಎನ್ನಬಹುದು. ದುರ್ಗಸಿಂಹನು (ಕಿ, ಶ. 1032) ತನ್ನ ಕರ್ಣಾಟಕ ಪಂಚತಂತ್ರದಲ್ಲಿ ಸಮಸ್ತಾವನಿಯ ಜನಕ್ಕೂ ಪ್ರಿಯವಾದುದು 'ಒನಕೆವಾಡು' ಎಂದು ಹೇಳಿದ್ದಾನೆ—

ಎನಿತೋದನೋದಿಯುಂ ಮನ
ದನಿತೆ ವಲಂ ಬುದ್ಧಿಯುಕ್ಕುಮೆಂದು ಸಮಸ್ತಾ
ವನಿಯ ಜನನೊನಕೆವಾಡ
ಪ್ಪಿನೆಗಂ ಸಲೆ ನುಡಿದ ನುಡಿ ಯಥಾರ್ಥಂ ನಿನ್ನೊಳ್ (ಪದ್ಯ 69)

ಆಧುನಿಕ ವಿದ್ವಾಂಸರಲ್ಲಿ ಬಿ.ಎಂ.ಶ್ರೀ.ಯವರು, ಕವಿ ಬೇಂದ್ರೆಯವರು, ಮಾಸ್ತಿಯವರು ಮುಂತಾದವರು ಜನಪದ ಸಾಹಿತ್ಯಕ್ಕೆ ಅತ್ಯಂತ ಗೌರವವನ್ನು ಸಲ್ಲಿಸಿದ್ದಾರೆ.

ಅದನ್ನು ನಿಂದೆ ಮಾಡಿಲ್ಲ. ಅವರ ಹಿರಿಮೆಯನ್ನೂ ಸತ್ತ್ವವನ್ನೂ ಅಲ್ಲಗಳೆದಿಲ್ಲ. ಹೀಗಿರುವಾಗ ಜನಪದ ಸಾಹಿತ್ಯದ ಹಿರಿಮೆಯನ್ನು ಸಾರುವ ನೆಪನದಲ್ಲಿ ವಿದ್ವತ್ಕಾವ್ಯಗಳನ್ನೂ ವಿದ್ವತ್ಕವಿಗಳನ್ನೂ ಅವಹೇಳನವೆಸಗುವದು ಈ ಕಾಲದ ಜಾನಪದ ವಿದ್ವಾಂಸರಿಗೆ ಯುಕ್ತವಲ್ಲ.

## ಕಾವ್ಯಗಳಲ್ಲಿ ಶೋಭನಗೀತಗಳ ಉಲ್ಲೇಖ

ಆದಿಕವಿ ಪಂಪನ (ಕ್ರಿ.ಶ. 941) ಕಾವ್ಯದಿಂದಲೆ ಪ್ರಾರಂಭಿಸಿ, ಕನ್ನಡದ ಪ್ರಸಿದ್ಧ ಕಾವ್ಯಗಳಲ್ಲಿ ಶುಭಕಾರ್ಯದ ವೇಳೆ ವನಿತೆಯರು ಶೋಭನಗೀತ ಹಾಡಿದುದನ್ನು ಪ್ರಸ್ತಾವಿಸಲಾಗಿದೆ. ದೇವೇಂದ್ರನು ಮಂದರಾಚಲದಲ್ಲಿ ಜಿನಶಿಶುವಿಗೆ ಜನ್ಮಾಭಿಷೇಕ ಕಲ್ಯಾಣೋತ್ಸವವನ್ನು ಆಚರಿಸಿದಾಗ ಅಮರ ವನಿತೆಯರು 'ಮಂಗಲಗೀತ'ವನ್ನು ಹಾಡಿದರೆಂದು ಹೇಳಲಾಗಿದೆ—

ಸುರಕರ ನಿರ್ಭರ ಹತಿಯಿಂ
ಸುರದುಂದುಭಿ ನಿನದಮಮರ ವನಿತಾ ವದನಾಂ
ಬುರುಹದಿನೊರ್ಮೆಯೆ **ಮಂಗಲ**
ಪರಂಪರಾ **ಗೀತ** ನಿನದ ಮೊದವಿತ್ತೆತ್ತಂ16

ರನ್ನನ ಗದಾಯುದ್ಧದಲ್ಲಿ (ಕಾಲ ಕ್ರಿ.ಶ. 990, ಆ. 5, ಪದ್ಯ 41) ಧವಳ ಮಂಗಳ ಗೇಯದ ಉಲ್ಲೇಖವಿದೆ. ಅಭಿನವ ಪಂಪನೆಂಬ ಬಿರುದುಳ್ಳ ನಾಗಚಂದ್ರನು (1030) ಬರೆದ ರಾಮಚಂದ್ರಚರಿತ ಪುರಾಣದಲ್ಲಿ ಸೀತಾಸ್ವಯಂವರ ವರ್ಣನೆಯಲ್ಲಿ (ಆ. 5, ಪದ್ಯ 117 ಮತ್ತು ಪದ್ಯ 128 ಅನಂತರದ ಗದ್ಯ) **ಮಂಗಳಗಾಯಿನಿಯರ ಗೀತ**ವನ್ನೂ **ಮಾಂಗಲ್ಯ ಗೀತ ಮಧುರ ಧ್ವನಿ**ಯನ್ನೂ ಪ್ರಸ್ತಾವಿಸಲಾಗಿದೆ. ಅಗ್ಗಳನ (1189) ಚಂದ್ರಪ್ರಭ ಪುರಾಣದಲ್ಲಿ (ಆ. 6, ಪದ್ಯ 72) ಮಾಂಗಲ್ಯ ಗೀತರುತಿಯನ್ನು ಉಲ್ಲೇಖಿಸಿದೆ. ಚೌಂಡರಾಜನ ನಳಚಂಪು (1200) ನಳದಮಯಂತಿಯರ ಮದುವೆಯಲ್ಲಿ ಸುವಾಸಿನಿಯರು 'ಧವಳಾಖ್ಯ'ವನ್ನು ಹಾಡಿ ಎಂಬುದು ಕೇಳಿಸುತ್ತಿದ್ದಿತೆಂದು (ಪದ್ಯ 425) ತಿಳಿಸುತ್ತದೆ. ಸೋಮರಾಜ ಕವಿ ವಿರಚಿತ ಉದ್ಭಟಕಾವ್ಯವು (ಕಾಲ : 1222) ವಿವಾಹ ಮಂಗಳವನ್ನು ತುಂಬ ಸಜೀವತೆಯಿಂದ ಚಿತ್ರಿಸುತ್ತದೆ. ಇದರಲ್ಲಿ ಎಂಟನೆ ಆಶ್ವಾಸದಲ್ಲಿ (ಪದ್ಯಗಳು 48, 53, 57, 64, 66, 70) ನಿಟ್ಟೆಲದೆಯರ್ **ಪಾಡೆ ಶೋಭನಮಂ**, ಪೀಯೂಷ ಸಂಕಾಶ **ಮಂಗಳಗೀತಂ**ಗಳನ್ನೈದೆ ಪಾಡುವ ವಧೂಟಿಶ್ರೇಣಿ, **ಪಾಡುತ್ತುಂ ಶೋಭನಮಂ** ಕೂಡಿ ಸುವಾಸಿನಿಯರ್, ಇಂದೀವರ ನೇತ್ರೆಯರ್ ನಲಿದು **ಶೋಭನಮಂ ಮಿಗೆ ಪಾಡು**

ತಿರ್ಥಿನಂ, ಛಾಯಿನಂಗಳಂ ಕೊಡಿಸಿದುದು ನೆಗಳೆ **ಮಂಗಳಗೀತಂ, ಪಾಡೆ ಚಿರಂಟಿ ಯರ್**—ಎಂಬವು ಈ ಪದ್ಯದಲ್ಲಿ ಬಂದಿರುವ ಮಾತುಗಳು.

ಕವಿ ರಾಘವಾಂಕನ (1235) ಸಿದ್ಧರಾಮ ಚಾರಿತ್ರದಲ್ಲಿ (ಆ. 8–89) 'ಮಂಗಳಾರತಿವಿಡಿದು **ಧವಳವಂ** ಹಾಡುತಿರಲು'—ಎಂಬ ವಾಕ್ಯವಿದೆ. ಬೊಮ್ಮರಸನ (1485) ಸನತ್ಕುಮಾರ ಚರಿತಯಲ್ಲಿ 'ಜಿನುಗುವೆಳದುಂಬಿಗಳ ಸಲೆ **ಶೋಭನದಿ'** (ಆ. 7–48) ಮತ್ತು 'ಉಲಿವ **ಶೋಭನ**ಗೀತದಿಂದಬುಜಾಯತಾಕ್ಷಿ ಯರು' (ಆ. 9–41) ಎಂದು ಪ್ರಸ್ತಾವಿಸಲಾಗಿದೆ. ನರಹರಿಯ (1500) ತೊರವೆ ರಾಮಾಯಣದಲ್ಲಿ '**ತರುಣಿಯರ ಶುಭಗೀತ**'ದ ಉಲ್ಲೇಖವಿದೆ. (ಬಾಲಕಾಂಡ, ಸಂ. 16–40) ವಿರೂಪಾಕ್ಷ ಪಂಡಿತನು (1506) ಚೆನ್ನಬಸವ ಪುರಾಣದಲ್ಲಿ (ಸಂಧಿ 37, ಪದ್ಯ 40–56) ಶಿವಪಾರ್ವತಿಯರ ವಿವಾಹದಲ್ಲಿ '**ಶೋಭನಸ್ನಾನ**'ವಿದ್ದುದಾಗಿ ಹೇಳಿದ್ದಾನೆ. ವೀರಭದ್ರ ನೃಪಾಲನ (1530) ವೀರಭದ್ರ ವಿಜಯ ಕಾವ್ಯ (ಆ. 9, ಪದ್ಯ 75) '**ಶೋಭನಂಗಳಂ ಪಾಡುತ್ತುಂ**' ಎಂಬುದಾಗಿ ತಿಳಿಸುತ್ತದೆ. ಕನಕದಾಸನ (1550) ಮೋಹನ ತರಂಗಿಣಿಯಲ್ಲಿ (ಸಂಧಿ 15, ಪದ್ಯ 27, 35 ; ಸಂ. 17–40 ; ಸಂ. 42–23 ಇವುಗಳಲ್ಲಿ) '**ಧವಳ ಶೋಭನ**' ಹಾಡಿದುದನ್ನು ಹೇಳಿದೆ. ಇದೇ ಕವಿಯ ನಳಚರಿತ್ರೆಯಲ್ಲಿ (ಸಂಧ 3, ಪದ್ಯ 68) 'ಪಾಡಿದರು ಮುತ್ತೈದೆಯರು '**ಶೋಭನವ**' ಎಂದಿದೆ. ನಂಜಾಚಾರ್ಯನು (1550) ಬರೆದ ರಾಘವಾಂಕ ಚಾರಿತ್ರದಲ್ಲಿ (ಸಂಧಿ 7, ಪದ್ಯ 74, 77) ನಾರದನು ಶಿವನ ಮನವನ್ನು **ಧವಳಾರದ ಕಡೆಗೆ** ಸೆಳೆದುದಾಗಿ ಹೇಳಿದೆ. ರತ್ನಾಕರವರ್ಣಿಯ (1550) ಭರತೇಶ ವೈಭವ ಕಾವ್ಯದಲ್ಲಿ (ಭೋಗವಿಜಯ, ಉಪ್ಪರಿಗೆ ಸಂಧಿ, ಪದ್ಯ 64) 'ಶ್ರೀದೇವಿ ಶೋಭನವನು ಪಾಡುವಂತೆ' ಎಂಬ ಮಾತಿದೆ. ಇದರಲ್ಲೇ ಉಂಗುರುಡಿಕೆಯ ಸಂಧಿ ಯಲ್ಲಿ (ಪದ್ಯ 75, 80) ಧವಳ ಶೋಭನ—ಹಾಡಿದುದನ್ನು ಹೇಳಿದೆ. ಹೆಳವನಕಟ್ಟೆ ಗಿರಿಯಮ್ಮನ (1750) ಚಂದ್ರಹಾಸನ ಕಥೆಯ್ಯಲ್ಲಿ (ಸಂ. 4, ಪದ್ಯ 37), '**ಮಂಗಳ ಧವಳ**' ಹಾಡಿದುದನ್ನು ತಿಳಿಸಿದೆ. ಹೀಗೆ ಶುಭಕಾರ್ಯಗಳಲ್ಲೆಲ್ಲ ಶೋಭಾನೆಗಳನ್ನು ಹಾಗೂ ಧವಳ ಶೋಭಾನೆಗಳನ್ನು ಹಾಡುವ ಸಂಪ್ರದಾಯವನ್ನು ಕನ್ನಡ ಕವಿಗಳು ಮೆಚ್ಚಿ ವರ್ಣಿಸಿರುವುದನ್ನು ಅವರ ಕಾವ್ಯಗಳಲ್ಲಿ ನಾವು ಕಾಣುತ್ತೇವೆ. ಜಾನಪದ ಗೀತವೆಂದು ಅವನ್ನು ಅಗೌರವಿಸಿದ್ದನ್ನು ಎಲ್ಲಿಯೂ ಕಾಣಲಾರೆವು.

## ಯಕ್ಷಗಾನ ಶೋಭನ ಪಿಂಲನ

ಜನಪ್ರಿಯವೂ ಜಾನಪದವೂ ಎನಿಸುವ ಗೀತಸಾಹಿತ್ಯದಲ್ಲಿ ಪದ, ಹಾಡು ಎಂಬೆರಡು ವರ್ಗವನ್ನು ಗುರುತಿಸಿದೆವು. ಮೊದಲನೆಯದು ದಾಸರ ಪದ, ಯಕ್ಷಗಾನ

ಪದ, ತುಂಡುಪದ ಮುಂತಾಗಿದ್ದು ಮುಖ್ಯವಾಗಿ ಗಂಡುಸರು ಹಾಡುವಂಥವು. ಇವಕ್ಕೆ ತಾಳ ಹಿಮ್ಮೇಳಗಳ ವಾದನವುಂಟು. ಶ್ರುತಿ, ವೀಣೆ, ತಾಳ, ಮೃದಂಗಗಳ ಮೇಳ ವುಂಟು. ಎರಡನೆಯದು ಶೋಭಾನೆ ಹಾಡುಗಳು. ಶುಭ ಸಮಾರಂಭಗಳಲ್ಲಿ ಹೆಂಗುಸರೇ ಹಾಡುವಂಥವು. ಇವಕ್ಕೆ ಶ್ರುತಿ ತಾಳ ವಾದನಗಳಿಲ್ಲ. ಅತ್ಯಂತ ಪ್ರಾಚೀನ ಕಾಲದಲ್ಲಿ ಎಲ್ಲಿಯಾದರೂ ಶೋಭಾನೆಗಳಿಗೆ ತಾಳವಾದನಗಳಿದ್ದುದಕ್ಕೆ ಆಧಾರ ಕಂಡುಬಂದಿಲ್ಲ. ಗಂಡುಸರ ಹಾಡುಗಳೆನಿಸುವ ಪದಗಳೊಂದಿಗೆ ಹೆಂಗುಸರ ಹಾಡೆನಿಸುವ ಶೋಭಾನೆ ಬಂದಿರುವುದು ಉಂಟೆ ? ಹಾಗೆಯೇ ಹೆಂಗುಸರ ಶೋಭಾನೆ ಗಳ ವರ್ಗದಲ್ಲಿ ಗಂಡುಸರು ಹಾಡುವ ಪದಗಳಿವೆಯೆ ? ಎಂಬುದನ್ನು ಪರಿಶೀಲಿಸಿದಾಗ ಅಂಥವು ಕೆಲವು ಇವೆಯೆಂದೇ ಹೇಳಬಹುದು. ಶೋಭಾನೆಗಳಲ್ಲಿ ಪದಗಳು (ತಾಳಬದ್ಧ ರಚನೆಗಳು) ಇರುವಷ್ಟರ ಮಟ್ಟಿಗೆ ಪದಗಳಲ್ಲಿ ಶೋಭಾನೆ ಹಾಡುಗಳಿಲ್ಲ.

ಈ ಸಂಕಲನದಲ್ಲಿರುವ ಸಂ. 3, 6, 19, 23, 44—ಮುಂತಾದ ಹಾಡುಗಳು ಯಕ್ಷಗಾನ ಮಟ್ಟಿನ ಅಷ್ಟತಾಳದ ಗತಿಗೆ ಅನುಗುಣವಾಗಿವೆ. 45, 46, 61— ಮುಂತಾದವು ಏಕತಾಳ ಗತಿಯುಕ್ತವಾಗಿವೆ. 58ನೆಯದು ರೂಪಕತಾಳದ ಪದ. ಇಂತಹವು ಈ ಸಂಕಲನದಲ್ಲಿ ಅಲ್ಲಲ್ಲಿ ಕಾಣಸುತ್ತವೆ. ಶೋಭಾನೆಯಾಗಿ ಇವನ್ನು ಹಾಡಲಾಗುತ್ತದೆ ; ಪದವಾಗಿ ಅಲ್ಲ. ಹೆಂಗುಸರೇ ಇವನ್ನು ಹಾಡುವವರೆಂಬುದಷ್ಟೇ ವಿಶೇಷ. ಯಕ್ಷಗಾನ ಪ್ರಸಂಗದ ಪದಗಳಲ್ಲಿ ಕಥಾವಸ್ತು ಮಂಗಳಕರವಾಗಿ ಕೊನೆ ಗೊಂಡಲ್ಲಿ, ಆರತಿ ಬೆಳಗುವ ಹಾಡಾಗಿ ಧವಳಾರದ ಪದ್ಯಗಳಿರುತ್ತವೆ. 'ಧವಳಾರ' ಎಂತಲೂ ಇದರ ಉಚ್ಚಾರಣೆಯಿದೆ. ಈ ಧವಳಾರ (ಧವಳ) ಮಟ್ಟಿನ ಹಾಡುಗಳು ಶೋಭಾನೆಗಳ ಪ್ರಭೇದವಾಗಿದ್ದು ವಧೂವರರಿಗೆ ಮದುವೆಯ ಸಂದರ್ಭದಲ್ಲಿಯೂ ದೇವರುಗಳಿಗೆ ಪೂಜೆಯ ಸಂದರ್ಭದಲ್ಲಿಯೂ ಆರತಿ ಬೆಳಗುವ ಹಾಡುಗಳಾಗಿರುತ್ತವೆ. ಈ ಧವಳದ ಹಾಡುಗಳು ನಾಲ್ಕು ಪಾದಗಳಿಂದ ಹದಿನೈದು ಪಾದಗಳ ವರೆಗೆ ಇರುವ ರಚನೆಗಳಾಗಿವೆ. ಅಂಶಗಣ, ಮಾತ್ರಾಗಣ ಎಂಬ ಉಭಯ ಗಣಗಳೂ ಇವುಗಳಲ್ಲಿ ಬರುತ್ತವೆ. ಏಕತಾಳ, ಆದಿತಾಳ, ರೂಪಕತಾಳ, ತ್ರಿಪುಡೆ ತಾಳಗಳ ಗತಿಯಲ್ಲಿದ್ದ ಇವಕ್ಕೆ ಪ್ರತಿಯೊಂದು ಸೊಲ್ಲಿನಲ್ಲಿಯೂ ತಾಳ ಪರಿವರ್ತನೆಯೂ ಉಂಟು. ಶೋಭಾನೆಯ ಪ್ರಭೇದವಾಗಿರುವ ಆರು ಪಾದಗಳ ಒಂದು ಧವಳಾರವನ್ನಿಲ್ಲಿ ಉದಾ ಹರಿಸಬಹುದು. ಇದು ಯಕ್ಷಗಾನ ಪ್ರಸಂಗವೊಂದರಿಂದ ಆಯ್ದುದು. ಶೋಭಾನೆ ಎಂಬುದು ಯಕ್ಷಗಾನದಲ್ಲಿಯೂ ಒಳಹೊಕ್ಕಿರುವುದನ್ನು ತೋರಿಸುವುದಕ್ಕಾಗಿ ಈ ಉದಾಹರಣೆ—

**ಧವಳಾರ, ಏಕತಾಳ[17] :**

ಶೀಲವಂತೆಯರೆಲ್ಲ ಸುಳಿದು
ಜಾಲ ಮುತ್ತಿನ ಸೇಸೆ ತಳಿದು ॥
ಮೇಲುದಿನಗ್ರವ ಕುಚದೆಡೆಗೆಳೆದು
ಕಾಲಲಂದುಗೆ ಗೆಜ್ಜೆ ಘಲಿರೆನೆ ನಲಿದು
ನೀಲ ಮಾಣಿಕದಿಂದಲೆ ರಚಿಸಿರ್ದ ವಿ ॥
ಶಾಲದಾರತಿಯಾ—ಬೆಳಗಿರೆ—ಶೋಭಾನೆ

ಇದರಲ್ಲಿ ಮೊದಲ ಎರಡು ಸಾಲುಗಳಿಗೆ ವಿಳಂಬ ಗತಿ, ಅನಂತರದ ಮೂರು ಸಾಲುಗಳಿಗೆ ದ್ರುತಗತಿ, ಕೊನೆಯ ಸಾಲು, 'ತ್ರಿಪದಿ ಮಕುಟ'ವಾಗಿದ್ದು, ಅದಕ್ಕೆ ಪುನಃ ವಿಳಂಬಗತಿ ಇರುತ್ತದೆ. ಯಕ್ಷಗಾನದಲ್ಲಿ ಹಾಡುವಾಗ ಏಕತಾಳದಲ್ಲಿ ಪ್ರಾರಂಭಿಸಿ, ಬಿಡಿತ ತೆಗೆದು, ಮತ್ತೆ ಮುಂಬರಿದು, ತ್ರಿಪದಿ ಮಕುಟವಿರುವ ಕೊನೆಯ ಸಾಲನ್ನು ಅದರ ವಿಳಂಬಗತಿಗೆ ಒಪ್ಪುವಂತೆ ನಿಧಾನ ತ್ರಿವುಡೆಯಲ್ಲಿ ಹಾಡುವುದು ಕ್ರಮ. ಹೀಗೆ, ಧವಳಾರ ಸರಳಾರಗಳಲ್ಲದೆ, ಜೋಗುಳ ಹಾಡು ಕೂಡ ಯಕ್ಷಗಾನ ಪ್ರಸಂಗಗಳಲ್ಲಿ ಬಂದುದುಂಟು. ಇದರಿಂದ ದಾಸರ ಪದ, ಯಕ್ಷಗಾನ ಪದ, ಶೋಭಾನೆಗಳು—ಇವುಗಳೊಳಗೆ ಕೆಲಮಟ್ಟಿನ ನಂಟನ್ನು ಗುರುತಿಸಲು ಬರುತ್ತದೆ. (ಧವಳವನ್ನು ಕುರಿತು ಹೆಚ್ಚಿನ ವಿವರ ಮುಂದಿನ ಅಧ್ಯಾಯದ ಕೊನೆಗಿದೆ).

## ಅಡಿ ಟಿಪ್ಪಣಿ

1 ಪಂಚಮುಖಿ ರಾಘವೇಂದ್ರಾಚಾರ್ಯ : ಹರಿದಾಸ ಸಾಹಿತ್ಯ, ಪುಟ 63, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ 33–34, 1948–49.

2 ಡಾ॥ ಬಿ. ಎಸ್. ಗದ್ದಗಿಮಠ : ಲೋಕಗೀತೆಗಳು, 1960, ಪ್ರಸ್ತಾವನೆ.

3 ರಾಧಾಕಾಂತ : ಶಬ್ದಕಲ್ಪದ್ರುಮ.

4 ಮಂಗರಸ : ಅಭಿನವಾಭಿಧಾನಂ, ಪುಟ 23, ಪದ್ಯ 3.

5 ಕುಕ್ಕಿಲ ಕೃಷ್ಣಭಟ್ಟ : ಬೆದಂಡೆ—ಚತ್ತಾಣ (ಲೇಖನ) ಪ್ರಬುದ್ಧ ಕರ್ಣಾಟಕ 53–3 (1971), ಪುಟ 138–145, ಕಮ್ಮಟದ ಕಿಡಿಗಳು.

6 ನಾಗವರ್ಮ : ಛಂದೋಂಬುಧಿ.

7 ನೇಮಿಚಂದ್ರ ಲೀಲಾವತೀ ಪ್ರಬಂಧ 1-23.

8 ಎಂ ವಿ ಸೀ (ಸಂ) ಕವಿರಾಜಮಾರ್ಗ 1-70

9 ಡಾ॥ ಎಲ್ ಆರ್. ಹೆಗಡೆ. ತಿಮ್ಮಕ್ಕನ ಪದಗಳು, 1969, ಪೀಠಿಕೆ, ಪುಟ 4.

10 ಎಚ್ ಎಲ್ ನಾಗೇಗೌಡ. ಸೋಬಾನೆ ಚಿಕ್ಕಮ್ಮನ ಪದಗಳು, 1972, ಪುಟ 22.

11 ಡಾ॥ ಬಿ ಎಸ್ ಗದ್ದಗಿಮಠ ಲೋಕಗೀತೆಗಳು, 1960, ಪುಟ 9.

12 ಕವಿರಾಜ ಮಾರ್ಗ, 1-34, 35

13 ಮಧುರಕವಿ. ಧರ್ಮನಾಥ ಪುರಾಣ, ಆ. 1-57, ಮತ್ತು ಡಾ॥ ಬಿ ಎಸ್. ಗದ್ದಗಿಮಠ ಕನ್ನಡ ಜಾನಪದ ಗೀತಗಳು, 1963, ಪ್ರಸ್ತಾವನೆ ಪುಟ 8-9 ಇದನ್ನು 'ಗೊರವರ ಡುಂಡುಚಿಯೋ ಬೀದಿವರೆಯೆ ಬೀರನ ತುಮುಕೇ' ಎಂದೂ ಪ್ರಯೋಗಿಸಿರುವುದುಂಟು. ಆದರೆ, ಮೇಲೆ ಕಾಣಿಸಿದ ಧರ್ಮನಾಥ ಪುರಾಣದಲ್ಲಿ ಕಾಣುವ ರೂಪವನ್ನು ಇಲ್ಲಿ ಕೊಟ್ಟಿದೆ

14 ನೇಮಿಚಂದ್ರ ಲೀಲಾವತೀ ಪ್ರಬಂಧ, ಆ. 2, ಪದ್ಯ 32-41

15 ಇ. ಕ ಸಂ 8, ಶಿವಮೊಗ್ಗ, ಭಾಗ-2, ನಗರ ತಾಲೂಕು 35.

16 ಪಂಪ ಆದಿಪುರಾಣ, ಆ. 7, ಪದ್ಯ 79.

17 ಯಕ್ಷಗಾನ ಕರ್ಣಪರ್ವ, 1964, ಪುಟ 55.

## ಅಧ್ಯಾಯ : 3

# ಧಾಟಿ ಮತ್ತು ಛಂದಸ್ಸು

[ಧಾಟಿ(ಮಟ್ಟು)–ಹೃದ್ಯತೆ–ಛಂದೋನಾವೀನ್ಯ–ಛಂದಸ್ಸಿನಲ್ಲಿ ಮೂಲಭೂತ ಅಂಶಗಳು–ನೂತನ ಪಾರಿಭಾಷಿಕಗಳು–ಮುಡಿ, ಅಧಿಗಣ, ನಿರಸ್ತ, ಧ್ಮಾತ, ಪಲ್ಲವಿ, ಅನುಪಲ್ಲವಿ, ವರಣ, ಯತಿ, ಗತಿ (ದ್ರುತ-ಮಧ್ಯಮ-ವಿಳಂಬ), ಆವೃತ್ತಿ, ಪಾದಮಕುಟ (ಶಿಖಾಪಾದ), ತ್ರಿಪದಿ, ತ್ರಿಪದಿ ವಿಸ್ತರಣ, ತ್ರಿಪದಿ ಮಕುಟ, ಅತೀತ, ಅನಾಗತ–ವಿವಿಧ ಪಾದಬದ್ಧ ಪ್ರಭೇದಗಳ ಧಾಟಿ ಮತ್ತು ಛಂದೋಲಕ್ಷಣಗಳು–ಸರಳಾರ, ಧವಳಾರ–ಅಡಿಟಿಪ್ಪಣಿ.]

ಶೋಭಾನೆಗಳಿಗೆ 'ಹಾಡುಗಳು' ಎಂದು ಇನ್ನೊಂದು ಹೆಸರು. ಹಾಡು ಹಾಡುವುದಕ್ಕಾಗಿಯೆ ಆದ ರಚನೆ ಎಂಬುದು ಸ್ಪಷ್ಟ. ಶ್ರವ್ಯತೆ–ಗೇಯತೆಗಳು ಹಾಡಿನ ಮುಖ್ಯ ಲಕ್ಷಣ. ಸಕ್ಕರೆ ಬೆರೆತು ಹಾಲಿಗೆ ಸವಿ ಹೆಚ್ಚಾಗುವಂತೆ, ಹಾಡು ಶ್ರವ್ಯತೆಯಿಂದ ಮತ್ತು ಭಾವ–ಅರ್ಥ ಮಾಧುರ್ಯಗಳಿಂದ ಒಡಮೆರೆದು ಇನಿದಾಗುತ್ತದೆ. ಗದ್ಯ ಸಾಹಿತ್ಯದಲ್ಲಿ ಗೇಯತೆಯಿಲ್ಲದೆಯೂ ಅರ್ಥಮಾಧುರ್ಯವಿರಬಹುದು. ಆದರೆ ಅಂತಹ ರಚನೆ ಹಾಡೆನಿಸದು. ಹಾಡಿಗೆ ಉತ್ಕರ್ಷತೆ ಬರುವುದು ಶ್ರವ್ಯತೆ–ಗೇಯತೆಗಳಿಂದ. ಇದಕ್ಕೆ ಇನ್ನಷ್ಟು ಮೇಲ್ಮೆಯೊದಗುವುದು ರಾಗ–ತಾಳ ಮೇಳಗಳಿಂದ— ಎಂಬುದೂ ನಿಜ. ಆದರೆ, ಈ ರಾಗ–ತಾಳ ಸಂಯೋಜನೆಗಳಿಂದ ಹಾಡು ಮಾರ್ಗ ಸಂಗೀತವೋ ಯಕ್ಷಗಾನವೋ ಕೀರ್ತನೆಗಳ ಗೀತಪ್ರಕಾರವೋ ಆಗಬಹುದು. ಶೋಭಾನೆಗಳನ್ನು ಲಕ್ಷಿಸಿ ಹೇಳುವುದಾದರೆ, ಅವಕ್ಕೆ ನಿರ್ದಿಷ್ಟವಾದ ಧಾಟಿಗಳುಂಟು. ರಾಗಚ್ಛಾಯೆ ಇದ್ದೇ ಇರುತ್ತದೆ. ಅವನ್ನು ಹಾಡುವಾಗ ತಾಳವಾದನಗಳ ಹಿಮ್ಮೇಳವಿದ್ದುದು, ಶ್ರುತಿ ಸಂಯೋಜನೆಯಿದ್ದುದು ಕೂಡ, ಯಾರೂ ಕಂಡಂತಿಲ್ಲ. ಕಾವ್ಯಗಳಲ್ಲಿ ಪ್ರಸ್ತಾಪಿಸಿರುವಂತೆ, ಶ್ರುತಿಗೂಡಿ ಧವಳ ಶೋಭನ ಹಾಡುತ್ತಿದ್ದುದಕ್ಕೆ ಉಲ್ಲೇಖ ಕಂಡುಬರುತ್ತದೆ—

ಸರಸಿಜಗಂಧಿಯ ಧವಳ ಶೋಭನ ಶ್ರುತಿ
ವೆರಸಿ ಪಾಡುವ ರಾಗರಸದಿ
ಪರೆದು ಮನಸ್ತಾಪ ಪಿಂಗಡಿಸಲು ಎಣ್ಣೆ
ಯರಿಸಿನಗೊಟ್ಟರೆಲ್ಲರಿಗೆ[1]

ಸುಮಾರು ಅರುವತ್ತು ವರ್ಷಗಳಿಂದೀಚೆಗೆ ಶೋಭಾನೆಗಳನ್ನು ಶ್ರುತಿ ವಾದ್ಯದೊಂದಿಗೆ ಹಾಡುತ್ತಿರಲಿಲ್ಲ. ಶ್ರುತಿವಾದ್ಯ ಸಂಯೋಜನೆಯಿಲ್ಲದಿದ್ದರೂ ಹಾಡು ಹೇಳುವವರ ಸ್ವರತಾನ ಅದೊಂದು ಕಲ್ಪಿತ ಹಾಗೂ ದನಿಗೆಡದ ಆಧಾರಶ್ರುತಿಯನ್ನು

ಅಂದರೆ—ಪ್ರಾಕೃತಿಕ ಶ್ರುತಿಯನ್ನು ಅವಲಂಬಿಸಿಯೇ ಇರುತ್ತದೆ. ಆ ತಾನದಲ್ಲಿಯೇ ಹಾಡು ಪರಿಳಿತಗಳನ್ನು ಪಡೆಯುತ್ತದೆ. ಇದಕ್ಕೊಂದು ಉದಾಹರಣೆಯನ್ನು ಕೊಡಬಹುದು:– ಕೋಗಿಲೆ ಪಂಚಮಶ್ರುತಿಯಲ್ಲಿ ಹಾಡುತ್ತದೆ—ಎಂದು ಪ್ರತೀತಿ. ಪಂಚಮ ಶ್ರುತಿ ನಿರ್ಣಯವಾಗಬೇಕಾದರೆ ಆಧಾರಶ್ರುತಿ ಅಥವಾ ಷಡ್ಜಶ್ರುತಿ ಯಾವುದು ? ಇಲ್ಲಿ ಕೇವಲ ಕಲ್ಪಿತವಾದ ಪ್ರಾಕೃತಿಕ ಶ್ರುತಿಯನ್ನೇ ಆಧಾರ ಶ್ರುತಿಯಾಗಿ ತಿಳಿದು ಕೊಳ್ಳಬೇಕಾಗುತ್ತದೆ. ಬಹುಶಃ ಮೇಲೆ ಹೇಳಿದ ಧವಳಶೋಭನದ ಶ್ರುತಿ ಕೇವಲ ಕಲ್ಪಿತವೇ ಇದ್ದಿರಬಹುದು.

ಈ ಹಾಡುಗಳಲ್ಲಿ ಬರುವ ಸುಪ್ರಾಸ (ದ್ವಿತೀಯಾಕ್ಷರ ಪ್ರಾಸ), ಅನುಪ್ರಾಸ, ಒಳಪ್ರಾಸ, ಅಂತ್ಯಪ್ರಾಸಗಳು, ಪಲ್ಲವಿ–ಅನುಪಲ್ಲವಿಗಳು, ಚರಣ, ಯತಿ, ಗತಿ, ಆವೃತ್ತಿ, ಮಕುಟ ಪಾದಗಳು, ಒಂದೊಂದು ಹಾಡಿಗೂ ರೂಪಗೊಂಡ ವಿಶಿಷ್ಟ ಧಾಟಿಗಳು—ಈ ಹಾಡುಗಳಿಗೆ ವಿಶೇಷ ರಮ್ಯತೆಯನ್ನು ಉಂಟುಮಾಡುತ್ತವೆ. ಧಾಟಿ ಗಳಿಂದಲೇ ಛಂದಸ್ಸು ಬೋಧ್ಯವಾಗುತ್ತದೆ. 'ಧಾಟಿ' ಎಂಬುದು ಹಾಡಿನ ಗತಿಗೆ ಅನುಗುಣವಾಗಿರುವ ತನ್ನದೇ ಆದ ಗೇಯ ಪದ್ಧತಿ. "ಹೃದ್ಯವಾದ ಸ್ವರಾರೋಹಾ ವರೋಹ ಪ್ರಕಾರವು ಸಂಗೀತದಲ್ಲಿ ರಾಗವೆಂಬ ಹೆಸರನ್ನು ಪಡೆಯುವಂತೆ, ಹೃದ್ಯವಾದ ಗತಿ ಪ್ರಕಾರವು ಮಾತ್ರ ಛಂದಸ್ಸಿನಲ್ಲ **ಗತಿ** ಎನ್ನಿಸಿಕೊಳ್ಳುತ್ತದೆ. ಇದನ್ನೆ ಬಳಕೆಯ ಮಾತಿನಲ್ಲಿ ನಾವು 'ಧಾಟಿ' ಎನ್ನುತ್ತೇವೆ."[2] ಧಾಟಿಯೆಂಬುದು ಗೇಯ ವಿಧಾನ. ಕನ್ನಡದಲ್ಲಿ ಇದನ್ನು 'ಮಟ್ಟು' ಎಂತಲೂ ಕರೆಯುತ್ತ ಬಂದಿದ್ದಾರೆ. ಕೆಲವು ಯಕ್ಷಗಾನ ಪುಸ್ತಕಗಳಲ್ಲಿ ಹಾಗೂ ಶೋಭಾನೆ ಪುಸ್ತಕಗಳಲ್ಲ ಧಾಟಿಯ ಸೂಚನೆಯಿರುತ್ತದೆ. ಉದಾಹರಣೆ—'ಧಾಟಿ'—'ರಂಗನ ಪರಿಣಯ' ಎಂಬಂತೆ.

'ಛಂದಸ್ಸು' ಪದ್ಯರಚನೆಯ ಶಾಸ್ತ್ರ. ಪದ–ಹಾಡುಗಳಿಗೂ ಇದು ಅನ್ವಯಿಸು ತ್ತದೆ. ಛಂದಸ್ಸನ್ನು 'ಕಾವ್ಯದ ಕಾಲುಗಳು' ಎಂದಿದ್ದಾರೆ (ಛಂದಃ ಪಾದೌ ತು ವಿಜ್ಞೇಯೌ). 'ಕವಿಗೆ ಕಣ್ಣು' ಎಂದು ನಾಗವರ್ಮನ ಅಭಿಪ್ರಾಯ—

ಛಂದಮನಱಿಯದೆ ಕವಿತೆಯ
ದಂದುಗದೊಳ್ ತೊಳಲಿ ಸುಳಿವ ಕುಕವಿಯೆ ಕುರುಡಂ[3]

'ಚದಿ—ಆಹ್ಲಾದೇ' ಎಂಬ ವ್ಯುತ್ಪತ್ತಿಯಂತೆ ಆಹ್ಲಾದ ಗುಣವುಳ್ಳದ್ದಾಗಿ 'ಛಂದಸ್ಸು' ಎಂಬ ಶಬ್ದವಾಗಿದೆ.[4] ಕವನ, ಕಾವ್ಯ, ಪದ (ಹಾಡು), ಪದ್ಯ—ಮುಂತಾದ ಸಮಸ್ತ ಪದ್ಯಪ್ರಭೇದ ವಿಸ್ತಾರವನ್ನು ಛಂದಸ್ಸು ತೋರಿಸಿಕೊಡುತ್ತದೆ. ಅದಕ್ಕನುಗುಣವಾಗಿ ಹುಟ್ಟುವ ಪದ್ಯ–ಪದವರ್ಗ ಅನಂತ. ಹೊಸ ಹೊಸತನ್ನು ಪದ್ಯ ಮಾರ್ಗದಲ್ಲಿ ಇನ್ನಿನ್ನೂ ರಚಿಸುವದಕ್ಕಾಗಿ ದಿಗ್ದರ್ಶನ ಪಡೆಯಲು ಛಂದಶ್ಶಾಸ್ತ್ರದಲ್ಲಿ ಧಾರಾಳ

ಅವಕಾಶವಿದೆ. ಈಚೆಗೆ ಆಧುನಿಕ ಕವಿಗಳಲ್ಲಿ ಅನೇಕರು ಅಂಶಗಣ–ಮಾತ್ರಾಗಣಗಳ ಹೊಸ ಛಂದೋಲಯಗಳಿಂದ ಕವಿತಾರಚನೆ ಮಾಡಿದ್ದಾರೆ ; ಈಗಲೂ ಮಾಡುತ್ತಿದ್ದಾರೆ. ಆಧುನಿಕ ಛಂದೋವಿಮರ್ಶಕರು ಈ ರಚನೆಗಳಲ್ಲಿ ಅತ್ಯಾಶ್ಚರ್ಯಕರ ನಾವೀನ್ಯವನ್ನು ಕಂಡು, ಇಂತಹ ಕವಿಗಳನ್ನು ಛಂದೋಲಯಗಳಲ್ಲಿ ನವೀನತೆಯ ಪುರಸ್ಕರ್ತರೆಂದು ಕೊಂಡಾಡಿರುವುದುಂಟು. ಆದರೆ ನಾಲ್ಕೈದು ಶತಮಾನಗಳ ಹಿಂದಿನಿಂದಲೆ ಕನ್ನಡದಲ್ಲಿ ರಚಿತವಾಗಿರುವ ಯಕ್ಷಗಾನ ಕೃತಿಗಳ ಛಂದಸ್ಸನ್ನು ಒಳಹೊಕ್ಕು ನೋಡಿದರೆ, ಇಂದಿನ ಈ ನಾವೀನ್ಯಗಳನ್ನು(?) ಅವರು ಅಂದೇ ಬಳಸಿರುವುದನ್ನು ನಾವು ಕಾಣಬಲ್ಲೆವು. ಹಳೆಯ ಶೋಭಾನೆಗಳ ರಚನೆಯಲ್ಲಿಯೂ ಈ ಹೊಸತನ್ನು ಕಾಣಬಲ್ಲೆವು. ಆ ಹಿಂದಿನವರಿಗೂ ಈ ಇಂದಿನವರಿಗೂ ಇಂಥವುಗಳ ರಚನೆಯಲ್ಲಿ ಕಾಣುವ ವ್ಯತ್ಯಾಸ ವೆಂದರೆ—ನಮ್ಮ ಯಕ್ಷಗಾನ ಕೃತಿಗಳಲ್ಲಿ ಮತ್ತು ಶೋಭಾನೆಗಳ ರಚನೆಯಲ್ಲಿ ದ್ವಿತೀಯಾಕ್ಷರ ಪ್ರಾಸದ ಉಲ್ಲಂಘನವಿಲ್ಲ. ನವೋದಯ ಕವಿತಾ ರಚನೆಯಲ್ಲಿ ದ್ವಿತೀಯಾಕ್ಷರ ಪ್ರಾಸವನ್ನು ಹೇಯದ ಸಾಲಿಗೆ ಸೇರಿಸಲಾಗಿದೆ ; ಅಷ್ಟೇ ಅಲ್ಲ, ನಿರ್ದಿಷ್ಟ ಲಯದ ಕವಿತೆಗಳಲ್ಲಿ ಲಯಭಂಗಗಳೂ ಉಂಟು. ಅಂತಹ ಲಯದ ಭಂಗವನ್ನೆ ಗುಣವಾಗಿ ಎಣಿಸುವ ಪರಿಪಾಠವೂ ಉಂಟು.

ಶೋಭಾನೆಗಳು ಪ್ರಾಸಬದ್ಧ, ಪಾದಬದ್ಧ, ಗೇಯಗುಣವುಳ್ಳ ರಚನೆಗಳು. ಚಮತ್ಕೃತಿಯುಳ್ಳ ಲಯ ವಿನ್ಯಾಸಗಳಿಂದ ಈ ರಚನೆಗಳು ಸೊಬಗುವಡೆದಿವೆ. ಇವುಗಳ ಧಾಟಿ ಛಂದಸ್ಸುಗಳು ಅಪೂರ್ವವಾದ ವಿಶೇಷಾಧ್ಯಯನಕ್ಕೆ ತಕ್ಕ ವಿಷಯಗಳು. ಈ ಕ್ಷೇತ್ರದಲ್ಲಿ ವಿದ್ವಜ್ಜನರ ಅನ್ವೇಷಣೆ ಸಾಕಷ್ಟು ಆಗಿಲ್ಲ. ಎಲ್ಲ ರಚನೆಗಳಿಗೂ ಮೂಲಭೂತ ಛಂದೋವಿಷಯವಾಗಿರುವ ಮಾತ್ರೆ, ಲಘು, ಗುರು, ಗಣ, ಪಾದಸಂಖ್ಯಾ ವಿಚಾರಗಳು ಇಲ್ಲಿಗೂ ಸಲ್ಲುವವೇ. ಇವಲ್ಲದೆ, ಇವುಗಳ (ಶೋಭಾನೆಗಳ) ಧಾಟಿಗೆ ವಿಶಿಷ್ಟವೆನಿಸುವ ಕೆಲವು ನೂತನ ಪಾರಿಭಾಷಿಕಗಳನ್ನು ಹೊಸತಾಗಿ ಇಲ್ಲಿ ಕಲ್ಪಿಸಿ ಕೊಳ್ಳಬೇಕಾಗುತ್ತದೆ. ಹೊಸ ಛಂದಸ್ಸಿನ ಲಯಗಳನ್ನು ನಿರ್ಣಯಿಸುವಲ್ಲಿ ಪ್ರೊ॥ ತೀ. ನಂ. ಶ್ರೀ.ಯವರು ಸೃಷ್ಟಿಸಿಕೊಂಡಿರುವ ಮುಡಿ, ಪದ್ಮಗಣ ಎಂಬಿವು, ಆಧುನಿಕರು ಹೆಸರಿಸಿರುವ ಸುನೀತ ಅಥವಾ ಅಷ್ಟಷಟ್ಪದಿ, ಡಿ. ಎಸ್. ಕರ್ಕಿಯವರು ತಮ್ಮ 'ಛಂದೋವಿಕಾಸ' ಗ್ರಂಥದಲ್ಲಿ ನಿರೂಪಿಸಿರುವ ಜಲಷಟ್ಪದಿ, ತಲಷಟ್ಪದಿಗಳು— ಇಂಥವು ಆಧುನಿಕ ಛಂದಸ್ಸಿನ ಪ್ರತಿಪಾದನೆಯ ಸೌಕರ್ಯಕ್ಕಾಗಿ ಮಾಡಿಕೊಂಡಿರುವ ನೂತನ ಪಾರಿಭಾಷಿಕ ನಾಮಸೃಷ್ಟಿಗಳಾಗಿವೆ. ಇವನ್ನು ಸೃಷ್ಟಿಸಿರುವ ವಿದ್ವಾಂಸರು ಯಾರೂ ಯಕ್ಷಗಾನ ಪದಗಳ ಮತ್ತು ಶೋಭಾನೆ ಹಾಡುಗಳ ಧಾಟಿ ಛಂದಸ್ಸುಗಳ ಕಡೆಗೆ ಲಕ್ಷ್ಯ ಹರಿಸಿಲ್ಲ. ಅಲ್ಲಿಗೆ ಸ್ವಲ್ಪ ಲಕ್ಷ್ಯ ಹರಿಸಿದ್ದರೆ, ಅವರಿಂದಲೆ ಇನ್ನೂ ಹಲವಾರು ಪಾರಿಭಾಷಿಕಗಳ ಸೃಷ್ಟಿಯಾಗುತ್ತಿದ್ದಿತು. ಇದರಿಂದ ಈ ಕ್ಷೇತ್ರದಲ್ಲಿ ಮುಂದುವರಿದು ಕಾರ್ಯ ಮಾಡುವವರಿಗೆ ನೆರವು ದೊರಕುತ್ತಿತ್ತು. ಅದಿಲ್ಲವಾದುದರಿಂದ

ಪ್ರಸ್ತುತ ಲೇಖಕನಿಗೆ ಅಂತಹ ಕೆಲವನ್ನಿಲ್ಲಿ ಸೇರಿಸಿ ನಿರೂಪಿಸಬೇಕಾಗಿ ಬಂದಿದೆ. ಅವೆಂದರೆ : ಅಧಿಗಣ, ವರಣ, ಆವೃತ್ತಿ, ವಿಸ್ತರಣ, ಪಾದ ಮಕುಟ, ಅತೀತ— ಮುಂತಾದವು. ಛಂದಸ್ಸಿಗೆ ಮೂಲಭೂತವಾದ ಅಂಶಗಳನ್ನು ಮೊದಲು ಪ್ರಸ್ತಾವಿಸಿ, ಆಧುನಿಕ ವಿಧ್ವಾಂಸರು ಹೊಸತಾಗಿ ನಿರೂಪಿಸಿರುವ ಪಾರಿಭಾಷಿಕಗಳಲ್ಲಿ ಸ್ವೀಕಾರಾರ್ಹ ವಾದುವನ್ನು ತಗೆದುಕೊಂಡು, ಮತ್ತೆ ಇಲ್ಲಿ ಅವಶ್ಯವೆನಿಸುವ ಹೊಸತು ಅಂಶಗಳನ್ನು ತಿಳಿಸಲಾಗುವುದು—

## ಮಾತ್ರೆ, ಲಘು, ಗುರು ವಿಚಾರ (ಮೂಲಭೂತ ಅಂಶಗಳು)

ಎಲ್ಲ ಬಗೆಯ ಹಾಡುಗಳೂ, ಸಾಹಿತ್ಯವೂ ವರ್ಣಾತ್ಮಕಗಳು. ವರ್ಣಗಳು ಸ್ವರ, ವ್ಯಂಜನ, ಯೋಗವಾಹಗಳಿಂದ ಕೂಡಿವೆ. ಇವು ಸಂಯೋಗಗೊಂಡು ಗುಣಿತಾಕ್ಷರ, ದ್ವಿತ್ವಾಕ್ಷರಗಳಾಗಿ ಹ್ರಸ್ವ–ದೀರ್ಘಗಳಾಗಿ ವಿವಿಧ ಅಕ್ಷರಾಕಾರವನ್ನು ತಾಳುತ್ತವೆ. ಹಾಗೆ ಆಕಾರ ತಾಳಿದವುಗಳಲ್ಲಿ ಗಿಡ್ಡವಾದುದು—ಚಿಕ್ಕದು 'ಹ್ರಸ್ವ'. ಹ್ರಸ್ವ ಎಳೆದಾಗ ದೀರ್ಘವಾಗುವುದು—ಅ, ಆ ; ಕ, ಕಾ ; ನಿ, ನೀ—ಇತ್ಯಾದಿ. ಇವುಗಳ ಉಚ್ಚಾರಣೆಯ ಕಾಲಮಾನವೇ ಮಾತ್ರೆ. ಹ್ರಸ್ವಾಕ್ಷರವು ಲಘು. ಅದನ್ನು ಉಚ್ಚರಿಸುವ ಕಾಲಮಾನ ಒಂದು ಮಾತ್ರೆ. ದೀರ್ಘಕ್ಕೆ ಎರಡು ಮಾತ್ರೆಗಳು. ಹಾಡುಗಳಲ್ಲಿ ಎರಡಕ್ಕಿಂತ ಹೆಚ್ಚು ಮಾತ್ರೆಗಳ ದೀರ್ಘವೂ ಬರುತ್ತದೆ. ಮೂರು ಮಾತ್ರೆಯುಳ್ಳ ದೀರ್ಘವನ್ನು 'ಪ್ಲುತ' ಎಂದು ಶಾಸ್ತ್ರಗ್ರಂಥಗಳಲ್ಲಿ ಹೇಳಲಾಗಿದೆ. 'ಮಾತ್ರೆ' ಎಂಬುದಕ್ಕೆ ಕಲೆ (ಕಳೆ) ಎಂತಲೂ ಹೆಸರು. ಆದರೆ ಪ್ರಚಲಿತವಾಗಿರುವುದು 'ಮಾತ್ರೆ' ಎಂಬ ಶಬ್ದ. ವೈಯಾಕರಣರು ವ್ಯಂಜನವನ್ನು (ಕ್, ನ್, ರ್, ಪ್ ಇತ್ಯಾದಿ) ಅರ್ಧಾಕ್ಷರವೆಂದು, ಅರ್ಧ ಮಾತ್ರೆಯದೆಂದು ಹೇಳಿದ್ದಾರೆ. ಆದರೆ ಮಾತ್ರಾ ಗಣನೆಯಲ್ಲಿ ಅರ್ಧ ಎಂಬುದಿಲ್ಲ ; 'ಕಲ್' ಎಂಬುದಕ್ಕೆ ಒಂದೂವರೆ ಮಾತ್ರೆ ಎಂಬ ಲೆಕ್ಕ ಸಲ್ಲಯುವುದಿಲ್ಲ. ಒಂದು ಮಾತ್ರೆಗಿಂತ ಹೆಚ್ಚಿನದೆಂದರೆ ಎರಡು ಮಾತ್ರೆಯೇ ಆಗಿದೆ. ಆದುದರಿಂದಲೇ ಕಲ್, ಕಣ್, ಕಾಲ್, ನೀರ್—ಇಂಥವು ಕಣ್ಣಿಗೆ ಎರಡು ವರ್ಣಗಳ ಸಂಯೋಗಗಳಾಗಿದ್ದರೂ ಉಚ್ಚಾರಣೆಗೆ ಏಕಾಕ್ಷರಗಳು. ಛಂದಸ್ಸಿನ ಪರಿಗಣನೆಯಲ್ಲಿ ಉಚ್ಚಾರಣೆಯೇ ಮಾತ್ರೆಗಳ ಮಾನದಂಡ. ಆದುದರಿಂದ ದೀರ್ಘಾಕ್ಷರ (ಆ, ಏ, ಐ, ಔ, ಕೇ, ಕೈ—ಇತ್ಯಾದಿ), ಬಿಂದು ಸೇರಿದುದು (ಕಂ, ಅಂ,—ಇತ್ಯಾದಿ), ವಿಸರ್ಗ ಯುಕ್ತವಾದುದು (ಕಃ, ಚಿಃ ಇತ್ಯಾದಿ), ವ್ಯಂಜನ ಸೇರಿದುದು (ಕಣ್, ಪಲ್,— ಇತ್ಯಾದಿ), ದ್ವಿತ್ವಾಕ್ಷರದ ಅಥವಾ ಸಂಯುಕ್ತಾಕ್ಷರದ ಹಿಂದಿನ ಹ್ರಸ್ವ (ಅಕ್ಕ, ಸತ್ಯ, ಶಕ್ತಿ—ಇಂಥವುಗಳ ಆದ್ಯಕ್ಷರ) ಇವು ಗುರ್ವಕ್ಷರಗಳು ; ಅಂದರೆ, ಎರಡು ಮಾತ್ರಾಕಾಲದ ಉಚ್ಚಾರಣೆಯುಳ್ಳವಾಗಿವೆ.

ಹೀಗಿದ್ದರೂ ಹಾಡುಗಳಲ್ಲಿ ಹಲವೆಡೆ ಪರಪದದ ಪೂರ್ವಾಕ್ಷರ ದ್ವಿತ್ವವಾಗಿ, ಪೂರ್ವಪದದ ಕೊನೆಯದು ಹ್ರಸ್ವವಾಗಿರುವ ಕಡೆ, ಈ ಹ್ರಸ್ವವು ಗುರುವೆನಿಸುವುದಿಲ್ಲ. ವ್ಯಾಕರಣ ಶಾಸ್ತ್ರದಲ್ಲಿ (ನೋಡಿ : ಶಬ್ದಮಣಿದರ್ಪಣ) ಇಂತಹ ಪ್ರಯೋಗವನ್ನು 'ಸಂಧಿದೋಷ' ಎನ್ನಲಾಗಿದೆ. ಕುಮಾರವ್ಯಾಸಾದಿ ಷಟ್ಪದಿ ಕವಿಗಳು, ಹರಿದಾಸ ಕವಿಗಳು, ಯಕ್ಷಗಾನ – ಶೋಭಾನೆಗಳ ಕವಿಗಳು ಕ್ವಚಿತ್ತಾಗಿ ಈ ನಿಯಮವನ್ನು ಮೀರಿದ್ದಾರೆ. ಆಧುನಿಕ ಕವಿಗಳು ಈ ನಿಯಮವನ್ನು ಯಥೇಷ್ಟವಾಗಿ ಉಲ್ಲಂಘಿಸಿದ್ದಾರೆ. ಅಂತಹ ಒತ್ತುಳ್ಳ ಅಕ್ಷರವನ್ನು ಒತ್ತದೆ, ತೇಲಿಸಿ ಉಚ್ಚರಿಸಬೇಕಾಗುತ್ತದೆ. ಒಂದು ಉದಾಹರಣೆ—

ಚೋರ ನಿಂದಿಸಿ ಶಶಿಯ ಬೈದೊಡೆ
ಕ್ಷೀರವನು ಕ್ಷಯರೋಗಿ ಹಳಿದಡೆ
ವಾರಣಾಸಿಯ ಹೆಳವ ನಿಂದಿಸಿ ನಕ್ಕೊಡೇನಹುದು[5]

**ಮುಡಿ :**

ಪಾದಾಂತ್ಯಾಕ್ಷರ ಹ್ರಸ್ವವಾಗಿದ್ದರೂ ಅದನ್ನು ಗುರುವಾಗಿ ಪರಿಗಣಿಸಬೇಕೆಂದು ಛಂದೋಗ್ರಂಥಗಳು ಸೂಚಿಸಿವೆ. ಹಾಡುಗಳಲ್ಲಿ, ಯಕ್ಷಗಾನ ಪದಗಳಲ್ಲಿ, ದಾಸರ ಪದಗಳಲ್ಲಿ ಮತ್ತು ಆಧುನಿಕರ ಕವಿತಾರಚನೆಗಳಲ್ಲಿ ಆ ಗುರ್ವಕ್ಷರಕ್ಕೆ ಆಯಾ ರಚನೆಯ ಪಾದಗಳಿಗೆ ಬಳಕೆಯಾದ ಗಣಗಳಲ್ಲಿ ಒಂದು ಗಣದ ಮೌಲ್ಯವೇ ಇರುತ್ತದೆ. ಇದನ್ನು ತೀ.ನಂ.ಶ್ರೀ.ಯವರು ಹೊಸತಾಗಿ, 'ಮುಡಿ' ಎಂಬ ಹೆಸರಿನಿಂದ ಕರೆದಿರುತ್ತಾರೆ.[6] ಇದಕ್ಕೆ ಶೋಭಾನೆ ಹಾಡಿನಲ್ಲಿ ಉದಾಹರಣೆ—(ಮುಡಿ ದಪ್ಪಕ್ಷರದಲ್ಲಿ ಕೊಡಲಾಗಿದೆ)

ಚೆನ್ನವ. ತೊಡಿಸಿದ. ರಬಲೆಯ. **ರು**
ಮನ್ಮಥ. ವೈರಿಯ. ಸತಿಗೊಲಿ. **ದು** (ಹಾಡು ೫೭)

**ಪದ್ಮಗಣ :**

ಪಾದಾಂತ್ಯದಲ್ಲಿ ಆಯಾ ಪಾದದ ಗಣ ಸಂಖ್ಯೆಗಳ ಹೊರಗುಳಿಯುವ ರೀತಿಯಲ್ಲಿ ಮೂರು ಲಘು ಅಥವಾ ಗುರು ಲಘುವಿನ (ತ್ರಿಮಾತ್ರೆಯ) ಜೋಡಿ ಬಂದರೆ, ಅದನ್ನು 'ಪದ್ಮಗಣ' ಎಂದೂ ತೀ. ನಂ. ಶ್ರೀ. ಯವರು ಅದೇ ಲೇಖನದಲ್ಲಿ ಹೆಸರಿಟ್ಟು ಕರೆದಿದ್ದಾರೆ. ಅದಕ್ಕೆ ಉದಾಹರಣೆಯಾಗಿ ಇಲ್ಲಿ 'ಮದಾಲಸೆ ಜೋಗುಳ'ದಿಂದ ಕೊಡಲಾಗಿದೆ—(ಪದ್ಮಗಣಕ್ಕೆ ದಪ್ಪ ಅಕ್ಷರ)

ಕರಿವದ. ನನಪಾದ. ಕಮಲಯು. **ಗವನು.**
ಸ್ಮರಿಸಿ ಪೇ. ಳುವೆ ಪರ. ತತ್ತ್ವ ಬೋ. **ಧೆಯನು.** (೧೮೦)

ಇಲ್ಲಿ ಈ 'ಪದ್ಮಗಣ' ಎಂಬ ಹೆಸರಿನ ಔಚಿತ್ಯ ಪ್ರಶ್ನಾರ್ಹವಾಗಿ ಉಳಿಯುತ್ತದೆ. ಏಕೆಂದರೆ, ಅದು ಅಂಶಗಣವಾಗಿದ್ದರೆ ಅದಕ್ಕೆ ಬ್ರಹ್ಮಗಣ ಎಂಬ ಹೆಸರು ಮೊದಲೇ ಇದೆ. ಮಾತ್ರಾಗಣವಾಗಿದ್ದರೆ ಅದು ತ್ರಿಮಾತ್ರಾಗಣ. ಅಂತ್ಯಾಕ್ಷರವನ್ನು ಗುರುವಾಗಿ ಎಣಿಸಿದರೆ ಚತುರ್ಮಾತ್ರಾಗಣ. ಪಾದಾಂತ್ಯದಲ್ಲಿ ಬಂದುದರಿಂದ ಆ ಒಂದು ಪಾದದ ಗಣಗಳಲ್ಲಿ ಒಂದು ಗಣದ ಮೌಲ್ಯವೇ ಬರುವಷ್ಟು ಅದನ್ನು ಎಳೆದು ಹಾಡುವುದು ಅದರ ಧಾಟಿಗೆ ಸಂಬಂಧಿಸಿದ ವಿಷಯ. ಈ ದೃಷ್ಟಿಯಿಂದ 'ಮುಡಿ' ಎಂಬುದಕ್ಕೂ ಪ್ರತಿಪಾದನೆ ಅಸ್ವಿತವಾಗುತ್ತದೆ. ಹೀಗಿದ್ದರೂ ವಿದ್ವದ್ಗೌರವ ದೃಷ್ಟಿಯಿಂದ ಮುಡಿಯನ್ನು ಪ್ರಕೃತ–ಮಾನ್ಯ ಮಾಡಲಾಗಿದೆ.

## ಅಂಶಗಣ ವಿಚಾರ—ಅಧಿಗಣ

ಪದ್ಯಾತ್ಮಕ ರಚನೆಯನ್ನು ಅಳೆಯಲು ಮೂಲಭೂತ ಸಾಧನವೆಂದರೆ—ಅಕ್ಷರ, ಮಾತ್ರೆ, ಲಘು, ಗುರು, ಗಣ ಎಂಬಿವು. ಗುರು–ಲಘು ಅಕ್ಷರಗಳ ಗುಂಪು ಗಣವೆನಿಸುವುದು. ಅದು ಅಕ್ಷರಗಣ (ವರ್ಣಗಣ), ಮಾತ್ರಾಗಣ, ಅಂಶಗಣ—ಎಂದು ಮೂರು ಬಗೆ. ಅಕ್ಷರಗಣಗಳ ಉಪಯೋಗ ವೃತ್ತರಚನೆಯಲ್ಲಿ. ಮಾತ್ರಾಗಣಗಳು ರಗಳೆ, ಷಟ್ಪದಿಗಳಿಗೆ ಮಾತ್ರವಲ್ಲದೆ, ತಾಳದ ಗಣನೆಗೆ ಬರುವ ಕೀರ್ತನೆ, ಯಕ್ಷಗಾನ ಪದ—ಮುಂತಾದ ರಚನೆಗಳಿಗೆ ಬೇಕು. ಶೋಭಾನೆ ಕವಿತೆಗಳು ಮಾತ್ರಾಗಣ, ಅಂಶಗಣ ಹಾಗೂ ಇವೆರಡರ ಮಿಶ್ರಣದಿಂದ ಆಗುತ್ತವೆ. ಇವುಗಳಲ್ಲಿ ಅಂಶಗಣಗಳದೇ ಹೆಚ್ಚಿನ ಪ್ರಾಬಲ್ಯ. ಈ ಅಂಶಗಣಗಳು—ಎರಡು, ಮೂರು ನಾಲ್ಕು ಗುರು (ಅಂಶ) ಗಳಿಂದ ಪ್ರಸ್ತಾರಗೊಂಡಿದ್ದು ಇವಕ್ಕೆ ಕ್ರಮವಾಗಿ ಬ್ರಹ್ಮ (ಎರಡು ಅಂಶ), ವಿಷ್ಣು (ಮೂರು ಅಂಶ), ರುದ್ರ (ನಾಲ್ಕು ಅಂಶ) ಎಂದು ಹೆಸರುಗಳು. ಈ ಮೂರು ಬಗೆಯ ಗಣಗಳಲ್ಲಿ ಪ್ರತಿಯೊಂದರ ಮೊದಲನೆಯ ಅಂಶದ ಅಕ್ಷರ ಗುರು ಅಥವಾ ಎರಡು ಲಘು. ಉಳಿದ ಅಂಶಗಳಲ್ಲಿ ಯಾವುದೊಂದೂ ಗುರುವಾಗಿರಬಹುದು ಇಲ್ಲವೇ ಲಘುವಿರಬಹುದು. ಆದುದರಿಂದಲೇ ಹಾಡುಗಳಲ್ಲಿ ಈ ಗಣಾಕ್ಷರಗಳನ್ನು ಹಾಡಿನ ಧಾಟಿಗೆ ಅನುಸಾರವಾಗಿ ಹಿಗ್ಗಿಸಲೂ ಆಗುತ್ತದೆ, ಕುಗ್ಗಿಸಲೂ ಬರುತ್ತದೆ. ಹಾಗೆ ಹಿಗ್ಗಿಸುವಾಗ ಅಲ್ಲಲ್ಲಿ ಹ್ರಸ್ವಕ್ಕೆ ಗುರುವಿನ ಮೌಲ್ಯ ಬರುತ್ತದೆ. ಕುಗ್ಗಿಸುವಾಗ ಗುರುಗೆ ಹ್ರಸ್ವದ ಮೌಲ್ಯವಾಗುತ್ತದೆ. ಕೆಲವೆಡೆ ತ್ವರಿತೋಚ್ಚಾರಣೆಯಿಂದ ಬಹ್ವಕ್ಷರ ಘಟಕವು (ರುದ್ರಗಣ ಅಥವಾ ರುದ್ರಗಣಕ್ಕಿಂತಲೂ ಹೆಚ್ಚು ಅಕ್ಷರಗಳುಳ್ಳ ಘಟಕವಾಗಿರುವ ಅಧಿಗಣ) ಹ್ರಸ್ವೀಕೃತವಾಗಿ ಅಲ್ಲಿಗೊಪ್ಪುವ ಗಣದ ಮೌಲ್ಯವನ್ನೆ ಪಡೆಯುತ್ತದೆ. ಉದಾಹರಣೆಗಳಿವು—

(1) ಗುರು ಗಜ. ಮುಖರಂಘ್ರಿ. ಗೆರಗಿ ವಾ. ಗ್ದೇವಿಯ.
ಚರಣ ಪಂ. ಕಜಕೆ. —ತಲೆವಾಗಿ. **ರುಕ್ಮಿಣಿ ದೇವಿ.**
**ಚರಿತದ ಬಯಂ.** ಕೆಯನು. ಪೊಗಳುವೆ. (೧೬೯)

(2) ವಟ್ಟೆಸೀರೆಯನುಟ್ಟು. ಇತ್ತ ಕೇ. ಳಿಲೆ ಸತಿಯೆ
**ಅಕ್ಕನ ಮಗಂಗೆ.** ಹೆಣ್ಣ. ಕೊಡಬೇಕು—**ಕೊಡದಿದ್ದರೆ ನನ್ನ**
ಅಕ್ಕ ನಿಮ್ಮ. ಮನೆಗೆ. ಬರಲೊಲ್ಲ. (೧೧೭)

ಇಲ್ಲಿ ದಪ್ಪ ಅಕ್ಷರದ ಘಟಕಗಳು ವಾಸ್ತವವಾಗಿ ವಿಷ್ಣುಗಣಗಳಾಗಿ ಇರಬೇಕಿತ್ತು. ಅವು ವಿಷ್ಣುಗಣಕ್ಕಿಂತ ಎರಡು ಮೂರು ಅಂಶ ಹೆಚ್ಚುಳ್ಳವು ; ರುದ್ರಗಣಕ್ಕಿಂತಲೂ ಒಂದೆರಡು ಅಂಶ ಅವುಗಳಲ್ಲಿ ಹೆಚ್ಚಿಗಿದೆ. ಈ ವಿಷಯದಲ್ಲಿ ಕೆಳಗಿನ ವಿವರಗಳು ಲಕ್ಷ್ಯಾರ್ಹವಾಗಿವೆ—

ಪಾತಂಜಲಿ ಮಹಾಭಾಷ್ಯದಲ್ಲಿ ಹೇಳುವ ಪ್ರಕಾರ, ಈ ಬಗೆಯ ಹ್ರಸ್ವ–ದೀರ್ಘ ಪಲ್ಲಟವು ಸ್ವರದೋಷವೆನಿಸುವುದು. ದೀರ್ಘವು ಹ್ರಸ್ವವಾದರೆ 'ಅರ್ಧಕ' ವೆನಿಸುವುದು. ಹ್ರಸ್ವವು ದೀರ್ಘವೆನಿಸಿದರೆ 'ಧ್ಮಾತ'ವಾಗುವುದು. ಕೆಲವೆಡೆ ತ್ವರಿತೋಚ್ಚಾರಣೆಗೆ ಒಳಪಟ್ಟು ಎರಡು ಮೂರು ಅಕ್ಷರಗಳಿಗೆ ಒಂದೇ ಅಕ್ಷರದ ಮೌಲ್ಯ ಬಂದರೆ, ಅದು 'ನಿರಸ್ತ' ಎನಿಸುವುದು. ಸಾಮಗಾನದಂತೆ ಎಳೆದು ಹೇಳುವುದು 'ಪ್ರಗೀತ'. ಸಂಸ್ಕೃತ ವ್ಯಾಕರಣ ದೃಷ್ಟಿಯಿಂದ ಇವೆಲ್ಲವೂ ದೋಷಗಳು. ಆದರೆ, ಪ್ರಯೋಗ ಪ್ರಧಾನವಾದ ಇತರ ಭಾಷೆಗಳಲ್ಲಿ ಹಾಗೂ ಕನ್ನಡದ ಹಾಡುಗಳಲ್ಲಿ ಇವು ಸಹಜಗುಣಗಳು ; ನಿರ್ದೋಷಗಳು. ಅಲ್ಲದೆ, ಗೇಯ ಸೌಂದರ್ಯವನ್ನೀವ ಲಕ್ಷಣಗಳು. ಈ ಬಗೆಯ ಪ್ರಯೋಗಗಳು ಕನ್ನಡದಲ್ಲಿ ಕವಿತೆ ಬರೆವವರ ನಿಷ್ಪ್ರತಿಬಂಧಕ ಧೋರಣೆಯ ರಚನಾ ವೈಖರಿಯನ್ನು ಹಾಗೂ ಸ್ವತಂತ್ರವಾದ ಛಂದಸ್ಸಿನ ಅನುಸರಣೆಯನ್ನು ದ್ಯೋತಿಸುವಂಥವಾಗಿ ಛಂದೋಗುಣಗಳಾಗಿವೆ.

ಹೀಗೆ ರುದ್ರಗಣಕ್ಕಿಂತ ಒಂದೋ ಎರಡೋ ಅಂಶ ಹೆಚ್ಚಾಗಿರುವ ಗಣವನ್ನು ಏನೆನ್ನಬೇಕು ? ವಿಷ್ಣುಗಣ ಸ್ಥಾನದಲ್ಲಿ ಬ್ರಹ್ಮಗಣ ಬಂದರೆ ಉಚ್ಚಾರಣೆಯಲ್ಲಿ ಅದನ್ನೆಳೆದು ಹಿಗ್ಗಿಸಿ ವಿಷ್ಣುಗಣಕ್ಕೆ ಸಮಾನಗೊಳಿಸಬಹುದು. ಹಾಗೆಯೇ ರುದ್ರಗಣವನ್ನು ಕುಗ್ಗಿಸಿ ವಿಷ್ಣುಗಣದ ಸಮಾನ ಸ್ಥಾನಕ್ಕೆ ಪ್ರಯತ್ನಿಸಿ ತರಬಹುದು. ರುದ್ರಗಣಕ್ಕಿಂತ ಒಂದೆರಡು ಅಂಶಗಳು ಹೆಚ್ಚಾಗಿರುವ ಗಣವನ್ನು ಅಷ್ಟೊಂದು ಕುಗ್ಗಿಸಿ ಮೊಟಕಾಗಿಸುವುದು ಕಷ್ಟ. ಆದುದರಿಂದ ಅಂತಹ ಗಣವನ್ನು 'ಅಧಿಕಾಕ್ಷರಯುಕ್ತ ಗಣ' ಎಂಬ ಅರ್ಥದಲ್ಲಿ 'ಅಧಿಗಣ' ಎಂದು ಕರೆಯಲಾಗಿದೆ. 'ಅಧಿ' ಎಂದರೆ ಹೆಚ್ಚಿಗೆ ಸೇರಿಕೊಂಡುದು—ಎಂದಿಲ್ಲಿ ಅರ್ಥ. ಅಧಿದಿನ, ಅಧಿಮಾಸ, ಅಧಿವ್ರಜ, ಅಧ್ಯರ್ಧ—

ಎಂಬ ಶಬ್ದರೂಪಗಳನ್ನು ಇಲ್ಲಿ ನೆನೆಸಿಕೊಳ್ಳಬಹುದು. ಅಂಶಗಣ ಘಟಿತವಾದ ಹಾಡುಗಳ ಧಾಟಿ ಬಲ್ಲವರಿಗೆ ಅಧಿಗಣವನ್ನು ಕೂಡಿಸಿ ಹಾಡಲು ಬರುತ್ತದೆ. ತ್ರಿಪದಿಗಳಲ್ಲಿ, ಸರಳಾರ ಧವಳಾರಗಳಲ್ಲಿ, ಕೆಲವಾರು ಹಾಡುಗಳ ತ್ರಿಪದಿ ಮಕುಟಗಳಲ್ಲಿ ಒಮ್ಮೊಮ್ಮೆ ಇಂತಹ ಅಧಿಗಣಗಳು ಬರುತ್ತವೆ. ಮಾತ್ರಾಗಣ ಸಿಬದ್ಧ ರಚನೆಯಲ್ಲಿಯೂ ಅಧಿಗಣ ಬರುವುದುಂಟು. ಮಾತ್ರಾಗಣಗಳ ಪ್ರಯೋಗದಲ್ಲಿಯೂ ಇಂತಹ ಸಂದರ್ಭಗಳುಂಟು. ಒಂದು ಉದಾಹರಣೆ—

ಕನಕಕುಂ. ಡಲ ಕೌ. ಸ್ತುಭಮಣಿ. ಯುತಗೇ.
ಕನಕಾಂ. ಬರರತ್ನ. ಮಯ ಭೂಷಿತಗೇ.
ಕನಕಕಿ. ರೀಟ ಕುಂಡ. ಲಾಲಂ. ಕೃತನಿಗೆ.
ಕನಕಾ. ಭರಣದ. ಕಮಲನ. ಯನನಿಗೆ. ॥
ಕನಕದಾ. ರತಿಯಾ—ಬೆಳಗಿರೆ.

ಈ ಹಾಡು ನಾಲ್ಕು ಮಾತ್ರೆಯ ಗಣಗಳುಳ್ಳದು. ಕೊನೆಯ ಪಾದ ಮಾತ್ರ ತ್ರಿಪದಿ ಮಕುಟವಾಗಿ ಅಂಶಗಣ ಘಟಿತ. ನಾಲ್ಕು ಮಾತ್ರೆಗಳ ಗಣ ಸ್ಥಾನದಲ್ಲಿ ಎರಡು ಕಡೆ ಐದು ಮಾತ್ರೆಯ ಗಣಗಳಿವೆ. 'ರೀಟ ಕುಂಡ' ಎಂಬಲ್ಲಿ ಆರು ಮಾತ್ರೆಯ ಗಣವಿದೆ. ಈ ಹೆಚ್ಚು ಮಾತ್ರೆಯ ಗಣಗಳನ್ನು ನಾಲ್ಕು ಮಾತ್ರೆಗೊಳಪಡುವಂತೆ ತ್ವರಿತೋಚ್ಚಾರಣೆ ಮಾಡಬೇಕು. ಇದರಿಂದ ಇದು 'ನಿರಸ್ತ ಮಾತ್ರಾಗಣ' ಎನಿಸುತ್ತದೆ. ಇದನ್ನು 'ಅಧಿಮಾತ್ರಾಗಣ'—ಎಂತಲೂ ಕರೆಯಬಹುದಾಗಿದೆ. ಹಾಗೆಯೇ ನ್ಯೂನ ಮಾತ್ರಾಗಣವನ್ನು ಹಾಗೂ ನ್ಯೂನ ಅಂಶಗಣವನ್ನು ಹಿಗ್ಗಿಸಿ ಅಧಿಕ ಮಾತ್ರೆಯ ಇಲ್ಲವೆ ಅಧಿಕ ಅಂಶದ ಗಣವನ್ನಾಗಿ ಮಾಡುವ ಸಂದರ್ಭವಿರುವಲ್ಲಿ ಅದನ್ನು ಧ್ಮಾತ (ಬ್ರಹ್ಮ, ವಿಷ್ಣು) ಎಂದು (ಅಂಶಗಣವಾಗಿದ್ದಲ್ಲಿ), ಧ್ಮಾತ (ದ್ವಿ. ತ್ರಿ. ಚತುಃ. ಪಂಚ) ಎಂದು ಮಾತ್ರಾಗಣವಾಗಿದ್ದಲ್ಲಿ ಹೇಳಬಹುದಾಗಿದೆ. ಇಂತಹುದಕ್ಕೆ ಉದಾಹರಣೆಗಳು ಎಷ್ಟೋ ಇವೆ. ಯಕ್ಷಗಾನ ಪದ, ದಾಸರ ಪದ, ಶೋಭಾನೆ ಹಾಡುಗಳಲ್ಲಿ ಈ ಬಗೆಯ ಧ್ಮಾತ–ನಿರಸ್ತಗಳು ಸಿಗುತ್ತವೆ. ಆಧುನಿಕ ಕವಿಗಳ ಕವಿತೆಗಳಲ್ಲಿ ಇಂಥವು ಅಪರಿಮಿತವಾಗಿ ಮನೆಮಾಡಿವೆ.

## ಪಲ್ಲವಿ–ಅನುಪಲ್ಲವಿ–ಚರಣ

ಕೀರ್ತನೆ, ಯಕ್ಷಗಾನ ಪದ, ಜನಪದ ಗೀತ, ಶೋಭಾನೆ—ಮುಂತಾದವುಗಳಲ್ಲಿ ಅನೇಕಕ್ಕೆ 'ಪಲ್ಲವಿ' ಎಂಬ ಪ್ರಾರಂಭ ಭಾಗವಿರುತ್ತದೆ. ಅದು ಹಾಡಿನ ಶೀರ್ಷಿಕೆಯಿದ್ದಂತೆ. ಆಯಾ ಹಾಡಿನ ಧಾಟಿ, ಛಂದಸ್ಸು, ಸಾಹಿತ್ಯಾಂಶ—ಈ ಮೂರಕ್ಕೂ ಪಲ್ಲವಿಯೆ ತಿರುಳು ಅಥವಾ ನಿರ್ದೇಶಕ. ಪಲ್ಲವಿಯಲ್ಲಿ ಸೂಚಿತವಾದುದರ ವಿವರ

ವಿಸ್ತಾರಗಳೇ ಮುಂದೆ ಬರುವ ಪದದ ನುಡಿಗಳು ಅಥವಾ ಹಾಡಿನ ಸೊಲ್ಲುಗಳು. ಪಲ್ಲವಿಗೆ 'ಧ್ರುವ', 'ಧ್ರುವಪದ' ಎಂಬ ಹೆಸರು ಔತ್ತರೇಯರಲ್ಲಿ ಪ್ರಚಲಿತವಿದೆ. 'ಧ್ರುವ' ಎಂದರೆ ಸ್ಥಿರವಾದುದು ಎಂದು ಅರ್ಥವಿದೆ. ಅದು ಸ್ಥಿರವಾದ ಸೊತ್ತಾಗಿದ್ದು ವಿವರ ವಿಸ್ತರಗಳ ದಿಕ್‌ಸೂಚಕವೂ ಆಗಿರುತ್ತದೆ—ಧ್ರುವ ನಕ್ಷತ್ರದ ಹಾಗೆ. 'ಪಲ್ಲವಿ' ಎಂದು ಹೆಚ್ಚು ಪ್ರಚಲಿತವಿರುವ ಇದರ ಸರಿಯಾದ ಉಚ್ಚಾರಣೆ 'ಪಲ್ಲವ' ಎಂಬುದಾಗಿ ಕಂಡುಬರುತ್ತದೆ. ನಾಗವರ್ಮನು ಛಂದೋಂಬುಧಿಯಲ್ಲಿ 'ಪಲ್ಲವ' ಎಂದೇ ಹೆಸರಿಸಿದ್ದಾನೆ. 'ಪಲ್ಲವ' ಎಂದರೆ ಚಿಗುರು. ಸಸ್ಯದ ಹುಟ್ಟು–ಬೆಳೆವಣಿಗೆ–ಎಲೆ–ಹೂ–ಕಾಯಿ–ಹಣ್ಣುಗಳಿಗೆಲ್ಲ ಮೊದಲ ರೂಪ ಪಲ್ಲವ ತಾನೆ? ಹಾಡೆಂಬ ಮರಕ್ಕೆ ಪಲ್ಲವಿಯೆ ಪಲ್ಲವ. ಇಂತಹ ಪಲ್ಲವಿಯಲ್ಲಿ ಪ್ರಕಟವಾದ ಸಾಹಿತ್ಯಾಂಶ ಸ್ವಲ್ಪ ವಿಸ್ತಾರಗೊಂಡುದು 'ಅನುಪಲ್ಲವಿ'. ಅನೇಕ ಹಾಡುಗಳಿಗೆ ಪಲ್ಲವಿ ಮಾತ್ರ ಇರುತ್ತದೆ; ಕೆಲವಕ್ಕೆ ಪಲ್ಲವಿ–ಅನುಪಲ್ಲವಿಗಳೆರಡೂ ಇರುತ್ತವೆ. ಇವನ್ನು ಹಾಡಿನ ಪ್ರಾರಂಭದಲ್ಲಿ ಹಾಡಬೇಕಲ್ಲದೆ, ಆ ಹಾಡಿನ ಪ್ರತಿಯೊಂದು ಸೊಲ್ಲಿನ ಕೊನೆಗೂ ಆವೃತ್ತಿಯಾಗಿ ಹಾಡುವುದು ವಾಡಿಕೆ. ಪಲ್ಲವಿಯನ್ನು ಇಂಗ್ಲಿಷಿನಲ್ಲಿ 'ರಿಫ್ರೆಯಿನ್' (Refrain) ಎನ್ನುತ್ತಾರೆ. ಅದರ ಲಕ್ಷಣವೂ ಇದೇ. "some poems actually repeat whole lines or phrases; when they do this constantly in every stanza, the repetition is called "REFRAIN"[7] ಯಕ್ಷಗಾನ ಪದಗಳಲ್ಲಿ ಮತ್ತು ಶೋಭಾನೆ ಹಾಡುಗಳಲ್ಲಿ ಪಲ್ಲವಿ, ಅನುಪಲ್ಲವಿ ಎಂಬುದನ್ನು ಪಲ್ಲ, ಅನುಪಲ್ಲ ಎಂದು ಬರೆದಿರುವುದು ಕಂಡುಬರುತ್ತದೆ. ಇವುಗಳ ಸಂಕ್ಷಿಪ್ತ ರೂಪ—ಪ. ಮತ್ತು ಅ.ಪ.

ಹಾಡಿನಲ್ಲಿ ಹೀಗೆ ಪುನಃ ಪುನಃ ಪಲ್ಲವಿಯನ್ನು ಹಾಡುವುದರಿಂದ ಗೇಯ ರಮಣೀಯತೆ ಹೆಚ್ಚಾಗುವುದಲ್ಲದೆ, ಹಾಡಿನಲ್ಲಿ ಅಡಕವಾದ ಸಾಹಿತ್ಯದ ಅಭಿವ್ಯಕ್ತಿಯಲ್ಲಿ ಹೆಚ್ಚಿನ ಭಾಷಪುಷ್ಟಿಯೂ ಅರ್ಥಸ್ಪಷ್ಟತೆಯೂ ಆಗುವುದು. ಪಲ್ಲವಿ ಅನುಪಲ್ಲವಿಗಳಿರುವ ಒಂದು ಉದಾಹರಣೆ—

ಪೂಜಿಪೆ. ಗಜವದ. ನ....ದ. ಯಾ ಘನ.
ಪೂಜಿಪೆ. ತವಚರ. ಣ....॥ ಪ
ಪೂಜಿಪೆನು ನಾ. ವಿಘ್ನ ರಾಜನ.
ಮೂಜಗದಿ ವಿ. ಖ್ಯಾತನಾದನ.
ರಾಜವೈಭವ. ದಿಂದ ಮೆರೆವನ.
ರಾಜಿಪಾ ಗಣ. ನಾಥ. ನ.... ಅ ಪ ೨೩೬

ಅಷ್ಟತಾಳದ ಗಣನೆಗೆ ಅನುಗುಣವಾಗಿರುವ ಈ ಹಾಡಿನ ಪಲ್ಲವಿ ಅಂಶಗಣ (ವಿಷ್ಣುಗಣ) ಘಟಿತವಾಗಿ ವಿಳಂಬಗತಿಯಲ್ಲಿದೆ. ಅನುಪಲ್ಲವಿ ಮೂರು ನಾಲ್ಕು ಮಾತ್ರೆಗಳ ಅನುಕ್ರಮ

ಗಣಗಳಿಂದ ಕೂಡಿ ದ್ರುತ ಗತಿಯಲ್ಲಿದೆ. ದಪ್ಪದ ಏಕಾಕ್ಷರಗಳು 'ಮುಡಿ'ಗೆ ಉದಾಹರಣೆಗಳು. 'ದಯಾಘನ' ಎಂಬುದು 'ವರಣ'ವೆನಿಸುತ್ತದೆ. ವರಣವನ್ನೀಗ ವಿವರಿಸಲಾಗುವುದು—

## ವರಣ

ಯಕ್ಷಗಾನ ಪದ, ಭಜನೆ ಪದ, ಶೋಭಾನೆ ಹಾಡು ಮುಂತಾದ ಗೇಯ ಸಾಹಿತ್ಯದಲ್ಲಿ ಎರಡು ಸಾಲುಗಳ ನಡುವೆ ಬರುವ ಕಿರುಸಾಲನ್ನು 'ವರಣ' ಎಂದು ಕರೆಯಲಾಗುತ್ತದೆ. 'ವರಣ' ಎಂಬ ಶಬ್ದಕ್ಕೆ ವರಿಸುವಿಕೆ, ಸೇತು—ಎಂಬ ಅರ್ಥಗಳಿವೆ. ಅದು ಒಂದು ಪಾದದ ಕೊನೆಯನ್ನು ಅದರ ಮುಂದಿನ ಪಾದದ ಮೊದಲಿಗೆ ಸೇರಿಸುವ ಸೇತುವೆಯಂತೆ ಅಥವಾ ಅದು ಸ್ವತಃ ಮುಂದಿನ ಪಾದವನ್ನು ವರಿಸುವಂತೆ ಇರುತ್ತದೆ. ಆದುದರಿದಂಲೇ ಇದು ಅರ್ಥವತ್ತಾದ ಪ್ರಚಲಿತ ಪಾರಿಭಾಷಿಕ. ಇದು ಬಹ್ವಕ್ಷರ ಪುಂಜವಾಗಿರಬಹುದು, ಒಂದೇ ಒಂದು ಅಕ್ಷರವುಳ್ಳದ್ದೂ ಆಗಿರಬಹುದು. ಒಂದು ಗಣವಾಗಿರಬಹುದು, ಒಂದಕ್ಕಿಂತ ಹೆಚ್ಚು ಗಣಗಳ ಕೂಟವೂ ಇರಬಹುದು. ವರಣದ ಆದಿಯ ಒಂದು ಅಥವಾ ಎರಡು ಅಕ್ಷರಗಳು ಹಿಂದಿನ ಪಾದಾಂತ್ಯಕ್ಕೆ (ಮುಡಿಗೆ) ಗಣಾಂಶವಾಗಿಯೂ ಇರಬಹುದು. ಗಾನಜ್ಞರು ತಾಳ ಬೀಳುವುದಕ್ಕೆ ಮುಂಚೆಯೇ ಉಚ್ಚಾರಣೆಗೊಳ್ಳುವ ಈ ಬಗೆಯ ಸಾಹಿತ್ಯಾಂಶವನ್ನು 'ಅತೀತ' ಇಲ್ಲವೆ 'ಅತೀತಗ್ರಹ' ಎನ್ನುತ್ತಾರೆ. ಹಾಡು ಪ್ರಾರಂಭವಾಗಿ ತಾಳ ಬಿದ್ದ ಮೇಲೆಯೇ ಬರುವ ಇದನ್ನು ಅತೀತವೆಂಬುದು ಸರಿಹೋಗುವುದಿಲ್ಲ. ಇದಕ್ಕೆ 'ವರಣ' ಎಂಬುದೇ ಸೂಕ್ತಸಂಜ್ಞೆ. ವರಣವು ಪಲ್ಲವಿಯಲ್ಲಾಗಲಿ, ಹಾಡಿನ ಸೊಲ್ಲಿನಲ್ಲಾಗಲಿ ಎರಡು ಪಾದಗಳ ನಡುವೆ ನಿಂತಿದ್ದು, ಬೇರೆಯಾಗಿಯೇ ಕಾಣಿಸಿಕೊಂಡು, ಹಾಡುವಾಗ ಅದು ಅದರ ಮುಂದಿನ ಪಾದಕ್ಕೆ ಸೇರಿಕೊಳ್ಳುತ್ತದೆ. ಹಿಂದೆ ಉದಾಹರಿಸಿದ ಪಲ್ಲವಿ, ಅನುಪಲ್ಲವಿಯ ಭಾಗದಲ್ಲಿ 'ದಯಾಘನ' ಎಂಬ ಅಕ್ಷರ ಪುಂಜವು ವರಣವಾಗಿದ್ದು, ಅದರ ಆದ್ಯಕ್ಷರವಾಗಿರುವ 'ದ' ಎಂಬುದು ಅದರ ಹಿಂದಿನ 'ನ' ಎಂಬ ಪಾದಾಂತ್ಯಕ್ಕೆ ಗಣಾಂಶವಾಗಿ ನಿಲ್ಲುತ್ತದೆ. ಒಂದು ಅಥವಾ ಎರಡು ಅಕ್ಷರಗಳ ವರಣಕ್ಕೆ ಉದಾಹರಣೆ—(ವರಣಕ್ಕೆ ದಪ್ಪಕ್ಷರ)

1 ಮುದ್ದು ಗೋಪಾಲ. ಕೃಷ್ಣ ಬಂದ. ಕಾಣೇ.... **ನೀ**
ಎದ್ದು ಭಿಕ್ಷವ. ನೀಡು ಬೇಗ. ಜಾಣೇ ಪ

ದೇವಕಿಯುದ. ರದಿ ಬಂದ. ಕಾಣೇ.... **ವಸು**
ದೇವನ ಮೋ. ಹದ ಕಂದ. ಕಾಣೇ॥ (ವಟುಗೆ ಭಿಕ್ಷೆ ಹಾಕುವ ಹಾಡು)

2 ಎರಡು ಗಣಗಳಷ್ಟು ವಿಸ್ತಾರವುಳ್ಳ ವರಣಕ್ಕೆ ಉದಾಹರಣೆ—

ಪಾಲಿಸೈ ಗ. ಣೇಶ ನೀಯೆ. ನ್ನ.... ನೀಲ. ಕಂಠ ಪುತ್ರನೆ
ಪಾಲಿಸೈ ಗ. ಣೇಶನೀಯೆ. ನ್ನ ಪ

ಲಂಬ ಉದರನೆ. ಶಂಭು ಪುತ್ರನೆ
ಸಂಭ್ರಮದ ಹೇ. ರಂಬ ದೇವನೆ
ಶುಂಭ ಮರ್ದಿನಿ. ಯೆಂಬ ದೇವಿಯ
ಸಂಭ್ರಮ. ಪುತ್ರನೆ. ನಂಬಿದೆ. ನಾನಿನ್ನ....ಪಾಲಿಸೈ ॥

ಈ ಉದಾಹರಣೆಗಳಲ್ಲಿ ಕಾಣುವಂತೆ ವರಣಾಕ್ಷರ ಅಥವಾ ವರಣಾಕ್ಷರ ಸಮೂಹ ತನ್ನ ಮುಂದಿನ ಪಾದವನ್ನು ವರಿಸಿಕೊಳ್ಳುತ್ತದೆ (ಕೂಡಿಕೊಳ್ಳುತ್ತದೆ). ಇದರಿಂದ 'ವರಣ' ಎಂಬ ಹೆಸರು ಇದಕ್ಕೆ ಲಾಕ್ಷಣಿಕವಾಗಿ ಒಪ್ಪುವಂತಹದಾಗಿದೆ. ಈ ಪಾರಿಭಾಷಿಕಕ್ಕೆ ಹಿನ್ನೆಲೆಯೂ ಇದೆ—

'ವರಣ' ಎಂಬುದು ಯಕ್ಷಗಾನ ಸಂಪ್ರದಾಯದ ಒಂದು ಪಾರಿಭಾಷಿಕ. ಯಕ್ಷಗಾನದಲ್ಲಿ ಖ್ಯಾತ ಅರ್ಥದಾರಿಯೂ ವಿದ್ವಾಂಸರೂ ಆಗಿದ್ದ ದಿವಂಗತ ಆರ್ಕುಳ ಸುಬ್ರಾಯಾಚಾರ್ಯರು ಸುಮಾರು 50 ವರ್ಷಗಳ ಹಿಂದೆ ಪ್ರಕಟಿಸಿರುವ ತಮ್ಮ 'ಅರ್ಥ ಸಹಿತ ಕೃಷ್ಣ ಸಂಧಾನ ಪ್ರಸಂಗ'ದ ಪ್ರಸ್ತಾವನೆಯಲ್ಲಿ ಹೇಳಿರುವ ಈ ಸಂಗತಿಯನ್ನು ಸೇಡಿಯಾಪು ಕೃಷ್ಣಭಟ್ಟರು, ಶ್ರೀ ಸೀತಾರಾಮ ಕೆದಿಲ್ಲಾಯರು ಪ್ರಸ್ತಾವಿಸಿ, ಮಾನ್ಯ ಮಾಡಿರುತ್ತಾರೆ.[8] ಈ ವಿಷಯದಲ್ಲಿ ಇತರ ವಿದ್ವಾಂಸರೂ ಚಿಂತನೆ ಮಾಡಿರುವ ಆಧಾರಗಳಿವೆ—

1977ರಲ್ಲಿ ಪ್ರಥಮ ಮುದ್ರಣವಾಗಿ ಪ್ರಕಾಶಿತವಾಗಿರುವ ಶಂಖ ಕವಿಯ (17ನೇ ಶತಮಾನ) 'ಪುಲಿಗೆರೆ ಶಂಖಜಿನೋದ್ಭವ ಕಾವ್ಯ' ನಾಲ್ಕು ಪಾದಗಳುಳ್ಳ 140 ಪದ್ಯಗಳ ಕೃತಿ. ಇದರಲ್ಲಿ ಪ್ರತಿಯೊಂದು ಪದ್ಯದಲ್ಲಿಯೂ ಎರಡೆರಡು ವರಣಗಳು ಬಂದಿವೆ. ಈ ಧಾಟಿಯ ಪದ್ಯರಚನೆಯನ್ನು ಪ್ರಥಮವಾಗಿ ಗುರುತಿಸಿರುವ ಡಾ॥ ಎಂ. ಚಿದಾನಂದಮೂರ್ತಿಯವರು ಇದನ್ನು 'ಉಯ್ಯಾಲೆ ಗಣಗಳಿರುವ ಒಂದು ಅಪೂರ್ವ ಅಂಶಲಯದ ಧಾಟಿ' ಎಂದು ಕರೆದು ಛಂದೋ ವಿವರಣೆಯನ್ನು ಮಾಡಿದ್ದಾರೆ.[9] ಈ 'ಉಯ್ಯಾಲೆಗಣ' ಎಂಬುದು ಲೇಖಕರು ಹೊಸತಾಗಿ ಇಟ್ಟ ಹೆಸರು. ಬೇರೆ ಬಗೆಯ ಹಾಡುಗಳಲ್ಲಿ ಈ ಉಯ್ಯಾಲೆ ಗಣ ಸ್ಥಾನದಲ್ಲಿ ಒಂದೇ ಅಕ್ಷರವಿರುವುದನ್ನು ಇದಾಗಲೇ ತೋರಿಸಲಾಗಿದೆಯಷ್ಟೆ. ಒಂದೇ ಅಕ್ಷರಕ್ಕೆ ಗಣ ಸಂಜ್ಞೆಯೊಪ್ಪದು. ಡಾ॥ ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರ ಪರಿಶೀಲನೆಯ ಪ್ರಕಾರ, 'ಉಯ್ಯಾಲೆ ಗಣವೂ ಅಲ್ಲ, ಅಪೂರ್ವ ಲಯವೂ ಅಲ್ಲ.'[10] 'ವರಣ' ಎಂಬೀ ಪಾರಿಭಾಷಿಕ ಬಹಳ ಹಿಂದೆಯೇ ಬಳಕೆಯಾಗಿರುವುದು ಇವರಿರ್ವರ ಲಕ್ಷ್ಯಕ್ಕೆ ಬಂದಿಲ್ಲ.

ಹಿಂದೆ ತಿಳಿಸಿದಂತೆ, ವರಣಕ್ಕೆ ಒಂದು ಉಪವರಣವಿರುವ ಹಾಗೆ ಒಂದೆರಡು ಅತೀತಾಕ್ಷರಗಳು (ತಾಳದ ಪೆಟ್ಟಿಗೆ ಹಿಂದೆ ಉಳಿದಿದ್ದು) ಗಣ ಗಣನೆಯಲ್ಲಿ ಅವು ಹಿಂದಿನ ಪಾದಾಂತ್ಯಾಕ್ಷರಕ್ಕೆ (ಮುಡಿಗೆ) ಗಣ ಪೂರಣದ ಕಾರ್ಯವನ್ನು ಮಾಡುತ್ತವೆ. ಹಿಂದಿನ ಉದಾಹರಣೆಯಲ್ಲಿ 'ನೀಲ. ಕಂಠಪುತ್ರನೆ' ಎಂಬಲ್ಲಿ 'ನೀಲ' ಎಂಬೆರಡು ಅಕ್ಷರಗಳು ಈ ಬಗೆಯವು. ಇನ್ನೊಂದು ಉದಾಹರಣೆ : (ಮುಂದಿನ ಉದಾಹರಣೆಗಳಲ್ಲೆಲ್ಲ ಕಾಣಿಸಿರುವ ಸಂಖ್ಯೆ ಶೋಭಾನೆಗಳದು)

ರಾಜವಂ. ದಿತೆ ಶ್ರೀದೇ. ವೀ.... ನಂಹಾ. ಮಾಯೆ ರಾಜ
ರಾಜವಂ. ದಿತೆ ವೈಷ್ಣ. ವೀ.... (೨೪೫)

ಹೀಗೆ ಪೂರ್ವಾಕ್ಷರಗಳಿಲ್ಲದೆ ವರಣ ಮಾತ್ರ ಇರುವುದಕ್ಕೆ ಉದಾಹರಣೆ— (ಚತುರ್ಮಾತ್ರಾಗಣ)

ಎತ್ತಿರೆ. ಆರತಿ. ಯಾ.... **ಪರಶಿವ.**
ಗೆತ್ತಿರೆ. ಆರತಿ. ಯಾ

ಇಲ್ಲಿ 'ಪರಶಿವ' ಎಂಬುದು ಸ್ವತಂತ್ರ ವರಣವಾಗಿದೆ. ಅದರ ಹಿಂದಿನ 'ಯಾ' ಎಂಬ ಪಾದಾಂತ್ಯದ ಅಕ್ಷರಕ್ಕೆ (ಮುಡಿಗೆ) ನಾಲ್ಕು ಮಾತ್ರೆಗಳ ಒಂದು ಗಣದ ಮೌಲ್ಯವಿದೆ. ಇಲ್ಲಿಯ ವರಣ ಕೂಡ ಒಂದು ಗಣದ ಮೌಲ್ಯವುಳ್ಳದ್ದು.

## ಯತಿ

ಅರ್ಥಕ್ಕೆ ಭಾವಕ್ಕೆ ಅನುಗುಣವಾಗಿ ಸ್ವರಗಳ ಪರಿಮಿತ ಮಾಡಿಕೊಳ್ಳುವುದು, ಉಸಿರೆಳೆಯಲು ನಿಲ್ಲಿಸಿಕೊಳ್ಳುವುದು ಯಾವ ಪದ್ಯವಾಚನಕ್ಕಾದರೂ ಗಮಕದ ಲಕ್ಷಣ. ಇಂತಹ ವಿಶ್ರಮ ಸ್ಥಾನವನ್ನು 'ಯತಿ' ಎನ್ನುತ್ತಾರೆ. ಅದು ಉಸಿರ್ದಾಣ. ಹಾಡುಗಳಲ್ಲಿಯೂ ಯತಿಯಿರುತ್ತದೆ. ಪಾದಾಂತ್ಯದಲ್ಲಿ (ಮುಡಿಯಿದ್ದಲ್ಲಿ), ವರಣಕ್ಕೆ ಮೊದಲು ಯತಿಯಿರುತ್ತದೆ. ಹಾಡಿನ ನಡೆ (ಗತಿ) ಮಾರ್ಪಾಡಾಗುವಲ್ಲಿಯೂ ಯತಿಸ್ಥಾನವಿರುತ್ತದೆ. ಅಂತಹ ಯತಿಸ್ಥಾನದಲ್ಲಿ ಹ್ರಸ್ವವಿದ್ದರೆ ಅದು ಗುರು ಮೌಲ್ಯವನ್ನೋ ಗಣ ಮೌಲ್ಯವನ್ನೋ ಪಡೆಯುತ್ತದೆ. ಯತಿಸ್ಥಾನದ ಹ್ರಸ್ವವನ್ನು ಹ್ರಸ್ವವಾಗಿಯೇ ಉಚ್ಚರಿಸಿ, ಮುಂದಿನ ಗಣೋಚ್ಚಾರಣೆಗೆ ಮುನ್ನ ಗಣಪೂರ್ಣತೆಗೆ ಬೇಕಾಗುವಷ್ಟು ವೇಳೆಯನ್ನು (ಮಾತ್ರೆಗಳನ್ನು) ಮೌನದಿಂದ ತುಂಬಿಕೊಳ್ಳುವುದೂ ಉಂಟು. ಯತಿ ಕೆಟ್ಟರೆ ಕವಿತೆಯ ಆಯತಿ ಕೆಡುವುದು—

ಯತಿಯೆಂಬುದು ಗಣನಿಯಮ
ಪ್ರತೀತಿಗುಸುರ್ದಾಣಮಂತದಂ ದಾಂಟಲ್ಕಾ
ಯತಿ ಕೆಡುಗುಂ ದಾಂಟಿದೊಡಾ
ಯತಿ ಕೆಡೆ ಕಪಿತಾಭಿಮಾನಮೇನೆಸೆದಪುದೋ11

## ಆವೃತ್ತಿ

ಹಾಡಿನ ಗೇಯತೆಗೂ ಅರ್ಥಪುಷ್ಟಿಗೂ ಸೊಬಗನ್ನುಂಟುಮಾಡುವ ಒಂದು ಗುಣ ಆವೃತ್ತಿಯಲ್ಲಿದ್ದು, ಅದು ಧಾಟಿಯ ಒಂದು ಅಂಶವಾಗಿದೆ. ಹಾಡಿನಲ್ಲಿ ಒಮ್ಮೆ ಉಚ್ಚಾರಣೆ ಮಾಡಿದ ಸಾಲನ್ನು ಇಲ್ಲವೆ ಸಾಲಿನ ಭಾಗವನ್ನು ಇನ್ನೊಮ್ಮೆ ಹೇಳುವುದು 'ಆವೃತ್ತಿ' ಎನಿಸುವುದು. ತ್ರಿಪದಿಯನ್ನು ಹಾಡುವಾಗ ಮೊದಲಿನ ಏಳು ಗಣಗಳನ್ನು ಹಾಡಿ ನಿಲ್ಲಿಸಿಕೊಂಡು, ಪುನಃ ಐದನೆಯ ಗಣದಿಂದ ಆವೃತ್ತಿ ಮಾಡಿ ಹಾಡುವುದು ಕ್ರಮ. ಉದಾಹರಣೆ—

1 ಕಾಡ ಕೆಸ. ವಿನ ಸೊಪ್ಪು. ಮೂಡ ಹಾ. ಗಲಕಾಯಿ
**ಕಾಡೊಳ. ಗಿದ್ದ. ಬಿದಿರಿನ**
**ಕಾಡೊಳ. ಗಿದ್ದ. ಬಿದಿರಿನ.** ಕಳಿಲೆ ಮೆದ್ದು
ಮೂವಿನಕೆ. ಎದ್ದು. ಬರುವೆನು (೨೩೦)

2 ಇದೇ ಸೊಲ್ಲನ್ನು ಹಾಡುವ ಇನ್ನೊಂದು ವಿಧಾನ — ಇಲ್ಲಿ ಏಳನೆಯ ಗಣದಿಂದ ಆವೃತ್ತಿ.

ಕಾಡ ಕೆಸ. ವಿನ ಸೊಪ್ಪು. ಮೂಡ ಹಾ. ಗಲ ಕಾಯಿ.
**ಕಾಡೊಳ. ಗಿದ್ದ. ಬಿದಿರಿನ.**
**ಬಿದಿರಿನ.** ಕಳಿಲೆ ಮೆದ್ದು
ಮೂವಿನಕೆ. ಎದ್ದು. ಬರುವೆನು.

3 ರಾವಣಕಾಂತಃ. ಪುರದಿ ತನ್ನ.
ಪ್ರೇಮಕಾಂತೆ. ಮಂಡೋದರಿಯು.
ಕೂಡೆ ನುಡಿದ. ರಾವಣ ವಿ
**ನೋದದ ಮಾತ. ವಿನೋದದ ಮಾತ.**

ಹಾಡುಗಳ ಪಲ್ಲವಿಗಳು ಆವೃತ್ತಿಯ ವಿಷಯಕ್ಕೆ ಸೇರುತ್ತವೆಂದು ತಿಳಿದುಕೊಳ್ಳ

ಬಹುದು. ಆದರೆ ಪಲ್ಲವಿಯ ಆವೃತ್ತಿ ಅದರ ಪ್ರತಿಯೊಂದು ಸೊಲ್ಲಿನ ಕೊನೆಗೆ ಬರುತ್ತದೆ.

**ಗತಿ** (ನಡೆ)

ಕಾವ್ಯಕನ್ಯೆಗೆ 'ಪದನ್ಯಾಸವೇ ನಡೆ' ಎಂಬುದು ಕವಿ ರಾಘವಾಂಕನ ಮಾತು. ಶಬ್ದ ವಿಸರವು ಗಣಾತ್ಮಕವಾಗಿ, ಗಣಗಳು ಪಾದಾತ್ಮಕವಾಗಿ, ಅಂತಹ ಪಾದಗಳು ಸೇರಿ 'ಸೊಲ್ಲು' (**stanza**) ಅಂದರೆ ಒಂದೊಂದು 'ನುಡಿ' ಆಗುತ್ತದೆ. ಸೊಲ್ಲುಗಳ ಸಮೂಹವೇ ಹಾಡು. ಹವ್ಯಕ ಮಹಿಳೆಯರು ಇದನ್ನು ಸೂಲು, ಸುಲು, ಸೊಲು ಎಂದು ಉಚ್ಚಾರಣೆ ಮಾಡುತ್ತಾರೆ. ಇವೆಲ್ಲ 'ಸೊಲ್ಲು' ಎಂಬುದರ ಅಪಪಾಠಗಳೆಂದು ತೋರುತ್ತದೆ. ಆದರೆ ಸೇಡಿಯಾಪು ಕೃಷ್ಣಭಟ್ಟರು 'ಛಂದೋಗತಿ' (1985) ಎಂಬ ತಮ್ಮ ಗ್ರಂಥದಲ್ಲಿ 'ಸೂಲು' ಶಬ್ದವನ್ನು ಮಾನ್ಯಮಾಡಿ ಪ್ರಯೋಗಿಸಿರುವುದು ಕಂಡು ಬರುತ್ತದೆ. ಹಾಡಿನ ಧಾಟಿ ರೂಪಗೊಳ್ಳುವುದು ಮತ್ತು ಮನೋಜ್ಞವಾಗುವುದು ಅದರ ನಡೆಯಿಂದ—ಗತಿಯಿಂದ. ಗತಿಯೆಂಬುದು ಆಯಾ ಹಾಡಿನ ಗಣ, ತಾಳ ಪ್ರಜ್ಞೆ, ಉಚ್ಚಾರಣೆಯ ವೇಗ—ಇವುಗಳಿಗೆ ಅನುಸಾರವಾಗಿ ಮೂರು ವಿಧವಾಗಿದೆ—ವಿಳಂಬ, ಮಧ್ಯಮ, ದ್ರುತ (ತ್ವರಿತ) ಎಂದು. ಕೆಲವು ಹಾಡುಗಳಿಗೆ 'ಸಮಗತಿ'—ಅಂದರೆ, ಆದಿಯಿಂದ ಅಂತ್ಯದ ವರೆಗೆ ಒಂದೇ ಬಗೆಯ ಗತಿ. ಕೆಲವಕ್ಕೆ ನಡುನಡುವೆ ಗತಿಯ ಮಾರ್ಪಾಡುಗಳುಂಟು. ತ್ರಿಪದಿಗೆ ಅಂತಹ ಗತಿಭೇದವಿಲ್ಲ. ವಿಳಂಬ, ಮಧ್ಯಮ, ವಿಳಂಬ ಗತಿಯ ಒಂದು ಹಾಡಿನ ಸೊಲ್ಲಿದು. (ಗತಿವ್ಯತ್ಯಾಸವನ್ನು ಸೂಚಿಸಲು ನೀಟದ ಜೋಡುಗೆರೆಯಿದೆ)—

ಕುಂಡಲಾ. ನನಗೇ ಮಾ. ರ್ತಾಂಡ ತೇ. ಜನಿಗೇ.
ಚಂಡಮುಂ. ಡಾಂತಕಿ. ಚಂಡಿಕೆ. ಯಡಿಗೇ ॥

ರುಂಡಮಾ. ಲನ ಸುತ. ದಂಡಕ. ಧರನಿಗೆ.
ಭಂಡರ. ತರಿದ ಚಾ. ಮುಂಡಿ ಮು. ಕಾಂಬೆಗೆ.
ದಂಡಪ್ರ. ಣಾಮದೊ. ಳೆರಗಿ ಭೂ. ಸುರರೆಲ್ಲ.
ದುಂಡು ಮ. ಲ್ಲಿಗೆ ಸೇ. ವಂತಿಗೆ. ಯರಲಿನ ॥
ಚೆಂಡಿನಾ. ರತಿಯಾ—ಬೆಳಗಿರೆ (242)

ಈ ಹಾಡು ಅಂಶಗಣ ಘಟಿತ, ಮೊದಲ ಎರಡು ಸಾಲುಗಳಿಗೆ ವಿಳಂಬ ಗತಿ. ಅನಂತರದ ಸಾಲುಗಳಿಗೆ ಮಧ್ಯಮ ಗತಿ. ಕೊನೆಯ ಸಾಲು ತ್ರಿಪದಿ ಮಕುಟವಾಗಿದ್ದು ಪುನಃ ವಿಳಂಬಗತಿಯುಳ್ಳುದಾಗಿದೆ. ಈ ಹಾಡಿನ ಎಲ್ಲ ಸೊಲ್ಲುಗಳಿಗೂ ಇದೇ ಧಾಟಿ. ಈ ಗತಿಭೇದದಿಂದ ಇದರ ಗೇಯತೆಗೆ ಹೆಚ್ಚಿನ ಅಂದ ಬಂದಿದೆ.

ಮಧ್ಯಮ ಮತ್ತು ವಿಳಂಬ ಎಂಬೆರಡು ಹಂತದ ಗತಿಯುಳ್ಳ ಧಾಟಿಯ ಹಾಡಿನ ಸೊಲ್ಲಿದು—

ಗಣಪ ವಾ. ಗ್ದೇವಿಯ. ರಡಿಗೆ ವಂ. ದಿಸುತ.
ಫಣಿಶಯ. ನನ ಪಾದ. ವನಜಕೆ. ರಗುತ.
ತ್ರಿಣಯಗೊಂ. ದಿಸಿ ಗುರು. ವರನ ಧ್ಯಾ. ನಿಸುತ.
ಗುಣನಿಧಿ. ಮಹಾಮಾ. ಯೆಯ ಪ್ರಾ. ರ್ಥಿಸುತ ॥
ಗಿರಿಜಾ ಕಲ್ಯಾ. ಣ... ವ. ನೊರೆವೇನು (71)

ಈ ಹಾಡಿನಲ್ಲಿ ನಾಲ್ಕನೆ ಪಾದದ ಕೊನೆಯ ವರೆಗೆ ಮಧ್ಯಮ ಗತಿ. ಕೊನೆಯ ಸಾಲು ತ್ರಿಪದಿ ಮಕುಟವಾಗಿದ್ದು ವಿಳಂಬಗತಿಯಲ್ಲಿದೆ. ಇಲ್ಲಿ 'ಣ...ವ.' ಎಂಬೆರಡು ಅಕ್ಷರಗಳು ಪ್ಲುತವಾಗಿ 'ಣಾವಾ' ಎಂದು ಉಚ್ಚಾರಣೆಗೊಂಡು, ಬ್ರಹ್ಮಗಣದ ಮೌಲ್ಯವನ್ನು ಪಡೆಯುತ್ತವೆ.

## ಪಾದ ಮಕುಟ

ಕೆಲವು ಬಗೆಯ ಹಾಡುಗಳ ರಚನೆಯಲ್ಲಿ ಸೊಲ್ಲುಗಳ ಕೊನೆಗೊಂದು ಚಿಕ್ಕ ಪಾದವಿದ್ದು, ಅದು ಸೊಲ್ಲಿನ ಸಮಾಪ್ತಿಗೆ ಮಕುಟವಿಟ್ಟಂತೆ ಸೌಂದರ್ಯವನ್ನುಂಟುಮಾಡುತ್ತದೆ. ಅರ್ಥಪೂರ್ಣತೆಯ ಕಳೆಯನ್ನು ತರುತ್ತದ. ಅದು ಗಾತ್ರದಲ್ಲಿ ಒಂದು ಪದ ಅಥವಾ ಗಣದಷ್ಟಿರಬಹುದು. ಕೆಲವೆಡೆ ಅದಕ್ಕಿಂತ ಸ್ವಲ್ಪ ಹೆಚ್ಚಿರಬಹುದು. ಇದನ್ನು 'ಪಾದಮಕುಟ' ಎಂದು ಹೆಸರಿಸಲಾಗಿದೆ. 'ಶಿಖಾಪಾದ' ಎಂತಲೂ ಇದನ್ನು ಕರೆದಿದ್ದಾರೆ.[12] ಉದಾಹರಣೆಗೆ—

1. ಚಾರುಪೂ. ಜೆಯ ಬಂದು. ನೋಡಿರಿ । ಗುಣಾ
ಧಾರಂಗೆ. ನತರಾಗಿ. ಬೇಡಿರಿ ಪ
ಮೂರು ಗು. ಣಂಗಳ. ಮೀರಿದ. ಪಾರನ
ಭೂರಿ ರಾ. ಗದಿ ಮುಳು. **ಗಾಡಿರಿ. ಹಾಡಿರಿ** (209)

ಈ ಹಾಡು ಅಂಶಲಯವುಳ್ಳುದು. ಇಲ್ಲಿ 'ಮುಳುಗಾಡಿರಿ' ಎಂಬಲ್ಲಿಗೆ ಅರ್ಥ ಪರಿಪೂರ್ಣವಾಗುವುದಾದರೂ 'ಹಾಡಿರಿ' ಎಂಬುದು ಇನ್ನಷ್ಟು ಅರ್ಥಪೋಷಣೆಯನ್ನು ಮಾಡುತ್ತದೆ. ಇಲ್ಲಿ 'ಯಮಕ' ಎಂಬ ಶಬ್ದಾಲಂಕಾರವೂ ಉಳ್ಳುದಾಗಿ, ಹಾಡಲು ಒಳ್ಳೆಯ ಲಯ ವಿನ್ಯಾಸವನ್ನು ಈ ಪಾದಮಕುಟ ಒದಗಿಸುತ್ತದೆ.

2. ಉದಯಕಾ. ಲದೊಳೆದ್ದು. ಸ್ನಾನವ. ಮಾಡಿ
ಮುದದಿಂ. ದಲಿ ಗಣ. ಪತಿಗೆರ. ಗುವೆನು
ತಡೆಯದೆ. ನಿಂತು ಮೊ. ದಲು ಪೂ. ಜೆಯ ಕೊಂಬ.
ಮಹಾಗಣ. ಪತಿ ಶರ. ಣು... **ಜಯ ಜಯ ಮಂಗಲವೇ** (215)

ಇದೂ ಅಂಶಲಯವುಳ್ಳದು. 'ಜಯ ಜಯ ಮಂಗಲವೇ' ಎಂಬುದಿಲ್ಲಿ ಪಾದ ಮಕುಟ.

'ಮಕುಟ' ಎಂಬುದು ಸಂಗೀತ ಶಾಸ್ತ್ರದಲ್ಲಿಯೂ ಬರುತ್ತದೆ. ತಾಳವಾದನದಲ್ಲಿ ಅದರ ಮುಕ್ತಾಯದ ಭಾಗವನ್ನು 'ತಾಳಮಕುಟ' ಎನ್ನುತ್ತಾರೆ. ಗಾನದಲ್ಲಿ ಚಿಟ್ಟೆಸ್ವರವು 'ಸ್ವರಮಕುಟ' ಎನಿಸುತ್ತದೆ. ಹಾಗೆಯೇ ಗೀತಗಳಲ್ಲಿ ನಿರ್ದಿಷ್ಟ ರೀತಿಯಲ್ಲಿರುವ ಕೊನೆಯ ಉಲ್ಲೇಖವನ್ನು ಅಥವಾ ಪಾದವನ್ನು 'ಗೀತ ಮಕುಟ' ಎನ್ನುತ್ತಾರೆ.

## ತ್ರಿಪದಿ, ತ್ರಿಪದಿ ವಿಸ್ತರಣ, ತ್ರಿಪದಿ ಮಕುಟ

'ತ್ರಿಪದಿ' ಎಂಬುದು ಅನ್ವರ್ಥಕವಾಗಿ ಮೂರು ಪಾದಗಳುಳ್ಳ, ದೇಶೀಯ ಛಂದಸ್ಸು; ಅಂಶಗಣಾತ್ಮಕ. ಮೊದಲನೆ ಪಾದದಲ್ಲಿ ಒಳಪ್ರಾಸವಿದ್ದು ಎರಡು ಪಾದಗಳ ಜೋಡಿಯಂತೆ ಕಾಣಿಸುವುದರಿಂದ, ಇದು ನಾಲ್ಕು ಪಾದಗಳ ಬಂಧವೂ ಹೌದು. ಇದರ ಧಾಟಿಯಂತೆ ಆರನೆಯ ಗಣದ, ಅಂದರೆ ಆ ಬ್ರಹ್ಮಗಣದ ಕೊನೆಗೊಂದು ದೀರ್ಘ ವಿನ್ಯಾಸವೂ ಅದರ ಕೊನೆಗೆ ಯತಿಯೂ ಇರುತ್ತದೆ. ಹಾಡುವಾಗ ಅಲ್ಲಿ ಒಮ್ಮೆ ನಿಲ್ಲಿಸಿ, ಪುನಃ ಐದನೆಯ ಗಣದಿಂದ ಆವೃತ್ತಿ ಮಾಡಿ ಹಾಡುವುದು ಧಾಟಿಯಾಗಿರುವುದರಿಂದ ಇದು ಐದು ಪಾದಗಳ ಬಂಧವೂ ಹೌದು. ವಿರಳವಾಗಿ ಇದಕ್ಕೆ ಮತ್ತೊಂದು ಪಾದ (ಅಂದರೆ, ಅತಿರಿಕ್ತವಾಗಿ 8, 9, 10, 11ನೇ ಸ್ಥಾನದ ಗಣಗಳು) ಸೇರಿ, ತ್ರಿಪದಿ ವಿಸ್ತರಣೆಗೊಂಡ ಉದಾಹರಣೆಗಳೂ ಇವೆ. ಅಂತೂ ಒಂದನೆಯ ಪಾದದಲ್ಲಿ ಗಣಗಳು ನಾಲ್ಕು (2, 2) ಎರಡನೆಯದರಲ್ಲಿ ನಾಲ್ಕು, ಮೂರನೆಯದರಲ್ಲಿ ಮೂರು—ಹೀಗೆ ತ್ರಿಪದಿಗೆ ಹನ್ನೊಂದು ಗಣಗಳು. ಇವುಗಳಲ್ಲಿ ಆರನೆ ಮತ್ತು ಹತ್ತನೆ ಗಣಗಳು ಬ್ರಹ್ಮ. ಇನ್ನುಳಿದುವೆಲ್ಲ ವಿಷ್ಣುಗಣಗಳು. ಗಣಲಕ್ಷಣ ಹೀಗಿದ್ದರೂ ವಿರಳವಾಗಿ ಬ್ರಹ್ಮಗಣ, ರುದ್ರಗಣ, ಅಧಿಗಣಗಳು ವಿಷ್ಣುಗಣ ಸ್ಥಾನದಲ್ಲಿ ಬಂದಿರುವ ಎಷ್ಟೋ ಉದಾಹರಣೆಗಳು ಕಾಣುತ್ತವೆ. ದ್ವಿತೀಯಾಕ್ಷರ ಪ್ರಾಸವಿಲ್ಲದ ತ್ರಿಪದಿ ಶೋಭಾನೆಗಳೂ ಇವೆ. ಉದಾಹರಣೆ—

1. ಹೆಣ್ಣು ಕೊಡು. ತ್ತೇನೆಂದು. ಅಣ್ಣಯ್ಯ. ಹೇಳಿದ.
ಮನ್ನಿಸಿ. ವೀಳ್ಯ. ಕೊಡಿಸಿದ. ಸೌಭದ್ರೆ.
ಅಣ್ಣನ. ಕಾಲ. ತೊಳಿ ಬಾರೆ. (118)

ಈ ಉದಾಹರಣೆಯಲ್ಲಿ ದಪ್ಪ ಅಕ್ಷರಗಳ ಗಣಗಳು (ಆರನೆಯದು ಮತ್ತು ಹತ್ತನೆಯದು) ಬ್ರಹ್ಮಗಣಗಳು. ಮೊದಲನೆಯದು ವಿಷ್ಣುಗಣ ಸ್ಥಾನದಲ್ಲಿ ಬಂದಿರುವ ರುದ್ರಗಣ. ಅದನ್ನು ಅದರ ಮತ್ತಿನದನ್ನೂ ಒಟ್ಟಿಗೆ 'ಹೆಣ್ಣು ಕೊ. ಡ್ತೇನೆಂದು' ಎಂಬುದಾಗಿ ಓದಿಕೊಂಡರೆ, ಗಣ ಶುದ್ಧವಾಗುವುದು.

ತ್ರಿಪದಿ ವಿಸ್ತರಣಕ್ಕೆ ಉದಾಹರಣೆ—

1. ಬಾಲತ್ವ. ದಲ್ಲಿಯೆ. ಬಾಲರೆ. ಲ್ಲರ ಕೂಡಿ.
ಕಾಳಿಂದಿ. ಮಡುವ. ಧುಮುಕಿದ. ಕಾರಣ
ಕಾಲುಳು. ಕಿತ್ತೋ. ನಿನಗೆಂದು. ಗೋಪ ತನ್ನ
ಬಾಲಗಾ. ರತಿಯಾ. ಬೆಳಗಿದ (183)

2. ಗಜವದ. ನನ ಪಾ. ದಕೆ ಎರ. ಗುವೆನು
ಅಜ ಶಾರ. ದೆಗೆ ವಂ. ದನೆಯ ಮಾ. ಡುವೆನು
ದ್ವಿಜರೆಲ್ಲ. ಕೂಡಿ. ಮುದದಿಂದ.
ಮುದದಿಂ ಗೋ. ಪೂಜೆಯ ಮಾಡುವ,
ಪದನ ಪೇ. ಳುವೆನು, ಮುದದಿಂದ (256)

ಮೇಲೆ ಉದಾಹರಿಸಿದ ಎರಡರಲ್ಲಿಯೂ ತ್ರಿಪದಿ ವಿಸ್ತರಣವನ್ನು ಕಾಣಬಹುದು. ಮೊದಲನೆಯದರಲ್ಲಿ 'ಗೋಪ ತನ್ನ' ಎಂಬಲ್ಲಿ ರುದ್ರಗಣವಿದೆ. ಎರಡನೆಯದರಲ್ಲಿ ಮೊದಲ ಮೂರು ಪಾದಗಳಲ್ಲಿ 2, 4, 6. 8, 10—ಎಂಬ ಸಮ ಗಣಸ್ಥಾನಗಳಲ್ಲೆಲ್ಲ ಬ್ರಹ್ಮಗಣಗಳಿವೆ ; ಆರರಲ್ಲಿ ಮತ್ತು ಹತ್ತರಲ್ಲಿ ಇರಬೇಕಾದುದೇ ಆಗಿದೆ. 'ಪೂಜೆಯ ಮಾಡುವ' ಎಂಬುದು ಆರು ಅಂಶಗಳುಳ್ಳ ಗಣ. ಇದೊಂದು ಅಧಿಗಣವೇ ಸರಿ.

ಕನ್ನಡದಲ್ಲಿ ತ್ರಿಪದಿಯಷ್ಟು ಪ್ರಚಲಿತವಾದ ಹಾಡು ಇನ್ನೊಂದಿಲ್ಲ. ಅದನ್ನು ಹಾಡುವ ಧಾಟಿಯೂ ಹತ್ತಾರು. ತ್ರಿಪದಿಯಲ್ಲಿ ಕೊನೆಯ ಪಾದ ಅತಿಮುಖ್ಯ. ತ್ರಿಪದಿಯ ಧಾಟಿಯ ಸೊಗಸನ್ನು ನಾವು ಕಾಣುವುದು ಅಲ್ಲಿ. ಆ ಮೂರನೆಯ ಪಾದದ ಗತಿಯೇ ಸುಮಾರು ಎಂಬತ್ತು ಪ್ರತಿಶತದ ಶೋಭಾನೆಗಳಲ್ಲಿ—ಅವವುಗಳ ಸೊಲ್ಲುಗಳ ಕೊನೆಯ ಪಾದವಾಗಿ ರೂಪುಗೊಂಡಿದೆ. ತ್ರಿಪದಿಯ ಈ ಮೂರನೆಯ ಸಾಲು 'ತ್ರಿಪದಿ ಮಕುಟ'. ಸರಳಾರ–ಧವಳಾರಗಳಲ್ಲಿ, ಆರತಿ ಹಾಡು, ಹಸೆಗೆ ಕರೆವ ಹಾಡು, ಬಾಗಿಲು

ತಡೆವ ಹಾಡು—ಮುಂತಾದ ಹತ್ತಾರು ಹಾಡುಗಳಲ್ಲಿ ತ್ರಿಪದಿ ಮಕುಟವಿದೆ. ಅಂಶಗಣದ ರಚನೆಯಲ್ಲಿ ಮಾತ್ರವಲ್ಲದೆ, ಮಾತ್ರಾಗಣ ಘಟಿತವಾದ ಹಲವು ಹಾಡುಗಳಲ್ಲಿ ಕೂಡ ತ್ರಿಪದಿ ಮಕುಟವಿದೆ.

## ಧಾಟಿ ಛಂದಸ್ಸುಗಳ ವಿವರಣೆ

ಶೋಭಾನೆಗಳ ಧಾಟಿ ಛಂದಸ್ಸುಗಳನ್ನರಿಯಲು ಬೇಕಾಗುವ ಹಿನ್ನೆಲೆಯ ಸಾಮಾನ್ಯ ಪರಿಚಯ ಮಾಡಿಕೊಂಡವು. ಇನ್ನೀಗ ಪಾದಗಳ ಸಂಖ್ಯೆಯನ್ನು ಅನುಲಕ್ಷಿಸಿ ಬೇರೆಬೇರೆ ಹಾಡುಗಳ ಸೊಲ್ಲುಗಳನ್ನು ಪರಾಮರ್ಶಿಸಲಾಗುವುದು. ಹಾಡಿನ ಆಕರ ಸಂಖ್ಯೆಯನ್ನು ಅಲ್ಲಲ್ಲಿಯೆ ಕೊಡಲಾಗಿದೆ.

## ದ್ವಿಪದೀ ಪ್ರಭೇದಗಳು

1. ಕಲಶ ನೀ. ರೆರೆದರು. ಅರಸಿಯ. ರೆಲ್ಲರು.
ಸರಸಿಜ. ವದನೆ ಶ್ರೀ. ಜಾನಕಿಯ. ಮುಡಿಗೆ (15)

ಈ ಹಾಡಿನ ಪ್ರತಿಯೊಂದು ಪಾದವಲ್ಲಿ ನಾಲ್ಕು ಅಂಶಗಣಗಳಿವೆ. ಎರಡನೆಯ ಪಾದದ ಕೊನೆಯದು ಬ್ರಹ್ಮ. ಉಳಿದವು ವಿಷ್ಣುಗಣಗಳು. 'ಜಾನಕಿಯ' ಎಂಬುದು ವಿಷ್ಣು ಸ್ಥಾನದ ರುದ್ರಗಣ. ಇದೇ ರೀತಿಯ ಹಾಡುಗಳು—81, 122, 175, 176, 224. ಇವುಗಳಲ್ಲಿ ಪಾದಾಂತ್ಯದಲ್ಲೆಲ್ಲ ಬ್ರಹ್ಮಗಣ ಬಂದುದೂ ಉಂಟು.

2. ಇದಿರುಗೊಂಡರು. ಬಾಸಿಗವನಿತ. ಸಡಗರದಿ ಶಶಿ. ಮುಖಿಯ. ರು
ಕಡುತರಾನಂ. ದದಲಿ ಅಕ್ಷತೆ. ಯಿಟಸಿ ತಾವು. ತ್ಸವದೊ. ಳು (23)

ಇಲ್ಲಿ ಗಣಗಳು 3, 4 ಮಾತ್ರೆಯವು. ಪಾದಾಂತ್ಯದಲ್ಲಿ ಮುಡಿಯಿದೆ. ಅದಕ್ಕೆ ನಾಲ್ಕು ಮಾತ್ರೆಗಳ ವಹೌಲ್ಯವಿದೆ. ಇದೇ ಹಾಡನ್ನು ನಾಲ್ಕು ಗಣವಾದಲ್ಲಿಗೆ ಒಂದು ಪಾದವೆಂದು ಗಣಿಸಿದಾಗ ಇದೇ ಹಾಡು ಚೌಪದಿಯಾಗವುದು. ಇದೇ ರೀತಿ 239.

3. ಹಾಡು ಪಲ್ಲವಿಯುಕ್ತವಾಗಿದೆ. ವಿಷ್ಣುಗಣಾತ್ಮಕ ; ಅಷ್ಟತಾಳದ ಗತಿ. ಪಲ್ಲವಿಯು ಮುಡಿ ಮತ್ತು ವರಣದಿಂದ ಕೂಡಿದೆ. ಕೆಳಗೆ ಉದಾಹರಿಸಿದ ಹಾಡಿನ ಸೊಲ್ಲಿನ ಎರಡನೆಯ ಪಾದದಲ್ಲಿ ಒಂದೆಡೆ ವಿಷ್ಣುಗಣ ಸ್ಥಾನದಲ್ಲಿ ಬ್ರಹ್ಮಗಣವಿದೆ—

ದಾನವ. ಮಾಡಿದ. ನು....ಜ. ನಕ ಕನ್ಯಾ.
ದಾನವ. ಮಾಡಿದ. ನು.... ಪ
ದಾನವ. ಮಾಡಿದ. ಮಾನಿನಿ. ಸೀತೆಯ.
ದಾನವಾಂ. ತಕ ಶ್ರೀ. ರಾಮಗೆ. ಮುದದೊಳು (70)

4. ತ್ರಿಮಾತ್ರಾಗಣ, ರೂಪಕ ತಾಳ ಗತಿಯುಳ್ಳ ದ್ವಿಪದಿ. ಮೊದಲ ಎರಡು ಸಾಲುಗಳು ಪಲ್ಲವಿಯಾಗಿವೆ. ಪಾದಾಂತ್ಯಾಕ್ಷರ ಮುಡಿ. ನಿರಸ್ತ ತ್ರಿಮಾತ್ರಾಗಣವೂ ಇದೆ. ಎಲ್ಲ ಸೊಲ್ಲುಗಳೂ ಇದೇ ರೀತಿ—

ಮಿತ್ರ್ರೆ. ಯರೆ ಚ. ತುರ್ಥಿ.ಗೇ ಸ. ಮಸ್ತರ್. ಬನ್ನಿ. ರಿ
ಪುತ್ರ್ರ. ವಧುವ. ಅತ್ತೆ. ಸಹಿತ. ಇತ್ತ. ಲೊದಗಿ. ರಿ (28)

ಇದೇ ರೀತಿ—58, 238.

5. ಒಂದೊಂದು ಪಾದದಲ್ಲಿ ನಾಲ್ಕು ವಿಷ್ಣುಗಣಗಳಿರುವ ದ್ವಿಪದಿ. ಇದನ್ನು ಅಂಶಗಣದ ಚೌಪದಿಯಾಗಿಯೂ ಗಣಿಸಬಹುದು. ವಿಳಂಬಗತಿಯಲ್ಲಿ ಸ್ವರವೆಳೆದು ಇದನ್ನು ಹಾಡಬೇಕು. ಗಣ 2, 4, 6ರಲ್ಲಿ ಯತಿ—

ಬಾರೆ ದಾ. ಕ್ಷಾಯಣೀ. ತೋರುವ. ಹಸೆಗೀಗ.
ನೀರಜ. ಮುಖಿಯಳೆ. ಬಾರೆ ಮ. ಧ್ಯದಿ ಬೇಗ (102)

6. ಸಾಂಗತ್ಯಾರ್ಧವನ್ನು ಸ್ವಲ್ಪ ಹೋಲುವುದಾದರೂ ಮೊದಲ ಪಾದದಲ್ಲಿ ಎರಡನೆ ಮತ್ತು ನಾಲ್ಕನೆ ಗಣಗಳು ಬ್ರಹ್ಮಗಣವಾಗಿರುವ ದ್ವಿಪದಿ. ಏಳನೆಯದು ಹೇಗೂ ಬ್ರಹ್ಮಗಣವೇ. ಮೇಲಿನಂತೆ ಯತಿ—

ಗುರುಗಣ. ಪತಿಯಾ. ಭಜಿಸಿ ಶಾ. ರದೆಯಾ.
ಅರುಹುವೆ. ಸಭೆಯ ವಿ. ಸ್ತಾರ (43)

ಜಯದೇವ ಕವಿಯ ಗೀತಗೋವಿಂದದಲ್ಲಿ ಬರುವ ಒಂದು ಅಷ್ಟಪದಿ ಇಂತಹದೇ ಆಗಿದ್ದು, ಇದೇ ಧಾಟಿಯದು. ಅದನ್ನು ವಿವಾಹದ ವೇಳೆ ಹಾಡುತ್ತಾರೆ. ಅದರಲ್ಲಿ ಸೊಲ್ಲಿನ ಕೊನೆಗೆ ಪಲ್ಲವಿಯಿದೆ. ಪಲ್ಲವಿಯಲ್ಲಿ ಮುಡಿ–ವರಣಗಳಿವೆ. ಉದಾಹರಣೆ—

ಧೀರ ಸ. ಮೀರೇ. ಯಮುನಾ. ತೀರೇ.
ವಸತಿ ವ. ನೇ ವನ. ಮಾಲೀ.... ಕೃಷ್ಣಾ ॥
ಜಯ ಜಗ. ದೀಶ ಹ. ರೇ.... ಕೃಷ್ಣಾ
ಜಯ ಜಯ. ದೇವ ಹ. ರೇ ಪ

7. ಕೆಳಗಿನ ಉದಾಹರಣೆಯಲ್ಲಿ ಪ್ರತಿಯೊಂದು ಸೊಲ್ಲಿನ ಕೊನೆಗೆ 'ಬಲಿ ಬಂದನೆ ಅರಮನೆಗೆ' ಎಂಬ ಪಲ್ಲವಿಯಿದೆ. ಇದರಲ್ಲಿ 3, 6, 9, 12ನೆಯ ಗಣಗಳು ಬ್ರಹ್ಮ; ಉಳಿದವು ವಿಷ್ಣು—

ಆ ಮುಖಾ. ಬಾಗಿಲ. ಕಾಯ್ವ. ಶ್ರೀವಿಷ್ಣು. ಭಕ್ತನೆಂ. ದೆನಿಸಿ
ಭೂಮಿ ಪಾ. ಲಿಪ ದೊರೆ. ಯೆನಿಸಿ. ಬಲಿಬಂ. ದನೆ ಅರ. ಮನೆಗೆ (253)

8. ಇದು ರೂಪಕ ತಾಳ ಗತಿಯ ತ್ರಿಮಾತ್ರಾ ಗಣಗಳ ದ್ವಿಪದಿ. ಹಿಂದಿನ ನಾಲ್ಕನೆ ಉದಾಹರಣಕ್ಕಿಂತ ಸ್ವಲ್ಪ ಭಿನ್ನವಾಗಿದೆ. ಮುಡಿಯುಕ್ತ; ಪಾದಗಳಲ್ಲಿ ನಾಲ್ಕನೆ ಗಣದಲ್ಲಿ ಯತಿಯಿದೆ—

ಗಂಧ. ಹಚ್ಚಿ. ದಾಳು. ರಾಧಾ. ಮುಂಚ. ರಾದ್ರಿ. ಧರನಿ. ಗೇ
ಇಂದು. ವದನೆ. ಮಂದ. ಗಮನೆ. ದೇವ. ಕೀಯ. ತನಯ. ಗೇ (86)

ನಾಲ್ಕನೆಯ ಗಣದಲ್ಲಿ ಯತಿಯಿಲ್ಲದಿರುವ ಇದೇ ಛಂದಸ್ಸಿನ ಇನ್ನೊಂದು ಹಾಡು ಈ ಕೆಳಗಿನಂತಿದೆ.

ಸುಂದ. ರಾಂಗ. ಸುಂದ. ರೀಯ. ರೊಂದು. ಗೂಡು. ತ
ಬಂದ. ರಾಗ. ಹಂದ. ರಿಗಾ. ಸಂದ. ಬೀರು. ತ (87)

ಇದೇ ರೀತಿಯ ಹಾಡು—166.

9. ಕೆಳಗಿನ ಉದಾಹರಣೆಯಲ್ಲಿ ಒಂದು ಪಾದ ಪರಿಮಿತಿಯ ಪಲ್ಲವಿಯಿದೆ. ಅನುಪಲ್ಲವಿ ಮತ್ತು ಸೊಲ್ಲು ಒಂದೇ ರೀತಿ. ಈ ಪಲ್ಲವಿಯ ಆದಿಯ ಎರಡು ಅಕ್ಷರಗಳು ಪಾದದಿಂದ ಬೇರೆಯಾಗಿ, ಗಣಗಳ ಗಣನೆಗೆ ಸೇರದೆ, ಹೊರಗುಳಿಯುತ್ತವೆ. ಸಂಗೀತ ಶಾಸ್ತ್ರದ ಪರಿಭಾಷೆಯಲ್ಲಿ ಇದನ್ನು 'ಅತೀತ' ಎನ್ನುವರು. ಆಧುನಿಕ ಛಂದೋವಿದ್ವಾಂಸರು ಇದನ್ನು 'ಅನಾಗತ' ಎಂದು ಕರೆದಿದ್ದಾರೆ.[12] ಇದು ಹಿಂದೆಯೇ ಯಕ್ಷಗಾನದಲ್ಲಿ, ಶೋಭಾನೆಗಳಲ್ಲಿ ಬಂದಿದ್ದು ಆಧುನಿಕ ಛಂದಸ್ಸಿನ ಕೆಲವು ರಚನೆಗಳಲ್ಲಿ ಕಂಡುಬರುವ ವಿಶಿಷ್ಟ ಛಂದಃಪಾರಿಭಾಷಿಕದ ಒಂದು ಶಬ್ದ.

ಸಂಗೀತ ಶಾಸ್ತ್ರದ ಪ್ರಕಾರ ಅತೀತ, ಅನಾಗತಗಳ ವಿವರ ಹೀಗಿದೆ:—

### ಅತೀತಗ್ರಹ

ಒಂದು ಹಾಡು, ಸಂಗೀತರಚನೆ ಅಥವಾ ಪಲ್ಲವಿಯು ತಾಳಕ್ಕಿಂತ ಮೊದಲು ಎಂದರೆ, ಹಿಂದಿನ ಭಾವಿಸಲ್ಪಟ್ಟ ಆವರ್ತದ ಕೊನೆಯಲ್ಲಿ ಪ್ರಾರಂಭವಾಗುವುದು 'ಅತೀತಗ್ರಹ'. ಅತೀತಗ್ರಹಕ್ಕೆ 'ಅತೀತ ಎಡುಪ್ಪು' ಎಂದೂ ಹೆಸರು.

## ಅನಾಗತಗ್ರಹ

ತಾಳ ಪ್ರಾರಂಭವಾದನಂತರ ಕೃತಿ ಅಥವಾ ಅದರ ಒಂದು ಭಾಗದ ಸಂಗೀತ ಆರಂಭವಾಗುವುದಕ್ಕೆ ಕಾಲವ್ಯತ್ಯಾಸವಿರಬಹುದು. ಇದೇ 'ಅನಾಗತಗ್ರಹ' (ಡಾ|| ವಿ. ಎಸ್. ಸಂಪತ್ಕುಮಾರಾಚಾರ್ಯ—ಕರ್ಣಾಟಕ ಸಂಗೀತ ಪಾರಿಭಾಷಿಕ ಶಬ್ದಕೋಶ, 1983, ಸಂಪುಟ ೧).

ಛಂದಶ್ಶಾಸ್ತ್ರಕ್ಕೆ ಕೂಡ ಈ ಲಕ್ಷಣಗಳಿಂದಲೇ ಪಾರಿಭಾಷಿಕವಾಗಿ ಅತೀತ, ಅನಾಗತಗಳನ್ನು ಕಲ್ಪಿಸಬಹುದಾಗಿತ್ತು. ಆದರೆ ಆಧುನಿಕರಿಂದ ಪ್ರಯುಕ್ತವಾದುದನ್ನು ಅನುಸರಿಸುವುದರಿಂದ ಗೊಂದಲಕ್ಕೆ ಡೆಯಾದೀತೆಂದು ಇದೀಗ ಇಲ್ಲಿ 'ಅತೀತ' ಎಂಬುವನ್ನೆ ಬಳಸಿಕೊಳ್ಳಲಾಗಿದೆ.

ಛಂದಶ್ಶಾಸ್ತ್ರಜ್ಞರು ಗುರುವಿಗೆ ವಕ್ರಚಿಹ್ನೆಯನ್ನು (ꟷ ಹೀಗೆ) ಅಥವಾ (S ಹೀಗೆ) ಲಘುವಿಗೆ ನೇರ ಗೆರೆಯನ್ನು ( | ಹೀಗೆ) ಹೇಳಿದ್ದರೂ ನಮ್ಮವರು ಆಂಗ್ಲಕ್ರಮವನ್ನು ಅನುಸರಿಸಿ ಅಡ್ಡಗೆರೆಯನ್ನು(— ಹೀಗೆ) ಗುರುಚಿಹ್ನವೆಂದೂ ವಕ್ರವನ್ನು (U ಹೀಗೆ) ಲಘುವೆಂದೂ ಪರಿಗಣಿಸುವ ಪರಿಪಾಠ, ಇಂತಹುದೇ ಆದ ಇನ್ನೊಂದು ಪ್ರಮಾದ ಎಂದರಿಯಬೇಕು.

ಕೆಳಗೆ ಉದಾಹೃತವಾದ ಹಾಡಿನ ಪಲ್ಲವಿಯ ಆರಂಭದ 'ತಾತ' ಎಂಬುದು 'ಅತೀತ'. ಸೊಲ್ಲಿನ ಮೊದಲನೆಯ ಪಾದದಲ್ಲಿ ನಾಲ್ಕು ವಿಷ್ಣು ಗಣಗಳಿವೆ. ಅದರಲ್ಲಿಯೆ ಎರಡನೆ ಮತ್ತು ನಾಲ್ಕನೆಯ ಗಣದಲ್ಲಿ ಯತಿಯಿದೆ. ಎರಡನೆ ಪಾದದ ಮೂರನೆ ಗಣದ ಆದ್ಯಕ್ಷರವನ್ನು (ಕಾ ಎಂಬುದನ್ನು) ಅದರ ಮುಂದಿನ 'ವ' ಸೇರಿ ಒಂದು ವಿಷ್ಣು ಗಣವಾಗುವಂತೆ ಎಳೆಯಬೇಕಾಗುತ್ತದೆ. ಪಲ್ಲವಿಯ ಕೊನೆಯಲ್ಲಿ ಮತ್ತು ಸೊಲ್ಲಿನ ಕೊನೆಯಲ್ಲಿ ಮುಡಿಯಿದೆ—

ತಾತ । ಲಾಲಿಸಿ. ಕೇಳೆನ್ನ. ಮಾ....ತ. ನು ಪ
ಪ್ರೀತಿಯಿಂ. ದಲಿ ನಾನು. ಪ್ರಿಯನೊ. ಡನೆ ಪೋಪೆ.
ಓತೆನ್ನ. ರಮಣನು. ಕಾ....ವ. ನು ಅ ಪ (114)

ಸುಮಾರು ಅರುವತ್ತು ವರ್ಷಗಳ ಹಿಂದೆ, ಶಾಲೆಗಳ ವಾರ್ಷಿಕ ಸಂದರ್ಶನಕ್ಕಾಗಿ ವಿದ್ಯಾಧಿಕಾರಿ ಬಂದಾಗ, ಶಾಲೆಯ ಮಕ್ಕಳು ಗೌರವಾರ್ಥವಾಗಿ ನಿಂತು ಹಾಡುತ್ತಿದ್ದ ಶಾಲೆಪದವೊಂದು ಇದೇ ಧಾಟಿಯದು. ಇದರಲ್ಲಿಯೂ ಪ್ರಾರಂಭದಲ್ಲಿ ಅತೀತಾಕ್ಷರಗಳಿವೆ—

ನಮ । ಸ್ಕಾರ ಮಾ. ಡುವೆವಿಂದು. ಬಾ....ಲ. ರು ಪ
ಕರಗಳ. ಜೋಡಿಸಿ. ಶಿರವನ್ನು. ಬಾಗಿಸಿ.
ಪರಮ ಭ. ಕ್ತಿಯ ರಸ. ಸೇ....ರಿ. ಸಿ

ದಿವಂಗತ ಪಂಜೆ ಮಂಗೇಶರಾಯರ 'ಸಂಜೆಯ ಹಾಡು' ಎಂಬ ಕವನದಲ್ಲಿ ಹೀಗೆ ಹೊರಗುಳಿಯುವ ಅಕ್ಷರಗಳ ಪ್ರಯೋಗವಿರುವುದನ್ನು ತೀ.ನಂ.ಶ್ರೀ.ಯವರು ಗುರುತಿಸಿ 'ಹೊಸ ಛಂದಸ್ಸಿನ ಲಯಗಳು' ಎಂಬ ತಮ್ಮ ಲೇಖನದಲ್ಲಿ (ಇದು ಸಮಾಲೋಕನ— ಎಂಬ ಅವರ ಗ್ರಂಥದಲ್ಲಿ ಅಚ್ಚಾಗಿದೆ.) ಅದರ ಛಂದೋ ವೈಶಿಷ್ಟ್ಯವನ್ನು ವಿವರಿಸಿರು ತ್ತಾರೆ. ಆ ಪದ್ಯದ ಎರಡು ಪಾದಗಳಿವು—

ಹಗ । ಲೆಲ್ಲಾ. ಕಳೆಯಿತು. ಸೂರ್ಯನು. ಮುಳುಗೆ
ಖಗ । ಹಾರಿತು. ಗೂಡಿನ. ಒಳಗೆ[13]

ಇಲ್ಲಿ ಪಾದಗಳ ಆದಿಯ ಎರಡು ಅಕ್ಷರಗಳು ಗಣಗಳ ಲೆಕ್ಕಕ್ಕೆ ಬಾರದೆ ಹೊರಗುಳಿಯು ತ್ತವೆ. ಪಂಜೆಯವರಿಗೆ ಇಂತಹ ಹೊಸ ಪ್ರಯೋಗಕ್ಕೆ ಪ್ರೇರಣೆ ಎಲ್ಲಿಂದ ? ಕವಿ ಮುದ್ದಣನಿಂದ ಆಗಿರಬೇಕು. ಮುದ್ದಣ ಕವಿಯ 'ಕುಮಾರ ವಿಜಯ' ಎಂಬ ಯಕ್ಷಗಾನ ಪ್ರಸಂಗದಲ್ಲಿ ಅತೀತಾಕ್ಷರವಿರುವ ಕವಿತೆಗಳಿವೆ. ಇದು ರೂಪಕತಾಳಕ್ಕೆ ಬರುವ ತ್ರಿಮಾತ್ರಾ ಗತಿಯುಳ್ಳದು—

ಅ । ನಂದಮುಖೀ. ಸುಂದರಾಂಗಿ. ಮಂದಗಾಮಿ. ನೀ
ಬಂದ ಬವಣೆ. ಪೇಳ್ವೆನಾದಿ. ಯಿಂದ ಕಾಮಿ. ನೀ

10. ಆವೃತ್ತಿ ಚರಣಗಳುಳ್ಳ ಪಲ್ಲವಿ, ಪಾದಗಳಲ್ಲಿ ನಾಲ್ಕು ವಿಷ್ಣುಗಣಗಳು. ಕೆಲವು ಅಕ್ಷರಗಳನ್ನು (ಪ್ರತಿಯೊಂದು ಗಣದಲ್ಲಿ ಎರಡನೆ ಅಂಶಾಕ್ಷರವನ್ನು) ಎಳೆದು ಹೇಳುವ ಧಾಟಿಯುಳ್ಳ ದ್ವಿಪದಿಯ ಹಾಡಿದು—

ಮಾಡಿದ. ಹೋಮವ. ನು....। ಶ್ರೀಗುರು. ತಾನು
ಮಾಡಿದ. ಹೋಮ ವ. ನು.... ಪ
ಮಾಡಿದ. ಹೋಮವ. ಕೂಡೆ ಶ್ರೀ. ರಾಘವ
ರೂಢಿಗೊ. ಡೆಯ ನಾಳೆಂ. ದಾಡುತ್ತಾ. ನಂದದಿ (170)

11. ಇದೊಂದು ಏಳೆ (ದ್ವಿಪದಿ). ಅಂದರೆ ತ್ರಿಪದಿಯ ಏಳು ಗಣಪರಿ ಮಿತಿಯ ಹಾಡು—

ಲೋಕಕ್ಕೆ. ಬರುವದು. ಬೇಕೆಂಬ. ಹಬ್ಬವು.
ಆಕೆ ಗೌ. ರಮ್ಮಾ. ಬರುತಾಳೆ. (230)

12. ಎರಡು ಪಾದಗಳ ಪರಿಮಿತಿಯ ಪಲ್ಲವಿಯುಳ್ಳ ದ್ವಿಪದಿ. ಬ್ರಹ್ಮ ವಿಷ್ಣು ಗಣಗಳೆರಡೂ ಮಿಳಿತವಾಗಿವೆ—

ಬಂತು ಬಂ. ತೂ ಬಂ. ತೆಮಗುಪ. ಚಾರ
ಸಂತೋಷ. ವಾಂತೆವು. ಶ್ರೀಕಾಂ.ತೆಯರೇ ಪ
ಸಾರೆಳ. ನೀರು. ಕ್ಷೀರ ಪ. ನ್ನೀರು.
ಬಾರಿ ಬಾ. ರಿಗೆ ಮಿತಿ. ಮೀರಿಹು. ದು.... (40)

## ತ್ರಿಪದೀ ಪ್ರಭೇದಗಳು

ಪ್ರಸಿದ್ಧವಾದ ತ್ರಿಪದಿಯ ಛಂದೋಲಕ್ಷಣವನ್ನು ಸೋದಾಹರಣವಾಗಿ ಹಿಂದೆಯೇ ತಿಳಿಸಿದೆ. ಈಗ ಅಧಿಗಣವಿರುವ ಇನ್ನೊಂದು ತ್ರಿಪದಿಯ ಉದಾಹರಣೆ—

1. ಹಸ್ತದಿ ಪಾಶಾಂ. ಕುಶಧರನ. ದಕ್ಷಾತ್ಮ.ಜೆ. ಯಾತ್ಮ.ಜನ.
ಹಸ್ತಿಮುಖ. ದವನ. ಬಲಗೊಂಡು. ಸ್ವಾಮಿಯ.
ಚಿತ್ತ ನಿ. ರ್ಮಲದಿ. ನೆನೆಯುವೆ (189)

ಇದರಲ್ಲಿ ಮೊದಲನೆಯ ಗಣ ರುದ್ರಗಣಕ್ಕಿಂತಲೂ ಒಂದು ಅಂಶ ಹೆಚ್ಚಾಗಿರುವ **ಅಧಿಗಣ.** ಅನಂತರ ಬಂದಿರುವ ನಾಲ್ಕು ಗಣಗಳೂ ರುದ್ರಗಣಗಳೆ ಆಗಿವೆ. ಗಣ 6, 7, 10ರಲ್ಲಿ ಸಹಜವಾಗಿ ಯತಿ ಬಂದಿದೆ.

2. ತ್ರಿಪದಿ ಸುವ್ವಾಲ್ಕ ಎಂದು ಕರೆಯಲಾಗಿರುವ ತ್ರಿಪದಿ ಈ ಕೆಳಗಿದೆ. ಸೊಲ್ಲಿನ ಕೊನೆಗೆ ಅದೊಂದು ಪಲ್ಲವಿಯಂತೆ ಬಂದಿದೆ—

ಅಂದವು. ಳ್ಳೊರಳಿಗೆ. ಚೆಂದದ ಧೂ. ಪವ ತೋರಿ.
ಚೆಂದದಲಿ. ಶಿವನ. ಬಲಗೊಂಡು. ನಾರಿಯರು.
ಗಂದಸಾಲೆ.ಯಕ್ಕಿ. ಒರಳ್‌ಹೊಯ್ಸೆ—ಸುವ್ವಿ ಸುವ್ವಿ ಸುವ್ವಾಲ್ಕ ॥ (8)

ಈ ಕೆಳಗಿನವು ಪಲ್ಲವಿಯುಕ್ತವಾಗಿರುವ ತ್ರಿಪದಿ ಪ್ರಭೇದಗಳು. ಇವು ಪೂರ್ವೋಕ್ತ ತ್ರಿಪದಿಗಳಂತೆ ಇಲ್ಲ. ತಾಳಗತಿಯುಳ್ಳವಾಗಿವೆ—

3. ಹೂವ ಪಾ. ಲಿಸೊ ಸತ್ಯ. ದೇ.... ವ. ನೇ। .... ಏಕೋ
ಭಾವದಿ. ಬೇಡುವ. ಸೇವಕ. ಜನರಿಗೆ ಪ

ನಿತ್ಯ ತೃ. ಪ್ತನೆ ನಿರ್ಮ. ಲಾತ್ಮನೇ. । ದೇವ
ಸತ್ಯ ದೇ. ವನೆ ಪದ. ಸೇವನೇ. । ಭಕ್ತ
ರ್ಗಿತ್ತು ಸಂ. ತಸ ವೆತ್ತು. ಹತ್ತುವ. ತಾರನೆ (212)

ಮೇಲಿನ ಹಾಡಿನ ಪಲ್ಲವಿಯಲ್ಲಿ ವರಣವಿದೆ. ಸೊಲ್ಲಿನಲ್ಲಿ ಎರಡೆರಡು ವರಣಗಳಿವೆ. 'ತ್ರಿಪದಿ' ಎಂಬುದಕ್ಕೆ ಇಲ್ಲಿ ಮೂರು ಸಾಲಿನ ಸೊಲ್ಲುಗಳ ಹಾಡು—ಎಂದಿಷ್ಟೇ ಅರ್ಥ. ಹಾಡುಗಳು ಅಂಶಗಣದವು ಇರಬಹುದು, ಮಾತ್ರಾಗಣದವೂ ಇರಬಹುದು. ಇದೇ ಧಾಟಿಯ ಇತರ ಹಾಡುಗಳು—220, 251.

ಇನ್ನೊಂದು ಪ್ರಭೇದದ ಉದಾಹರಣೆ—

4. ಆರತಿ. ಭಾರತಿ. ಗೇ.... ಸರ । ಸ್ವತಿಗೇ.
ನುತ । ಶಾಸ್ತ್ರಗೇ. ಸ್ತುತಿ । ಪಾತ್ರೆಗೇ ಪ
ಶರಣ ಮಾನಸ. ದುರಿತ ತಾಪವ.
ಕರುಣಾ ವರ್ಷವ. ಸುರಿಸಿ ಕಳೆವಾ.
ವರ । ದಾತೆಗೇ. ಪ । ಖ್ಯಾತೆಗೇ (250)

ತುಂಬ ಲಯ ಚಮತ್ಕೃತಿಯಿಂದ ಕೂಡಿದ ಹಾಡಿದು. ಇದಕ್ಕೆ ಏಕತಾಳದ ಗತಿ. ಚತುರ್ಮಾತ್ರಾಗಣಗಳಿಗೆ ಹೊಂದಿಸಿ ಹಾಡಲಾಗುತ್ತದೆ. ಆಗ ಕೆಲವೆಡೆ ಹ್ರಸ್ವಕ್ಕೆ ಗುರು ಮೌಲ್ಯ ಬರುತ್ತದೆ. ಇದರಲ್ಲಿ ಬರುವ ವರಣಗಳು ಅತೀತಗಳು ವಿಶೇಷ ಲಕ್ಷ್ಯಾರ್ಹವಾಗಿವೆ. ಅತೀತದ ಮುಂದೆ ನೀಟಗೆರೆಯಿದೆ.

## ಚೌಪದಿ ಪ್ರಭೇದಗಳು

ಶೋಭಾನೆಗಳಲ್ಲಿ ಚೌಪದಿ ಪ್ರಭೇದಗಳೇ ಅಧಿಕ. ಪಲ್ಲವಿಗಳಲ್ಲಿ ವರಣಯುತವೂ ವರಣ ರಹಿತವೂ ಇವೆ. ಹೆಚ್ಚಿನವು ಅಂಶಗಣದ ರಚನೆಗಳು. ಅವುಗಳಲ್ಲಿ 'ಸರಳಾರ' ಎಂಬುದೊಂದು. ಇದು ವಿಷ್ಣುಗಣಾತ್ಮಕ. ಪಲ್ಲವಿಯನ್ನು ಬಿಟ್ಟರೆ ಸೊಲ್ಲುಗಳೆಲ್ಲವೂ ಸೊಬಗಿನ ಸೋನೆ ಛಂದಸ್ಸಿನವು. ಈ ನಾಲ್ಕು ಪಾದಗಳನ್ನು ಆರು ಪಾದಗಳಾಗಿ ಗಣಿಸಿದರೆ, ಅಂಶಲಯದ ಶರಷಟ್ಪದಿಯಾಗುತ್ತದೆ. ಈ ಹಾಡಿಗೆ ಎರಡು ಪಾದ ಪರಿಮಿತಿಯ ಅಥವಾ ಕೆಲವೆಡೆ ಒಂದೇ ಪಾದ ಪರಿಮಿತಿಯುಳ್ಳ ಪಲ್ಲವಿಯಿರುತ್ತದೆ. ಪಲ್ಲವಿಯ ಪಾದಾಂತ್ಯವೂ ಸೊಲ್ಲಿನ ನಾಲ್ಕನೆ ಪಾದಾಂತ್ಯಗಳೂ ಮುಡಿ. ಹಾಡುವಾಗ ಪಲ್ಲವಿಯಿಂದ ಪ್ರಾರಂಭಿಸದೆ, ಮೊದಲನೆಯ ಸೊಲ್ಲಿನಿಂದಲೇ ಪ್ರಾರಂಭಿಸಿ, ಸೊಲ್ಲಿನ ಕೊನೆಗೆ ಪಲ್ಲವಿಯನ್ನು ಹಾಡುವ ಮಟ್ಟೂ ಪ್ರಚಲಿತವಿದೆ. ಉದಾಹರಣೆಗಳು—

1. ಸರಳಾರ

ಉಡುಗೊರೆ. ಗಳ ಮಾ. ಡಿದ ಮುದ. ದಿ.... । ಜಗ
ದೊಡೆಯ ವಾ. ಮನನಿಗೆ. ಸಂತಸ. ದಿ.... ಪ
ಗುರು ವಿ. ಘ್ನೇಶ್ವರ. ರಡಿಗಳ. ಧ್ಯಾನಿಸಿ.
ಹರಿಹರ. ರನು ಮನ. ದಲಿ ನೆನೆ. ದು.
ವರ ಶಾ. ರದೆ ದೇ. ವರನು ಕೊಂ. ಡಾಡುತ
ವಿವರಿಪೆ. ನೀ ಕೃತಿ. ಯನು ನಯ. ದಿ.... (೨೦೧)

ಇದೇ ರೀತಿಯವು : 5, 10, 30, 36, 56, 57, 69, 116, 120, 194, 201, 233, 237, 241, 243, 268. ಇವುಗಳಲ್ಲಿ ವರಣವಿಲ್ಲದವು : 233, 243, 271. ಪ್ರಥಮ ಪಾದಾಂತ್ಯದಲ್ಲಿ ಮುಡಿಯುಳ್ಳುದು ಮತ್ತು ಒಂದೇ ಪಾದದ ಪಲ್ಲವಿಯುಳ್ಳುದು—171.

ಇತರ ಚೌಪದಿ ಪ್ರಭೇದಗಳು—

2. ವಿಷ್ಣುಗಣಾತ್ಮಕ , ಅಷ್ಟತಾಳದ ಮಧ್ಯಮ ಗತಿ, ಪಲ್ಲವಿ, ಮುಡಿ, ವರಣ, ಸಹಿತವಾದುದು—

ಪನ್ನೆಯ. ಕಾರ್ಯವ. ನು.... । ಮಾ. ಡಿಸಿದನು
ಪನ್ನಗ. ಶಯನನಿ. ಗೆ.... ಪ
ಉನ್ನತ. ವೈಭವ. ದಿಂ ವಸು. ದೇವನು
ನಂದಿ ವಾ. ಹನ ಸಖ. ನಂದ ಕಂ. ದನಿಗೇ (19)

ಇದೇ ರೀತಿಯವು : 124, 217, 228.

3. ಇದೇ ರೀತಿಯ ಹಾಡುಗಳಲ್ಲಿಯೆ, ಮುಡಿಯುಕ್ತವಾದ ಪಲ್ಲವಿಯ ಎರಡು ಪಾದಗಳಾದ ಮೇಲೆ 3, 4 ಮಾತ್ರೆಯ ಗಣಗಳ ದ್ರುತಗತಿಯುಳ್ಳ ಹಾಡು—

ಅಕ್ಷತೆ. ಕಲಸಿದ. ರು.... । ಶುಭ. ಕರವಾದ
ಅಕ್ಷಿಣಿ. ಯರು ಮುದ. ದಿ.... ॥ ಪ
ಚಿಕ್ಕ. ತಮ್ಮನ. ಕಾರ್ಯಕೆನ್ನುತ.
ಲಕ್ಷ್ಮಿಪತಿಯನು. ಧ್ಯಾನಿಸುತ್ತಲಿ (188)

4. ಅಂಶಗಣಾತ್ಮಕವಾದುದು. ಮೊದಲ ಮೂರು ಪಾದಗಳಿಗೆ ಮಧ್ಯಮ ಗತಿ, ಕೊನೆಯ ಪಾದಕ್ಕೆ ವಿಳಂಬಗತಿಯಿದ್ದು ತ್ರಿಪದಿ ಮಕುಟವುಳ್ಳ ಚೌಪದಿ—

ಗುರುಗಣ. ಪನ ಪಾದ. ಕಮಲಕ್ಕೆ. ನಮಿಸಿ.
ಶಾರದಾಂ. ಬೆಗೆ ಶಿರ. ಬಾಗಿ ವಂ. ದಿಸುತ
ತ್ರಿಜಗದೊ. ಡೆಯ ಜಗ. ದೀಶನ. ದಿಬ್ಬಣ. ॥
ಹೊರಟ ಪದ. ನವನೇ. ರಚಿಸುವೆ. (28)

5. ಪಲ್ಲವಿಯಲ್ಲಿ ಮುಡಿ, ವರಣಗಳುಳ್ಳುದು. ಪಾದಗಳ ಆದ್ಯಕ್ಷರಕ್ಕೆ ಘಾತವಿದೆ ; ಎರಡನೆಯಕ್ಷರಕ್ಕೆ ಧಾಟಿಯಲ್ಲಿ ದೀರ್ಘ ಬರುತ್ತದೆ.

ಹಚ್ಚಿದರ್. ಸುಮಗಳ. ನು.... । ನಾರಿಯರು
ಸ್ವಚ್ಛದೊ. ಳೆಲ್ಲವ. ನು.... ಪ
ಹೆಚ್ಚಿನ. ಸಭೆಜನ. ಮೆಚ್ಚುವಂ. ದದಿ ಘನ.
ಅಚ್ಚ ಮ. ಲ್ಲಿಗೆ ಚೆಂಡ. ಬಿಚ್ಚಿ ಕೊ. ಳ್ಳುತ್ತ ಖಂಡ (46)

6. ಪ್ರತಿಯೊಂದು ಪಾದದ ಮೂರನೆ ಅಕ್ಷರಕ್ಕೆ ದೀರ್ಘೋಚ್ಚಾರಣೆ, ಎರಡು ಕಡೆ ಮುಡಿ, ಒಂದು ಅಥವಾ ಎರಡು ಅಕ್ಷರದ ವರಣವುಳ್ಳುದಾಗಿ ಅಂಶಗಣ ಘಟಿತವಾಗಿ ಧಾಟಿ ವೈಶಿಷ್ಟ್ಯವುಳ್ಳ ಚೌಪದಿ — 'ಕಡಗಾ ಕಂಕಣವಿಟ್ಟ....' ಎಂದು ಹಾಡಬೇಕು.

ಕಡಗ ಕಂ. ಕಣ ವಿಟ್ಟ. ಉಡುವ ಮು. ಖಿ.... । ಬಹು
ಬೆಡಗಿಸಿಂ. ದಲಿ ಬಂದು. ನೋಡೆ ಸ. ಖಿ.... । ಈ
ಪೊಡವಿಯೊ. ಳಿಂಥ ಅಳಿಯ.
ಮೃಡನಾಣೆ. ಕಾಣೆನಮ್ಮ. (48)

7. ಅಂಶಗಣ ಘಟಿತವಾಗಿ, ಒಂದನೆಯ ಮತ್ತು ಮೂರನೆಯ ಪಾದ ಸಾಂಗತ್ಯದ ಪಾದಗಳಂತಿರುವ ಚೌಪದಿಯಿದು. ಇದಕ್ಕೆ ಅಷ್ಟತಾಳದ ಗತಿ.

ಮುಡಿಯೆನ್ನು. ವವರಿಗೆ. ಬಿಡದಿಯು. ಬೇರಿದೆ.
ಸಡಗರ. ದಲಿ ಬನ್ನಿ.
ನಡುವಿನ. ವಸ್ತ್ರವ. ಸಡಿಲಿಸ. ಲಾರದ
ಕಡು ಬೆಡ. ಗಿನವರಿ. ಗೆಡೆಯಿದೆ. ಬನ್ನಿ (76)

8. ಅಂಶಗಣ, ಅಷ್ಟತಾಳದ ಗತಿ, ಒಂದು ಅಥವಾ ಎರಡು ಅಕ್ಷರ ವರಣವಾಗಿರುವ ಚೌಪದಿ—

ಹೂವೊಂದ. ಕೃಪೆಯಿಂದ. ನೀಡಯ್ಯ. । ನಿನ್ನ
ಭಕ್ತರ. ಮನದಿಚ್ಛೆ. ನೋಡಯ್ಯ. । ಓ
ಪರಮಾತ್ಮ. ಕಣ್ದೆರೆದು. ನೋಡಯ್ಯ. ನೀ
ಶಾಂತಿಯ. ಸುಮವೊಂದ. ನೀಡಯ್ಯ (240)

9. ಇದೇ ಗತಿವಿನ್ಯಾಸವಿದ್ದು, ಪಾದಾಂತರ್ಗತವಾಗಿ ವರಣವುಳ್ಳ ಇನ್ನೊಂದು ಚೌಪದಿಯ ಸೊಲ್ಲು ಹೀಗಿದೆ—

ಕಾಂತನ. ಕೈವಿಡಿದು. ಬಂದಳಾಗ. । ಹೆಣ್ಣು
ಜನುಮವೆ. ಬಹು ಕಷ್ಟ. ಎಂದಳಾಗ.
ಎಂದಳಾಗ । ಮನ । ನೊಂದಳಾಗ । ಅಲ್ಲಿ
ನೆರೆದ ಆ. ಪ್ತರ ಬೀ. ಳ್ಕೊಂಡಳಾಗ (113)

10. ಈ ಕೆಳಗಿನ ಚೌಪದಿ ಏಕತಾಳ ಅಷ್ಟತಾಳಗಳ ಗತಿಗೆ ಒಡಂಬಡುತ್ತದೆ. ಏಕತಾಳದಲ್ಲಿ ಪ್ರತಿಯೊಂದು ಪಾದದ ಮೂರನೆ ಅಕ್ಷರಕ್ಕೆ ದೀರ್ಘ ಮೌಲ್ಯ ಬರುವ ಧಾಟಿಯೂ ಇದೆ. ಪಲ್ಲವಿಯಲ್ಲಿ ವರಣವಿದೆ—

ಗಜಮುಖ. ನಿಗೆ ನಮಿ. ಸಿ.... । ಶಾ. ರದೆಯನು
ನಿಜವಾಗಿ. ಮನದೊಳಿ. ಟ್ಟು....
ಅಜನ ಪಿ. ತನ ವಿವಾ. ಹವಗೈದ್ಯ. ದನೆ ದಿನ.
ಅಗಿಲು ಶ್ರೀ. ಗಂಧ ದೋ. ಕುಳಿಯ ನಾ. ಡಿಸಿ ಬೇಗ (112)

ಇದೇ ರೀತಿ ಇದರ ಇನ್ನೊಂದು ಪ್ರಭೇದ 188. ಆದರೆ, ಇದರಲ್ಲಿ 3ನೇ ಪಾದದಿಂದ ದ್ರುತ ಗತಿಯಿದೆ,

11. ಅಂಶಗಣ ಘಟಿತವಾದ ಜೋಗುಳ ಹಾಡಿದು. 1, 2, 4ನೆಯ ಪಾದಾಂತ್ಯದಲ್ಲಿ ಬ್ರಹ್ಮಗಣಗಳಿವೆ. ಇನ್ನುಳಿದವು ವಿಷ್ಣುಗಣಗಳು. ಜೋ ಜೋ ಎಂಬುದು ಪಾದಮಕುಟ—

ಗದ್ದೆಯ. ಹಾಳಿಲಿ. ಬಿದ್ದಿದ್ದ. ಕಂದ.
ಭದ್ರೆಯ. ರೈವರು. ಆರಿಸಿ. ತಂದ.
ಮುದ್ದು ತಂ. ಗವ್ವಗೆ. ಮಗನಾಗ. ಬೇಕೆಂದು.
ಭದ್ರೆಯ. ರೈವರು. ಪಾಡಿ ತೂ. ಗಿದರು ॥ ಜೋ ಜೋ (179)

ಇದೇ ರೀತಿ : 180, 263.

12. ಪ್ರತಿಯೊಂದು ಸೊಲ್ಲಿಗೂ ಎರಡು ಪಾದಗಳ ಪಲ್ಲವಿಯಿದೆ ; ಅದರಲ್ಲಿ ಮುಡಿ–ವರಣಗಳಿವೆ. ಯಾಲಪದದ ಮಟ್ಟು ಅಡಕವಾದ ಚೌಪದಿ—

ಸಂತೋಷ. ಘನವಾಯಿ. ತೋ.... ಜನ. ಕೇಂದ್ರ ನಿನ್ನ
ಚಿಂತೆ ಪರಿ. ಹಾರವಾಯಿ. ತೋ.... ಪ
ಅಂಥಿಂಥ. ಅಳಿಯನಲ್ಲ. ಅರಗಿಳಿಯಂಥ. ಅಳಿಯ ಬಂದು.
ಮಂಟಪ. ದಲ್ಲಿ ಕುಳಿತು. ಮಗಳ ಕೈಯ. ಹಿಡಿದ ಮೇಲೆ (139)

ಇಲ್ಲಿ 'ಅರಗಿಳಿಯಂಥ' ಎಂಬುದು 'ಅಧಿಗಣ'. ಅದಕ್ಕೆ ತ್ವರಿತೋಚ್ಚಾರಣೆಯಿದೆ.

13. ವಿಷ್ಣುಗಣ ಬ್ರಹ್ಮಗಣ ಪಾದವಾಗಿರುವ ಕಿರುಚೌಪದಿಯಿದು. ಎರಡನೆಯ ಗಣದ ಗುರ್ವಕ್ಷರಗಳು ನಿರಸ್ತ ಲಘುಗಳು.

ವಾರಿಜಾ. ಕ್ಷ ಬೇಗ.
ಬಾರೊ ಹ. ಸೆಗೀಗ.
ಭೂರಿ ಸಂ. ತಸವ.
ತೋರೊ ಸು. ಪ್ರಭಾವ. (100)

14. ಪಂಚಮಾತ್ರಾಗಣದ ಮೂರು ಪಾದಗಳು, ಕೊನೆಗೆ ತ್ರಿಪದಿ ಮಕುಟವಿರುವ ಹಾಡು. ಮೊದಲ ಎರಡು ಪಾದಗಳ ಕೊನೆಗೆ ಚತುರ್ಮಾತ್ರಾಗಣ (ಪಾದಾಂತ್ಯವನ್ನು ದೀರ್ಘವೆಂದೆಣಿಸಿದಾಗ). ಪಾದಾಂತ್ಯಕ್ಕೆ ಇನ್ನಷ್ಟು ದೀರ್ಘದ ಮೌಲ್ಯ ಕೊಟ್ಟು ಪಂಚಮಾತ್ರಾ ಘಟಕವಾಗಿಯೂ ಪರಿಗಣಿಸಬಹುದು—

ಹೇಮ ಕುಂ. ಭದಲಿ ಪ. ನ್ನೀರ ತುಂ. ಬಿರಿಸಿ....
ಆ ಮಹಾ. ಮೊಲ್ಲೆ ಮ. ಲ್ಲಿಗೆಯ ಮುಂ. ದಿರಿಸಿ....
ಕಾಮಿನಿಯ. ನೊಡಗೊಂಡು. ಕ್ಷೇಮವಾ. ಗಲಿಯೆಂದು ॥
ಬಾಗಿಲ. ಪೂಜೆ. ತೊಡಗಿದ (123)

15. ಮೂರು–ನಾಲ್ಕು ಮಾತ್ರೆಗಳ ಗಣಗಳ ಹಾಡಿದು. ಎರಡನೆ ಮತ್ತು ನಾಲ್ಕನೆ ಪಾದಾಂತ್ಯದಲ್ಲಿ ಮುಡಿಯಿದೆ. ಅದಕ್ಕೆ ನಾಲ್ಕು ಮಾತ್ರೆಯ ಮೌಲ್ಯವಿದೆ—

ಪಾಲಿ. ಸಲಿ ಶ್ರೀ. ಹರಿಯು. ನಿನ್ನನು
ಶೀಲ. ಸದ್ಗುಣ. ನಾಗಿ. ರೈ....
ಮೇಲೆ. ನಿಪ ರಾ. ಜಾಧಿ. ಕಾರವ.
ನಾಳು. ಸಂತಸ. ದಿಂದ. ಲಿ.... (198)

16. ತ್ರಿಮಾತ್ರಾಗಣ, ರೂಪಕತಾಳ ಗತಿಯ ಚೌಪದಿ. ಎರಡನೆ ಪಾದದ ಮೊದಲ ಗಣದಲ್ಲಿ ಗಣಪರಿವೃತ್ತಿಯಿದೆ. ಇಲ್ಲಿ ಮೂರು ಮೂರು ಮಾತ್ರಾಗಣದ ಬದಲಾಗಿ, ನಾಲ್ಕು ಎರಡು ಮಾತ್ರಾಗಣಗಳ ಜೋಡಣೆ ಬಂದಿದೆ.

ದೇವ. ನಿನ್ನ. ಪಾದ‹ವನ್ನು
ಯಾವಾಗಲುಂ. ಸ್ಮರಿಸು. ಮನು.
ಭಾವ. ಭಕ್ತಿ. ಪ್ರೇಮ. ವಿತ್ತು.
ಕಾವು. ದೆನ್ನ. ಹರಿಯೆ. ನೀನು. (207)

17. ತ್ರಿಮಾತ್ರಾಗಣ. ಎರಡನೆಯು ಪಾದದಲ್ಲಿ ಮುಡಿ, ವರಣ, ಆವೃತ್ತಿ ಗಳಿವೆ—

ಶ್ರೀಲ. ತಾಂಗಿ. ಗುರುಮ. ಹೇಶ
ಬಾಲ. ಗಣಪ. ರ.... । ಭಜಿಸಿ । ಬಾಲ. ಗಣಪ. ರ....
ಜಾಲ. ವಲ್ಲ. ಪೇಳ್ವೆ. ಕೃಷ್ಣ.
ಬಾಲ. ಲೀಲೆ. ಕಥೆಯ. ಸಾರ. (280)

18. ಅಂಶಗಣ ಘಟಿತ. ಪಲ್ಲವಿ, ಮುಡಿ, ವರಣಯುಕ್ತವಾಗಿದೆ. ಸೊಬಗಿನ ಸೋನೆ ಛಂದಸ್ಸಿನ ಸೊಲ್ಲು. ಸೊಲ್ಲು ಸರಳಾರಕ್ಕೆ ಸಮನಾಗಿದ್ದರೂ ಪಲ್ಲವಿಯ ಧಾಟಿ ಬೇರೆ. ಇದು 'ಗಜಮುಖದವಗೆ ಗಣಪಗೇ' ಎಂಬ ಯಕ್ಷಗಾನದ ಸ್ತುತಿಪದದಂತಿದೆ.

ಶ್ರೀ ಗಂಗಾ. ಧರಗೆ ಶಂ. ಕರಗೇ । ಚೆಲ್ವ
ನಾಗ ಭೂ. ಷಣನಿಗಾ. ರತಿಯೆತ್ತಿ. ರೇ.... ಪ
ಮುತ್ತಿನ. ಮಂಟಪ. ದೊಳಗೆ ರಾ. ಜಿಪ ನವ
ರತ್ನ ಸಿಂ. ಹಾಸನ. ಮಧ್ಯದ. ಲಿ....
ಮಾರ್ತಾಂಡ. ಕೋಟಿ ಪ್ರ. ಕಾಶದಿ. ರಾಜಿಪ.
ಚಿತ್ರಜಾಂ‹ ತಕನಿಗಾ‹ ರತಿಯೆತ್ತಿ‹ ರೇ.... (219)

ಇದೇ ರೀತಿ : 221, 223, 233. (233ರಲ್ಲಿ ವರಣವಿಲ್ಲ)

19. ಅಂಶಗಣಾತ್ಮಕವಾಗಿ ಮುಡಿ, ವರಣಗಳುಳ್ಳ ಅಷ್ಟತಾಳಗತಿಯ ಚೌಪದಿ. ಸೊಲ್ಲಿನ ಕೊನೆಗೊಂದು ವರಣದಂತಿರುವ ಪಾದಮಕುಟ ಇದರ ವೈಶಿಷ್ಟ್ಯ—

ಪಾರ್ವತೀ. ಪ್ರಿಯ ನಂದ. ನ.... । ಗ. ಜಾನನ.
ಸರ್ವರಿಂ. ದಭಿವಂದನ. ನ.... ಪ
ಸರ್ವದಾ. ಪಡೆಯುವ ಸರ್ವಲೋ. ಕವ ಕಾವ.
ಸರ್ವಭ. ಕುತ ಸಂಜೀ. ವ.... । ಮ. ಹಾನುಭಾವ (232)

20. ಸೊಬಗಿನ ಸೋನೆ ಅಥವಾ ಚತುರ್ಮಾತ್ರಾಗಣದ ಶರಷಟ್ಪದಿಯೆನಿಸಬಹುದಾದ ಚೌಪದಿ. ಸರಳಾರದಂತೆ ಪಲ್ಲವಿಯಿಲ್ಲ. ಧಾಟಿಯೂ ಸರಳಾರದಂತೆ ಅಲ್ಲ—

ಬಂದನು. ಪಾರ್ವತಿ. ಕಂದನು. ತಾನಾ.
ನಂದದಿ. ಭಕ್ತರ. ಗೃಹಕೀಗ.
ಒಂದೇ. ಮನದಲಿ. ಭಜಿಸುವ. ಭಜಕರ.
ವೃಂದವ. ಪಾಲಿಸ. ಲುತ್ಸಹದಿ (234)

ಇದೇ ಹಾಡು ಮಾತ್ರಾಗಣದ ಶರಷಟ್ಪದಿ ರೂಪದಲ್ಲಿ—

ಬಂದನು. ಪಾರ್ವತಿ.
ಕಂದನು. ತಾನಾ.
ನಂದದಿ. ಭಕ್ತರ. ಗೃಹಕೀಗ
ಒಂದೇ. ಮನದಲಿ.
ಭಜಿಸುವ. ಭಜಕರ.
ವೃಂದವ. ಪಾಲಿಸ. ಲುತ್ಸಹದಿ.

21. ಅಂಶಗಣಾತ್ಮಕವಾದುದು. ಎರಡು ಗಣಗಳಿಗೊಂದರಂತೆ ಯತಿ. ಎರಡನೆ ಮತ್ತು ನಾಲ್ಕನೆ ಪಾದಾಂತ್ಯ ಬ್ರಹ್ಮಗಣವಾಗಿರುವ ಚೌಪದಿ. ಮಾತ್ರಾಗತಿಗೂ ಅಳವಡುತ್ತದೆ. ಇದು ರಾಮಕೃಷ್ಣ ಚರಿತೆ ಹಾಡು—

ದಶಶಿರ. ದೈತ್ಯನು. ಲೋಕವ. ಬಾಧಿಸೆ.
ದಶರಥ. ಗುದಿಸಿದ. ದಶರಥ. ರಾಮ.
ವಸುಧೆಯ. ಭಾರವ. ಕಳೆಯಲು. ಕಂಸನ.
ಅಸುವ ಹೀ. ರಲು ಬಂದ. ವಸುದೇವ. ಕೃಷ್ಣ (277)

22. ತ್ವರಿತೋಚ್ಚರಿತ ಮತ್ತು ಧ್ಮಾತ ತ್ರಿಮಾತ್ರಾಗಣಗಳು, ವರಣಗಳು ಇರುವ ಚೌಪದಿ—

ವಾರಿಜ. ನಾಭ. ಮೇಳಗ. ಳಿಂದ. ಬರುವ. ನಮ್ಮಾ । ಸತಿಯರ.
ಸೀರೆ. ಗಳ. ಸೆಳೆದು. ಮರವ. ನೇರಿದ. ನಮ್ಮ
ಪರು. ಕಡಹ. ಮರವ. ನೇರಿ. ನಗುವ. ನಮ್ಮ । ನಿಮ್ಮ
ಚಾರು. ಬಾಲ. ಯ್ಯನಿಗೆ. ಬುದ್ಧಿ. ಸಾಲ. ದಮ್ಮಾ (200)

ಈ ಹಾಡಿನಲ್ಲಿ ವಾರಿಜ, ಮೇಳಗ, ನೇರಿದ—ಎಂಬ ಘಟಕಗಳನ್ನು ತ್ವರಿತದಲ್ಲಿ (ನಿರಸ್ತವಾಗಿ) ಉಚ್ಚಾರಣೆ ಮಾಡಿ ಅವನ್ನು ಮೂರು ಮಾತ್ರೆಯ ಗಣಗಳೆಂದು ಎಣಿಸಬೇಕಾಗುತ್ತದೆ.

23. ಪಲ್ಲವಿಯಿದೆ. ಸೊಲ್ಲಿನ ಮೊದಲ ಎರಡು ಪಾದಗಳ ಪ್ರಾರಂಭದಲ್ಲಿ ಎರಡು ಅಕ್ಷರಗಳು ಅತೀತಗಳು, ಅವು ಪ್ರಥಮಗಣಕ್ಕೆ ಹೊರಗುಳಿಯುತ್ತವೆ. ಅಲ್ಲಲ್ಲಿ ದೀರ್ಘೀಕರಣ ಮಾಡಿ ಮಾತ್ರೆಯನ್ನು ತುಂಬುವ ವಿಧಾನದಿಂದ ಧಾಟಿ ವಿಶಿಷ್ಟವಾಗಿರುವ ಚೌಪದಿಯಿದು. ದಪ್ಪ ಅಕ್ಷರಗಳನ್ನು ದೀರ್ಘವಾಗಿ ಎಳೆದು ಹಾಡಬೇಕು—

**ಬಂದಿರೋ. ಸರುವರು.**
**ಬಂಧುಂಗ. ಳೆಲ್ಲರು** ಪ
ಬಿಸಿ । **ಲಿಂದ** ಬಲುಬಳ. ಲುತಲಿ
ತೃಷೆ । **ಯಿಂದ** ಬಾಯಾ. ರುತಲಿ
ಹಸಿವೇರೀ. ಮುಖ ಬಾಡೀ.
ಹಸನಾಗೀ. ದಣಿದಿರೀ (31)

ಈ ಹಾಡಿನಲ್ಲಿ ಬಿಸಿ, ತೃಷೆ ಎಂಬಿವು ಅತೀತಗಳಾಗಿವೆ.

24. ಅಂಶಗಣಗಳ ರಚನೆ. ಮುಡಿ, ವರಣ, ಆವೃತ್ತಿಗಳುಳ್ಳ ಚೌಪದಿ—

ಒಂದಾಗಿ. ಬಹಳ.
ಬಂದಿರೆ. ಸಕಲ
ಚಂದವಾ. ದುದು ಮನ. ಕೇ.... । ದಿ. ಬ್ಬಣಿಗರೆ
ಚಂದವಾ. ದುದು ಮನ. ಕೇ.... (39)

## ಪಂಚಪದಿ ಪ್ರಭೇದಗಳು

1. ಅಂಶಗಣ ಘಟಿತ, ಮೊದಲ ನಾಲ್ಕು ಸಾಲುಗಳಿಗೆ ಮಧ್ಯಮಗತಿ. ಕೊನೆಯ ಸಾಲು ತ್ರಿಪದಿಮಕುಟವಾಗಿದ್ದು ಅದಕ್ಕೆ ವಿಳಂಬಗತಿಯಿರುತ್ತದೆ. ಮೊದಲ ಎರಡು ಪಾದಾಂತ್ಯಗಳಲ್ಲಿ ಬ್ರಹ್ಮಗಣವಿದೆ. ಇತರ ಕಡೆ ವಿಷ್ಣುಗಣಸ್ಥಾನದಲ್ಲಿ

ಬ್ರಹ್ಮಗಣ, ರುದ್ರಗಣ ಬಂದುದುಂಟು. ಮೊದಲ ನಾಲ್ಕು ಸಾಲುಗಳನ್ನು ಚತುರ್ಮಾತ್ರಾ ಗಣವಾಗಿಯೂ ಪರಿಗಣಿಸಿಕೊಳ್ಳಬಹುದಾಗಿದೆ—ಆಗ ಧ್ಮಾತ, ನಿರಸ್ತ ಉಚ್ಚಾರಣೆಗಳು ಉಂಟು—

ವರನವ. ರತ್ನಖ. ಚಿತಮಂ. ಟಪದಿ.
ಸುರುಚಿರ. ಕನಕ ಸು. ರುಚಿರಾ. ಸನದಿ
ಪರಶಿವ. ಗಿರಿಜಾ. ಪರಿಣಯ. ಕೋಸುಗ
ಪರಿತೋ. ಷದಿ ಬಂದು. ಭರದಿ ಕು. ಳ್ಳಿರಲಾ ॥
ತರುಣಿಯರಾ. ರತಿಯಾ. ಬೆಳಗಿರೆ (48)

ಇದೇ ರೀತಿ : 128, 131, 172, 204, 260, 262.

2. ಮೇಲಿನದೆ ಛಂದಸ್ಸಾದರೂ ಮೊದಲ ಎರಡು ಸಾಲುಗಳ ಕೊನೆಗೆ ಮುಡಿ ಇದೆ. ದ್ರುತ ವಿಳಂಬಗತಿಗಳುಳ್ಳದು. ತ್ರಿಪದಿಮಕುಟವುಳ್ಳದು—

ಶ್ರೀಗುರು. ವಿನ ಪಾ. ದವ ನೆನೆ. ದು....
ಮೋದದೊ. ಳುಸುರುವೆ. ಮನವೊಲಿ. ದು....
ಭೂದೇ. ವಿಯ ಸುತೆ. ಸಾಗರ. ಶಯನಗೆ.
ಮೋದದಿ. ಕರದೊಳು. ಜಲವನೆ. ತುಂಬಿದ ॥
ಆಗಮವ. ಪೇಳಿ. ಪೊಗಳುವೆ (130)

ಇದೇ ರೀತಿ : 16, 164, 255.

ಮೇಲಿನದೆ ರೀತಿಯ ಹಾಡಿನ ಮೂರನೆಯ ಪಾದದಲ್ಲಿ ಅಂತರ್ಯತಿಯುಳ್ಳದು.

ಗುರುಲಂ. ಬೋದರ. ನಡಿಗೆರ. ಗಿ....
ಸಿರಿಶಾ. ರದೆಯರ. ಪದಕೆರ. ಗಿ....
ಪರಿಣಯ. ವೆಸಗೀ....। ನಾಲ್ಕನೆ. ದಿನದೀ....
ವರಚಾ. ತುರ್ಥಿಯು. ತ್ಸಾಹದಿ. ಶ್ರೀಹರಿ ॥
ಸಿರಿದೇವಿ. ಸಹಿತ. ಎಸೆದಿರ್ದ (104)

ಮೇಲಿನ ರೀತಿಯ ಹಾಡಿನಲ್ಲಿಯೇ ವರಣಯುಕ್ತವಾದುದು—

ವರ ಕೋ. ಟ್ಯೂರ ಪು. ರದಿ ಮೆರೆ. ವ....। ಸಿರಿ
ಯರಸನ. ಸಖನೆ. ಲ್ಲರ ಪೊರೆ. ವ....
ಶರಣಾವ. ತ್ಸಲನು....। ಸತಿಸಖಿ. ತವನು....
ಹರುಷದೊ. ಳಗೆ ನ. ಕ್ಷತ್ರ ನ. ಮೋ ಯೆಂ. ॥
ದೆರಗಿ ಮಾ. ನಸದೀ. ಸುತಿಸ್ಯಾರು (84)

ಅಂತರ್ಯತಿ ಇಲ್ಲದೆ, ವರಣಯುಕ್ತವಾದುದು—

ನಂದಗೋ. ಪನು ತ. ನ್ನಣುಗನಿ. ಗೇ.... । ಸಾ
ನಂದದಿ. ಚವಲ ಮಾ. ಡುವ ಬಗೆ. ಗೇ
ಬಂಧು ಬ. ಳಗ ಬಲು. ಮಂದಿ ಮಾ ರ್ಬಲಗಳ.
ವೃಂದ ಮ. ಧ್ಯದಿ ಗೋ. ವಿಂದನ. ಕರೆತಂ. ॥
ದಂದಣದಿ. ಬೇಗ. ಸಭೆಗಾಗಿ (185)

ಮೇಲಿನದೇ ಛಂದಸ್ಸು. ಆದರೆ ಮೂರು ಕಡೆ ವರಣ ಬಂದಿದೆ—

ಸಾಮಜ. ವದನನ. ಸ್ತುತಿ ಗೈ. ದು....। ಕುಲ
ಸ್ವಾಮಿಯ. ಗುರುಹಿರಿ. ಯರ ನೆನೆ. ದು... । ಕವಿ
ತಾ ಮಹಾ. ಜನರನು. ಅನುಪಡೆ. ದು.... । ಬಹು
ಕಾಮಿತ. ವರಗಳ. ಕರುಣಿಸು. ವಗ್ನಿಯ. ॥
ಹೋಮದ. ಮಹಿಮೆ. ಪೊಗಳುವೆ (272)

ಮೇಲಿನ ರೀತಿಯದೇ ಹಾಡಾದರೂ ಮೊದಲ ಎರಡು ಸಾಲುಗಳಲ್ಲಿ ಎರಡೂ ವಿಷ್ಣುಗಣ ಮತ್ತು ಮುಡಿ ಇರುವಂತಹ, ಅಂದರೆ ಮೇಲಿನದಕ್ಕಿಂತ ಒಂದು ಗಣವೇ ಕಡಮೆ ಯಾಗುಳ್ಳುದು—

ದೇವರ. ದೇವಸಿ. ಗೇ....। ಭಕ್ತ ಸಂ.
ಜೀವ ಶಂ. ಕರ ಸಖಿ. ಗೇ....
ಸಾವಧಾ. ನದಿ ಗೋ. ವಿಂದನ. ನೊಸಲಿಗೆ
ದೇವಕಿ. ಬಾಸಿಗ. ವನೆ ಕಟ್ಟಿ. ಹರಸುತ ॥
ಹೂವಿನಾ. ರತಿಯಾ. ಬೆಳಗಿದ (24)

ಇದೇ ರೀತಿ : 13, 105, ತ್ರಿಪದಿ ಮಕುಟವಿಲ್ಲದುದು 108.

3. ಹಿಂದೆ ಉದಾಹರಿಸಿದ ಚೌಪದಿ ಪ್ರಭೇದದ ಉದಾಹರಣೆಗಳಲ್ಲಿ 18 ರಂತೆಯೇ ಧಾಟಿಯ ಪಂಚಪದಿ. ಕೊನೆಯ ಸಾಲು ತ್ರಿಪದಿ ಮಕುಟವಾಗಿ, ವಿಳಂಬ ಗತಿಯದು—

ಶ್ರೀ ಸಾಂಬ. ಶಿವಗೆ ಶಂ. ಕರಗೇ.... । ವರ
ವಾಸವ. ನುತ ಸ. ರ್ವೇಶ್ವರ. ಗೇ....
ಭಾಸುರ. ಘನ ಕೈ. ಲಾಸ ನಿ. ವಾಸಗೆ

ಭೂಸುರ. ವಂದ್ಯ ಸ. ದಾಶಿವ ರುದ್ರಗೆ. ॥
ಭಾಸುರದಾ. ರತಿಯಾ. ಬೆಳಗಿರೆ (218)

4. ಪಲ್ಲವಿ, ಅನುಪಲ್ಲವಿ, ಮುಡಿ, ವರಣಗಳುಳ್ಳವು. ಪಲ್ಲವಿ, ಅನುಪಲ್ಲವಿಯಂತೆಯೇ ಇರುವ ಸೊಲ್ಲುಗಳು. ಅಂಶಗಣ ಘಟಿತವಾಗಿ ಅಷ್ಟತಾಳದ ಗತಿಯುಳ್ಳದು—

ಕೊಡಬೇಕು. ಪಾರ್ವತಿ. ಯ.... । ಪ. ರ್ವತರಾಯ.
ಕೈಲಾಸ. ವಾಸನಿ. ಗೆ.... ಪ
ಕೊಡಬೇಕು. ಸಿನ್ನ ಯು. ಮೋಹದ ಮಗಳನು.
ಕೊಡಬೇಕು. ಪಾರ್ವತಿ. ಯಾ.... । ಕೈಲಾಸದ
ಜಡೆಯ ಶಿ. ವಗೆ ಸುತೆ. ಯಾ.... ಅ ಪ (3)

5. ಮೊದಲ ಮೂರು ಸಾಲು ಅಂಶಗಣಾತ್ಮಕವಾಗಿ ವಿಳಂಬ ಗತಿಯಿಂದ ಕೂಡಿದೆ. ವರಣಯುಕ್ತವಾಗಿದೆ. ಆ ಮೇಲಿನ ಎರಡು ಸಾಲುಗಳು 3, 4 ಮಾತ್ರೆಗಳ ಗಣಗಳಿಂದ ಕೂಡಿ, ದ್ರುತಗತಿಯುಳ್ಳವಾಗಿವೆ. ಅಷ್ಟತಾಳಕ್ಕೆ ಒಡಂಬಡುವ ಹಾಡು—

ಒಡವೆಗೆ. ನಾವ್ ಭ್ರಮಿ. ಸಿಲ್ಲ— । ನಮ್ಮ
ಹುಡುಗನ. ರೂಪಕೆ. ಮರುಳಾಗ. ಲಿಲ್ಲ....
ಕೊಡಬೇಕೆ. ನುತ ಭಾ. ಷೆಯನಿ. ತ್ತುಬಕೀಗ. ॥
ನುಡಿಗೆ. ತಪ್ಪದೆ. ಕೊಡುವ. ದ್ಧೊರತು.
ಹುಡುಗಿ. ಯನ್ನೀ. ಗಲೆಯೆ ನಾವು (148)

6. ಮೊದಲ ನಾಲ್ಕು ಪಾದಗಳಿಗೆ 3, 4 ಮಾತ್ರಾಗಣಗಳ ದ್ರುತಿಯ ತ್ರಿವಿಡೆ ತಾಳದ ನಡೆಯಿದೆ. ಮೂರು ಪಾದಗಳ ಕೊನೆಗೂ ಮುಡಿ; ನಾಲ್ಕನೆ ಪಾದಾಂತ್ಯದಲ್ಲಿ ಮುಡಿ ಮತ್ತು ವರಣ. ಐದನೆ ಪಾದ ವಿಳಂಬ ಗತಿಯ ತ್ರಿಪದಿ ಮಕುಟ—

ಶ್ರೀಗ. ಣೇಶನ. ಶಾರ. ದಾಂಬೆಯ. ಪಾದ. ಕಮಲಕೆ. ಎರಗು. ವೆ....
ಶ್ರೀಗು. ರೂ ಶೃಂ. ಗೇರಿ ಶಂಕರ. ಭಾರ. ತಿಗೆ ನಮ. ಸ್ಕರಿಸು. ವೇ....
ಮೋದ. ಕಂಗಳು. ಕಬ್ಬು. ಕಡಲೆ ನೈ. ವೇದ್ಯ. ಗಳ ತಂ. ದಿರಿಸು. ವೇ....
ಭೂರಿ. ವಾಸಂ. ತೋತ್ಸ. ವದಿ ಶ್ರೀ ಶಾರ. ದಾಂಬಿಕೆ. ಅಮ್ಮ. ಗೇ । ಸುರ ॥
ನಾರಿಯರ್ ತುಂ. ಬಿದರೇ. ಉಡಿಲನು (163)

7. ಹಿಂದೆ, ವರಣ ಪಾರಿಭಾಷಿಕದ ವಿವರಣೆಯಲ್ಲಿ (ಪುಟ 523) ಕೊಟ್ಟಿರುವ ಎರಡನೆಯ ಪ್ರಯೋಗದಂತಹುದೇ ಹಾಡು. ಆದರೆ ಇಲ್ಲಿ ಪಾದಗಳು 5. ಇದನ್ನು

ಸಂಗೀತಜ್ಞರು 'ಪಾಶ್ಚಾತ್ಯ ಸಂಗೀತದ ಧಾಟಿ' ಎನ್ನುತ್ತಾರೆ. ಮುಡಿ, ಪಲ್ಲವಿ, ವರಣಯುಕ್ತ. 3, 4–ಮಾತ್ರಾಗಣಗಳು. ಪಲ್ಲವಿ ಆವೃತ್ತಿ ಸಹಿತವಾಗಿದೆ. ನಾಲ್ಕು ಸಾಲುಗಳಿಗೆ ಮಾತ್ರ ತ್ರಿವಿಡೆ ತಾಳ. ಕೊನೆಯ ಸಾಲಿಗೆ ರೂಪಕ ತಾಳದ ಗತಿ. ಇಡೀ ಸೊಲ್ಲನ್ನು ಏಕತಾಳದ ಗತಿಯಲ್ಲಿಯೂ ಹೇಳಲು ಬರುತ್ತದೆ. ಪಲ್ಲವಿಗೆ ವಿಳಂಬಗತಿ, ಅನಂತರದ ಭಾಗಕ್ಕೆ ಮಧ್ಯಮಗತಿ. ದಪ್ಪಕ್ಷರಗಳನ್ನು ಪ್ಲುತದಂತೆ ಎಳೆಯಬೇಕು—

ಪಾಲಿಸೈ ಶಶಿ. ವಮೌಳಿಯೇ ಮುದ. ದೀ....। ವರ. ನೀಲ ಕಂಠನೆ
ಪಾಲಿಸೈ ಶಶಿ. ವಮೌಳಿಯೆ ಮುದ. ದೀ.... ಪ
ಪಾಲಿಸೈ ಶಶಿ. ವಮೌಳಿ ವಾಕ್ಯವ.
ಲಾಲಿಸೈ ವರ. ನೀಲ ಕಂಧರ.
ಪಾಲೀಸು. ಬಾಳೀಸನು. ಗಾಲ ಸಂ. ಪದಸುಖ (214)

8. ಮುಡಿ, ವರಣಯುಕ್ತವಾಗಿದೆ. ಚತುರ್ಮಾತ್ರಾಗಣವಾಗಿ ಹಿಗ್ಗಿಸಿಕೊಳ್ಳ ಬೇಕಾಗುತ್ತದೆ. ಏಕತಾಳದ ಲಯ. ಮೊದಲ ಸಾಲು ವಿಳಂಬ ಗತಿಯದು. ಅನಂತರ ಮಧ್ಯಮ ಗತಿ.

ಶ್ರೀಸತಿ. ಸಹಿತಲಿ. ಶೇಷ. ತಲ್ಪದ. ಲೀ....
ತೋಷ. ದಿಂದ. ಜಗವ. ಪೊರೆವ. ದೇವ. ಶ್ರೀಹ. ರೀ....। ಬೇಗ
ಬಾರೋ. ಶ್ರೀಹ. ರೀ....। ಸತ್ಯ
ದೇವ. ಶ್ರೀಹ. ರೀ....। ಸುಂದರ
ನಾದ. ಶ್ರೀಹ. ರೀ.... (208)

9. ಅಂಶಗಣಾತ್ಮಕ ಪಂಚಪದಿ ಧವಳ ಶೋಭಾನೆಯಿದು. ಮುಡಿ, ವರಣಾತ್ಮಕವಾಗಿದೆ, ತ್ರಿಪದಿ ಮಕುಟವಿದೆ—

ಗಂಗಾ. ಧರನ ಕು. ಮಾರ ಗ. ಣಪನ ಪಾ.
ದಾರವಿಂ. ದಕೆ ನಮಿ. ಸಿ....। ಶಾ. ರದೆಯನು.
ಕೊಂಡಾ. ಡುತ ಭಜಿ. ಸಿ....। ಶ್ರೀ ತತ್ತ್ವವ
ಚಂದದಿಂ. ದಲಿ ಸ್ಮರಿ. ಸಿ....। ಪಾ. ಲಿಸುವುದು ॥
ಇಂದು ನೀ. ನೊಲಿದು. ಕರುಣದಿ. (173)

## ಷಟ್ಪದೀ ಪ್ರಭೇದಗಳು

ಆರು ಪಾದಗಳ ಸೊಲ್ಲುಗಳಿರುವ ಹಾಡುಗಳು ಎಂಬ ಅರ್ಥದಲ್ಲಿ ಮಾತ್ರ ಇಲ್ಲ ಷಟ್ಪದಿಗಳು—ಎನ್ನಲಾಗಿದೆ. ಶರ, ಕುಸುಮ, ಭಾಮಿನಿ, ವಾರ್ಧಕಗಳಂಥವಲ್ಲ.

1. ವಿಷ್ಣುಗಣಾತ್ಮಕ, ಅಷ್ಟತಾಳದ ಲಯವುಳ್ಳುದು. ನಾಲ್ಕು ಪಾದಗಳಿಗೂ ವರಣಪದ. ತ್ರಿಪದಿ ಮಕುಟವುಳ್ಳುದು. ಮುಡಿಯಿದೆ. ಮೊದಲ ಐದು ಪಾದಗಳಿಗೆ ಮಧ್ಯಮಗತಿ, ಕೊನೆಯದಕ್ಕೆ ವಿಳಂಬಗತಿ. ಇದೊಂದು ಧವಳಾರದ ಪ್ರಭೇದ—

ನಂದಗೋ. ಪನು ಅಭಿ. ವಂದನೆ. ಗಳ ಮಾಡಿ.
ತಾಂಬೂಲ. ದಕ್ಷಿಣೆ. ಯ....। ದ್ವಿಜ. ಲಿಂಗೆ ದಿ.
ವ್ಯಾಂಬರ. ಫಲಗಳ. ನು....। ಸಂ. ತಸದಿಂದ.
ಲಂದು ತಾ. ನೀಡಿದ. ನು....। ಶ್ರೀ. ಹರಿಗಾಗ.
ತಂದೆತ್ತ. ಲಾರತಿ. ಯ....। ಆ. ಗಲೆ ದೇವ. ॥
ದುಂದುಭಿ. ನಾದ. ಮೊಳಗಿತು (173)

2. ಮೊದಲ ಎರಡು ಸಾಲುಗಳಲ್ಲಿ ಪ್ರತಿ ಅಕ್ಷರಕ್ಕೂ ಗುರು ಮಾತ್ರೆ ಬರುವ ಹಾಗೆ ವಿಳಂಬಗತಿ. ಅನಂತರದ ಮೂರು ಸಾಲುಗಳಿಗೆ ದ್ರುತಗತಿ. ಈ ಮೂರು ಸಾಲುಗಳನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಚತುರ್ಮಾತ್ರಾ ಗಣಯುಕ್ತವಾಗಿ ಏಕತಾಳದ ಲಯದಲ್ಲಿ ಹಾಡುವರು. ಅವನ್ನೇ ಉತ್ತರ ಕನ್ನಡ, ಶಿವಮೊಗ್ಗ ಜಿಲ್ಲೆಗಳಲ್ಲಿ ಅಂಶ ಗಣಯುಕ್ತವಾಗಿ ಅಷ್ಟತಾಳದ ಲಯದಲ್ಲಿ ಹಾಡುವರು. ಕೊನೆಯ ಪಾದ ತ್ರಿಪದಿ ಮಕುಟವಾಗಿದ್ದು, ಪುನಃ ವಿಳಂಬಗತಿಯದು—

ಶ್ರೀಮಹಾ. ಲಕ್ಷ್ಮಿಯ. ನೋಡೀ.
ಕಾಮಿನಿ. ಯರು ಕೈಯ. ನೀಡೀ. ॥
ಸಾಮಜ. ಗಾಮಿನಿ. ಯರು ಹರಿ. ವಣದೀ.
ನೇಮಿಸಿ. ತೈಲವ. ನೆತ್ತಿಯೊಳಿರಿಸುತ.
ಕ್ಷೇಮದಿ. ಸರ್ವರು. ಮದುಮಗ. ಳಿಗೆ ಸು. ॥
ಪ್ರೇಮದಿ ಚ. ರ್ಚಿದರು. ಹನಿಯೆಣ್ಣೆ (14)

ಇದೇ ರೀತಿ : 37, 59, 134, 155, 158, 202, 246, 249, 264.

3. ಅಂಶಗಣಾತ್ಮಕವಾದುದು. ಮೊದಲ ಐದು ಪಾದಗಳಿಗೆ ದ್ರುತಗತಿ, ಅಷ್ಟ ತಾಳ ಇಲ್ಲವೆ ಏಕತಾಳದ ಲಯ. ಕೊನೆಯ ತ್ರಿಪದಿ ಮಕುಟಕ್ಕೆ ವಿಳಂಬಗತಿ—

ಶ್ರೀಮ. ದ್ಗುರು ಗಣ. ಪತಿಯರ. ವಂದಿಸಿ.
ಶ್ರೀಮನೋ. ಹರಿಯ ಕೊಂ. ಡಾಡುವೆನು.
ಪ್ರೇಮದಿ. ಸ್ತುತಿಗಳ. ಮಾಡುವೆನು.
ಕಾಮಿನೀ. ಮಣಿ ಮಹಾ. ಲಕ್ಷ್ಮಿಯ. ನಿದಿಗೊಂ
ಡಾ ಮಹಿ. ಮೆಯೊಳರ. ಮನೆಗೈ. ದುತ ಬರು ॥
ವಾ ಮಹಾ ಸಂ. ಭ್ರಮವ. ಪೊಗಳುವೆ (247)

4. ಅಂಶಗಣ ಮಾತ್ರಾಗಣ ಎರಡಕ್ಕೂ ಒಡಂಬಡುವ ಧಾಟಿ. ಮಧ್ಯಮಗತಿ ವಿಳಂಬಗತಿ ಎಂಬೆರಡಕ್ಕೂ ಹೊಂದಿಕೊಳ್ಳುತ್ತದೆ. ಕೊನೆಯ ಪಾದ ಮಾತ್ರ ತ್ರಿಪದಿ ಮಕುಟವಾಗಿದ್ದು ವಿಳಂಬಗತಿಯದು—

ಶ್ರೀಸುಕು. ಮಾರ ಶಿ. ಖಾಮಣಿ. ಮಗನೇ
ತೋಷದೊ. ಳೊರೆವೆವು. ಕೇಳು ಚೆ. ನ್ನಿಗನೇ
ಕ್ಲೇಶವಿ. ಡದೆ ನೀ. ಮನದಿ ಸು. ಗುಣನೇ
ಲೇಸಿನೊ. ಳಿರು ನಿ. ನ್ನಯ ಸತಿ. ಯೊಡನೆ
ಈ ಸಮ. ಯದಿ ನಾವ್, ಪೋಗಿ ಬ. ರುವೆವು ವಿ. ॥
ಲಾಸದಿ ನಾ. ಲ್ಕನೆಯ. ದಿನದಲ್ಲಿ (83)

ಇದೇ ರೀತಿ : 110, 190.

5. ಮುಡಿ, ಪಲ್ಲವಿ, ವರಣಯುಕ್ತ. ಮೊದಲ ಎರಡು ಸಾಲುಗಳು ವಿಷ್ಣು ಗಣಾತ್ಮಕವಾಗಿ ವಿಳಂಬಗತಿಯವು. ಆ ಮೇಲಿನ ನಾಲ್ಕು ಸಾಲುಗಳು 3, 4 ಮಾತ್ರಾ ಗಣಗಳ ದ್ರುತಗತಿಯವು—

ಮಡದಿ ಮ. ಣಿಯೆ ಲಾಲಿ. ಸೆ....। ಬಿ. ಡಾರವ
ಸಡಗರ. ದಲಿ ತೋರಿ. ಸೆ....॥
ಕಡುಬೆ. ಡಗ ನಿಡು. ಗುರುಳ. ಸತಿಯರು.
ಪೊಡವಿ. ಪಾಲರು. ಸಹಿತ. ದಿಬ್ಬಣ.
ದೊಡನೆ. ನಿನ್ನಯ. ಗೃಹಕೆ. ಬಂದತು.
ಜಡಜ. ಮುಖಿ ನೀ. ಸ್ಥಳವ. ತೋರಿಸೆ (34)

6. ಎರಡು ಪಾದಗಳ ಪಲ್ಲವಿ ಆವೃತ್ತಿಯದು. ಮುಡಿ, ವರಣಗಳಿವೆ. ಪ್ರತಿಯೊಂದು ಸೊಲ್ಲಿನ ಮೊದಲೆರಡು ಪಾದಗಳು ಪಲ್ಲವಿಯಂತಿವೆ. ಪಲ್ಲವಿಗೆ ಮತ್ತು ಈ ಸೊಲ್ಲುಗಳ ಮೊದಲ ಎರಡು ಸಾಲುಗಳಿಗೆ ವಿಳಂಬಗತಿ, ಅಂಶಗಣದ ಗಣನೆ. ಉಳಿದ ಪಾದಗಳಿಗೆ 3, 4 ಮಾತ್ರೆಗಳ ಗಣಗಳ ಅನುಸರಣೆಯ ದ್ರುತಗತಿ—

ಪೂಜಿಸಿ. ದಳು ಗೌರಿ. ಯಾ....। ಪಾಂ ಚಾಲೆಯು
ಪೂಜಿಸಿ. ದಳು ಗೌರಿ. ಯಾ ಪ

ಗಂಧ ಅ. ಕ್ಷತೆಗಳಿಂ. ದ....। ಕುಂ. ಕುಮ ಹರಿದ್ರ
ಚಂದದ. ಪುಷ್ಪದಿಂ. ದ.... ॥
ತಂದ ವಿಧವಿಧ. ಸುಮಗಳೇರಿಸಿ
ಮುಂದಿರುವ ಭ. ಕ್ಷ್ಯಗಳನರ್ಪಿಸಿ
ಚಂದದಿಂದಲಿ. ಗೀತ ಪಾಡುತ
ಮಂಗಳಾರತಿ. ಮಾಡಿ ಎತ್ತುತ (229)

ಇದೇ ರೀತಿ : 236.

## ಸಪ್ತಪದಿ ಪ್ರಭೇದಗಳು

1. ಚತುರ್ಮಾತ್ರಾಗಣ ಘಟಿತವಾದುದು. ಎರಡನೆ ಮತ್ತು ನಾಲ್ಕನೆ ಪಾದಾಂತ್ಯದಲ್ಲಿ ಮುಡಿ. ಮೊದಲ ಆರು ಪಾದಗಳಿಗೆ ಮಧ್ಯಮಗತಿ. ಕೊನೆಯದು ತ್ರಿಪದಿ ಮಕುಟ. ಅದಕ್ಕೆ ವಿಳಂಬ ಗತಿ—

ಗುರುಲಂ. ಬೋದರ. ಗೆರಗುತ. ಶಾರದೆ.
ಚರಣ ಸ. ರೋಜವ. ಸ್ತುತಿಮಾ. ಡೀ....
ಹರಿಹರ ಸುರ ಪಾ. ದ್ಯರ ಬಲ. ಗೊಳ್ಳುತ.
ಸರಸದಿ. ಕವಿಗಳ. ದಯೆ ಬೇ. ಡಿ....
ವರ ರಘು. ರಾಮನ. ಪರಿಣಯ. ದೊಳು ಮ.
ತ್ತಿರದೆಲೆ. ಯಡಕೆಯ ಸಮಧರಿ. ಸಿದ ವಿ.
ಸ್ತರವ ನಾ. ಪೇಳಿ. ಪೊಗಳುವೆ. (41)

ಇದೇ ರೀತಿ : 197, 247.

2. ಇದರ ಪಾದಗಳು ಒಂದು, ಎರಡು, ಮತ್ತು ಕೊನೆಯ ತ್ರಿಪದಿ ಮಕುಟ— ಇವು ತುಂಬ ಎಳೆದು ಹಾಡುವ ವಿಳಂಬಗತಿಯವು ; ಅಂಶಗಣಾತ್ಮಕಗಳು. ಇನ್ನುಳಿದ ನಾಲ್ಕು ಪಾದಗಳು ಚತುರ್ಮಾತ್ರಾಗಣಗಳುಳ್ಳವು, ದ್ರುತಗತಿಯವು.

ಶ್ರೀಶೈಲಾ. ಧೀಶ ಗ. ಣೇಶ ಮೂ. ರುತಿಗೇ
ಶ್ರೀಶಕ್ತಿ. ರೂಪೆ ಸ. ದಾಶಿವೆ. ಯಢಿಗೇ ॥

ಮೂಷಿಕ. ವಾಹನ. ಶೇಷಾ. ಭರಣಗೆ
ಕೇಸರಿ. ಧ್ವಜೆ ಕಾ. ತ್ಯಾಯಿನಿ. ದೇವಿಗೆ
ವಾಸವ. ವಂದ್ಯೆ ದಿ. ನೇಶಸ. ನ್ನಿಭೆಗೆ
ಸಾಸಿರ. ನಾಮದ. ಲಲಿತೆಗೆ. ಪದ್ಮದ
ಕೇಸರದಾ. ರತಿಯಾ. ಬೆಳಗಿರೆ (242)

ಇದೇ ರೀತಿ : 205

3. ಮೇಲಿನ ರೀತಿಯದೇ ಹಾಡಾದರೂ ಮೊದಲ ಎರಡು ಸಾಲುಗಳಲ್ಲಿ ಒಂದೊಂದು ಅಂಶಗಣ ಕಡಮೆಯದು. ವಿಳಂಬ, ಮಧ್ಯಮ, ವಿಳಂಬಗತಿಗಳು—

ಸಿಂಧು ಕು. ಮಾರಿ ಸುಂ. ದರಿಗೇ
ಸಿಂಧು ಜ. ಮುಖಿ ಗುಣ. ಯುತೆಗೇ ॥
ಕುಂದಣ. ನಾ ಸಾ. ಲಂಕೃತೆ. ಸತಿಗೇ
ಚಂದಿರ. ಮುಖಿ ಸ. ರ್ವೇಶ್ವರಿ. ಶುಭೆಗೇ
ಹೊಂದಿದ. ಭಕ್ತರ. ಸಲಹುವ. ದಿವಿಜರ.
ವೃಂದಾ. ರ್ಚಿತಳಿಗೆ. ತೇಜೋ. ನ್ವಿತಳಿಗೆ ॥
ಕುಂದಣದಾ. ರತಿಯಾ. ಬೆಳಗಿರೆ (227)

4. ಆರು ಪಾದಗಳು ಅಂಶಗಣ ಅಥವಾ ಚತುರ್ಮಾತ್ರಾಗಣಯುಕ್ತವಾಗಿ ಮಧ್ಯಮಗತಿಯವು. ಕೊನೆಯದು ತ್ರಿಪದಿಮಕುಟ, ವಿಳಂಬಗತಿಯದು. ದಪ್ಪಕ್ಷರದವುಗಳನ್ನು ಎಳೆದು ಹಾಡಬೇಕು—

ಶ್ರೀಗುರು. ವಿನ ಪದ. ಕಮಲವ. ನೆನೆದು
ನಾಗ ಶ. ಯನ ಕೃ. ಷ್ಣನ ರೂಪ. ತಳೆದು.
ಆಗಮ. ವಿಧಿವಿಹಿ. ತದ ವೈ. ದಿಕದೀ
ನಾಗವೇ. ಣಿಯ ರು. ಕ್ಮಿಣಿಯ ವೈ. ಭವದೀ
ಯೋಗ ಮೂ. ರುತಿ ಪೌ. ರೋಹಿತ. ಮತದೊಳ
ಗಾಗಳೆ. ಲಾಜ ಸು. ಹೋಮ ಮು. ಹೂರ್ತದಿ ॥
ಬೇಗ ಬಂ. ಧುಗಳುಂ. ಮುದದಿಂದ (75)

ಇದೇ ರೀತಿ : 222, 274.

5. ಗಣ, ಪಾದರೂಪಗಳಲ್ಲಿ ಸ್ವಲ್ಪ ವ್ಯತ್ಯಾಸವುಳ್ಳುದು. ಎರಡನೆ ನಾಲ್ಕನೆ

ಪಾದಾಂತ್ಯದಲ್ಲಿ ಮುಡಿ. ಮೊದಲು ಮಧ್ಯಮಗತಿ, ಕೊನೆಗೆ ತ್ರಿಪದಿಮಕುಟ— ವಿಳಂಬಗತಿ—

ಶ್ರೀಗುರು. ಗಣಪರ. ಚರಣಕೆ. ವಂದಿಸಿ.
ಸಾಗರಾಂ. ಬರೆಯನು. ಸಂಸ್ತುತಿ. ಸಿ....
ನಾಗಭೂ. ಷಣನಡಿ. ದಾವರೆ. ಗೆರಗುತ.
ವಾಗೀ. ಶ್ವರಿಯನು. ಸತ್ಕರಿ. ಸಿ....
ಸಾಗರ. ಸಂಭವೆ. ಸರಸಿಜ. ನೇತ್ರರಿ.
ಗಾಗಮೋ. ಕ್ತದಿ ಚಾಪೆ. ಹಾಕಿದ. ವಿವರವ. ॥
ನೀಗ ವ. ರ್ಣಿಸುವೆ. ಒಲವಿಂದ (106)

ಇದೇ ರೀತಿ : 197.

6. ಅಂಶಗಣದ ರಚನೆ. ಮುಡಿ, ವರಣ, ಪಲ್ಲವಿಗಳಿರುವ ಸಪ್ತಪದಿ, ಪೂರ್ತಿಯಾಗಿ ಒಂದೇ ವಿಧದ ಮಧ್ಯಮಗತಿ. ತ್ರಿಪದಿಮಕುಟವಿಲ್ಲದ ವಿಶಿಷ್ಟ ಛಂದೋ ರಚನೆಯದು—

ಜಯ ಜಯ. ಜಯ ಮಂಗ. ಲ....। ದೇವ. ಸತ್ಯನಾ. ರಾಯಣ
ಆರೋಗ. ಣೆಯ ಮಾ. ಡು....। ಜಯ ಜಯ. ಜಯಮಂಗ. ಲ.... ಪ
ಉದಯದೊ. ಳೆದ್ದು ದೇ. ವನ ಸ್ತುತಿ. ಗೈದು
ಪದುಮಾ ಪ್ರಿ. ಯನ ಪಾ. ದಗಳಿಗೆ. ಮಣಿದು
ಪದುಮಾ. ಕ್ಷನ ಪೂ. ಜೆಯ ಮಾ. ಡುವೆನೆಂದು
ಬುಧಬಾಂ. ಧವ ಬ. ಲ್ಲವರನು. ನೆರಹಿಸಿ.
ಒದಗಿಲಿ. ಪುಷ್ಪಂ. ಗಳನೆಲ್ಲ. ಕೊಯಿದು.
ಸದನಶೃಂ. ಗರಿಸುತ. ಲಿ....। ದೇವ । ಸತ್ಯನಾ. ರಾಯಣ
ಆರೋಗ. ಣೆಯ ಮಾ. ಡು....। ಜಯ ಜಯ. ಜಯ ಮಂಗ. ಲ.... (210)

7. ಅಂಶಗಣಾತ್ಮಕ, ಮುಡಿಯುಕ್ತ, ವರಣಸಹಿತ. ಮೊದಲ ಆರು ಪಾದ ಗಳಿಗೆ ಮಧ್ಯಮಗತಿ, ಕೊನೆಯದು ತ್ರಿಪದಿಮಕುಟ. ಅದಕ್ಕೆ ವಿಳಂಬಗತಿ—

ಶ್ರೀ ಗಣ. ನಾಥನ. ಪಾದಕೆ. ವಂದಿಸಿ.
ಬೇಡುವೆ. ವರಗಳ. ನು.... । ಸ. ದ್ಗುರುವಿಗೆ.
ಬಾಗುವೆ. ಶಿರಗಳ. ನು.... । ಹರಿ. ನಾಭಿಯೊ
ಳಾಗಿ ಹು. ಟ್ಟಿರುವಜ. ನ.... । ಸತಿ. ಸರಸ್ವತಿ.

ಪಾಲಿಸು. ವರಗಳ. ನು.... । ಶ್ರೀ ಕೃಷ್ಣನ.
ಲೀಲಾ ವಿ. ನೋದವ. ನು.... । ನಾ. ರಚಿಸುವೆ ॥
ಕೇಳಿ ಸ. ಜ್ಜನರು. ಕಿವಿಗೊಟ್ಟು. (93)

8. ಅಂಶಗಣಾತ್ಮಕ, ಅಷ್ಟತಾಳದಲ್ಲಿ ಮಧ್ಯಮಗತಿ, ತ್ರಿಪದಿಮಕುಟ, ಯಮಕವುಳ್ಳ ಹಾಡಿನ ಸೊಲ್ಲು—

ಶ್ರೀ ರಾ. ಮನು ಚೆಲ್ವ. ನಾರೀ ಮ. ಣಿಯು ಸಹ.
ಚಾರು ಮಂ. ಟಪದ ವಿ. ಸ್ತಾರದಿ.
ಭೂರಿ ಸ. ಭೆಯು ಶೃಂ. ಗಾರದಿ.
ತೋರಿ ರಂ. ಜಿಸಿ ವೈ. ಯಾರದಿ.
ಮಾರನ. ರತಿಯ ಶೃಂ. ಗಾರದಿ. ಮೆರೆಯುವ.
ನಾರಿಯರಿರ್ವರು. ಭೋರನೆ. ಒಳಗಿಂ. ॥
ದಾರತಿ ತರ. ಲೆಂದು. ಮನವಿತ್ತು (135)

9. ಎರಡನೆ ಮತ್ತು ನಾಲ್ಕನೆ ಪಾದಗಳು ಇನ್ನೂ ಚಿಕ್ಕವಾಗಿರುವ ಅಷ್ಟತಾಳ ಗತಿಯ ಹಾಡು. ಮುಡಿಯಿದೆ, ತ್ರಿಪದಿ ಮಕುಟವಿದೆ—

ಬಕವೈರಿ. ಭೀಮನ. ಅತಿ ಮೋ. ಹದ ರಾಣಿ.
ಕೀಚಕ. ಕುಲಹಾ. ರಿ....
ಜೀವರೂ. ಪಿಗಳಾದ. ವಾಯುದೇ. ವನಿಗತಿ.
ಮೋಹದ. ಸೊಸೆಯಾ. ದೀ....
ಜಾಣೆ ದ್ರೌ. ಪದಿ ನಿನ್ನ. ಆಯುಳ್ಳ. ಹಸ್ತದಿ.
ಸಾದಿನ. ಚಟ್ಟನು. ಹೊಯ್ಯ ಬೇ. ಕೆನುತಲೆ ॥
ಅಹಲ್ಯಾದೇವಿ. ಚಟ್ಟಾ. ಹೊಯಿಸಿದ. (121)

10. ಎರಡು ಪಾದ ಪರಿಮಿತಿಯ ಪಲ್ಲವಿ ಮುಡಿ ವರಣಯುಕ್ತವಾಗಿದೆ. ಮೊದಲ ಮೂರು ಪಾದಗಳಿಗೂ ಮಧ್ಯಮಗತಿ, ಅಂಶಗಣದ ಗಣನೆ. ಅನಂತರದ ನಾಲ್ಕು ಪಾದಗಳಿಗೂ 3, 4 ಮಾತ್ರಾಗಣಗಳು, ದ್ರುತಗತಿ. ಪ್ರತಿಯೊಂದು ಸೊಲ್ಲಿಗೂ ಇದೇ ರೀತಿಯ ಎರಡು ಪಾದಗಳ ಪಲ್ಲವಿಯಿದೆ—

ರಾಜವಂ. ದಿತೆ ಶ್ರೀದೇ. ವಿ.... । ಮಹಾ. ಮಾಯೆ ರಾಜ.
ರಾಜವಂ. ದಿತೆ ವೈಷ್ಣ. ವಿ.... ಪ

ರಾಜನಿ. ಭಾನನೆ. ರಾಜೀವ, ಲೋಚನೆ ॥
ರಾಜಿತೇ ಸುರ. ಪೂಜಿತೇ ಮೃಗ.
ರಾಜವಾಹಿನಿ. ಹಂಸಗಾಮಿನಿ.
ರಾಜರಾಜೇ. ಶ್ವರಿ ಮಹಾಗಿರಿ.
ರಾಜನಂದನೆ. ರಾಜಶೇಖರೆ (245)

11. ತ್ರಿಮಾತ್ರಾಗಣಗಳು, ಮುಡಿ, ರೂಪಕತಾಳಲಯ, ನಾಲ್ಕನೆಯ ಪಾದದ ಕೊನೆಗೆ ವರಣ. 2, 4, 5, 7ನೆಯ ಪಾದಾಂತ್ಯದಲ್ಲಿ ಮುಡಿಯುಳ್ಳ ಸಮಗತಿಯ ಹಾಡು—

ನೀರಜಾಕ್ಷ. ನಿರುಪಮನಿಗೆ.
ನೀರಜಜನ. ಜನಕ. ಗೇ....
ಧಾರಿಣಿಯೊಳು. ಜನಿಸಿ ಜನಕೆ
ಚಾರು ಸುಖವ. ನೀವ. ಗೇ....। ಜಿತ
ಮಾರ ವಾಮನ. ದೇವ. ಗೇ....
ವೀರುದಂಗಿ. ಯವರು ಮಿಸುನಿ
ಯಾರತಿಗಳ. ಬೆಳಗಿ. ರೇ.... (203)

## ಅಷ್ಟಪದಿ ಪ್ರಭೇದಗಳು

1. ಇದರಲ್ಲಿ ಚತುರ್ಮಾತ್ರಾಗಣಗಳು. 2 ಮತ್ತು 4 ಪಾದಾಂತ್ಯದಲ್ಲಿ ಮುಡಿ. ಮೊದಲ ನಾಲ್ಕು ಪಾದಗಳಿಗೆ ಮಧ್ಯಮಗತಿ, ಅನಂತರದ ಮೂರು ಪಾದಗಳಿಗೆ ದ್ರುತ ಗತಿ, ಕೊನೆಯ ಪಾದ ತ್ರಿಪದಿ ಮಕುಟ. ಅದಕ್ಕೆ ವಿಳಂಬಗತಿ—

ಜಲರುಹ. ವದನೆಯ. ರೊಲವಿನೊ. ಳಾಲಿಸಿ.
ಸುಲಲಿತ. ವಾಕ್ಯವ ನಿಂದಿನೊ. ಳು....
ಬಳಲಿದ. ಪದ ಕೋ. ಮಲವದ. ನಂಗಳ.
ತೊಳೆವುದು, ನಿರ್ಮಲ, ಸಲಿಲದೊ, ಳು....॥
ತಳುವದೆ. ಬೇಗ.
ನಲವಿನೊ. ಳೀಗ.
ತಳತಳಿ. ಸುವ ಸು. ಸ್ಥಳದೊಳ. ಗೆಲ್ಲ ಕು ॥
ಳ್ಳಿರಿ ನೀವಿಂ. ದಿರದೆ. ಸುಖವಾಗಿ (32)

2. ಅಷ್ಟತಾಳದ ಲಯವುಳ್ಳುದು ; ಮುಡಿ, ವರಣಗಳಿಂದ ಕೂಡಿದೆ. ಮೊದಲ ಮೂರು ಪಾದಗಳಿಗೆ ಅಂಶಗಣ, ಮಧ್ಯಮಗತಿ, ಆ ಮೇಲೆ ನಾಲ್ಕು ಪಾದಗಳಿಗೆ 3, 4 ಮಾತ್ರಾಗಣಗಳ ದ್ರುತಗತಿ. ಕೊನೆಯ ಪಾದ ತ್ರಿಪದಿಮಕುಟ. ವಿಳಂಬ ಗತಿಯುಳ್ಳುದು—

ಭಾರತೀ. ಗುರುವನ. ನೆನೆದು । ವಿ. ಘ್ನಗಳ ನಿ.
ವಾರಿಸೆ. ನ್ನುತ ಒಲಿ. ದು.... । ಗಣ. ಪತಿಯನು.
ಸೇರಿ ಸಂ. ಸ್ತುತಿಯ ಗೈ. ದು.... ॥
ಚಾರು ಸುಗುಣ ವಿ. ಚಾರೆ ಜಾನಕಿ
ನಾರಿ ಋತುಮತಿ. ಯಾಗೆ ಶೋಭನ.
ಸಾರ ದಿವಸದಿ. ಯನುಜನಂದಾ.
ಭೂರಿ ವಿಭವದಿ. ಹೂ ಫಲವ ತಂದ. ॥
ಸಾರವನು. ಪೇಳಿ. ಪೊಗಳುವೆ (159)

## ನವಪದಿ ಪ್ರಭೇದಗಳು

1. ಇದು ಧವಳಾರದ ಹಾಡು. ಮುಡಿ, ವರಣಗಳಿವೆ. ಮೊದಲ ನಾಲ್ಕು ಸಾಲುಗಳಿಗೆ ವಿಳಂಬಗತಿ. ಮತ್ತೆ ನಾಲ್ಕಕ್ಕೆ ದ್ರುತಗತಿ. ಕೊನೆಗೆ ತ್ರಿಪದಿ ಮಕುಟ, ವಿಳಂಬಗತಿ. ವಿಳಂಬಗತಿಗಳ ಭಾಗ ಅಂಶಗಣಾತ್ಮಕ. ದ್ರುತಕ್ಕೆ 3, 4 ಮಾತ್ರೆಗಳ ಗಣಗಳು—

ಶ್ರೀರಮ. ಣಿಯನೊಡ. ಗೊಂಡು ಶ್ರೀ. ಕೃಷ್ಣನು.
ದ್ವಾರಕಿ. ಗೈತರ. ಲು.... । ವಾ. ರ್ತೆಯ ಕೇಳಿ.
ಶೂರಜ. ತೋಷದೊ. ಳು.... । ಪ. ಟ್ಟಣವ ಶೃಂ.
ಗಾರವ. ಗೈಸುತ. ಲು.... । ಸಕಲ. ವಿಭವದೊ. ಳು.... ॥
ನಾರಿಯರ ಕರ. ಕಲಶ ಕನ್ನಡಿ.
ಭೂರಿ ಮಂಗಲ. ವಾದ್ಯರವದಲಿ.
ಪೌರ ಪರಿಜನ. ಸಹಿತಿದಿರುಗೊಂ
ಡೋರಣದಿ ನಿಜ. ಮಂದಿರಕೆ ವಿ.॥
ಸ್ತಾರ ವೈ. ಭವದೀ. ನಡೆತಂದ (128)

2. ಮೊದಲ ನಾಲ್ಕು ಪಾದಗಳಿಗೆ ಅಂಶಗಣ, ವಿಳಂಬಗತಿ ; ಆ ಮೇಲೆ ನಾಲ್ಕು ಪಾದಗಳಿಗೆ ಚತುರ್ಮಾತ್ರಾಗಣ, ದ್ರುತಗತಿ. ಕೊನೆಯದು ತ್ರಿಪದಿಮಕುಟ. ವಿಳಂಬಗತಿಯುಳ್ಳುದು—

ಶ್ರೀಕರ. ಮುಖಿಯರೆ. ಲಾಲಿಸಿ. ಮಾತ.
ಯಾಕಿನಿ. ತೆಂಬಿರಿ. ಕಳವಳ. ಗೊಳುತ.
ಜೋಕೆಯೊ. ಳಡಗಿಸ. ಲೇಕೆ ಶ್ರೀ. ವರನ.
ಸೋಕಿದ. ಮೋಹವೆ. ನುಡಿಂಯುವ. ದೇನ ॥
ಆ ಕಮ. ಲಾಂಬಕ. ಶ್ರೀವಧು. ಮಿನ ಮುಖಾ
ಲೋಕನ. ದಿಂದಲೆ. ನಸುನಗೆ. ಬೀರುತ.
ನೇಕಾ. ಭರಣ ವಿ. ಭೂಷಿಸು. ತುಜ್ವಲ.
ದಾ ಖರ. ಕಾಂತಿಯಿಂ. ನಗಿಸುತ. ಮುದದಿಂ ॥
ದೀ ಕವೆಗ್ಯೆ. ತಹನು. ಶ್ರೀಧರನು (95)

ಇದೇ ರೀತಿ : 276

3. ಅಂಶಗಣಾತ್ಮಕ ; ಕೊನೆವರೆಗೆ ಒಂದೇ ಪಥದ ಮಧ್ಯಮಗತಿ ಮೂರು ಕಡೆ ಮುಡಿಯಿದೆ—

ಒಂದ್ನೇರು. ಬೆಳೆತಂ. ದರೆ ಸಾಕು. ಅದರೊಳ
ಗಂಜಿಕೆ. ಮಾಡನಂ. ತೇ....
ಒಂದು ಪಾವು. ಸಾರಿಗೆ. ಒಂದು ಪಾವು. ಹುಳಿಗೆ.
ಮರುವಾರಿಗೆ. ಮತ್ತಷ್ಟು. ಮಿಗಿಸುವ. ನಂತೆ.
ಕಂಗೆಡ. ಬೇಡಿ ಗಂ. ಡಗೆ ಧೈ. ರ್ಯವ ಹೇಳಿ.
ಕಂಗೆಡ. ದಿರು ಮಾ. ವನ ಸತಿ. ನಿನ್ನಂದ.
ಹಿತವರು. ಯಾರೆಮ. ಗೇ....
ತಂದಿದ್ದ ದೊಳಗಿಷ್ಟು. ಮಿಗಿಸಿ ತೋ. ರೆನುತಲೆ.
ಮಾನಾಭಿ. ಮಾನವ. ಕಾಯೆಂದ. ನು (143)

4. ಮೂರು ನಾಲ್ಕು ಮಾತ್ರೆಯ ಗಣಗಳಿಂದ ಕೂಡಿದ, ದ್ರುತಗತಿಯ ಎಂಟು ಪಾದಗಳು. ಮುಡಿ, ವರಣಗಳಿಂದ ಕೂಡಿ, ಕೊನೆಯ ಪಾದವು ತ್ರಿಪದಿ ಮಕುಟವಾಗಿ ವಿಳಂಬಗತಿಯಾಗಿ ಉಳ್ಳ ಹಾಡಿದು—

ಅಂಗಜನ ಮುಂ. ಗಯ್ಯ. ಗಿಣಿಯನು
ಸಿಂಗರವ ಮಾ. ಡಿ.... । ಮುದದಲಿ.
ರಂಗವಲಿಗಳ. ನಿಕ್ಕಿ. ನೋಡಿ ಬೆ.
ಡಂಗಿನಲಿ ಪಾ. ಡಿ.... । ಸುಧಮುನಿ
ಯಂಗನೆಯರಂ. ದೆಲ್ಲ ಶೋಭನ.

ಡಂಗುರದಿ ಗುರು. ಹಿರಿಯರಾ ಚರ.
ಣಂಗಳಿಂಗೆರ. ಗಿಸುತ ಪೊಗಳುತ.
ಮಂಗಳಾಂಗನೆ. ಯನ್ನು ಸೇಸೆಗ.
ಳಿಂಗಿತ ವೈ. ಭವದಿ. ಕುಳಿಸ್ಯಾರು (156)

ಇದೇ ರೀತಿ : 161,

5, ಹಿಂದಿನದೇ ಧಾಟಿ ಮತ್ತು ಛಂದಸ್ಸು, ಆದರೆ ಅದರಂತೆ ಎರಡನೆ ಮತ್ತು ನಾಲ್ಕನೆ ಪಾದಗಳಲ್ಲಿ ವರಣವಿಲ್ಲ, 2,4, ಪಾದಾಂತ್ಯದಲ್ಲಿ ಮುಡಿ ಇದೆ, ತ್ರಿಪದಿ ಮಕುಟವಿದೆ—

ಹಸ್ತಿವದನಗೆ. ಮಸ್ತಕವನತಿ.
ಭಕ್ತಿಯಿಂದಲಿ. ಬಾಗು. ವೇ....
ಚಿತ್ತಜನ ಪಿತ. ಚಿನ್ಮಯಾತ್ಮನ
ಸತ್ಯದಲಿ ಕೊಂ. ಡಾಡು. ವೇ....
ಗೋತ್ರಧರನು ಕ. ಳತ್ರ ಮೇನಕಿ
ಪುತ್ರಿ ಪಾರ್ವತಿ. ಗೊಲಿದು ನಾನಾ.
ವಸ್ತ್ರ ವಾಹನ. ಮೈಯ ಭೂಷಣ.
ಮುತ್ತು ಮಾಣಿಕ. ರತ್ನ ಬಳಿವರಿ. ॥
ಯಿತ್ತ ಸಂ. ಭ್ರಮವ. ಪೊಗಳುವೆ (127)

6. ಆರು ಮಾತ್ರೆಯ ಗಣಗಳಿಂದಾದ ರಚನೆ, ರೂಪಕ ತಾಳದ ಲಯ, ಮಧ್ಯಮಗತಿ. ಕೊನೆಯ ಪಾದ ತ್ರಿಪದಿ ಮಕುಟ, ವಿಳಂಬಗತಿ. ಪಾದಾಂತ್ಯ 1, 2, 4, 6—ಇವು ಗುರು

ಶ್ರೀಗಿರಿಜೆಯ. ಶಶಿಧರನು....
ರಾಗರಸದಿ. ವರಿಸಿದನು.
ಆಗಮೋಕ್ತ. ವಾಗಿ ಮದುವೆ.
ಯಾಗಿ ವೇದ. ಘೋಷದಿ....
ಆಗ ಯೋಗಿ. ಯೋಗ ವಿಪ್ರ
ಸಾಗರ ವಿ....ಲಾಸದಿ....
ಭೋಗಿ ಭೂಷ. ನಾಗಿ ಮೆರೆವ.
ನಾಗಚರ್ಮಾಂ. ಬರಗೆ ಶಿವಗೆ. ॥
ಬೇಗ ಮಂತ್ರಾ. ಕ್ಷತೆಯ. ತಳಿದರು. (72)

## ದಶಪದಿ ಪ್ರಭೇದಗಳು

1. ಇದು ತ್ರಿಪದಿಮಕುಟವುಳ್ಳ ಧವಳಾರ. ಮುಡಿ, ವರಣವುಳ್ಳದು. ಮೊದಲ ಐದು ಪಾದಗಳಿಗೂ ಕೊನೆಯ ಪಾದಕ್ಕೂ ಅಂಶಗಣಗಳು, ವಿಳಂಬಗತಿ. ಐದನೆ ಪಾದದ ಕೊನೆಯ ವರಣದಿಂದ ಪ್ರಾರಂಭಿಸಿ ಒಂಬತ್ತನೆ ಪಾದಾಂತ್ಯದ ವರೆಗೆ 3, 4 ಮಾತ್ರೆಯ ಗಣಗಳಾಗಿ ಮೃತಗತಿಯಿರುತ್ತದೆ. ಅನುಪ್ರಾಸ ಅಂತ್ಯಪ್ರಾಸಗಳ ಸೊಬಗೂ ಇದೆ—

ಶ್ರೀಕರ. ಪ್ರಭವ ಪ್ರ. ಭಾಕರ. ವಿಭವ ಶು.
ಕ್ಲಾ ಕಾರಾಂ. ಬರ ಸಾಕಾ. ರ.... । ಪ್ರ. ಮೋದೂತ.
ಭೀಕರ. ಕರುಣಾಕ. ರ.... । ಪ್ರ. ಜೋತ್ಪತ್ಯ.
ದಾಕಾರ. ಣಾತ್ಮಾಕಾ. ರ.... । ಅಂ. ಗೀರಸ
ಶ್ರೀಕರ. ಮತ್ಸ್ಯಕಾ. ರ.... ॥ ತಾಳ್ದ. ಸುವಿಚಾ. ರ....
ತಾ ಕರದೊಳಾ. ನಿಗಮತಸ್ಕರ.
ಣಾ ಕರನ ಸಂ. ಹಾರಗೈದ ಕೃ.
ಪಾ ಕರನೆ ಸ. ತ್ಯವ್ರತಾತ್ಮ ಸು.
ಧಾ ಕರದೆ ಭೋ. ಧಿಸಿದ ವರ ಮಕ ॥
ರಾ ಕರನಿ. ವಾಸ. ಹಸೆಗೇಳು (101)

2. ಮೇಲಿನದೆ ಛಂದಸ್ಸು ಮತ್ತು ಧಾಟಿ. ಆದರೆ ಮೊದಲ ಎರಡು ಪಾದಗಳೂ ಒಂದೇ ರೀತಿ ಇವೆ—

ಶ್ರೀ ಗುರು. ಗಣಪರ. ಶೀಘ್ರದಿ. ನೆನೆಯುತ್ತ.
ಯೋಗ ಮ. ಹೇಶ್ವರಿ. ಯೊಳು ಮತಿ ಬೇಡುತ್ತ.
ಈಗ ನಾ. ನುಸುರುವೆ. ನು.... । ಇಂ. ದಿರೆ ಕೈಯೊಳ್
ಹೂಗಿನ. ಮಾಲೆಯ. ನು.... । ಪಿ. ಡಿದು ನಸು.
ಬಾಗಿ ಲ. ಜ್ಜಿಸುತ ತಾ. ನು.... ॥ ದೇ ವಾಸುರರನು ॥
ಆಗ ಮಂಗಳ. ಹಾವ ಭಾವದಿ.
ನಾಗ ಕಂಡಳು. ಬ್ರಹ್ಮನಂದವ.
ಈಗಳಿವ ಬಲು. ವೃದ್ಧನೆನಗೆ ಸ.
ರಾಗವಾಗದೆ. ನುತ್ತಲಿಂದ್ರನ ॥
ಬಾಗಿ ನೋ. ಡಿದಳು. ನಲವಿಂದ (64)

3. ಮೂರು ನಾಲ್ಕು ಮಾತ್ರೆಗಳ ಗಣಗಳ ಮೊದಲ ಎಂಟುಪಾದಗಳು ; ಅವಕ್ಕೆ ದ್ರುತಗತಿ. ಮುಡಿ, ಅಂತರ್ಯತಿ ಮತ್ತು ವರಣಗಳಿವೆ. ಕೊನೆಗೆ ತ್ರಿಪದಿ ಮಕುಟ, ವಿಳಂಬ ಗತಿ—

ಶಾರದಾಂಬೆಯ. ಪಾದಕೆರಗುವೆ. ನು.... । ಶ್ರೀ. ಗುರುವಿನಂಘ್ರಿಯ.
ಸಾರಿ ನಾ ಸ. ನ್ನುತಿಯ ಬೇಡುವೆ. ನು....
ಚಾರು ತರದ ವಿ. ವಾಹ ಮಂಟಪ.
ದೋರಣದಿ ನೆರೆ. ದಿರುವ ಸಭೆಯಲಿ.
ನಾರಿ ಪುರುಷರು. ಮಗಮಗಿಪ ಕ
ಸ್ತೂರಿ ಮಲ್ಲಿಗೆ. ಯರಲ ಜನರಿಗೆ
ಹಚ್ಚಲು.... । ಸಭೆ. ಯೊಳಗೆ ಸರ್ವರು.
ಮೆಚ್ಚಲು.... । ಪರಿ. ಮಳವು ನಾಸಿಕ.
ಚುಚ್ಚಲು.... । ಸಂ. ಭ್ರಮದಿ ಪುಷ್ಪವ ॥
ಭೂರಿ ಸಭೆ. ಗೆಲ್ಲ. ಕೊಡಿಸ್ಯಾರು. (47)

4. ಅಂಶಗಣಾತ್ಮಕವಾಗಿ ಮಧ್ಯಮಗತಿಯ ಅಷ್ಟತಾಳದ 9 ಪಾದಗಳು, ವರಣಗಳಿಂದ ಕೂಡಿವೆ. ವಿಳಂಬಗತಿ, ತ್ರಿಪದಿ ಮಕುಟವುಳ್ಳುದು, ಛಂದೋ ವೈಶಿಷ್ಟ್ಯವುಳ್ಳ ಧವಳಾರ—

ಇನಜನಿ. ಗಾಗಿ ವಾ. ಲಿಯ ಕೊಂ. ದವಗೇ
ವನಧಿಯ. ಕಪಿ ಸೇನೆ. ಯಿಂದ ಕ. ಟ್ಟಿದಗೇ
ಹನುಮನೊ. ಡನೆ ಖಳ. ಪುರವನು. ದಹಿಸೀ.
ದನುಜದ. ಶಾನನ. ನನ್ನು ನಿ. ಗ್ರಹಿಸೀ.
ಮುನಿದಾ. ಕುಂಭ ಶ್ರವಣನ. ಮರ್ದಿಸಿ.
ವಿನಯದಿ. ಶರಣನ. ಕುವಲಯ. ಪಟ್ಟದೊ
ಳಿರಿಸೀ । ಶೋಧಿಸುತಾ. ಸೀತೆಯ.
ಪೆರಸೀ । ಅ. ಯೋಧ್ಯಾ. ವನಿಯೊಳು.
ನೆಲಸೀ । ಇಹ. ಸೀತಾರಾಮಗೆ ॥
ವನಜದಾ. ರತಿಯಾ. ಬೆಳಗಿರೇ

## ಏಕಾದಶಪದಿ ಪ್ರಭೇದಗಳು

1. ಅಂಶಗಣಾತ್ಮಕವಾಗಿ ವಿಳಂಬಗತಿಯ ಮೊದಲ ಎರಡು ಪಾದಗಳು. ಅನಂತರ ನಾಲ್ಕು ಮಾತ್ರೆಯ ಗಣಗಳ ದ್ರುತಗತಿಯ 6 ಪಾದಗಳು, ಅನಂತರ

ನಾಲ್ಕು ಮಾತ್ರೆಯ ಗಣಗಳ ಮಧ್ಯಮಗತಿಯ ಎರಡು ಪಾದಗಳು. ಕೊನೆಯ ಪಾದ ವಿಳಂಬಗತಿಯ ತ್ರಿಪದಿ ಮಕುಟವಾಗಿದೆ. ಅಂತರ್ಯತಿಯಿದೆ. ಎಂಟನೆಯ ಪಾದದ ಕೊನೆಗೆ ವರಣವುಳ್ಳ ಹಾಡು—

ಘೋರೆಂಬ. ನಾದ ಬ್ರ. ಹ್ಮವೊ ವಾದ್ಯ. ರವವೋ
ಸಾರೆಂಬ. ಶಾಸ್ತ್ರದು. ಚ್ಚರವೋ ಗಾ. ಯನ ವೋ ॥
ಸಾರುವ. ದೆನುತಜ. ಹರಸುರ. ಪಾದಿ.
ಭೂರಿ ದಿ. ಪೌಕಸ. ತತಿ ವೋ. ಪನದಿ.
ಸೇರಿರೆ. ಸಭೆಯೊಳು. ಚಾರು ಮು. ನೀಶ ಕು.
ಮಾರನ. ದಕ್ಷಿಣ. ಭಾಗದ. ತೊಡೆಯೊಳು ॥
ಏರಿಸಿ. ಮುಗ್ಧ.... ಭಾವದಿ.
ಸಾರುವ. ಶ್ರುತಿ ಮು. ಹೂರ್ತದೀ । ಸಲೆ. ಕರ್ಣ ಯುಗದಿ. ॥
ರಾರಾ. ಜಿಪ ವೋಂ. ಕಾರವ. ಕಾರವು.
ಕಾರ ಮ. ಕಾರ. ಬ್ರಹ್ಮವ. ಸಾರಿದ ॥
ಭೂರೀ ಜನ. ಚೋದ್ಯ. ಶ್ರುತಿ ವೇದ್ಯ (196)

2, ಹಿಂದೆ ಉದಾಹರಿಸಿದ(ಪುಟ 558) ದಶಪದಿ ಒಂದನೆಯ ಮಟ್ಟಿನಲ್ಲಿಯೇ ಪ್ರಾರಂಭ. ವರಣ, ಮುಡಿಯುಕ್ತ. ನಾಲ್ಕನೆ ಪಾದದ ವರೆಗೆ ವಿಳಂಬಗತಿ, ನಾಲ್ಕನೆ ಪಾದದಲ್ಲಿರುವ ವರಣದಿಂದ ದ್ರುತಗತಿಯ 3, 4 ಮಾತ್ರಾಗಣಗಳು. ಅಂತರ್ಯತಿ, ತ್ರಿಪದಿ ಮಕುಟವುಳ್ಳ ಹಾಡು—

ಶ್ರೀಮಹಾ. ಮಾಯೆ ಭ. ವಾನಿ ಭಾ. ರ್ಗವಿ. ಗೌರಿ
ಹೈಮಾವ. ತೀಶ್ವರಿ, ಗೇ.... । ಉಮೆ. ಶಾರದಾಂಬ.
ರಾಮಣೀ. ಯಕರೂಪೆ. ಗೇ.... । ದಾಕ್ಷಾ. ಯಣಿಸು.
ತ್ರಾಮಾದಿ. ವಂದಿತೆ. ಗೇ.... । ಸೋಮ ಸೋದರಿಗೆ ॥
ಸೋಮುವದನೆ ಸು. ಚಾರು ಚರಿತೆಗೆ.
ಸೋಮಸೂರ್ಯಾ. ನಲ ತ್ರಿನೇತ್ರೆಗೆ.
ಕಾಮಜನನಿ ಕೃ. ಪಾಂಗಿ ಭೈರವಿ.
ಧಾಮನಿಧಿ ತ್ರೈ. ಲೋಕ್ಯ ಸಂರ.
ಕ್ಷಾಮಣೀ.... । ಕಾ. ತ್ಯಾಯಿ. ನೀ.... । ಗಜ
ಗಾಮಿನೀ.... । ಪಾ. ವನ ಸ್ವರೂಪೆಗೆ ॥
ಹೇಮದಾ. ರತಿಯಾ. ಬೆಳಗಿರೇ (244)

3. ಈ ಗ್ರಂಥದಲ್ಲಿ ಬಂದಿರದಿದ್ದರೂ ಉಪಲಬ್ಧವಿರುವ ವೈಶಿಷ್ಟ್ಯಪೂರ್ಣ ದಾಟಿಯ ಒಂದು ಏಕಾದಶಪದಿ. ಅಷ್ಟತಾಳ ಏಕತಾಳಗಳಲ್ಲಿ ಮಧ್ಯಮಗತಿಯುಳ್ಳದು. ಮುಡಿಯಿದೆ. ಕೊನೆಗೆ ವಿಳಂಬಗತಿಯ ತ್ರಿಪದಿ ಮಕುಟವಿದೆ. ಮೊದಲಿನ ನಾಲ್ಕು ಪಾದಗಳಿಗೂ ಒಂದೊಂದೇ ಗಣ. ಪಾದಕ್ಕಿಂತ ವರಣ ದೊಡ್ಡದು. ಶೋಭಾನೆಯ ರಚನೆಯ ವೈಶಿಷ್ಟ್ಯ ಪರಿಚಯಕ್ಕಾಗಿ ಕೊಡಲಾಗಿದೆ. ಗಣಪರಿವೃತ್ತಿಯನ್ನೂ ಇಲ್ಲಿ ಕಾಣಬಹುದು—

ಬಂದನು । ವರ. ಪಂಚವ. ಟ್ಯದೊಳು.
ನಿಂದನು । ಮಾ. ರೀಚ ಖ. ಳಾದ್ಯರ.
ಕೊಂದನು । ಸಾ. ಗರವನು. ದಾಟುತ.
ಬಂದನು । ದಶ. ಶಿರವೊದ. ಲಾದರ. ॥
ಕೊಂದು ಸತಿಯುತಂ. ದ.... । ಶೋ. ಧಿಸಿ ಬಳಿ. ಕಗ್ನಿಯೊ.
ಳಂದು ಪೊಗಿಸಿ ಕೊಂ. ಡ.... । ಶರ. ಣಗೆ ಸ್ಥಿ ರ. ಪಟ್ಟವ.
ನಂದು ಕೊಡುತ ಬಂ. ದ.... । ಸಂಭ್ರಮದೊಳ. ಯೋಧ್ಯೆಗೆ.
ಚಂದದಿಂದ ಬಂ. ದ— । ರಾಘವ.
ಗಂದು ಪಿ. ನೋದದಿ. ಸನಕಾ. ದಿಗಳತಿ.
ಚಂದದಿ. ಮಂತ್ರಾ. ಕ್ಷತೆ ವೇ. ದೋಕ್ತಗ. ॥
ಳಿಂದ ಜಯ. ವೆಂದು. ತಳಿದರು

## ದ್ವಾದಶಪದಿ ಪ್ರಭೇದ

1. ಅಂಶಗಣ ಮಾತ್ರಾಗಣ ಮಿಶ್ರಿತವಾಗಿ ಅಷ್ಟತಾಳ ಲಯದ ಮಧ್ಯಮಗತಿ ಯುಳ್ಳದು. ಕೊನೆಯ ಪಾದ ಮಾತ್ರ ತ್ರಿಪದಿ ಮಕುಟದ ವಿಳಂಬಗತಿಯದು. ದಪ್ಪಕ್ಷರದ ದೀರ್ಘಾಕ್ಷರಗಳನ್ನು ಇನ್ನಷ್ಟು ಎಳೆದುಕೊಳ್ಳಬೇಕು—

ಶ್ರೀಗುರು. ವಿನ ಚರ. ಣಾಂಬುಜ. ದಲಿ ತಲೆ
ವಾಗಿ ವಾ. ಣಿಯ ಕೊಂ. **ಡಾಡುತ.**
ರಾಗ ರ. ಸಾನ್ವಿತ. ನಾಗಿ ಹೇ. ರಂಬನ.
ನಾಗವೋ. ಕ್ತದಿ ನುತಿ. **ಮಾಡುತ.**
ಯೋಗಿನಿ. ಯನು ಸಿದ್ಧಿ. ಗಣಪತಿ. ಗೊಲಿದು ಸ.
ರಾಗದಿ. ಪರಿಣಯ. ಮಾಡಬೇ. ಕೆನುತಲೆ.
ಭೋಗಿ ಭೂ. ಷ ಣನು. **ಲ್ಲಾಸದಿ.**

ನಾಗ ಶ. ಯನನೊಳು. ಸ್ನೇಹದಿ.
ಬೇಗ ನಿ. ರ್ಣಯಿಸಿ ವಿ. ಲಾಸದಿ ॥
ಆಗಮೋ. ಕ್ತದಿ ಸಮಾ. ವರ್ತನೆ. ಗೈಸಿ ಸ.
ರಾಗದಿ. ದಿಬ್ಬಣ. ದ್ವಾರಕೆ. ಗೈತಂ ॥
ದಾಗಮವ. ಪೇಳಿ. ಪೊಗಳುವೆ (27)

## ತ್ರಯೋದಶಪದಿ ಪ್ರಭೇದ (ಈ ಸಂಕಲನದಲ್ಲಿಲ್ಲ)

1. ಮೊದಲ 12 ಪಾದಗಳಿಗೆ 3, 4 ಮಾತ್ರಾಗಣಗಳು ದ್ರುತಗತಿ. ತ್ರಿಪುಟೆ ತಾಳದ ಲಯವುಳ್ಳದು. ಮುಡಿ, ವರಣ ಅಂತರ್ಯತಿಯುಕ್ತ. ಕೊನೆಯ ಸಾಲು ತ್ರಿಪದಿ ಮಕುಟವಾಗಿ ವಿಳಂಬಗತಿ—

ಚಿತ್ರ ತರ ಚಿ. ಪ್ಪರದ ಮಧ್ಯದಿ.
ಚಿತ್ರದೊಳು ಮೆರೆ. ವ.... । ಬಹುವಿಧ.
ಚಿತ್ರ ರಚನೆಗ. ಳಿಂದಲತಿಶಯ.
ವೆತ್ತು ರಾಜಿಸು. ವ.... । ಮಣಿಮಯ
ತೆತ್ತಿಸಿದ ರತ್ನ. ಸ್ಲರಿಯ ಸೊಬಗಿನ.
ವೊತ್ತ ಶೋಭಿಸು. ವ.... । ಮಾಣಿಕ.
ರತ್ನ ರತ್ನದ. ವಿಧ ವಿಧದ ಬಲು.
ವಿಸ್ತರದಿ ಮೆರೆ. ವ.... । ನೋಡುತ.
ಸುತ್ತುಮುತ್ತಿಗೆ. ಪೂಗಪುಷ್ಪಗ
ಳೊತ್ತವೊತ್ತಿಗೆ. ಪತ್ರಫಲಗಳು
ವಿಸ್ತರದಿ ರಾ. ಜಿಸುವ ಮಂಟಪ.
ದೊತ್ತಿನಲಿ ಹರಿ. ಪತ್ನಿ ಸಹಿತಲೆ ॥
ಮುತ್ತಿನ ಹಂ. ದರವ. ಬಲವಂದ

## ಚತುರ್ದಶಪದಿ ಪ್ರಭೇದ (ಈ ಸಂಕಲನದಲ್ಲಿಲ್ಲ)

1. ಮಧ್ಯಮಗತಿಯ 3, 4 ಮಾತ್ರಾಗಣಗಳು ; ವರಣ, ಮುಡಿ, ಅಂತರ್ಯತಿ ಯಮಕಗಳುಳ್ಳದು—

ಗುರುಚಿದಾನಂ. ದಾದಿ ಮೂರ್ತಿಯ.
ಸ್ಮರಿಸಿ ಬಲವಂ. ದು.... । ವಾಣಿಯ.

ಚರಣ ಪಂಕಜ. ಕೆರಗಿ ಲಬೆಂಓೀ.
ದರಗೆ ಶರಣೆಂ. ದು.... । ಶಂಕರ.
ಕರುಣದಿಂ ಗಿರಿ. ರಾಜಕುವರಿಯ.
ವರಿಸಿ ಬಂದು ಗೃ. ಹ ಪ್ರವೇಶವ.
ವಿರಚಿಸಲು ವರ. ಸಿದ್ಧ ಸುರಮುನಿ
ವರರುರಗ ಗಂ. ಧರ್ವ ಯಕ್ಷರು
ವರಿಪರಿಯ ಸ. ದ್ಭಕ್ತಿಯಿಂದಲಿ ॥

ಸ್ಮರಿಸಲು.... । ಸಿರಿ. ಮುಡಿಗೆ ಹೂಮಳೆ.
ಸುರಿಸಲು.... ।ವಾ. ಗ್ದೇವಿ ಹರುಷವ.
ಧರಿಸಲು.... । ಉಮೆ. ಯಷ್ಟಸಿದ್ಧಿಯ.
ಭರಿಸಲು.... । ಪಾ. ರ್ವತಿಗೆ ಮೇಲುದ ॥
ಶರಧಿ ಸಂ. ಜಾತೆ. ತೊಡಿಸ್ಯಾಳು

**ಪಂಚದಶಪದಿ**

1. ಹದಿನಾಲ್ಕು ಪಾದಗಳಿಗೆ 3, 4 ಮಾತ್ರಾಗಣಗಳು, ಮಧ್ಯಮಗತಿ ಅಷ್ಟ ತಾಳದ ಅಥವಾ ತ್ರಿವುಡೆಯ ಲಯ. ಮುಡಿ, ವರಣಯುಕ್ತ. ಕೊನೆಗೆ ತ್ರಿಪದಿ ಮಕುಟದ ವಿಳಂಬಗತಿಯುಳ್ಳ ಹಾಡಿದು—

ಎತ್ತ ಪೋದನೊ. ಮುದ್ದು ಬಾಲಕ. ನು.... । ಬಹು. ಸುಂದರಾಂಗನು.
ಇತ್ತ ಕಾಣದೆ. ತೋಷವಹುದೇ. ನು.... ॥
ಎತ್ತ ಚಪ್ಪರ. ವೆತ್ತ ಚಾವಡಿ.
ಯೆತ್ತ ಮಂಟಪ. ವತ್ತ ಪರಿಕಿಸ.
ಲರ್ಥಿಯಿಂ ಮುದ. ವೆತ್ತು ನುಡಿಯುವ.
ವತ್ಸನಹ ಪುರು. ಷೋತ್ತಮನ ನೀವ್ ॥
ತೋರಿಸಿ.... । ಬಲು. ದಯವನೆಮ್ಮೊಳು.
ತೋರಿಸಿ.... । ಸಂ. ತಸವ ಪಡಿಪುದು.
ಮೀರಿಸಿ.... । ಬಳ. ಲಿಸುವಿರೇತಕೆ
ಸಾರಿಸಿ.... । ಸಂ. ಮುದದಿ ಬರಿಸಿ ॥
ನಿತ್ಯದಧಿ ಘೃತ. ಕ್ಷೀರ ಕದಳಿಯ.
ನರ್ಥಿಯಿಂ. ಮಧು. ಬೆಣ್ಣೆ ಸಕ್ಕರೆ.

ಯೊತ್ತಿ ಭುಂಜಿಸಿ. ಸರಸ ಬೀರುತ.
ಮತ್ತುಕಾಶಿನಿ. ಗೊಲಿದವನ ಮುದ ॥
ವೆತ್ತು ಸೀ. ರೆಯರೇ. ತೋರಿರೀಗ (94)

## ಧವಳ ಶೋಭಾನೆ ವಿಚಾರ :

ಶೋಭಾನೆಗಳಲ್ಲಿ ಸರಳಾರ, ಧವಳಾರ (ಧವಳ) ಎಂಬ ಪ್ರಭೇದವಿರುವುದನ್ನು ಓಂದಯೇ ತಿಳಿಸಿದೆ. ಅವುಗಳಲ್ಲಿ 'ಸರಳಾರ' ಎಂಬುದು ಪಲ್ಲವಿಯುಕ್ತವಾದುದು. ಅದರ ಸೊಲ್ಲು ಸೊಬಗಿನ ಸೋನೆಯಂತೆ, ಅಥವಾ ಅಂಶಗಣದ ಶರಷಟ್ಪದಿಯಂತೆ ಇರುವುದನ್ನು ವಿಶದಪಡಿಸಲಾಗಿದೆ. ಧವಳ (ಧವಳಾರ) ಶೋಭಾನೆ ಪಲ್ಲವಿರಹಿತ. ಸೊಲ್ಲಿನ ಕೊನೆಗೆ ವಿಕಲ್ಪವಾಗಿ 'ಶೋಭಾನೆ' ಎಂಬ ಮಕುಟಪದವನ್ನು ಹೇಳಿಕೊಳ್ಳು ವುದೂ ಉಂಟು. ಶೋಭಾನೆಗಳಲ್ಲಿ ಇದು ಆರತಿ ಬೆಳಗುವ (ಧವಳಿಸುವ) ಹಾಡು. ದೇವರಿಗೆ, ವಧೂವರರಿಗೆ, ವಿಶೇಷ ಸಂದರ್ಭದಲ್ಲಿ ಸ್ತ್ರೀಗೆ ಇಲ್ಲವೇ ಪುರುಷನಿಗೆ ಆರತಿ ಮಾಡುವಾಗ ಹಾಡುವಂತಹದು. ದಿವ್ಯ ಮಹಿಮೆಯನ್ನು ಅಥವಾ ಉನ್ನತ ಜೀವನದ ಜಯವನ್ನು ಕೀರ್ತಿಯನ್ನು ಧವಳಿಸುವ ಸಾಂಕೇತಿಕವಾಗಿ ಈ ಹಾಡಿಗೆ ಧವಳ (ಧವಳಾರ) ಎಂಬ ಹೆಸರು ಬಂದಿರಬೇಕು. ಇಂತಹದೇ ಧಾಟಿ ಛಂದಸ್ಸುಗಳನ್ನು ಇತರ ಹಾಡು ಗಳಿಗೂ ಅಂದರೆ—ಹಸೆಗೆ ಕರೆಯುವದು, ಬಾಗಿಲು ತಡೆಯುವದು—ಮುಂತಾದವಕ್ಕೂ ಬಳಸಲಾಗಿರುವುದರಿಂದ ಧವಳಾರದ ಹಾಡುಗಳೆಲ್ಲವೂ ಆರತಿ ಬೆಳಗುವ ಹಾಡುಗಳಲ್ಲ. ಇದೇ ಅಧ್ಯಾಯದಲ್ಲಿ ಹಿಂದೆ ಧಾಟಿ–ಛಂದಸ್ಸುಗಳಿಗಾಗಿ ಉದಾಹರಿಸಿರುವ ಪಂಚಪದಿ ಯಿಂದ ಪ್ರಾರಂಭಿಸಿ ಪಂಚದಶಪದಿಯ ವರೆಗಿನವು ವೈವಿಧ್ಯಮಯವಾದ ಧವಳ ಶೋಭಾನೆಗಳ ವರ್ಗಕ್ಕೆ ಬರುತ್ತವೆ.

ಯಕ್ಷಗಾನ ಕೃತಿಗಳಲ್ಲಿ ಧವಳಾರ (ಡವಳಾರ) ಎಂಬ ಶೀರ್ಷಿಕೆಯನ್ನುಳ್ಳವಾಗಿ ಕಥಾಂತ್ಯದಲ್ಲಿ ಆರತಿ ಬೆಳಗುವ ಹಾಡುಗಳಿರುತ್ತವೆ. ಅವುಗಳಲ್ಲಿ ಒಂದನ್ನು ಈ ಮೊದಲೇ ಉದಾಹರಿಸಲಾಗಿದೆ (ಪುಟ 511). ಪ್ರಕೃತ, ಧವಳ, ಇಲ್ಲವೆ ಧವಳಾರ ಎಂಬುದು ಒಂದು ಬಗೆಯ ಛಂದಸ್ಸೂಚಕವೆ ? ಅಥವಾ ಅದು ಒಂದು ಪ್ರಕಾರದ ಹಾಡಿನ ಸೂಚಕವೆ ? ಎಂಬ ಪ್ರಶ್ನೆಯ ಉತ್ತರ ವಿವರಣೆಗಾಗಿ ಕಾದಿರುವುದು ಸಹಜ.

ಧವಳ ಹಾಡಿನ ವಿಷಯದಲ್ಲಿ ಅಭ್ಯಾಸಿಕರ ಕುತೂಹಲವನ್ನು ಮೊತ್ತಮೊದಲು ಸೆಳೆದವರು ಡಿ. ಎಲ್. ನರಸಿಂಹಾಚಾರ್ಯರು. ಅವರು 'ಶ್ರೀ ಪಂಜೆಯವರ ನೆನಪಿಗಾಗಿ' (1952, ಪುಟ 190–194) ಎಂಬ ಸ್ಮರಣ ಗ್ರಂಥದಲ್ಲಿ "ಧವಳವೆಂಬ ಹಾಡಿನ ಸ್ವರೂಪ" ಎಂಬ ಲೇಖನ ಬರೆದಿದ್ದಾರೆ. ಅದು ಅವರ 'ಪೀಠಿಕೆಗಳು

ಲೇಖನಗಳು' ಎಂಬ ಬೃಹದ್ಗ್ರಂಥದಲ್ಲಿ (1971, ಪುಟ 679–87) ಮತ್ತೆ ಅಚ್ಚಾಗಿದೆ. ಈ ಲೇಖನದಲ್ಲಿ ಉಕ್ತವಾದ ಮಾತುಗಳಿವು—"ಅದು (ಧವಳ ಎಂಬುದು) ಮಂಗಳದ ಸಮಯದಲ್ಲಿ ಆರತಿ ಎತ್ತುವಾಗ ಹೆಣ್ಣು ಮಕ್ಕಳು ಹೇಳುವ ಹಾಡೆಂಬುದರಲ್ಲಿ ಸಂದೇಹವಿಲ್ಲ.[14] ಈಗಲೂ ಹೆಣ್ಣು ಮಕ್ಕಳು ಹೇಳುವ ಹಾಡುಗಳಲ್ಲಿ ಧವಳಗಳು ಅಲ್ಲಲ್ಲಿ ಹುದುಗಿರಬಹುದು."

ಇದೇ ಲೇಖನದಲ್ಲಿ ಕೆಲವು ಧವಳಗೀತಗಳನ್ನು ಅವರು ಉದಾಹರಿಸಿದ್ದಾರೆ. ಡಿ.ಎಲ್.ಎನ್. ಅವರು ಧವಳಿಕ್ಕೆ ಆರು ಮಾತ್ರೆಯ ಗಣಗಳೆಂದು ಅಭಿಪ್ರಾಯ ಮಾಡಿದ್ದಾರೆ. ಕುವೆಂಪು, ಪು.ತಿ.ನ.—ಇವರ ಆಧುನಿಕ ಕವಿತೆಗಳಲ್ಲಿ ಈ ಬಗೆಯ ಮಾತ್ರಾಗಣಗಳಿರುವವನ್ನು ಧವಳಗಳೆಂದು ಅವರು ಗುರುತಿಸಿದ್ದಾರೆ. ಆದರೆ, ಆ ಉದಾಹರಣೆಗಳಲ್ಲಿ ಯಾವುದೊಂದೇ ಆದರೂ "ಮಂಗಳದ ಸಮಯದಲ್ಲಿ ಆರತಿ ಎತ್ತುವಾಗ ಹೆಣ್ಣು ಮಕ್ಕಳು ಹೇಳುವ" ಹಾಡಿನ ಸೊಲ್ಲಲ್ಲ. ಧವಳಿಸುವ (ಬೆಳಗಿರೇ) ಎನ್ನುವ ಮಕುಟಪದವೂ ಅವಕ್ಕಿಲ್ಲ. ಲೇಖಕರು ತಮ್ಮ ಅದೇ ಲೇಖನದಲ್ಲಿ ಮದ್ರಾಸ್ ಓರಿಯಂಟಲ್ ಲೈಬ್ರರಿಯ ಕನ್ನಡ ಕೈಬರೆಹದ ಗ್ರಂಥಸೂಚಿಯಿಂದ ಒಂದು ಧವಳ ಪದ್ಯವನ್ನು ಆರಿಸಿಕೊಟ್ಟಿದ್ದಾರೆ. ಅದು ಹೀಗಿದೆ—

ತನ್ನ ಕುಲದ. ಹಿರಿಯರನು.  
ಮನ್ನಿಸಿ ಕರೆ. ಯಿಸಿ ಮನೆಗೆ  
ಬಿನ್ನವಿಸಿದ. ನವರಿಗೆ  
ತನ್ನಂತಸ್ಥ. ವನ್ನು

ಇದಲ್ಲದೆ, ಬಿ.ಎಂ.ಶ್ರೀ.ಯವರ ಕವನಗಳಲ್ಲಿ ಒಂದನ್ನು ಪಾದ ವಿಂಗಡಣೆಯಲ್ಲಿ ವ್ಯತ್ಯಾಸ ಮಾಡಿದರೆ ಧವಳವಾಗುತ್ತದೆ ಎಂದಿದ್ದಾರೆ. ಪಾದ ವ್ಯತ್ಯಾಸ ಮಾಡಿದಾಗ ಅದು ಹೀಗಾಗುತ್ತದೆ—

ಚೆಲ್ವಿನ ನೆಲೆ. ಕಣ್ಗಳ ಬಲೆ  
ಸುಖದೊರತೆಯ. ಬನವಾಸೀ.  
ಬಳೆದಲೆದಾ. ಕಾನ್ಮಲೆಗಳ ನಾನ್  
ಮರೆವೆನೆ ಬನ. ವಾಸೀ

ಮುಂದೆ ನಿರ್ಣಾಯಕವಾಗಿ ಡಿ.ಎಲ್.ಎನ್. ಅವರು ಎಂದಿರುವ ಮಾತುಗಳಿವು : "ಈ ಲಕ್ಷಣವನ್ನು ಇನ್ನೂ ಹೆಚ್ಚು ಪರಿಷ್ಕಾರವಾಗಿ ಹೇಳುವುದಕ್ಕೆ ಹಲವಾರು ಲಕ್ಷ್ಯಗಳು ದೊರೆತಾಗ ಸಾಧ್ಯವಾಗಬಹುದು. ಕನ್ನಡದ ಯಕ್ಷಗಾನಗಳನ್ನೂ ಹೆಣ್ಣು ಮಕ್ಕಳ ಹಾಡುಗಳನ್ನೂ ಬೆದಕಿ ನೋಡಿದರೆ, ಧವಳದ ಹಾಡುಗಳು ಇನ್ನೂ ಹೇರಳವಾಗಿ ಸಿಕ್ಕ

ಬಹುದು. ಹಾಗೆ ದೊರೆತಾಗ ಆ ಹಾಡು ಮಾತ್ರಾಗಣ ಘಟಿತವಾದದ್ದೇ, ಅಂಶಗಣ ಘಟಿತವಾದದ್ದೇ ಎಂಬ ವಿಚಾರಕ್ಕೆ ಅವಕಾಶವಾಗುವುದಲ್ಲದೆ ಅದು ಆರಂಭದಲ್ಲಿ ಅಂಶ ಗಣಯುಕ್ತವಾಗಿದ್ದು ಕಾಲಕ್ರಮದಲ್ಲಿ ಮಾತ್ರಾಗಣಕ್ಕೆ ತಿರುಗಿದ್ದರೂ ಇರಬಹು ದೆಂಬುದಕ್ಕೂ ಆಧಾರ ದೊರೆಯಬಹುದು."

ಮೇಲೆ ಉದಾಹರಿಸಿದ ರೀತಿಯ ಛಂದಸ್ಸಿನವು ಯಕ್ಷಗಾನದಲ್ಲಿ ಅಲ್ಲಲ್ಲಿ ದೊರೆ ಯುತ್ತವೆ. ಅಲ್ಲಿ ಅವಕ್ಕೆ ಧವಳ (ಧವಲಾ) ಎಂಬ ಹೆಸರಿಲ್ಲ. 'ರಾಗ—ಶಂಕರಾ ಭರಣ, ಏಕತಾಳ' ಎನ್ನಲಾಗಿರುವ ಹತ್ತು ನುಡಿಗಳಿರುವ ಪಂಚವಟಿ ಯಕ್ಷಗಾನ ಕೃತಿಯ ಒಂದು ಪದ್ಯವಿದು. ರಾವಣನು ಸೀತಾಪಹಾರಕ್ಕಾಗಿ ಹೊರಡುವ ವೇಳೆ, ರಾವಣನಿಗೂ ಮಂಡೋದರಿಗೂ ನಡೆದ ಮಾತುಕತೆಯಲ್ಲಿ ಮಂಡೋದರಿಯ ಮಾತು ಇದರಲ್ಲಿ ಬಂದಿದೆ—

ತಂದೆತಾಯ್ಗ. ಳಾಣೆ ನಿಮಗೆ.
ತಂದರೇ ಜಾ. ನಕಿಯ ಮನೆಗೆ.
ಕುಂದುವುದೈ. ಶ್ವರ್ಯವೆಲ್ಲ.
ಎಂದೆನ್ನ....ರಮಣ[15]

ಅನಂತರ 1963ರಲ್ಲಿ ಬರೆದ ಇನ್ನೊಂದು ಲೇಖನದಲ್ಲಿ ಡಿ.ಎಲ್.ಎನ್. ಅವರು 'ಮಾನಸೋಲ್ಲಾಸ' ಆಧಾರದಿಂದ ಧವಲ ಗೀತವನ್ನು ಇನ್ನೂ ವಿಶದೀಕರಿಸಿದ್ದಾರೆ. ಅವರ ಈ ಉಲ್ಲೇಖ ಲಕ್ಷ್ಯಾರ್ಹ—

ಧವಲಾದಿ ಪದೈಃ ಪಾದೈರಾಶೀರ್ವಾದ ಸಮನ್ವಿತೈಃ
ಛಂದಸಾ ಏನಕೇನಾಪಿ ಕರ್ತವ್ಯೋ ಧವಲಾಭಿದಃ[16]

ಅಂದರೆ, 'ಧವಲ' ಎಂದು ಆರಂಭವಾಗುವ ಪದಗಳಿಂದ ಕೂಡಿ, ಆಶೀರ್ವಾದಯುಕ್ತ ಗಳಾದ ಪಾದಗಳನ್ನು ಹೊಂದಿದ್ದು ಯಾವ ಛಂದಸ್ಸಿನಲ್ಲಿಯಾದರೂ ಇರುವ ಗೀತಕ್ಕೆ 'ಧವಲಾ' ಎಂದು ಹೆಸರು—ಹೀಗೆ ವಿವರಣೆ ಮಾಡಿದ್ದಾರೆ. ಇದಲ್ಲದೆ ಹೇಮಚಂದ್ರಾ ಚಾರ್ಯನ ಸೂತ್ರೋದಾಹರಣೆಗಳ ಪ್ರಕಾರ, ಧವಲಾ ಎಂಬ ಛಂದಸ್ಸಿನಲ್ಲಿ 8, 6, 4 ಪಾದಗಳ ರಚನೆಗಳಿರುವುದಾಗಿಯೂ ತಿಳಿಸಿದ್ದಾರೆ. ಅವು ಶ್ರೀಧವಲ, ಯಶೋಧವಲ (8 ಪಾದಗಳುಳ್ಳವು), ಕೀರ್ತಿಧವಲ (6 ಪಾದ), ಗುಣಧವಲ, ಭ್ರಮರ ಧವಲ, ಅಮರ ಧವಲ, ಮಂಗಲ ಧವಲ (ಇವಕ್ಕೆಲ್ಲ 4 ಪಾದಗಳು)—ಎಂಬ ಹೆಸರಿ ನವಾಗಿಯೂ ವಿವರಿಸಿದ್ದಾರೆ. ಇವೆಲ್ಲವೂ ಮಾತ್ರಾಗಣ ಘಟಿತವೆಂದು ತಿಳಿಸಿರುತ್ತಾರೆ. ಈ ದಿಕ್ಕಿನಲ್ಲಿ ಇನ್ನೂ ಹೆಚ್ಚು ಕೆಲಸ ನಡೆಯಬೇಕಾಗಿದೆ—ಎಂದು ಡಿ.ಎಲ್.ಎನ್. ಅವರು ಸೂಚನೆ ಮಾಡಿದ್ದಾರೆ.[17]

ಧವಲಗೀತ ಎಂಬುದು ಸಂಗೀತ ಶಾಸ್ತ್ರಕ್ಕೂ ಸಂಬಂಧಿಸಿರುವುದರಿಂದ ಸಂಗೀತ ವಿದ್ವಾಂಸರು ಅದನ್ನು ವಿವರಿಸಲು ಪ್ರಯತ್ನ ಮಾಡಿದ್ದಾರೆ. ಸಂಗೀತ ಭೂಷಣ ಡಾ॥ ಆರ್. ಸತ್ಯನಾರಾಯಣ (ಮೈಸೂರು ಸೋದರರು) ಅವರು ಸೋಮೇಶ್ವರನ (1135) ಅಭಿಲಷಿತಾರ್ಥ ಚಿಂತಾಮಣಿ, ಶಾಂರ್ಗದೇವನ (1240) ಸಂಗೀತ ರತ್ನಾಕರ, ಪಾರ್ಶ್ವದೇವನ (13ನೇ ಶತಮಾನ) ಸಂಗೀತ ಸಮಯಸಾರ, ಹರಿಪಾಲದೇವನ (13ನೇ ಶತಮಾನ) ಸಂಗೀತ ಸುಧಾಕರ—ಎಂಬ ಗ್ರಂಥಗಳಲ್ಲಿ ಪ್ರತಿಪಾದಿತವಾಗಿರುವಂತೆ 'ಧವಲ' ಹಾಡಿನ ಪ್ರಭೇದವನ್ನೂ ಲಕ್ಷಣವನ್ನೂ ತಮ್ಮ ಒಂದು ಲೇಖನದಲ್ಲಿ ವಿವರಿಸಿದ್ದಾರೆ.[18] ಈ ಲೇಖನದಲ್ಲಿ ಹೇಳಿರುವಂತೆ ಪಾರ್ಶ್ವದೇವನು ಧವಲವನ್ನು ನಿರ್ಯುಕ್ತದ ಸಾಲಿಗೆ ಸೇರಿಸಿದ್ದಾನೆ. 'ನಿರ್ಯುಕ್ತ' ಎಂದರೆ, ನಿಶ್ಚಿತವಾದ ತಾಳಕ್ಕೆ ಒಡಂಬಡುವ ರಚನೆ. ಅವನ ಅಭಿಪ್ರಾಯದಂತೆ, ಧವಲಕ್ಕೆ ಪಾದನಿಯಮ, ತಾಳ ನಿಯಮ ಎರಡೂ ಇವೆ. 'ಸಂಗೀತ ರತ್ನಾಕರ'ದಲ್ಲಿ ಉಕ್ತವಾಗಿರುವಂತೆ—ಕೀರ್ತಿ ಧವಲ, ವಿಜಯಧವಲ, ವಿಕ್ರಮಧವಲ—ಎಂದು ಧವಲ ಮೂರು ವಿಧ. ಕ್ರಮವಾಗಿ ಇವಕ್ಕೆ ಪಾದಗಳು 4, 6 ಮತ್ತು 8. ಮಾನ್ಯ ಲೇಖಕರು ಕನ್ನಡದಲ್ಲಿ ಒಂದು ಧವಲದ ಹಾಡನ್ನಾಗಿ, 'ನಾಗಕುಮಾರನ ಶೋಭಾನೆ' (ಕೆ. 445, ತಾಳಿಗರಿ, ಸುಮಾರು 1850ರಲ್ಲಿ ಬರೆದುದು) ಎಂಬ ಗ್ರಂಥದಲ್ಲಿರುವ 'ಭರತೇಶ್ವರನ ಹಸೆಗೆ ಕರೆದದ್ದು' ಎಂಬ ಹಾಡಿನ ಒಂದು ಸೊಲ್ಲನ್ನು ಉದಾಹರಿಸಿದ್ದಾರೆ. ವಿಕ್ಷಿಪ್ತವಾಗಿ (ಪಾದಬದ್ಧತೆಯಿಲ್ಲದೆ) ಅವರು ಅಲ್ಲಿ ಕೊಟ್ಟುದನ್ನು ಪ್ರಕೃತ ಇಲ್ಲಿ ಪಾದಬದ್ಧವಾಗಿ ಗಣವಿಭಾಗದೊಡನೆ ಇಡಲಾಗಿದೆ. ಒಂದೆಡೆ 'ಸುಕರದ' ಎಂಬುದನ್ನು ಪಾದಪೂರ್ತಿಗಾಗಿ ಸೇರಿಸಲಾಗಿದೆ—

ಸಕಲದಿ. ಗ್ದೇಶದ ಸಕಲ ಕಿ. ನ್ನರಿಯರು.
ಪ್ರಕಟಿಸೆ. ಮಂಗಲ. ವ.... । ಸು. ಭಕ್ತಿಗೆ
(ಸುಕರದ). ಕಂಕಣ. ವ.... । ತೊಂಡಿಲುಗಟ್ಟಿ
ಸಖಿಯರಿ. ರದೆ ಮೆರೆ. ವ.... ॥ ಸಂ. ಭ್ರಮದೊಳಿರುವ. ॥
ಸುಖಮು. ಖೋದ್ಗ ತ. ವಾಣಿಯಲಿ ಶ್ರೀ.
ಅಖಿಳ. ಧವಳಾ. ಗಮವ. ಪಾಡಲು.
ಅಖಿಳ. ಮರಕತ. ಕಲಿತ. ನವಪಾ.
ಲಕಿಗೆ. ಬಿಜಯಂ. ಗೈಸಿ. ಗಮಿಸಿದ. ॥
ಮುಕುರವ. ದನೆಯೋ. ಹಸೆಗೇಳು.

ಈ ನವಪದಿಯ ಧಾಟಿಯ ಬಗೆಗಾಗಲಿ, ಛಂದೋವೈಶಿಷ್ಟ್ಯವನ್ನು ಕುರಿತಾಗಲಿ, ಲೇಖಕರು ವಿವರಣೆ ಮಾಡಿಲ್ಲ. ಇಂತಹದೇ ಶೋಭಾನೆಗಳು ಹವ್ಯಕರಲ್ಲಿ ಯಥೇಷ್ಟ

ವಾಗಿವೆ. ಹಿಂದೆ ಉದಾಹರಿಸಿರುವ ನವಪದಿ ಪ್ರಭೇದಗಳಲ್ಲಿ ಮೊದಲನೆಯದರಂತೆಯೇ ಈ ಹಾಡಿನ ಸೊಲ್ಲು ಇದೆ.

ಈಚೆ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿರುವ ಕನ್ನಡ ಛಂದಸ್ಸಿನ ಚರಿತ್ರೆಯ ಪ್ರಥಮ ಸಂಪುಟದಲ್ಲಿ "ಧವಲದ ಲಕ್ಷಣ ಮತ್ತು ಪ್ರಭೇದ"ಗಳ ಬಗೆಗೆ ವಿವರಣೆಯಿದೆ. ಲೇಖಕರು ಪ್ರಾಚೀನ ಲಾಕ್ಷಣಿಕರ ಪ್ರತಿಪಾದನೆಯನ್ನು ಲಕ್ಷಿಸಿ—"ಧವಲ ಎಂಬುದು ನಿರ್ದಿಷ್ಟವಾದ ಛಂದೋಬಂಧ ಎಂಬುದು ಈ ಮೇಲ್ಕಂಡ ವಿವೇಚನೆಯಿಂದ ಸ್ಪಷ್ಟಪಡುವ ಅಂಶ. ಆದರೆ ಕನ್ನಡದ ಮತ್ತು ತೆಲುಗಿನ ಧವಲದ ವಿಷಯವೇ ಬೇರೆ" ಎಂದಿದ್ದಾರೆ. ಮುಂದೆ ಲೇಖಕರು "ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಧವಲದ ಬಗ್ಗೆ ದೊರೆಯುವ ಉಲ್ಲೇಖ, ಉದಾಹರಣೆ ಮತ್ತು ಲಕ್ಷಣಗಳನ್ನು ಪರಿಶೀಲಿಸಿದಾಗ, ಅದು ಒಂದು ಜಾತಿಯ ಹಾಡೇ ವಿನಾ ಒಂದು ನಿರ್ದಿಷ್ಟ ಛಂದೋಬಂಧವಲ್ಲವೆಂದೂ ನಿಯತ ಛಂದಸ್ಸಿಗೂ ಅದಕ್ಕೂ ಸಂಬಂಧವಿಲ್ಲವೆಂದೂ ಸ್ಪಷ್ಟವಾಗುತ್ತದೆ"[19] ಎಂದಿದ್ದಾರೆ. ಧವಲಗಳು ತ್ರಿಪದಿಯಲ್ಲಿ ಷಟ್ಪದಿಯಲ್ಲಿ ಕೂಡ ಇರುವುದನ್ನು ತೋರಿಸಿಕೊಟ್ಟು "ಧವಲಗಳಿಗೆ ಇಂತಹದೇ ಛಂದಸ್ಸು ಇರಬೇಕೆಂಬ ನಿಯಮವಿಲ್ಲ" ಎಂಬ ತೀರ್ಮಾನಕ್ಕೆ ಬಂದಿರುವುದು ಕಂಡುಬರುತ್ತದೆ. ಧವಲವು ಶೋಭಾನೆಗಳಿಗಿಂತ ಬೇರೆಯಾದುದೆಂದು ತಿಳಿಯುವ ಅವರ ಪ್ರಯತ್ನ ಸಫಲವಾಗಿಲ್ಲ. ಕನ್ನಡದಲ್ಲಿ ಧವಲವು ನಿಶ್ಚಯವಾಗಿಯೂ ಶೋಭಾನೆಯ ಪ್ರಭೇದವೇ ಆಗಿದೆ. ಅದಲ್ಲವಾದರೆ, 'ಧವಳ ಶೋಭಾನೆ' ಎಂಬ ಹೆಸರೇಕೆ ಬಂತು ? ಕನ್ನಡ ಕಾವ್ಯಗಳಲ್ಲಿ ಧವಳ ಶೋಭಾನೆ ಹಾಡಿದ ಉಲ್ಲೇಖಗಳನ್ನು ಇದೇ ಗ್ರಂಥದ ಹಿಂದಿನ ಅಧ್ಯಾಯದಲ್ಲಿ ಓದುಗರು ಕಂಡಿರಬಹುದಾಗಿದೆ.

ಹವ್ಯಕೇತರ ಜನವರ್ಗದಲ್ಲಿ ನಾಲ್ಕೇ ಪಾದಗಳಿರುವ ಕೆಲವು ಧವಲದ ಹಾಡುಗಳಿರುವುದು ಕಂಡುಬಂದಿದೆ. ಅವು ಆರತಿ ಎತ್ತುವ ಹಾಡುಗಳಲ್ಲ. ತುಲಸೀ ಧವಳ, ಕರ್ಮಧವಳ, ಧರ್ಮಧವಳ, ಕೇಶವಧವಳ—ಎಂಬಿವು ಅಂಥವು.[20] ಉದಾಹರಣೆ—

1 ಕೇಶವಧವಳ—

ಜಗವಂದಿತ ಶ್ರೀಹರಿಯ
ಚರಣ ಕಮಲಕೆರಗುವೆನು
ವರ ಶಾರದಾದೇವಿಗೊಂದಿಸಿ
ಪೇಳುವೆ ಧವಳವನು

2 ತುಲಸೀಧವಳ—

ಜಯ ಜಯ ಹರಿ ಎಲ್ಲರಿಗೂ
ಜಯ ಜಯ ಶೋಭನಕಾರಿ

ಇಳೆಯಲಿ ಪಾಪವ ಕೆಡಿಸೋಳು
ಶ್ರೀವೃಂದಾವನ ದೇವಿ

ಈ ಉದಾಹರಣೆಗಳು ಆರು ಮಾತ್ರೆಗಳ ಘಟಕಗಳಾಗಿರದೆ, ಅಂಶಗಣ ಘಟಿತವಾಗಿ ತೋರುತ್ತವೆ. ಇಲ್ಲೆಲ್ಲ 'ಧವಲ' ಎಂಬುದು ಛಂದೋನಿರೂಪಕವಾಗಿರದೆ 'ಹಾಡು' ಎಂಬ ವ್ಯಾಪಕಾರ್ಥವುಳ್ಳುದಾಗಿರುವಂತೆ ಕಂಡುಬರುತ್ತದೆ.

'ಧವಳ' ಎಂಬ ಹಾಡಿನ ಸಂಶೋಧನೆಗೆ ಸುಮಾರು ಮೂರು ದಶಕಗಳ ಹಿಂದೆಯೇ ಡಿ. ಎಲ್. ಎನ್. ಅವರು ದಿಗ್ದರ್ಶನ ಮಾಡಿದ್ದರು. ಆದರೆ ಆ ವಿಷಯ ದಲ್ಲಿ ಮುಂದೆ ಲೇಖನಗಳನ್ನು ಬರೆದವರು ಯಾರೊಬ್ಬರೂ ಯಕ್ಷಗಾನ ಪ್ರಸಂಗಗಳಲ್ಲಿ ಯಾಗಲಿ, ಮುತ್ತೈದೆಯರು ಹಾಡುವ ಆರತಿ ಹಾಡುಗಳಲ್ಲಿಯಾಗಲಿ, ಮದುವೆಯ ಹಾಡುಗಳಲ್ಲಾಗಲಿ, ಧವಳಗೀತಗಳನ್ನು ಗುರುತಿಸುವ ಪ್ರಯತ್ನ ಮಾಡಿಲ್ಲ. ಅದರ ಧಾಟಿಯನ್ನಾಗಲಿ, ಛಂದಃಸ್ವರೂಪವನ್ನಾಗಲಿ ವಿಶದಪಡಿಸಿಲ್ಲ. ಧವಳಗೀತವು ಮಾತ್ರಾಗಣ ಘಟಿತವಾಗಿ ಕಾಣುವುದಿಲ್ಲ. ಮತಿಘಟ್ಟ ಕೃಷ್ಣಮೂರ್ತಿಯವರು ಸಂಪಾದಿಸಿರುವ ಧವಳಗೀತದ ಸೊಲ್ಲುಗಳಲ್ಲಿ ಒಂದೇ ಬಗೆಯ ನಿಶ್ಚಿತ ಗಣವಿನ್ಯಾಸವೂ ಇಲ್ಲ. ಕೆಲವಂತೂ ಮಾತ್ರಾಗಣಕ್ಕೂ ಬರುವುದಿಲ್ಲ ; ಅಂಶಗಣಕ್ಕೂ ಕೂಡುವುದಿಲ್ಲ. ಅಂದರೆ, ಅವು ಶಾಸ್ತ್ರೀಯವಾಗಿ ಸಂಪಾದಿತವಾಗಿಲ್ಲ. ಈ ಕಾರಣಗಳಿಂದ ಧವಳಾರದ ಸೊಲ್ಲುಗಳನ್ನು ಯಕ್ಷಗಾನದಲ್ಲಿ ಮತ್ತು ಶೋಭಾನೆ ಹಾಡುಗಳಲ್ಲಿಯೇ ಕಾಣಬೇಕಾಗು ತ್ತದೆ. ಅದನ್ನು ಹೇಗೆ ಹಾಡುತ್ತಾರೆ ? ಎಂಬುದನ್ನು ಲಕ್ಷಿಸಿಯೇ ಅದರ ಧಾಟಿಯನ್ನು ಪರಿಶೀಲಿಸಿಯೇ ಛಂದಸ್ಸನ್ನು ವಿವೇಚಿಸುವುದು ಈ ಅಧ್ಯಾಯದಲ್ಲಿ ಅವಶ್ಯವಾಯಿತು. ಅದು ತಕ್ಕಮಟ್ಟಿಗೆ ಯಶಸ್ವಿಯಾಯಿತೆಂದು ಹೇಳಬಹುದಾಗಿದೆ. ಯಕ್ಷಗಾನದಲ್ಲಿ 'ಧವಳಾರ' ಎಂಬ ಹೆಸರೇ ಇರುವುದರಿಂದ ಅದನ್ನು ಭಾಗವತರು ತಾಳಬದ್ಧವಾಗಿ ಹಾಡುವುದೂ ಕಂಡುಬಂದಿರುವುದರಿಂದ ಮತ್ತು ಅದೇ ಛಂದಸ್ಸಿನ ಹಾಡುಗಳು ಹವ್ಯಕರ ಶೋಭಾನೆಗಳಲ್ಲಿ ಇರುವುದರಿಂದ ಧವಲದ ಹಾಡನ್ನು ಹೀಗೆ ಗುರುತಿಸಿರುವುದು ಸರಿಯೆಂದು ತಿಳಿಯಬಹುದಾಗಿದೆ.

## ಯಕ್ಷಗಾನದ ಧವಳಾರ

ಯಕ್ಷಗಾನ ಕೃತಿಗಳು ಸುಖಾಂತವಾದ ಕಥಾವಸ್ತುವುಳ್ಳವಾಗಿವೆ. ಕಾರ್ಯಕ್ರಮ ಮುಗಿಯುವಾಗ ಆರತಿ ಬೆಳಗುವುದಿರುತ್ತದೆ. ಸ್ತ್ರೀಪಾತ್ರಧಾರಿಗಳು ಆರತಿ ತಟ್ಟೆ ಯೊಂದಿಗೆ ನರ್ತಿಸುತ್ತ ರಂಗಕ್ಕೆ ಬಂದು ದಿವ್ಯಪಾತ್ರಧಾರಿಗೆ ಆರತಿ ಬೆಳಗುತ್ತಾರೆ. ಆಗ ಹಾಡುವ ಹಾಡಿಗೆ ಧವಳಾರ ಎಂದೇ ಹೆಸರು. ಯಕ್ಷಗಾನ ಕೃತಿಗಳಲ್ಲಿ 'ರಾಗ— ಧವಳಾರ, ಏಕತಾಳ (ತ್ರಿವಿಡೆ)' ಎಂಬ ಸೂಚನೆಯಿರುತ್ತದೆ. ಯಕ್ಷಗಾನದಲ್ಲಿ

'ರಾಗಸೂಚಿ' ಎಂಬುದು ಛಂದೋಗತಿಯ ಹಾಗೂ ಧಾಟಿಯ ಸೂಚಿಯೇ ಆಗಿರುತ್ತದೆ. ಧವಳಾರವನ್ನು ಮಂಗಳಾರತಿ ರೂಪವಾಗಲೇ ಆರತಿಯ ಬೆಳಕಿನಿಂದ ಕೀರ್ತಿಯನ್ನು ಧರ್ಮನೀತಿಗಳನ್ನು ಧವಳಿಸಿ ತೋರಿಸುವ ಕಾರ್ಯವಿಲ್ಲಿ ಇರುತ್ತದೆ. 'ಧವಳ' ಎಂಬುದು ಡವಳ–ಡಾಳ ಎಂಬ ರೂಪಾಂತರವನ್ನು ಹೊಂದಿ 'ಪ್ರಕಾಶ' ಎಂಬ ಅರ್ಥವನ್ನು ನೀಡುವುದೂ ನಿಜ. ಈ ಯಕ್ಷಗಾನ ಧವಳಾರದಲ್ಲಿ ಕೂಡ ಕೊನೆಯ ಪಾದ ತ್ರಿಪದಿ ಮಕುಟ. ಪ್ರಾರಂಭದಲ್ಲಿ ವಿಳಂಬಗತಿ, ನಡುವೆ ಮಧ್ಯಮಗತಿ ಅಥವಾ ದ್ರುತಗತಿಯಿದ್ದು ಕೊನೆಗೆ ವಿಳಂಬಗತಿ. ಹಿಂದಿನ ಭಾಗವನ್ನು ಏಕತಾಳದಲ್ಲಿ ಹಾಡಿ, ಕೊನೆಯ ಪಾದವನ್ನು ವಿಳಂಬಗತಿಗೆ ಒಪ್ಪುವಂತೆ ಸಿಧಾನ ತ್ರಿಪುಟೆಯಲ್ಲಿ (14 ಮಾತ್ರೆಗಳ ಘಟಕಗಳಿಂದ) ಹಾಡಲಾಗುತ್ತದೆ.

ಯಕ್ಷಗಾನದ ಧವಳಾರಕ್ಕೆ ಯಕ್ಷಗಾನದಲ್ಲಿ ಬಂದಿರುವ ಒಂದು ಉದಾಹರಣೆಯನ್ನು ಹಿಂದಿನ ಅಧ್ಯಾಯದಲ್ಲಿ (ಪುಟ 511) ಕೊಟ್ಟಿದೆ. ಅದು ಆರು ಪಾದಗಳುಳ್ಳದು. ಇಲ್ಲಿ ಈಗ ಇನ್ನೊಂದು ಉದಾಹರಣೆ 'ಧವಳಾರ ಚೌಪದಿ'. ಇದರ ಮೊದಲ ಎರಡು ಪಾದಗಳು ಚತುರ್ಮಾತ್ರೆಯ ಗಣಗಳಿಂದ ಕೂಡಿ, ಏಕತಾಳಕ್ಕೆ ಒಡಂಬಡುತ್ತದೆ. 3, 4ನೇ ಪಾದಗಳಿಗೆ ಸಿಧಾನ ತ್ರಿವಿಡೆಯ ತಾಳಲಯ, ಅಂಶ ಗಣಾತ್ಮಕ—

ನಾಕದ. ದೇವತೆ. ಗಳು ಬಂ. ದಾಕ್ಷಣ.
ಶ್ರೀಕರ. ನಾಗೆನು. ತಲಿ ಸು. ಗ್ರೀವನ ॥
ನೀ ಕಪಿಗಳಿ. ಗೆಲ್ಲಾ. ದೊರೆಯಾಗು.
ದೊರೆಯಾಗೆಂ. ದೆನುತಲಿ. ಹರಸುತ್ತಲಿ ॥
ಬೇಕಾದ. ಕ್ಷತೆಯಾ. ತಳಿದರು । ಶೋಭಾನೆ 21

3. ಇನ್ನೊಂದು ಉದಾಹರಣೆ—ಧವಳಾರ ಚೌಪದಿ. ಮೊದಲ ಮೂರು ಪಾದಗಳಿಗೆ ಚತುರ್ಮಾತ್ರಾಗಣ, ಏಕತಾಳ. ಕೊನೆಗೆ ತ್ರಿಪದಿಮಕುಟ, ವಿಳಂಬಗತಿ, ತ್ರಿವಿಡೆ ತಾಳದ ಲಯ—

ಅಮೃತಾ. ಬ್ಧಿಯ ನಾ. ಳಿದ ಮಹಿ. ಮನಿಗೇ
ಅಮೃತವ. ನೆರೆದಮ. ರರ ಪೊರೆ. ದವಗೇ.
ಅಮೃತಾಂ. ಭೋನಿಧಿ. ಪತಿಯಳಿ. ಯನಿಗೇ ॥
ಅಮೃತದಾ. ರತಿಯಾ. ಬೆಳಗಿರೇ22

4. ಕೆಳಗಿನದು ಧವಳಾರ ಪಂಚಪದಿ. ಮೊದಲ ನಾಲ್ಕು ಪಾದಗಳಿಗೆ ಚತುರ್ಮಾತ್ರಾಗಣ, ಏಕತಾಳ. ಮೊದಲ ಎರಡು ಪಾದಾಂತ್ಯದಲ್ಲಿ ಮುಡಿ. ಕೊನೆಯ ಪಾದ ತ್ರಿಪದಿಮಕುಟ, ತ್ರಿವಿಡೆ ತಾಳದ ಗತಿ.

ಸುರತರು. ಣೆಯರಾ. ಸಮಯದಿ. ಭಾ....
ಸುರ ರ. ತ್ನದ ಪಸೆ. ಯಲಿ ಸೀ. ತಾ....
ತರುಣೀ. ಮಣಿ ರಾ. ಘವರನು. ವಗ್ಗಲಿ.
ಹರುಷದಿ. ಕುಳ್ಳಿರಿ. ಸುತ ಸಂ. ತಸದಲಿ ॥
ಸುರುಚಿರದಾ. ರತಿಯಾ. ಬೆಳಗಿರೆ23

## ಶೋಭಾನೆಗಳಲ್ಲಿ ಧವಳಾರ

ವಿವಾಹ ಸಂದರ್ಭದಲ್ಲಿ ಮುತ್ತೈದೆಯರು ಧವಳ ಶೋಭಾನೆಗಳನ್ನು ಹಾಡಿದ ರೆಂದು ಕನ್ನಡದ ಹಲವು ಕಾವ್ಯಗಳಲ್ಲಿ ವರ್ಣಿತವಾದುದನ್ನು ಹಿಂದೆಯೇ (ಅ. 2) ತಿಳಿಸಿದೆ. ಕಾವ್ಯದಲ್ಲಿಯೇ "ಧವಳಾರ ತ್ರಿಪದಿ"ಯ ಹಾಡು ಬಂದುದುಂಟು. ಇದರಲ್ಲಿ ಸೊಲ್ಲಿನ ಕೊನೆಗೆ 'ಶೋಭನವೇ' ಎಂಬ ಮಕುಟಪದವಿದೆ—

ಮನೆಯಿಲ್ಲ. ದಾತಂಗೆ. ಮನೆತನ. ವನೆ ಮಾಡಿ.
ಗನಹನೆಂ. ದೆನಿಸಿ. ಜಗದಲಿ.
ಗನಹನೆಂ. ದೆನಿಸಿ. ಜಗದಲ್ಲಿ. ಕಾಣಿಸಿದ.
ವಿನುತ ಧೀ. ವರನೆ. ಸುಖಿಯಾಗು ॥ ಶೋಭನವೇ24

ಈ ಉದಾಹರಣೆಗಳಿಂದ 'ಧವಳಾರ'ಕ್ಕೆ ತ್ರಿಪದಿಮಕುಟವಿರಲೇಬೇಕೆಂಬುದು ನಿರ್ಧಾರ ವಾಗುತ್ತದೆ.

ಹವಿಕರ ಶೋಭಾನೆಗಳಲ್ಲಿ ಬಂದಿರುವ ಇನ್ನಿತರ ಧವಳಾರಗಳನ್ನು ಅವುಗಳ ಧಾಟಿ ಛಂದಸ್ಸುಗಳನ್ನು, ಹಿಂದಿನ ವಿವರಣೆಗಳಿಂದ ಖಚಿತಮಾಡಿಕೊಳ್ಳಬಹುದು. ಈ ವಿವರಣೆಗಳಿಂದ ಸ್ಪಷ್ಟವಾಗುವುದೆಂದರೆ—ಕನ್ನಡದ ಧವಳ (ಧವಳಾರ) ಹಾಡುಗಳು ನಿರ್ದಿಷ್ಟ ಗಣ, ಗಣಸಂಖ್ಯೆ, ಪಾದಸಂಖ್ಯೆ, ಉಳ್ಳವಲ್ಲವಾದರೂ ಅವಕ್ಕೆ ವಿಶಿಷ್ಟವಾದ ಧಾಟಿಯಿದೆ. ಪಾದ, ಯತಿ, ಮುಡಿ, ವರಣ, ತಾಳದ ಲಯ, ವಿಳಂಬ–ಮಧ್ಯಮ–ದ್ರುತಗತಿಗಳು, ಗಣಪಲ್ಲಟ ಅಥವಾ ಅಧಿಗಣ ಪ್ರಯೋಗ—ಮುಂತಾದ ಲಕ್ಷಣಗಳಿಂದ ಅವುಗಳ ಧಾಟಿ ಹಾಗೂ ಛಂದಸ್ಸು ರೂಪಗೊಂಡಿದೆ. ಆರತಿ ಬೆಳಗುವ ಹಾಡಾಗಿಯೇ 'ಧವಳಾರ' ಎಂದೆನಿಸಿದ ಈ ಬಗೆಯ ಧಾಟಿಯ ರಚನೆಗಳು ಪೂಜೆಯಲ್ಲಿ, ಮದುವೆ

ಉಪನಯನಾದಿ ಸಂದರ್ಭಗಳಲ್ಲಿ ಹಾಡತಕ್ಕವಾಗಿವೆ. ಕತೆ ಹಾಡುಗಳೂ ಧವಳಾರದ ಧಾಟಿಯಲ್ಲಿ ರಚಿತವಾದುವು ಉಪಲಬ್ಧವಿವೆ. ಹೀಗೆ ಹವಿಕರ ಶೋಭಾನೆಗಳು ಧಾಟಿ ವೈಶಿಷ್ಟ್ಯದಿಂದ ಛಂದೋವೈವಿಧ್ಯದಿಂದ ಮೆರುಗು ಪಡೆದಿವೆ

## ಅಡಿ ಟಿಪ್ಪಣಿ

1 ಕನಕದಾಸ ಮೋಹನ ತರಂಗಿಣಿ, 17-40.

2 ಸೇಡಿಯಾಪು ಕೃಷ್ಣಭಟ್ಟ : ಕನ್ನಡ ಗೀತಿಕೆ—ಲಕ್ಷಣ ಮತ್ತು ಧಾಟಿ, 1977, ಪುಟ 10

3 ನಾಗವರ್ಮನ ಛಂದೋಂಬುಧಿ, ಪದ್ಯ 17.

4 ಹೆಚ್ಚಿನ ವಿವರಕ್ಕಾಗಿ ಟಿ. ಕೇಶವಭಟ್ಟ : 'ಛಂದಸ್ಸು ಮತ್ತು ಗುರುಲಘುರಹಸ್ಯ', ಸಂಶೋಧನ ರತ್ನಮಾಲಿಕೆ (1969) ಎಂಬ ಗ್ರಂಥದಲ್ಲಿ

5 ಕುಮಾರವ್ಯಾಸ ಭಾರತ, ಪೀಠಿಕಾಸಂಧಿ, ಪದ್ಯ 22.

6 ತೀ. ನಂ. ಶ್ರೀ : 'ಮಾತ್ರೆ, ಮುಡಿ, ಪದ್ಯಗಣ', ಸಮಾಲೋಕನ, 1958.

7 C. Day Lewis : Poetry for you, 1945, P. 30.

8 ಸೇಡಿಯಾಪು ಕೃಷ್ಣಭಟ್ಟ : ಪೂರ್ವೋಕ್ತ ಕನ್ನಡ ಗೀತಿಕೆ, ಪುಟ 33.
ಕ. ಪು. ಸೀತಾರಾಮ ಕೆದಿಲ್ಲಾಯ : 'ಯಕ್ಷಗಾನ ಛಂದಸ್ಸು' ಲೇಖನ, ಯಕ್ಷಗಾನ ಮಕರಂದ, 1980, ಪುಟ 113–134 ಮತ್ತು ಕನ್ನಡ ಛಂದಸ್ಸಿನ ಚರಿತ್ರೆ, ಸಂಪುಟ 2, 1980 (ವ್ಯ. ವಿ. ವಿ.)

9 ಸಾಧನೆ (ತ್ರೈಮಾಸಿಕ, ಬೆಂ. ವಿ. ವಿ.) ಸಂಪುಟ 9, ಸಂಚಿಕೆ 1, ಜನವರಿ–ಮಾರ್ಚ್ 1980.

10 ಅಂಕಣ (ದ್ವೈಮಾಸಿಕ) ಸಂಪುಟ 2, ಸಂಚಿಕೆ 3, ಮಾರ್ಚ್, 1981.

11 ನಾಗವರ್ಮನ ಛಂದೋಂಬುಧಿ.

12 ಕನ್ನಡ ಛಂದಸ್ಸಿನ ಚರಿತ್ರೆ, ಸಂಪುಟ 2, ಪೂರ್ವೋಕ್ತ, ಪುಟ 384

13 ಪಂಜೆ ರಾಮರಾಯ (ಸಂ) : ಪಂಜೆಯವರ ಕೃತಿಗಳು, ಸಂಪುಟ 1, ಪದ್ಯಗಳು, 1983, ಪುಟ 8.

14 ಡಿ. ಎಲ್. ನರಸಿಂಹಾಚಾರ್ : ಪೀಠಿಕೆಗಳು ಲೇಖನಗಳು, ಪುಟ 680.

15 ಪಾರ್ತಿಸುಬ್ಬ : ಯಕ್ಷಗಾನ ಪಂಚವಟಿ ವಾಲಿ ಸುಗ್ರೀವರ ಕಾಳಗ, 1971, ಪುಟ 16.

16 ಡಿ. ಎಲ್. ನರಸಿಂಹಾಚಾರ್ : 'ಮಾನಸೋಲ್ಲಾಸದಲ್ಲಿ ಛಂದಸ್ಸು' (ಲೇಖನ), ಪ್ರಬುದ್ಧ ಕರ್ಣಾಟಕ, ಸಂಪುಟ 45, ಸಂಚಿಕೆ 2, 1963.

17 ಅದರಲ್ಲೇ.

18 ಡಾ॥ ಆರ್ ಸತ್ಯನಾರಾಯಣ : **'Dhavala' a hoary musical form of Karnataka, Bihar Theatre, 1960.**

19. ಕನ್ನಡ ಛಂದಸ್ಸಿನ ಚರಿತ್ರೆ, ಸಂಪುಟ 1, ಪೂರ್ವೋಕ್ತ, ಪುಟ 647–658.

20. ಮತಿಘಟ್ಟ ಕೃಷ್ಣಮೂರ್ತಿ ಗೃಹಿಣೀ ಗೀತೆಗಳು, 1982, ಪುಟ 236, 594, 650, 655

21 ಪಾರ್ತಿಸುಬ್ಬ, ಪೂರ್ವೋಕ್ತ, ಪುಟ 45.

22 ಸಂಕಯ್ಯ ಭಾಗವತ ಯಕ್ಷಗಾನ ಕೃಷ್ಣಾರ್ಜುನರ ಕಾಳಗ

23 ಯಕ್ಷಗಾನ ಕಾಲನೇಮಿ ಕಾಳಗ, 1929, ಪುಟ 55.

24 ಇಮ್ಮಡಿ ಗುರುಸಿದ್ಧಕವಿ ಹಾಲಾಸ್ಯಪುರಾಣಂ, ಕಾಂಡ 4, ಆ 9, ಪದ್ಯ 77

# ಅಧ್ಯಾಯ : 4

## ಶೋಭಾನೆ—ಶುಭಕಾರ್ಯ

[ಸಂಸ್ಕಾರಗಳು ಪ್ರಸ್ತುತ ಶಬ್ದ ವಿವೇಚನೆ—ಅಷ್ಟವಿಧ ವಿವಾಹ—ವಿವಾಹ ವಿಧಾನಗಳು—ನಿಶ್ಚಿತ್ತೆ, ಕ್ರಿಯಾಭಾಗ (ವನ್ನಿ, ಸಮಾವರ್ತನೆ, ಕಾಶೀಯಾತ್ರೆ, ದಿಬ್ಬಣ, ಉಪಚಾರ, ಮಂತ್ರ ಐಶ್ವರ್ಯ, ಮಧುಪರ್ಕ, ಸಪ್ತಪದಿ, ಲಾಜಹೋಮ, ಅರುಂಧತೀ ದರ್ಶನ). ಚತುರ್ಥಿ—ಹಸೆಗೆ ಕರೆಯುವುದು—ಸಟ್ಟುಮುಡಿ—ಔಪಾಸನ ಒಸಗೆ—ಹೊಸ್ತಿಲು ತುಳಿಸುವುದು—ಬಂಡು ಕೋಟೆ ಮಂಗಲ ಮೂಡೆ—ಚವಲ—ಉಪನಯನ—ಒಸಗೆ—ವ್ರತ ಪೂಜೆಗಳು (ಸತ್ಯನಾರಾಯಣ, ಶಿವರಾತ್ರಿ, ಪ್ರದೋಷ, ಗೌರೀಗಣೇಶ, ನವರಾತ್ರಿ, ದೀಪಾವಳಿ, ಬಲಿ-ಗೋ-ತುಲಸಿ ಪೂಜೆ, ಹತ್ತ ಕಟ್ಟುವುದು, ಹೊಸ್ತಿಲ ಪೂಜೆ, ಕದಿರು ತರುವುದು) ಕೆಲವು ಸಂಕ್ಷಿಪ್ತ ವಿವರಗಳು ಅಡಕವಾಗಿವೆ]

ಶುಭವನ್ನು, ಉತ್ತರೋತ್ತರ ಅಭಿವೃದ್ಧಿಯನ್ನು, ಇಷ್ಟಸಿದ್ಧಿಯನ್ನು ಬಯಸುವುದು ಮನುಷ್ಯನ ಸ್ವಭಾವ. ಅವುಗಳ ಪ್ರಾಪ್ತಿಗಾಗಿ ಆಚರಿಸುವ ಶುಭಕಾರ್ಯಗಳು ಹಲವಾರು. ಅವು ಮನುಷ್ಯನ ಜೀವನಾನುಸರಣೆಯ ಧರ್ಮ, ಮತ, ಜಾತಿ, ಪಂಥಗಳ ಸಂಸ್ಕೃತಿಗೆ ಅನುಗುಣವಾಗಿ ನಿಗಮಾಗಮ (ವೇದಶಾಸ್ತ್ರ) ಪುರಾಣ ಪರಂಪರೆಗಳಿಗೆ ಅನುಸಾರವಾಗಿ ರೂಪಗೊಂಡಿರುತ್ತವೆ. ಅವುಗಳಲ್ಲಿ ವ್ರತ, ಉತ್ಸವ, ಪೂಜೆ, ಹೋಮ—ಮುಂತಾದವು ಐಚ್ಛಿಕಗಳು—ಅಂದರೆ ನೈಮಿತ್ತಿಕ-ಕಾರ್ಯಗಳಾಗಿದ್ದು ಅವಶ್ಯವೆನಿಸಿದಂತೆ ಅವರವರು ಯಥಾಸಾಧ್ಯ ನೆರವೇರಿಸುವಂಥವು. ಶುಭಕಾರ್ಯಗಳಲ್ಲಿ ಇನ್ನೊಂದು ಬಗೆಯವು 'ಧಾರ್ಮಿಕ ಸಂಸ್ಕಾರ ವಿಧಿಗಳು' (ರಿಚ್ಯುವಲ್ಸ್). ಇವು ಮನುಷ್ಯನ ಜನನದಿಂದ ಮರಣದ ವರೆಗೆ, ಜೀವನಕಾಲದ ಸಕಲ ಅಭ್ಯುದಯಕ್ಕಾಗಿ ಆಚರಿಸುವಂಥವು. ಇವನ್ನು 'ಪೂರ್ವ ಸಂಸ್ಕಾರಗಳು' ಎನ್ನುತ್ತಾರೆ. ಇವು 'ಶುಭ ಸಂಸ್ಕಾರಗಳು'. ಮರಣಾನಂತರದ—ಅಂದರೆ ಮರಣ ಹೊಂದಿದ ವ್ಯಕ್ತಿಗಾಗಿ ಆಚರಿಸುವವು 'ಉತ್ತರ ಸಂಸ್ಕಾರಗಳು' ಅಥವಾ 'ಅಪರ ಸಂಸ್ಕಾರಗಳು' ಎನಿಸುತ್ತವೆ; ಔರ್ಧ್ವದೈಹಿಕಗಳೆಂದೂ ಉತ್ತರ ಕ್ರಿಯೆಗಳೆಂದೂ ಇವಕ್ಕೆ ಹೆಸರುಗಳುಂಟು. ಇವು 'ಅಶುಭ ಸಂಸ್ಕಾರಗಳು'. ಅಂದರೆ, ಈ ಸಂದರ್ಭದ ಕ್ರಿಯೆಗಳು ದುಃಖದ್ಯೋತಕವಾಗಿ ಅಶುಭ ರೂಪದವು. ಮೃತನಿಗೆ ಪರದಲ್ಲಿ ಸದ್ಗತಿ ಮತ್ತು ಮೃತನ ಸಂಬಂಧಿಗಳಿಗೆ ಇಹದಲ್ಲಿ ಶುಭಾಭಿವೃದ್ಧಿ—ಇವನ್ನು ಅಪೇಕ್ಷಿಸಿ ಮಾಡುವಂಥವು ಇವು. ಉದಾಹೃತವಾದ ಹವ್ಯಕರ ಶೋಭಾನೆಗಳು ಶುಭಸಂಸ್ಕಾರ ವಿಧಿಗಳಿಗೆ ಸಂಬಂಧಿಸಿವೆ.

ಈ ಶುಭ ಸಂಸ್ಕಾರಗಳು ಹದಿನಾರು ಬಗೆಯವಾಗಿದ್ದು, 'ಷೋಡಶ ಸಂಸ್ಕಾರಗಳು' ಎಂದು ಇವನ್ನು ಕರೆಯಲಾಗಿದೆ. ಅವು ಪ್ರಕೃತದ ಗ್ರಂಥಕ್ರಮದಂತೆ ವಿವಾಹ

ಟಿಂದ ಮೊದಲ್ಗೊಂಡು ಹೋತ್ರಾದಿ ವ್ರತಗಳ ವರೆಗೆ ಈ ಕೆಳಗಿನಂತಿವೆ—ಸಮಾವರ್ತನೆ, ವಿವಾಹ, ಗರ್ಭಾಧಾನ (ದಿಂಡು), ಪುಂಸವನ, ಸೀಮಂತ (ಇವೆರಡೂ ಒಟ್ಟಿಗೆ ಕೋಡಿ ಎಂದು ಹವಿಕರಲ್ಲಿ ಪ್ರಚಲಿತ), ಜಾತಕರ್ಮ, ನಾಮಕರಣ, ಉಪನಿಷ್ಕ್ರಮಣ (ಮಗುವನ್ನು ದೇವದರ್ಶನಕ್ಕಾಗಿ ದೇವಸ್ಥಾನಕ್ಕೆ ಒಯ್ಯುವ ಕಾರ್ಯಕ್ರಮ. ಸೂರ್ಯದರ್ಶನಕ್ಕಾಗಿ ಒಯ್ಯುವದೆಂತಲೂ ಹೇಳಲಾಗಿದೆ), ಅನ್ನಪ್ರಾಶನ (ಬಾರ್ಸ), ಕರ್ಣವೇಧನ (ಕಿವಿ ಚುಚ್ಚುವುದು), ಚೌಲ (ಚೂಡಾಕರ್ಮ, ಶಿಖಾಕರ್ಮ), ಉಪನಯನ, ಹೋತ್ರಾದಿ ನಾಲ್ಕು ಬಗೆಯ ವ್ರತಗಳು (ಹೋತ್ರ, ಶುಕ್ರಿಯ, ಉಪನಿಷದ್, ಗೋದಾನ—ಎಂಬಿವು). ಈ ಹದಿನಾರರಲ್ಲಿ ಉಪನಯನವೆಂಬುದು ನಾಲ್ಕು ವರ್ಣಗಳಲ್ಲಿ ಮೊದಲ ಮೂರು ವರ್ಣದವರಿಗೆ **ಮಾತ್ರ**. ಉಳಿದವು ಅಖಿಳ ಹಿಂದುಗಳಿಗೆ ಅನ್ವಯಿಸುವುದಾಗಿ ಶಾಸ್ತ್ರನಿರೂಪಣೆಯಿದೆ. ಅವನ್ನು ವಿಧ್ಯುಕ್ತವಾಗಿ ಮಾಡಿಸಲು ತಿಳಿದ ಪುರೋಹಿತರ ಮೂಲಕ ಎಲ್ಲ ಜನವರ್ಗದವರೂ ನೆರವೇರಿಸಬಹುದೆಂದೂ ಶಾಸ್ತ್ರ ಸೂಚನೆಯಿದೆ. ಆದರೆ, ಇತರ ಜನವರ್ಗದವರು ಪುರೋಹಿತರ ನೆರವನ್ನುಳಿದು, ವೇದೋಕ್ತ–ಪುರಾಣೋಕ್ತ ಮಂತ್ರ–ತಂತ್ರ ಪ್ರಯೋಗಗಳಿಲ್ಲದೆ, ತಮ್ಮ ಪರಂಪರೆಯ ರೂಢಿಯನ್ನು ಹಿಡಿದು, ತಮ್ಮವೇ ಆದ ವೈಶಿಷ್ಟ್ಯಗಳೊಂದಿಗೆ ಆಚರಣವಿಧಾನವನ್ನು ಇಟ್ಟುಕೊಂಡಿರುತ್ತಾರೆ. ಆಯಾ ಜನವರ್ಗದವರ ಶೋಭಾನೆಗಳನ್ನೂ ಜನಪದಗೀತಗಳನ್ನೂ ಸಮೀಕ್ಷಿಸಿದರೆ ಇದು ವಿದಿತವಾಗುತ್ತದೆ. ಪ್ರಕೃತ, ಹವ್ಯಕ ಬ್ರಾಹ್ಮಣರಲ್ಲಿ ರೂಢಿಯಲ್ಲಿರುವ ಈ ಶುಭಸಂಸ್ಕಾರಗಳನ್ನು ಲಕ್ಷ್ಯವಿಟ್ಟು ವಿವರಿಸುವ ಉದ್ದೇಶ. ಹವ್ಯಕರು ಬೋಧಾಯನ ಸೂತ್ರದಂತೆ ನಡೆದುಕೊಳ್ಳುವವರಾದುದರಿಂದ, ಬೋಧಾಯನರು ತಮ್ಮ ಪ್ರತಿಪಾದನೆಯಲ್ಲಿ ವಿವಾಹವನ್ನೆ ಪ್ರಥಮ ಸಂಸ್ಕಾರವೆಂದು ಇಟ್ಟುಕೊಂಡಿರುವುದರಿಂದ ಈ ಗ್ರಂಥದಲ್ಲಿ ವಿವಾಹ ಸಂಬಂಧದ ಹಾಡುಗಳನ್ನೆ ಮೊದಲು ಕೊಡಲಾಗಿದ್ದು, ಅವನ್ನೆ ಮೊದಲು ಪ್ರತಿಪಾದಿಸಲಾಗಿದೆ. ಸಮಾವರ್ತನೆ ಎಂಬುದು ವಿವಾಹದ ಪೂರ್ವಾಂಗ.

## ಸಂಸ್ಕಾರ

'ಸಂಸ್ಕಾರ' ಎಂಬುದು ದೋಷವನ್ನು ದೂರಮಾಡಿ, ಗುಣವನ್ನು ಉಂಟುಮಾಡುವ ಕ್ರಿಯೆ. ವ್ಯಕ್ತಿಯಲ್ಲಿ ಬೀಜರೂಪವಾಗಿರುವ ಸುಪ್ತಶಕ್ತಿಗಳನ್ನು ವಿಕಾಸಪಡಿಸುವ ಕಾರ್ಯ. ಪರಿಶುದ್ಧತೆ, ಯೋಗ್ಯತೆ, ಸಮ್ಯಕ್‌ತ್ವಗಳನ್ನು ಪ್ರಬುದ್ಧಗೊಳಿಸುವ ಧಾರ್ಮಿಕ ವಿಧಿಯನ್ನು 'ಸಂಸ್ಕಾರ' ಎನ್ನುತ್ತಾರೆ. ಶ್ರೀ ಶಂಕರಾಚಾರ್ಯರು ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ "ಸಂಸ್ಕಾರೋ ಹಿ ನಾಮ ಸಂಸ್ಕಾರ್ಯಸ್ಯ ಗುಣಾಧಾನೇನ ವಾಸ್ಯ ದೋಷಾಪನಯನೇನ ವಾ" ಎಂದು ಇದೇ ಅರ್ಥದಲ್ಲಿ ಹೇಳಿದ್ದಾರೆ. ಹುಟ್ಟಿದ ಮನುಷ್ಯನು ಉಂಡು ತಿಂದು ಭೌತಿಕವಾಗಿ ಬಳೆದರೆ ಸಾಲದು ; ಅವನ ಮನಸ್ಸು ಬುದ್ಧಿ,

ಆತ್ಮಗಳು ವಿಕಾಸಗೊಳ್ಳಬೇಕು ; ದೋಷ ನಿವಾರಣೆಯಾಗಿ ಉನ್ನತಿಯ ಮಾರ್ಗದಲ್ಲಿ ಮುನ್ನಡೆವಂತೆ ಮಾಡುವುದೇ ಸಂಸ್ಕಾರದ ಅರ್ಥ. ಇದನ್ನು ವೇದೋಕ್ತವಾಗಿ ಆಚರಿಸಿದಾಗ ಅದು 'ವೈದಿಕ ಸಂಸ್ಕಾರ' ಎನಿಸುತ್ತದೆ. 'ಶುಭ ಸಮಾರಂಭ' ಎಂಬ ಅರ್ಥವನ್ನು ಕೊಡುವ ಶಬ್ದ 'ಪ್ರಸ್ತ'. ಇದು 'ಪ್ರಾಶಿತ' (ಪ್ರ—ಆಶಿತ) ಅಂದರೆ ಚೆನ್ನಾಗಿ ಊಟಮಾಡುವುದು—ಎಂಬುದರ ಅಪಭ್ರಂಶವಾಗಿ ತೋರುತ್ತದೆ. ಮಹಾಭಾರತದ ಆಶ್ವಮೇಧಿಕ ಪರ್ವದಲ್ಲಿ 'ಪ್ರಾಶಿತ' ಎಂಬುದಕ್ಕೆ ಹೀಗೆ ವಿವರವಿದೆ—

"ಪ್ರಾಣಾಗ್ನಿಹೋತ್ರ ಹೋತ್ರಂ ಚ ಪ್ರಾಶಿತಂ ವಿಧಿವದ್ವಿದುಃ" (ಮ. ಭಾ. ಸಂಪುಟ 31, ಪುಟ 6214) 'ಪ್ರಾಣಾಗ್ನಿಹೋತ್ರ ವಿಧಿಯಿಂದ' ಅಂದರೆ—ಓಂ ಪ್ರಾಣಾಯ ಸ್ವಾಹಾ, ಅಪಾನಾಯ ಸ್ವಾಹಾ, ವ್ಯಾನಾಯ ಸ್ವಾಹಾ, ಉದಾನಾಯ ಸ್ವಾಹಾ, ಸಮಾನಾಯ ಸ್ವಾಹಾ ಎಂದು ಪಂಚಪ್ರಾಣಗಳಿಗೆ ಪಂಚಗ್ರಾಸಗಳನ್ನು ಮಂತ್ರಯುಕ್ತವಾಗಿ ಮೊದಲು ಅರ್ಪಿಸಿ, ಊಟ ಮಾಡುವುದು 'ಪ್ರಾಶಿತ' ಎನಿಸುತ್ತದೆ. ಇದು ಬ್ರಾಹ್ಮಣ ಭೋಜನದ ವಿಧಾನ. ಎಲ್ಲರೂ ಬ್ರಾಹ್ಮಣರೇ ಆಗಿದ್ದ ಅತಿ ಪ್ರಾಚೀನ ಕಾಲದಲ್ಲಿ ಈ ಪಂಚಗ್ರಾಸ ವಿಧಾನ ಎಲ್ಲ ಜನರಲ್ಲಿಯೂ ಪ್ರಚಲಿತವಿದ್ದುದರಿಂದ 'ಪ್ರಾಶಿತ' ಎಂಬುದು ಎಲ್ಲರ ಭೋಜನಕ್ಕೂ ಅನ್ವಿತವಾಗುತ್ತಿದ್ದು, ಅದೇ ಮುಂದೆ ಕನ್ನಡದಲ್ಲಿ 'ಪ್ರಸ್ತ' ಎಂಬ ಶಬ್ದದಿಂದ ರೂಢಿವಡೆದಾಗ ಎಲ್ಲ ಜನವರ್ಗದವರ ಶುಭಸಮಾರಂಭಕ್ಕೂ ಈ ಶಬ್ದವು ಸಂಬಂಧ ಪಡೆದಿರಬೇಕೆನಿಸುತ್ತದೆ. ಯಾವ ಶುಭ ಸಮಾರಂಭವೇ ಇರಲಿ ; ಪೂಜೆ, ವ್ರತ, ಹೋಮಾದಿಗಳಿರಲಿ, ಅವುಗಳ ಪೂರ್ಣ ಫಲ ಪ್ರಾಪ್ತಿಗಾಗಿ, ಎಲ್ಲಾ ಕ್ರಿಯಾಂಗಗಳಿಗೆ ಕಲಶಪ್ರಾಯವೆನಿಸುವ ಬ್ರಾಹ್ಮಭೋಜನ ಇದ್ದೇ ಇರುತ್ತದೆ. ಕ್ರಿಯಾಪ್ರಾರಂಭದ ಸಂಕಲ್ಪದಲ್ಲಿ "ಯಥಾಶಕ್ತಿ ಬ್ರಾಹ್ಮಣಾನ್ ಭೋಜಯಿಷ್ಯೇ" ಎಂದು ಯಜಮಾನನಿಂದ ಪುರೋಹಿತರು ಹೇಳಿಸುವುದು ಪ್ರಚಲಿತವಿದೆ. ಇದರಿಂದ, 'ಪ್ರಸ್ತ' ಎಂಬ ಶಬ್ದ ಭೋಜನಯುಕ್ತ ಶುಭಸಮಾರಂಭಗಳಿಗೆ ಅನ್ವಯಿಸಿ, ಸಾರ್ಥಕವಾಗಿರುವುದು ಕಂಡುಬರುತ್ತದೆ.

## ವಿವಾಹ

'ವಿವಾಹ' ಎಂಬುದು 'ವಿಶಿಷ್ಟರೀ ವಹನಂ (ವಹ—ಪ್ರಾಪಣೇ)'—'ವಿಶಿಷ್ಟ ರೀತಿಯ ಸೇರುವಿಕೆ' ಎಂಬ ಅರ್ಥವುಳ್ಳುದಾಗಿದೆ. ವಿವಾಹವು ಧರ್ಮಪ್ರಜಾಸಂಪತ್ತಿಗಾಗಿ ಕೈಗೊಳ್ಳುವ ದಾಂಪತ್ಯ. ಒಂದೇ ದೇಹದ ಎರಡು ಅಂಶಗಳು ಒಂದಾಗುವುದೆಂದು ಈ ಶಬ್ದದ ಅರ್ಥ. ಹಿಂದೂ ಸಮಾಜಪದ್ಧತಿಯನ್ನು, ಒಳಹೊರಗರಿಯದೆ ಗೇಲಿಮಾಡುವ ಪಂಡಿತಂಮನ್ಯರು 'ವಿವಾಹ' ಎಂಬುದಕ್ಕೆ ಹೆಣ್ಣನ್ನು ಗಂಡು 'ವಿಶೇಷವಾಗಿ ಒಯ್ಯುವುದು' (ಒಯ್ದುಕೊಂಡು ಹೋಗುವುದು) ಎಂದು ಸ್ವೇಚ್ಛವಾಗಿ ಅರ್ಥ

ಮಾಡುತ್ತಾರೆ. ಇದು ಸರಿಯಲ್ಲ. ಉದ್ವಾಹ, ಉಪಯಮ, ಉಪಯಾಮ, ಪಾಣಿಗ್ರಹಣ—ಎಂಬಿವು ವಿವಾಹದ ಪರ್ಯಾಯವಾಚಿಗಳಾಗಿ ಅರ್ಥಯುಕ್ತವಾಗಿವೆ. ಮನುಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ, ಪ್ರಯೋಗ ಪಾರಿಜಾತ—ಮುಂತಾದ ಧರ್ಮಗ್ರಂಥಗಳಲ್ಲಿ ಎಂಟು ಬಗೆಯ ವಿವಾಹಗಳನ್ನು ಹೇಳಿದೆ—

ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಸುರಃ
ಗಾಂಧರ್ವೋ ರಾಕ್ಷಸಶ್ಚೈವ ಪೈಶಾಚ್ಯಮಷ್ಟಮೋ ಮತಃ (ಪ್ರ. ಪಾರಿಜಾತ)

ಮನುಸ್ಮೃತಿಯಲ್ಲಿ ಇದೇ ಶ್ಲೋಕವಿದೆ. ಆದರೆ ಅಂತ್ಯದಲ್ಲಿ 'ಪೈಶಾಚ್ಯಮಷ್ಟಮೋಽಧಮಃ' ಎಂದಿದೆ. ಎಂಟನೆಯದಾದ ಪೈಶಾಚ್ಯ ವಿವಾಹವು ಅಧಮವೆಂದು ಇದರ ಅರ್ಥ. ಈ ಮದುವೆಗಳ ವಿಧಾನ ಹೀಗಿದೆ—

1. ಬ್ರಾಹ್ಮ—ಕನ್ಯೆಗೆ ಎಣೆಯಾದ ಲಕ್ಷಣ ಸಂಪನ್ನನಾದ ವರನನ್ನು ಕರೆದು ಪೂಜಿಸಿ ಸಾಲಂಕೃತ ಕನ್ಯೆಯನ್ನು ವಿಧ್ಯುಕ್ತವಾಗಿ ಧಾರೆಯೆರೆದು ಕೊಡುವುದು.

2. ದೈವ—ಯಜ್ಞದಲ್ಲಿ ಋತ್ವಿಜನಾಗಿ ಕ್ರಿಯೆಯನ್ನು ಮಾಡಿದವನಿಗೆ ಸಾಲಂಕೃತ ಕನ್ಯಾದಾನ ಮಾಡುವುದು.

3. ಆರ್ಷ—ವರನಿಂದ ಒಂದು ಎತ್ತನ್ನೋ ಹಸುವನ್ನೋ ಅಥವಾ ಇವೆರಡನ್ನೋ ಪಡೆದುಕೊಂಡು, ಅವನಿಗೆ ಸಾಲಂಕೃತ ಕನ್ಯಾದಾನ ಮಾಡುವುದು.

4. ಪ್ರಾಜಾಪತ್ಯ—ಕನ್ಯಾರ್ಥಿಯಾದ ವರನಿಗೆ, ನೀವಿಬ್ಬರೂ ಜೊತೆಯಾಗಿ ಧರ್ಮವನ್ನು ಆಚರಿಸಿ—ಎಂದು ಮಾಡುವ ಸಾಲಂಕೃತ ಕನ್ಯಾದಾನ.

5. ಆಸುರ—ಕನ್ಯಾಬಂಧುಗಳಿಗೆ ಯಥೇಷ್ಟವಾಗಿ ಕೇಳಿದಷ್ಟು ಹಣ ಕೊಟ್ಟು ಇಲ್ಲವೇ ವರನ ಕಡೆಯವರಿಗೆ ಅವರು ಕೇಳಿದಷ್ಟು ದ್ರವ್ಯವನ್ನಿತ್ತು ವಿವಾಹ ನಡೆಸುವುದು.

6. ಗಾಂಧರ್ವ—ವರನೂ ಕನ್ಯೆಯೂ ಅನ್ಯೋನ್ಯವಾಗಿ ಸ್ವೇಚ್ಛೆಯಿಂದ ನಿಶ್ಚಯಿಸಿ ಮದುವೆಯಾಗುವುದು. ಇದರಲ್ಲಿ ದಿನ ನಿಶ್ಚಯಿಸುವುದಾಗಲಿ, ಆಪ್ತೇಷ್ಟರನ್ನು ಆಮಂತ್ರಿಸುವುದಾಗಲಿ, ಮಂತ್ರತಂತ್ರ ಕ್ರಿಯಾಭಾಗವಾಗಲಿ ಇರುವುದಿಲ್ಲ. ಹೀಗೆ ಆದ ವಿವಾಹವು ಗ್ರಾಹ್ಯವಾದಲ್ಲಿ ಪುನಃ ವೈವಾಹಿಕ ವಿಧಿಯನ್ನು ನಡೆಸಬಹುದಾಗಿ ಶಾಸ್ತ್ರಾಧಾರವಿದೆ. ಆಗ ಆಪ್ತೇಷ್ಟರನ್ನು ಆಮಂತ್ರಿಸುವುದು, ಮಂತ್ರತಂತ್ರ ಪ್ರಯೋಗಗಳು ಇರುತ್ತವೆ.

7. ರಾಕ್ಷಸ—ತಡೆಯಲು ಬಂದ ಕನ್ಯಾಪಕ್ಷದವರನ್ನು ಹೊಡೆದು, ಸೋಲಿಸಿ, ಕನ್ಯೆಗೆ ಇಷ್ಟವಿಲ್ಲದಿದ್ದರೂ ಆಕೆ ಅಳುತ್ತಿದ್ದರೂ ಆಕೆಯನ್ನು ಬಲಾತ್ಕಾರದಿಂದ ಒಡಿದೊಯ್ದು ಮದುವೆ ಮಾಡಿಕೊಳ್ಳುವುದು.

8. ಪೈಶಾಚ—ಕನ್ಯೆ ನಿದ್ದೆಯಲ್ಲಿದ್ದಾಗ, ಇಲ್ಲವೆ ಅಮಲೇರಿದವಳಾಗಿದ್ದಾಗ, ಅಥವಾ ಅಜಾಗೃತಿಯಿಂದ ಒಂಟಿಯಾಗಿದ್ದಾಗ, ಆಕೆಯನ್ನು ಶೀಲಹರಣಗೊಳಿಸಿ ಪತ್ನಿಯನ್ನಾಗಿ ಮಾಡಿಕೊಳ್ಳುವುದು.

ಈ ಎಂಟು ಬಗೆಯವುಗಳಲ್ಲಿ ಬ್ರಾಹ್ಮ ವಿವಾಹ ಹೆಚ್ಚು ಪ್ರಶಸ್ತವೆಂದು ತಿಳಿಯಲಾಗಿದೆ. ಬ್ರಾಹ್ಮ ವಿವಾಹದಿಂದ ಇಪ್ಪತ್ತೊಂದು ಕುಲಗಳು ಉದ್ಧಾರವಾಗುವುವೆಂದು ಶಾಸ್ತ್ರಗಳು ಹೇಳಿವೆ. ಆದುದರಿಂದ ಇಂದಿಗೂ ಬ್ರಾಹ್ಮವಿವಾಹವೆಂಬುದು ಬ್ರಾಹ್ಮಣರು ಬ್ರಾಹ್ಮಣೇತರರು ಎಂಬ ಭೇದವಿಲ್ಲದೆ, ಎಲ್ಲ ಜನರೊಪ್ಪುವ ಮತ್ತು ನಡೆಸುವ ಹಾಗೂ ಆಚರಣೆಗಳಲ್ಲಿ ಒಂದಿಷ್ಟು ವ್ಯತ್ಯಾಸಗಳೂ ಇರುವ ಮದುವೆಯಾಗಿದೆ. ನಿಂದಿತ ವಿವಾಹದಿಂದ ನಿಂದಿತ ಸಂತತಿಯಾಗುವುದೆಂದು ತಿಳಿಯಲಾಗಿದೆ.

ಆಧುನಿಕ ಕಾಲದಲ್ಲಿ ವರ, ವಧು—ಈ ಎರಡೂ ಕಡೆಯವರ ಸೌಕರ್ಯಗಳನ್ನೂ ಮನಸ್ಸಂಸ್ಕಾರವನ್ನೂ ಅನುಸರಿಸಿ, ಗಾಂಧರ್ವ ವಿವಾಹ (ಪ್ರೇಮ ವಿವಾಹ) ಮಾತ್ರವಲ್ಲದೆ, ಇನ್ನೂ ಕೆಲವು ಬಗೆಯವು ಪ್ರಚಲಿತವಾಗಿವೆ. ಅವುಗಳಲ್ಲಿ 'ಪ್ರತ್ಯುದ್ವಾಹ' ಎಂಬುದೊಂದು. ತನ್ನ ಮಗಳನ್ನು ಇನ್ನೊಬ್ಬನ ಮಗನಿಗೆ ಮದುವೆ ಮಾಡುವುದರೊಂದಿಗೆ, ಅವನ ಮಗಳನ್ನು ತನ್ನ ಮಗನಿಗೆ ಮದುವೆ ಮಾಡಿಕೊಳ್ಳುವುದು 'ಪ್ರತ್ಯುದ್ವಾಹ' ಎನಿಸುವುದು, ಇದು ಸಂಸ್ಕಾರ ವಿಧಿಯಂತೆಯೇ ನಡೆಯುವುದು. ಈ ಪ್ರತ್ಯುದ್ವಾಹವನ್ನು ದಾರಿದ್ರ್ಯಾದಿ ಆಪತ್ತಿನಲ್ಲಿ, ಸರಿಯಾದ ವಧೂವರ ಸಂಯೋಜನೆ ಯಶಸ್ವಿಯಾಗದ ಸಂದರ್ಭದಲ್ಲಿ ಮಾಡಬಹುದು—ಎಂದು ಧರ್ಮಸಿಂಧುವಿನಲ್ಲಿ ಹೇಳಿದೆ. ಈಚೆಗೆ ಪ್ರಚಲಿತವಾದವುಗಳಲ್ಲಿ ಸಾಮೂಹಿಕ ವಿವಾಹ, ಕ್ಷಿಪ್ರ ವಿವಾಹಗಳು (ಒಂದೇ ಹೊತ್ತಿನಲ್ಲಿ ಮಾಡಿ ಮುಗಿಸುವವು) ಕೂಡ, ಶಾಸ್ತ್ರವನ್ನು ಧಿಕ್ಕರಿಸುವುದಿಲ್ಲ ; ಇವು ಸೌಕರ್ಯವನ್ನು ಅವಲಂಬಿಸಿವೆ. ಪೌರವಿವಾಹ (ರಿಜಿಸ್ಟ್ರ ಮದುವೆ), ಅಸವರ್ಣ ವಿವಾಹ, ಅಂತರ್ಜಾತೀಯ ವಿವಾಹ, ಸಂಸ್ಕಾರ ವಿಧಿರಹಿತ (ನಾನ್ ರಿಚ್ಯುವಲ್) ವಿವಾಹ—ಇಂಥವು ತಮ್ಮನ್ನು ತಾವೇ ಪ್ರಗತಿಪರರೆಂದು ತಿಳಿದ ಕೆಲವರ ಪ್ರಶ್ನಾತೀತ ಭಾವನೆಯ ದೃಷ್ಟಿಕೋನವುಳ್ಳವಾಗಿ ವಿರಳವಾಗಿ ನಡೆಯುತ್ತಿವೆ. ಆರ್ಯ ಸಮಾಜದ ರೀತಿಯ ಸಂಸ್ಕಾರದ ಮದುವೆ, ವಿಶ್ವಹಿಂದೂ ಪರಿಷತ್ತು ನಡೆಸುವ ಮದುವೆ—ಇವು ವೇದ ವಿಧಾನವನ್ನು ತಮ್ಮ ರೀತಿಯಲ್ಲಿ ಅನುಸರಿಸಿಯೇ ಇರುತ್ತವೆ. ಇವು ಶಾಸ್ತ್ರೋಲ್ಲಂಘನೆಯ ಕಾರ್ಯಾಚರಣೆಗಳಲ್ಲ, ಶಾಸ್ತ್ರವಿಧಿಯನ್ನೇ ಧಿಕ್ಕರಿಸುವ ಮದುವೆಗಳು ಉಪಾದೇಯವಲ್ಲವೆಂದು ಮುಕ್ತಿಕೋಪನಿಷತ್ತಿನಲ್ಲಿ ಹೀಗೆ ಹೇಳಿದೆ—

ಉಚ್ಛಾಸ್ತ್ರಂ ಶಾಸ್ತ್ರಿತಂ ಚೇತಿ ಪೌರುಷಂ ದ್ವಿವಿಧಂ ಸ್ಮೃತಂ
ತತೋಚ್ಛಾಸ್ತ್ರಮನರ್ಥಾಯ ಪರಮಾರ್ಥಾಯ ಶಾಸ್ತ್ರಿತಂ

ಅಂದರೆ, ಆಚರಣೆಯೆಂಬುದು ಉಚ್ಛಾಸ್ತ್ರ ಮತ್ತು ಶಾಸ್ತ್ರಿತ ಎಂದು ಎರಡು ಬಗೆ. ಉಚ್ಛಾಸ್ತ್ರವೆಂದರೆ ಶಾಸ್ತ್ರೋಲ್ಲಂಘನೆ. ಇದರಿಂದ ಅನರ್ಥಗಳುಂಟಾಗುವವು. 'ಶಾಸ್ತ್ರಿತ' ಎಂದರೆ ಶಾಸ್ತ್ರವಿಧಿಗೆ ಒಳಪಟ್ಟು ನಡೆಯುವುದು. ಇದರಿಂದ ಪರಮಾರ್ಥ ಸಾಧನೆ ಯಾಗುವುದು ; ಸತ್ಯಸಾಕ್ಷಾತ್ಕಾರವಾಗುವುದು. ಈಗಿನ ಕಾಲದ ವರದಕ್ಷಿಣೆಯ ಅತಿರೇಕಗಳು ಉಚ್ಛಾಸ್ತ್ರವೇ ಸರಿ.

ಕನ್ಯಾಶುಲ್ಕ ಮತ್ತು ವರದಕ್ಷಿಣೆಯ ವಿಚಾರದಲ್ಲಿ ಡಾ॥ ಎಂ. ಚಿದಾನಂದ ಮೂರ್ತಿಯವರು ಶಾಸನಾಧಾರಗಳಿಂದ ಹೀಗೆಂದಿದ್ದಾರೆ—"ಮೊನ್ನೆ ಮೊನ್ನೆಯ ವರೆಗೆ ಹೆಣ್ಣುಮಕ್ಕಳ ಮದುವೆ ತಾಯ್ತಂದೆಗಳಿಗೆ ದೊಡ್ಡ ಸಮಸ್ಯೆಯೇ ಆಗಿರಲಿಲ್ಲ. ಗಂಡಿನ ಕಡೆಯವರು ಹೆಣ್ಣನ್ನು ಹುಡುಕಿಕೊಂಡು ಬರುತ್ತಿದ್ದರು. ಗಂಡಿನವರು ಕನ್ಯಾಶುಲ್ಕ ವನ್ನು ತೆರುತ್ತಿದ್ದರು. ಗಂಡಿನಿಂದ ಹಣ ತೆಗೆದುಕೊಂಡು ಮಗಳನ್ನು ಕೊಡುವ ಸಂಪ್ರದಾಯವನ್ನು ಬೌಧಾಯನನು ಕಟುವಾಗಿ ವಿರೋಧಿಸಿದ್ದಾನೆ. ಹಣವನ್ನು ಕೊಟ್ಟು ಕೊಂಡುಕೊಂಡ ಸ್ತ್ರೀಯನ್ನು ಪತ್ನಿಯೆಂದು ಕರೆಯಲಾಗುವುದಿಲ್ಲ. ಅವಳು ದಾಸಿಯೇ ಸರಿ.[1]

ಪ್ರಕೃತ, ಉಚ್ಛಾಸ್ತ್ರದ ಅನುಸರಣೆ ನಮಗಿಲ್ಲಿ ವಿಷಯವಲ್ಲ. ಕ್ರಮಬದ್ಧ ಹಾಗೂ ಧರ್ಮಶಾಸ್ತ್ರವನ್ನು ಅನುಸರಿಸುವ ಪರಂಪರಾಗತ ವಿವಾಹ ವಿಧಿಯೇ ಪ್ರಸ್ತುತ. ಕನ್ಯಾಶುಲ್ಕ ಅಶಾಸ್ತ್ರೀಯ. ಹಾಗೆಯೇ ವರದಕ್ಷಿಣೆಯೆಂಬುದು ಶಾಸ್ತ್ರವಿಧಿಯನ್ನೊಳ ಗೊಂಡಿದ್ದರೂ ಅದು ವರನಾಗಲಿ ವರನ ಕಡೆಯವರಾಗಲಿ ಒತ್ತಾಯಿಸಿ ಕೇಳಿ ಪಡೆಯುವ ವಿಷಯವಾಗಿರಕೂಡದು. ಶಾಸ್ತ್ರದಂತೆ, ದಾನದೊಂದಿಗೆ ಯಥಾಶಕ್ತಿ ದಕ್ಷಿಣೆಯೇನೋ ಇರಬೇಕಾಗುತ್ತದೆ. ಹವ್ಯಕರಲ್ಲಿ ಸಾಮಾನ್ಯವಾಗಿ ಅದು (ವರದಕ್ಷಿಣೆ ಎಂಬುದು) ನಾಲ್ಕು ರೂಪಾಯಿ. ಯಾವುದೇ ದಕ್ಷಿಣೆಯನ್ನು ಅಷ್ಟು ಕೊಡಿ, ಇಷ್ಟು ಕೊಡಿ— ಎಂದು ಆಗ್ರಹ ಪಡಿಸುವುದು ಶಾಸ್ತ್ರವಿರುದ್ಧ. ಸ್ವಸಂತೋಷಪೂರ್ವಕ, ಅನಾಕಾಂಕ್ಷಿ ವರನಿಗೆ ಯತ್ಕಿಂಚಿತ್ತಿರಲಿ, ಯನ್ಮಹತ್ತಿರಲಿ, ಕೊಡುವ ದಕ್ಷಿಣೆಗೆ ಶಾಸ್ತ್ರವಿಧಿಯಲ್ಲಿ ಹಾಗೂ ಪುರಾಣೇತಿಹಾಸಗಳಲ್ಲಿ ಪುರಸ್ಕಾರವುಂಟು.

ವಿವಾಹವೆಂಬುದು ಒಂದು ಸಾಮಾಜಿಕ ಶುಭಕಾರ್ಯವೇ ಸರಿ. ಅದು ಸರಿಯಾಗಿ ಯಶಸ್ವಿಯಾಗಬೇಕಾದರೆ, ಅದರಲ್ಲಿ ಮುಖ್ಯಪಾತ್ರರಾದವರಿಗೆ ಅವರವರ ದೃಷ್ಟಿಗೆ ತೃಪ್ತಿಕರವೆನಿಸಬೇಕು. ಕನ್ಯೆ ಹಾಗೂ ಕನ್ಯೆಯ ಕಡೆಯವರು ಮದುವೆಯಲ್ಲಿ ಮೆಚ್ಚಿ ಕೊಳ್ಳತಕ್ಕ ಅಂಶಗಳಾವುವು ? ಅದಕ್ಕೆ ಈ ಕೆಳಗಿನ ಸುಭಾಷಿತ ಲಕ್ಷ್ಯಾರ್ಹವಾಗಿದೆ—

ಕನ್ಯಾ ವರಯತೇ ರೂಪಂ ಮಾತಾ ವಿತ್ತಂ ಪಿತಾ ಶ್ರುತಂ
ಬಾಂಧವಾಃ ಕುಲಮಿಚ್ಛಂತಿ ಮೃಷ್ಟಾನ್ನಮಿತರೇ ಜನಾಃ

ಅಂದರೆ—ಕನ್ಯೆಯು ವರನಲ್ಲಿ ರೂಪವನ್ನು ಆರಿಸಿಕೊಳ್ಳುತ್ತಾಳೆ. ಅವಳ ತಾಯಿ ಶ್ರೀಮಂತಿಕೆಯನ್ನು ಆರಿಸುತ್ತಾಳೆ. ತಂದೆ ವಿದ್ಯೆಯನ್ನು ಆರಿಸಿಕೊಳ್ಳುತ್ತಾನೆ. ಬಾಂಧವರು ಕುಲವನ್ನು ಪರೀಕ್ಷಿಸಿ ಮಾನ್ಯ ಮಾಡುತ್ತಾರೆ. ಇನ್ನಿತರರು ಮದುವೆಯ ಮೃಷ್ಟಾನ್ನ ಭೋಜನಕ್ಕೆ ಮಹತ್ತ್ವ ಕೊಡುತ್ತಾರೆ.

## ಮದುವೆಯ ಸಿದ್ಧತೆ

1, 2. ಎಲ್ಲ ಶುಭಕಾರ್ಯಗಳ ಪ್ರಾರಂಭದಲ್ಲಿ ಆದಿವಂದ್ಯ, ವಿಘ್ನನಾಶಕ, ಜ್ಞಾನದಾಯಕ, ಮಂಗಲಪ್ರದ ಶ್ರೀ ಮಹಾಗಣಪತಿಯ ಪ್ರಾರ್ಥನೆಯಾಗಬೇಕು. ಇಲ್ಲಿ ಎರಡು ಹಾಡುಗಳೂ ತ್ರಿಪದಿ (ಚಿತ್ರಾಯತನ)ಗಳು. ಇವುಗಳಲ್ಲಿ ಮೊದಲನೆಯದು ದಕ್ಷಿಣ ಕನ್ನಡ ಜಿಲ್ಲೆಯದು ; ಮದೂರಿನ (ಮಧುಪುರ ಸ್ಥಿರವಾಸನಾದ) ಮಹಾ ಗಣಪತಿಯ ಪ್ರಾರ್ಥನೆ—ಪ್ರಾಸಬದ್ಧವಾಗಿದೆ. ಎರಡನೆಯದು ಉತ್ತರ ಕನ್ನಡ ಜಿಲ್ಲೆಯದು ; ಇದರಲ್ಲಿ ದ್ವಿತೀಯಾಕ್ಷರ ಪ್ರಾಸವಿಲ್ಲದ ಸೊಲ್ಲುಗಳೂ ಇವೆ. ಗಣನಾಥನು ಬೃಹತ್ಕಾಯನಾಗಿ ತೋರಿದರೂ ಉದ್ದ ಹೆಸರುಗಳೊಳಗಿರುವಷ್ಟು ಸೂಕ್ಷ್ಮನೂ ಹೌದು. ಬೆಳವಿನ ಕಾರ್ಯಕ್ಕೆ ಒಡೆಯನಾಗಿ ಎದ್ದು ಬಂದು ಭಜಕರಿಗೆ ಅನುಕೂಲ ನಾಗುತ್ತಾನೆ. ಗಣೇಶ ಪೂಜೆಯಲ್ಲಿ ಇವನ್ನು ಹಾಡಲಾಗುತ್ತದೆ. ಇನ್ನೀಗ ಮದುವೆಯ ಹಾಡುಗಳ ಪ್ರಾರಂಭ—ಹೆಣ್ಣು ಕೇಳುವಲ್ಲಿಂದಲೇ ಪ್ರಾರಂಭವಾಗುತ್ತದೆ.

3. ಹೆಣ್ಣು ಕೇಳುವ ಹಾಡಾದರೂ ಹಾಡಿನ ಕಥಾವಸ್ತು ಪಾರ್ವತೀ ಕಲ್ಯಾಣದ ಪೂರ್ಣ ಕಥೆಯನ್ನೊಳಗೊಂಡಿದೆ. ಶಿವನ ಕಡೆಯವರು (ಹರಿಹರನ ಗಿರಿಜಾಕಲ್ಯಾಣ ದಲ್ಲಿ ಹೇಳಿರುವಂತೆ ಸಪ್ತರ್ಷಿಗಳು) ಪಾರ್ವತಿಯನ್ನು ಶಿವನಿಗೆ ಕೊಡುವಂತೆ ಗಿರಿರಾಜ ನಲ್ಲಿ ಕೇಳುತ್ತಾರೆ. ಹೀಗೆ ಹೆಣ್ಣು ಕೇಳುವ ಈ ಹಾಡುಗಳು ಸಮಾಜದಲ್ಲಿ ಹೆಣ್ಣಿಗಿರುವ ಹೆಚ್ಚಿನ ಗೌರವದ ದ್ಯೋತಕಗಳಾಗಿವೆ. ಪರ್ವತರಾಜನು ಮಗಳನ್ನು ಕರೆದು ತೊಡೆಯ ಮೇಲೆ ಕುಳ್ಳಿರಿಸಿ 'ನಿನಗೆ ಗಂಡನು ಯಾರಾಗಬಹುದು ?' ಎಂದು ಕೇಳುತ್ತಾನೆ. ಕನ್ಯೆಯ ಇಚ್ಛೆಗೆ ಮಾನ್ಯತೆಯಿದ್ದುದು ಇದರಿಂದ ವೇದ್ಯವಾಗುತ್ತದೆ. ಐದು ವರ್ಷದ ಹುಡುಗಿ ಆಕೆ. ಅವಳಿಗಿದ್ದ ಶಿವಭಕ್ತಿ ಅಸಾಮಾನ್ಯ ! ತಾನು ತಪಸ್ಸು ಮಾಡಿ ಶಿವ ನನ್ನೊಲಿಸುವುದಾಗಿ ಹೇಳುತ್ತಾಳೆ. ಶಿವನು ಪ್ರತ್ಯಕ್ಷನಾದಾಗ ಗಾಂಧರ್ವ ವಿಧಿಯಂತೆ ಅವನನ್ನು ವರಿಸಲೊಪ್ಪುವುದಿಲ್ಲ. ಅಂತಹ ಸುಸಂಸ್ಕೃತೆ ಆಕೆ. ಮುಂದೆ ಬ್ರಾಹ್ಮ ವಿವಾಹ ವಿಧಿ ಏರ್ಪಡುತ್ತದೆ. ಶಿವನ ದಿಬ್ಬಣ ಬರುತ್ತದೆ. ಸಭೆಯಲ್ಲಿ ಪುರೋಹಿತರ ಮೂಲಕ 'ಮಂತ್ರ ಬಿನ್ನಹ' ಆಗುತ್ತದೆ (42 ನೋಡಿ).

4. 'ಸಾಗರದ ಹೆಣ್ಣು ಕೇಳಿದ್ದು' ಇನ್ನೊಂದು ವೈಶಿಷ್ಟ್ಯದ ಹಾಡು. 'ನಿನಗೆ ಸರಿಬಂದ ವರನನ್ನು ತಿಳಿಸು' ಎಂದು ಕ್ಷೀರಸಾಗರನು ತನ್ನ ಮಗಳಾದ ಲಕ್ಷ್ಮಿಯನ್ನು ಕೇಳಿದಾಗ, ಆಕೆ ತಾನು ವನಮಾಲಿಯನ್ನು ವರಿಸುವೆನೆಂದಳು. ನಾರದನು ಈ ಸಂಗತಿಯನ್ನು ತಿಳಿಸಲು ದ್ವಾರಕೆಗೆ ಬಂದನು. ಅದನ್ನು ಕೇಳಿ, ಶ್ರೀಕೃಷ್ಣನಿಗೆ ಹೆಣ್ಣು ಕೇಳಲು ವಸುದೇವ ಬಲರಾಮರು ಸಾಗರನಲ್ಲಿಗೆ ಹೋದರು. ಸಾಗರನು ಆಕೆಯನ್ನು ಕೃಷ್ಣನಿಗೆ ಕೊಡಲೊಪ್ಪುತ್ತಾನೆ. ಲಕ್ಷ್ಮಿಯು ಕ್ಷೀರಸಾಗರ ಕನ್ಯೆ, ಕೃತಯುಗದವಳು, ಸಮುದ್ರಮಥನದ ವೇಳೆ ಜನಿಸಿದವಳು, ಶ್ರೀಮನ್ನಾರಾಯಣನಿಗೆ ವಧುವಾದವಳು. ದ್ವಾಪರಯುಗದ ಶ್ರೀಕೃಷ್ಣನಿಗೆ ಆಕೆಯನ್ನು ಕೇಳುವುದೆಂಬುದು ಪುರಾಣಕ್ಕೆ ಸರಿ ಹೊಂದುವುದಿಲ್ಲ. ಹೀಗಿರುವಾಗ ಇಲ್ಲಿ ಶ್ರೀಮನ್ನಾರಾಯಣ ಹಾಗೂ ಶ್ರೀಕೃಷ್ಣ ಇವರಿಬ್ಬರು ಅಭಿನ್ನರು—ಎಂದು ಭಕ್ತಿಪಾರವಶ್ಯ ದೃಷ್ಟಿಯಿಂದ ಈ ಘಟನೆಯನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ.

5. ರುಕ್ಮಿಣಿ ಕೃಷ್ಣನಿಗೆ ಪತ್ರ ಬರೆದುದನ್ನು ನೋಡಿದರೆ, ಹಿಂದೆ ಕನ್ಯಾಮಣಿಯರು ತಮಗೆ ಮೆಚ್ಚಿಕೆಯಿಲ್ಲದ ವರನಿಗೆ ಮದುವೆ ಮಾಡಿಕೊಡುವ ಹಿರಿಯರಿಗೆ ವ್ಯತಿರಿಕ್ತವಾಗಿ ನಡೆಯುತ್ತಿದ್ದುದು ತಿಳಿದುಬರುತ್ತದೆ. ಹೆಣ್ಣು ಕೇಳಿದ ಅನಂತರ, ಕನ್ಯೆಯನ್ನು ಕೊಡುವುದು ಮತ್ತು ತರುವುದು ನಿಶ್ಚಯವಾಯಿತೆಂದರೆ ಸರಿ. ನಿಶ್ಚಯ ತಾಂಬೂಲವೇರ್ಪಡುತ್ತದೆ.

6. ವರನ ಮತ್ತು ಅವನ ಮನೆಯ ಸೌಕರ್ಯಗಳು ಹಿರಿಮೆಗಳು ಇಲ್ಲಿ ಚರ್ಚಿತವಾಗುತ್ತವೆ. 'ನಿಶ್ಚಯ ತಾಂಬೂಲ' ಕಾರ್ಯಕ್ರಮವನ್ನು 'ಬದ್ಧ' ಎಂದು ಕರೆಯುವುದು ಹವಿಕರಲ್ಲಿ ರೂಢಿ. 'ವಾಗ್ದಾನ ಕನ್ಯಾವರಣ ವಿಧಿ' ಎಂದು ಧರ್ಮಶಾಸ್ತ್ರದಲ್ಲಿ ಇದನ್ನು ಕರೆಯಲಾಗಿದೆ. ನೃಸಿಂಹ ಸೂರಿ ವಿರಚಿತ 'ಪ್ರಯೋಗ ಪಾರಿಜಾತ' ಎಂಬ ಗ್ರಂಥದಲ್ಲಿ ಈ ಕಾರ್ಯಕ್ರಮವನ್ನು ಹೀಗೆ ವಿವರಿಸಿದೆ—ವರನ ತಂದೆಯ ಕಡೆಯ ಇಬ್ಬರು ಅಥವಾ ನಾಲ್ವರು, ಅಷ್ಟೇ ಮಂದಿ ಪುರಂಧ್ರಿಯರು (ಮುತ್ತೈದೆಯರು) ಸಹಿತ ಮಂಗಲಗೀತ (ಶೋಭಾನೆ) ತೂರ್ಯಘೋಷದೊಡನೆ ಕನ್ಯೆಯ ಮನೆಗೆ ಹೋಗುವುದು. ಅಲ್ಲಿ ಕನ್ಯಾದಾತೃವಿನ ಜ್ಞಾತಿಬಾಂಧವರೂ ಇದ್ದುಕೊಂಡು ಶುಭಪೀಠಾಸನದಲ್ಲಿ ಪೂರ್ವಮುಖವಾಗಿ ಕುಳಿತ ವಿವಾಹ ಕನ್ಯೆಯ ಕೈಯಲ್ಲಿ ಫಲವನ್ನಿತ್ತು ಪುರೋಹಿತರು ಸಂಕಲ್ಪವನ್ನು (ಇಂತಿಂತಹ ಗೋತ್ರದ ಇಂಥವರ ಮಗಳನ್ನು ಇಂತಿಂತಹ ಗೋತ್ರದ ಇಂಥವರ ಮಗನಾದ ವರನಿಗೆ ಕೊಡುವುದು—ಎಂಬುದಾಗಿ) ಹೇಳತಕ್ಕದು. ಹೀಗೆ ನಡೆಯುವ ಬದ್ಧದಲ್ಲಿ ಮುಂದೆ ಆಗಲಿರುವ ಮದುವೆಯ ದಿನ ಮುಹೂರ್ತಾದಿಗಳು ನಿಶ್ಚಿತವಾಗುತ್ತವೆ. ಮತ್ತೆ ವರನ ಹಾಗೂ ಕನ್ಯೆಯ ಗೃಹಗಳಲ್ಲಿ ವಿವಾಹದ ಸಿದ್ಧತೆಗಳು ಆಗತೊಡಗುತ್ತವೆ.

7, 8. ಇನ್ನೀಗ ಎರಡೂ ಕಡೆ ಈ ಮದುವೆಯ ಸಮಾರಂಭಕ್ಕಾಗಿ ಅಕ್ಕಿ ತೊಳಸುವ (ಬತ್ತ ಕುಟ್ಟುವ) ಕೆಲಸ ನಡೆಯುವುದು. ದ್ವಾರಕೆಯಲ್ಲಿ ಕೃಷ್ಣನ ತಂಗಿ ಸೌಭದ್ರೆ ಸ್ವತಃ ಅಕ್ಕಿ ತೊಳಸುತ್ತಾಳೆ. ಒನಕೆ ಒರಲುಗಳನ್ನು ಧೂಪ–ಆರತಿಗಳಿಂದ ಪೂಜಿಸಿ, ಮುಂಬರುವ ಶುಭಕಾರ್ಯಕ್ಕಾಗಿ ಹೆಂಗುಸರು ಅಕ್ಕಿ ತೊಳಸುವರು.

9, 10. ಅಕ್ಷತೆ ಕಲಸುವುದು, ಕೇರಿ ಕರೆಯುವುದು ಅನಂತರ ಆಗಬೇಕಾದುದು. ಹರಿವಾಣದಲ್ಲಿ ಅಕ್ಷತೆಯನ್ನು ಹಿಡಿದುಕೊಂಡು, ದೇವಕಿ ತನ್ನ ಪಟ್ಟಣದ ಕೇರಿ ಕೇರಿಗಳನ್ನು ಸುತ್ತಾಡುತ್ತ ಮದುವೆಗೆ ಕರೆದಳೆಂದು ಹಾಡಿನಲ್ಲಿ ಹೇಳಿದೆ. ಇನ್ನೊಂದೆಡೆ ದೂರದಲ್ಲಿರುವ ಬಂಧು ಬಳಗಕ್ಕೆ, ವೇದಶಾಸ್ತ್ರ ಪುರಾಣ ಪಂಡಿತರಿಗೆ ಓಗೆ ಎಲ್ಲ ಜನರಿಗೂ ಪತ್ರವನ್ನು ಕಳುಹುವ ಏರ್ಪಾಡಾಗುತ್ತದೆ.

11, 12. ಚಪ್ಪರ ಹಾಕುವುದು, ತೋರಣ ಕಟ್ಟುವುದು ಏರ್ಪಡುತ್ತದೆ. ಈ ಕಾರ್ಯಗಳು ಕೂಡ, ಗಣಪತಿಯಲ್ಲಿ ನಿರ್ವಿಘ್ನವನ್ನು ಬೇಡಿಯೇ ನಡೆಯುತ್ತವೆ. ತೋರಣ ಕಟ್ಟಲು ಗುತ್ತಿನಾಡಿನಿಂದ ಎಳೆಗಳನ್ನು ತರಿಸಲಾಗುತ್ತದೆ. ತೋರಣ ಕಟ್ಟಿದವನಿಗೆ ಉಡುಗೊರೆ, ದವಸಧಾನ್ಯಗಳ ಪಡಿ ಸಲ್ಲುತ್ತದೆ.

## ವಿವಾಹಪೂರ್ವ ಕ್ರಿಯಾಭಾಗ

13–16. ಇನ್ನೀಗ ವಧುವಿಗೆ ಆಕೆಯ ಮನೆಯಲ್ಲಿ ಮಂಗಲ ಸ್ನಾನದ ಏರ್ಪಾಡು. ಅದಕ್ಕಾಗಿ ಮೊದಲು ಎಣ್ಣೆ ಎರೆಯುವುದು, ಅನಂತರ ಕಲಶ ಸ್ನಾನ. ಇದೇ ರೀತಿ ಇನ್ನೊಂದೆಡೆ ವರನಿಗೆ, ಅವನ ಮನೆಯಲ್ಲಿ 'ಎಣ್ಣೆ ಹನಿಸುವುದು' ನಡೆಯುತ್ತದೆ. ಅನಂತರ ಮಂಗಳ ಕಲಶ ಸ್ನಾನ. ಅದರ ವಿಧಿ ವಿಧಾನವನ್ನು ಶೋಭಾನೆಯೇ ಪ್ರತಿಪಾದಿಸುತ್ತದೆ. ಆ ಕಡೆಯಲ್ಲಿ ವರನಿಗೂ ಎಣ್ಣೆ ಹನಿಸಲಾಗುತ್ತದೆ. (17–21) ನಾಂದಿ, ಪನ್ನೆ, ಕಲಶ ಮೀಯುವುದು, ಸಮಾವರ್ತನೆಗಳ ಕಾರ್ಯಕ್ರಮಗಳು ಅನಂತರ ಒಂದೊಂದಾಗಿಯೇ ನೆರವೇರುತ್ತವೆ.

19. ಪನ್ನೆ ಎಂದರೆ ಕ್ಷೌರ. ವಸುದೇವನು ಶ್ರೀಕೃಷ್ಣನಿಗೆ ವಿವಾಹದ ಮುಂಚಿತವಾಗಿ ಪನ್ನೆ ಮಾಡಿಸಿದ ವಿಧಾನವನ್ನಿಲ್ಲಿ ವಿವರಿಸಲಾಗಿದೆ. ಪನ್ನೆಯಾದ ಮೇಲೆ ಮಂಗಲ ಸ್ನಾನವಿರುತ್ತದೆ.

20. ಕಲಶಸ್ನಾನವೂ ವರ್ಣಿತವಾಗಿದೆ. 'ನಾಂದಿ' ಎಂಬುದು ನಾಟಕಾರಂಭದಲ್ಲಿ ಮಾಡುವ ದೇವತಾ ಸ್ತುತಿಗೆ ಹೆಸರು. ಕಾವ್ಯಾರ್ಥಸೂಚಕವಾಗಿ ಆಶೀರ್ವಾದ ನಮಸ್ಕಾರ ರೂಪವಾಗಿರುವ ಶ್ಲೋಕವೇ ನಾಂದಿ—ಎಂದು ಭರತನ ನಾಟ್ಯಶಾಸ್ತ್ರದಲ್ಲಿ

ಹೇಳಿದೆ. ಇಷ್ಟದೇವತೆಗಳನ್ನು ವಂದಿಸುವ (ಸಂತೋಷ ಪಡಿಸುವ) ಧ್ಯಾನ–ಪೂಜಾ ಕ್ರಿಯೆಗಳಿಗೆ 'ನಾಂದಿ' ಎನ್ನುತ್ತಾರೆ. "ಎಲ್ಲಿ ಗೀತವಾದ್ಯಗಳ ಶುಭನಾದ ಕೇಳಿಬರುವುದೋ ಅಲ್ಲಿ ರಾಕ್ಷಸರಾಗಲಿ, ವಿಘ್ನ ಮಾಡುವವರಾಗಲಿ ನಿಲ್ಲುವುದಿಲ್ಲ. ವಿವಾಹ ಮಂಟಪದಲ್ಲಿ ಯಜ್ಞ ನಡೆಸುವಲ್ಲಿ, ನಾಂದಿಯ ಸದ್ದನ್ನು ಕೇಳಿದೊಡನೆ ಹಿಂಸ್ರಶಕ್ತಿಗಳು ಓಡಿಹೋಗುವವು. ನಾಂದಿಯ ಶಬ್ದಗಳು, ಹಾಡುಗಳು, ಚಿತ್ರವಾದ್ಯಗೀತಗಳು— ಇವೆಲ್ಲ ವೇದಮಂತ್ರದ ಅರ್ಥಪ್ರವಚನಕ್ಕೆ ಸಮಾನ" ಎಂದು ದೇವತೆಗಳು ನಾಟ್ಯಶಾಸ್ತ್ರಕಾರನಾದ ಭರತನಿಗೆ ಹೇಳಿದ್ದರು.[2] ಪ್ರಕೃತದ 'ನಾಂದಿ' ಎಂಬುದು ಮದುವೆ ಮುಂತಾದ ಶುಭ ಸಮಾರಂಭಗಳ ಪ್ರಾರಂಭದಲ್ಲಿ ಮಾಡುವ ಪಿತೃಗಣದ ಪೂಜೆಯೇ ಮುಖ್ಯವಾಗಿ ಉಳ್ಳುದು—

> ಕನ್ಯಾಪುತ್ರ ವಿವಾಹೇ ಚ ಪ್ರವೇಶೇ ನವವೇಶ್ಮನಃ
> ನಾಮಕರ್ಮಣಿ ಬಾಲಾನಾಂ ಚೂಡಾಕರ್ಮಾದಿಕೇ ತಥಾ
> ಸೀಮಂತೋನ್ನಯನೇ ಚೈವ ಪುತ್ರಾದಿ ಮುಖದರ್ಶನೇ
> ನಾಂದೀಮುಖಂ ಪಿತೃಗಣಂ ಪೂಜಯೇತ್ ಪ್ರಯತೋ ಗೃಹೀ
> (ವಿಷ್ಣುಪುರಾಣ)

ಅಂದರೆ, ಮಗಳ ಅಥವಾ ಮಗನ ಮದುವೆಯಲ್ಲಿ, ಹೊಸಮನೆಯ ಪ್ರವೇಶದಲ್ಲಿ, ಮಕ್ಕಳ ನಾಮಕರಣದಲ್ಲಿ, ಚೌಲದಲ್ಲಿ, ಸೀಮಂತದಲ್ಲಿ, ಜನ್ಮೋತ್ಸವದಲ್ಲಿ ನಾಂದೀ ಮುಖರೂದ ಪಿತೃಗಣದವರನ್ನು ಗೃಹಸ್ಥನು ಪೂಜಿಸಬೇಕು. ವಿವಾಹಾದಿ ಶುಭ ಸಮಾರಂಭಗಳಲ್ಲಿ ನಾಂದೀ ಕ್ರಿಯೆಯನ್ನು ಮಾಡಿ ನಿರ್ವಿಘ್ನವಾಗಿ ಪ್ರಸ್ತವು ನೆರವೇರುವಂತೆ ಪ್ರಾರ್ಥಿಸಿ, ವರನ ಕೈಗೆ ಕಂಕಣವನ್ನು (ಪಟ್ಟೆನೂಲಿನಲ್ಲಿ ಅರಿಸಿನದ ಕೊಂಬನ್ನು ಸೇರಿಸಿ) ಕಟ್ಟುವರು. ಕನ್ಯೆಗೂ ಹಾಗೆಯೇ ಆಕೆಯ ಮನೆಯಲ್ಲಿ ನಾಂದಿ ಮಾಡಿ ಕಂಕಣ ಕಟ್ಟಲಾಗುವುದು. ಕಂಕಣ ಧಾರಣೆ ಮಾಡಿದ ವಧೂವರರು ಲಕ್ಷ್ಮೀನಾರಾಯಣ ಸ್ವರೂಪರು. ಅವರಿಗೆ ಪ್ರಸ್ತುತ ಶುಭಕಾರ್ಯ ಮುಗಿಯುವ ವರೆಗೆ ಸೂತಕಾದಿ ಅಪವಿತ್ರತೆಗಳ ಅಂಟುವಿಕೆಯಿಲ್ಲ.

## ಸಮಾವರ್ತನೆ–ಕಾಶೀಯಾತ್ರೆ

21. 'ಸಮಾವರ್ತನೆ' ಎಂಬುದು ವಿವಾಹ ಪೂರ್ವದ ಸಂಸ್ಕಾರವಿಧಿ. ಹಿಂದಿನ ಕಾಲದಲ್ಲಿ ಗುರುಕುಲದಲ್ಲಿ ಬ್ರಹ್ಮಚಾರಿಯಾಗಿ ಕಠಿನ ಜೀವನ ನಡೆಸಿ, ವಿದ್ಯಾಪಾರಂಗತನಾದವನು 'ಸ್ನಾತಕ' ಎಂದೆನಿಸುತ್ತಿದ್ದನು. ಮುಂದೆ ಅವನು "ಗೃಹಸ್ಥಾಶ್ರಮವನ್ನು ಸ್ವೀಕರಿಸಲಿಕ್ಕಾಗಿ ಮಾಡತಕ್ಕ ವೈದಿಕ ಸಂಸ್ಕಾರಕ್ಕೆ ಸಮಾವರ್ತನವೆಂದು ಹೆಸರು."[3] 'ಸಮಾವರ್ತನ' ಎಂಬ ಶಬ್ದಕ್ಕೆ ಗುರುಕುಲದಿಂದ ಹಿಂದಿರುಗುವುದು ಎಂದು ಅರ್ಥವಲ್ಲ

ವೆಂದು ವೇದಮೂರ್ತಿ ಪರಕ್ಕಜೆ ಶಂಭು ಭಟ್ಟರು ತಮ್ಮ ಲೇಖನದಲ್ಲಿ ದೃಢಪಡಿಸಿರುತ್ತಾರೆ. ಗುರುಕುಲಕ್ಕೆ ಹೋಗದೆ, ತಂದೆಯಿಂದಲೇ ವಿದ್ಯಾಭ್ಯಾಸ ಮಾಡಿಕೊಂಡವನಿಗೂ ವಿವಾಹಪೂರ್ವದಲ್ಲಿ ಸಮಾವರ್ತನ ವಿಧಿಯಿರುವುದು ಇದಕ್ಕೊಂದು ಆಧಾರ. 'ಲಬ್ಧಾನುಜ್ಞಃ ಸಮಾವೃತ್ತಃ' ಎಂದು ಅಮರಕೋಶದಲ್ಲಿ ಹೇಳಿದೆ. ಗೃಹಸ್ಥಾಶ್ರಮ ಸ್ವೀಕಾರಕ್ಕಾಗಿ ಗುರುವಿನಿಂದ ಅನುಜ್ಞೆ ಪಡೆಯುವುದೇ ಸಮಾವರ್ತ ವಿಧಿಯ ಮುಖ್ಯ ಭಾಗ. "ಸಂ—ಚೆನ್ನಾಗಿ, ಆ—ಸುತ್ತಲೂ ವ್ಯಾಪಿಸಿಕೊಂಡು, ವರ್ತನ—ಇರುವದು. ವಿದ್ಯೆ ಕಲಿಸುವವನ ಅಧೀನದಲ್ಲೇ ಇದ್ದ ಬ್ರಹ್ಮಚಾರಿ ಅದನ್ನು ಬಿಟ್ಟು ಎಲ್ಲೆಡೆಯೂ ಸ್ವತಂತ್ರವಾಗಿ ಹೋಗುವಂತಾಗುವುದು ಅಥವಾ ಇರುವಂತಾಗುವುದು ಯಾವ ವೈದಿಕ ಕ್ರಿಯೆಯಿಂದಾಗುವದೋ ಆ ವೈದಿಕ ಕ್ರಿಯೆಗೆ ಸಮಾವರ್ತನವೆಂದು ಹೆಸರು."[4]

ಡಾ|| ಚಿದಾನಂದ ಮೂರ್ತಿಯವರು ಗುರುಕುಲದಲ್ಲಿ ನಡೆಯುತ್ತಿದ್ದ ಸಮಾವರ್ತನದ ವಿಚಾರವಾಗಿ ಹೀಗೆಂದಿದ್ದಾರೆ—"ವಿದ್ಯಾರ್ಥಿಯು ಸಮಾವರ್ತನ ದಿನ ಕ್ಷೌರ ಮಾಡಿಸಿಕೊಂಡು, ಸುಗಂಧ ಜಲದಲ್ಲಿ ಸ್ನಾನ ಮಾಡಿ, ಹೊಸ ವಸ್ತ್ರಗಳನ್ನುಟ್ಟು ಅಲಂಕಾರಗಳನ್ನು ಧರಿಸಿ, ಹೋಮಾದಿಗಳು ಮುಗಿದ ಮೇಲೆ ವಿದ್ವಾಂಸರ ಸಭೆಗೆ ಹೋಗುತ್ತಿದ್ದನು. ಅಲ್ಲಿ ಅವನ ಗುರುವು ಅವನೊಬ್ಬ ವಿದ್ವಾಂಸನೆಂದು ಸಭೆಗೆ ಪರಿಚಯ ಮಾಡಿಕೊಡುತ್ತಿದ್ದನು. ಕಠಿಣ ನಿಯಮಗಳ ವಿದ್ಯಾರ್ಥಿಜೀವನ ಮುಗಿದು ಧರ್ಮಾವಿರುದ್ಧ ಭೋಗದ ಗೃಹಸ್ಥ ಜೀವನಕ್ಕೆ ಅಂದಿನಿಂದ ಅವನು ಅರ್ಹನಾಗುತ್ತಿದ್ದನು."[5] ಸಮಾವರ್ತನ ಸಂಕಲ್ಪದಲ್ಲಿ—"ಮಮ ಗೃಹಸ್ಥಾಶ್ರಮ ಅರ್ಹತಾ ಸಿದ್ಧಿದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಸಮಾವರ್ತನಂ ಕರಿಷ್ಯೇ"—ಎಂದು ಹೇಳಲಾಗುತ್ತದೆ.[6] ಹೋಮವೂ ಈ ವಿಧಿಯ ಒಂದು ಅಂಗ. 'ಕಾಶೀ ಪ್ರಯಾಣ' ಎಂಬುದೂ ಸಮಾವರ್ತನದ ಒಂದು ಕಾರ್ಯಭಾಗ.

"ಎಷ್ಟೋ ಮಂದಿ ಸ್ನಾತಕರು ತಮ್ಮ ವಿದ್ಯೆ ಮುಗಿದ ಮೇಲೆ, ಉನ್ನತ ವಿದ್ಯಾಭ್ಯಾಸಕ್ಕಾಗಿ ದೇಶಸಂಚಾರ ಮಾಡುತ್ತಿದ್ದರೆಂದು ಕಾಣುತ್ತದೆ. ಉನ್ನತ ವಿದ್ಯೆಗಾಗಿ ಕಾಶಿಗೆ ಹೋಗುತ್ತಿದ್ದ ಸ್ನಾತಕನನ್ನು ಗೃಹಸ್ಥಾಶ್ರಮದ ಕಡೆಗೆ ತಿರುಗಿಸುತ್ತಿದ್ದುದರ ಅಣಕುನಾಟಕ ಈಗಿನ ಕಾಶೀಯಾತ್ರೆಯಲ್ಲಿದೆ."[7]

ಮೇಲಿನ ಮಾತು ನಿಜವಿರಬಹುದು. ಇಂದಿನ ಸಮಾವರ್ತನವು ವರನ ಸ್ವಗೃಹದಲ್ಲಿಯೇ ನಡೆಯುತ್ತದೆ. 21ನೆಯ ಹಾಡಿನಲ್ಲಿ ವ್ಯಕ್ತವಾಗುವಂತೆ, ಸಮಾವರ್ತನೆಯಲ್ಲಿ ವರನು ತನಗೆಣೆಯಾದ ಮಡದಿಯಿಲ್ಲವಲ್ಲಾ ! ಎಂದು ನೊಂದು ವೈರಾಗ್ಯದಿಂದ ಕಾಶಿಗೆ ಹೊರಡುವಂತೆ ವರ್ಣಿತನಾಗಿದ್ದಾನೆ. ಅಕ್ಕಿ, ಬೇಳೆ-ಗಂಟು ಮೂಟೆ ಹೆಗಲಿಗೆ ಹಾಕಿಕೊಂಡು, ಹಾವುಗೆ ಮೆಟ್ಟಿಕೊಂಡು, ಹವಳಸರ ಕಟ್ಟಿಕೊಂಡು, ಕೊಡೆ ಹಿಡಿದು ಹೊರಡುತ್ತಾನೆ. ತಾಯಿಯೊಡನೆ ಅನುಮತಿ ಕೇಳುತ್ತಾನೆ. ಹೊರಟು ಬರುತ್ತಲೇ

ಶುಭಶಕುನಗಳಾಗುತ್ತವೆ. ಹತ್ತು ಹೆಜ್ಜೆ ಹೋಗುವಾಗಲೇ ಸೋದರಮಾವನು ಎದುರಾಗಿ ಬಂದು, ತನ್ನ ಮಗಳನ್ನು ಧಾರೆಯೆರೆದು ಕೊಡುವೆನೆಂದೂ ಮುಂದೆ ಗೃಹಸ್ಥಾಶ್ರಮಾನಂತರ ಪತ್ನೀಸಮೇತನಾಗಿ ವೈರಾಗ್ಯ ತಾಳಿ, ಕಾಶಿಗೆ ಹೋಗಬಹುದೆಂದೂ ಸೂಚಿಸುತ್ತಾನೆ. ಅಷ್ಟರಲ್ಲೇ ಕಾಶೀ ಪ್ರಯಾಣದ ನಾಟಕ ಕೊನೆಗೊಳ್ಳುತ್ತದೆ. ಕಾಶೀಯಾತ್ರೆ ಮಾಡಿ ಬಳಲಿದನೆಂದು ಅವನನ್ನು ಕುಳ್ಳಿರಿಸಿ, ಆರತಿ ಬೆಳಗುವ ಕಾರ್ಯ ನಡೆಯುತ್ತದೆ. ಇನ್ನೀಗ ಅವನು ಮದುವಣಿಗ.

## ದಿಬ್ಬಣ

ಮದುವಣಿಗನು ಇಂಥವನೆಂದು ಗೊತ್ತಾಗಬೇಕಾದರೆ ರುಮಾಲು ಬಾಸಿಗಗಳಿರಬೇಕು. (22–24) ಬಾಸಿಗ ಬರುತ್ತದೆ. ಅದನ್ನು ಶಶಿಮುಖಿಯರು ಸಂಭ್ರಮದಿಂದ ಎದುರುಗೊಂಡು ಹಿಡಿದು ತರುತ್ತಾರೆ. ವರನ ತಾಯಿ ಅವನ ತಲೆಗೆ ಒಪ್ಪುವಂತೆ ಕಟ್ಟುವಳು (25–30). ಇನ್ನೀಗ ದಿಬ್ಬಣಕ್ಕೆ ಎಲ್ಲರನ್ನೂ ಕರೆಯಲಾಗುತ್ತದೆ. ದಿಬ್ಬಣದ ವೈಭವವೇ ವೈಭವ ! ವಿವಾಹ ಸಮಾರಂಭ ನಡೆಯುವುದು ವಧುವಿನ ತಂದೆಯ ಮನೆಯಲ್ಲಿ. ದಿಬ್ಬಣಿಗರನ್ನು ಎದುರುಗೊಳ್ಳಲು ಸಿದ್ಧತೆ ನಡೆಯುತ್ತಿರುವಾಗಲೇ ವಾದ್ಯಘೋಷದೊಡನೆ ದಿಬ್ಬಣ ಬಂದು ತಲುಪುತ್ತದೆ.

31, 32. ದಿಬ್ಬಣಿಗರನ್ನು ಉಪಚರಿಸಲು ಪ್ರಾರಂಭವಾಗುತ್ತದೆ. ಬಾಯುಪಚಾರವೇ ಮೊದಲು. ದಿಬ್ಬಣಿಗರನ್ನು 'ಬಂದಿರೋ' ಎಂದು ಕೇಳುವುದು, ಕಾಲ್ಮೊಗಗಳನ್ನು ತೊಳೆಯಲು ನೀರು ಕೊಡುವುದು. ಅವರವರಿಗುಚಿತವಾಗಿ ರತ್ನಗಂಬಳಿ, ನವರತ್ನದ ಹಸೆಮಣೆಗಳಲ್ಲಿ ಕುಳ್ಳಿರಲು ಹೇಳುವುದು. ಪನ್ನೀರ ಸೇಚನೆ, ಸೀಯಾಳ (ಎಳನೀರು), ಪಾನಕ, ಬೆಲ್ಲನೀರು, ಸಕ್ಕರೆ, ಕಲ್ಲುಸಕ್ಕರೆ, ಲವಂಗ ಲಾವಂಚ ಏಲಕ್ಕಿ ಹಾಕಿ ಕಾಯಿಸಿದ ನೀರು—ಇವನ್ನು ಧಾರಾಳವಾಗಿ ಕೊಡುವ ಕಾರ್ಯ ನಡೆಯುತ್ತದೆ. (33–35) ಗಂಡಿನ ಕಡೆಯವರಿಗೆ ಆದರ ಸತ್ಕಾರಗಳಷ್ಟೇ ಸಾಲವು. ಕನ್ಯಾಗೃಹದಲ್ಲಿ ನಡೆಯಲಿರುವ ಎಲ್ಲ ಸಮಾರಂಭಗಳೂ ಮುಗಿಯುವ ವರೆಗೆ ನೆಲಸಲು ಬಿಡಾರ ಬೇಕು. ಇದೊಂದು ಇದ್ದವರ (ಶ್ರೀಮಂತರ) ಮನೆಯ ಮದುವೆ. ದಿಬ್ಬಣದಲ್ಲಿ ಹತ್ತು ಸಾವಿರ ಎತ್ತುಗಳು ಬಂದಿವೆ. ಅವನ್ನು ಕಟ್ಟಲು ಸ್ಥಳಬೇಕು. ವಿದ್ಯಾರ್ಥಿಗಳಿಗೆ ವಿದ್ಯೆ–ಗಣಿತ ಇವನ್ನೆಲ್ಲ ಅಭ್ಯಾಸ ಮಾಡುವುದಕ್ಕಾಗಿ ವಿದ್ಯಾಶಾಲೆಯೇ ಬೇಕು. ಬಿಟ್ಟುಕೊಡತಕ್ಕ ಬಿಡಾರದಲ್ಲಿ ಹಲವು ಕೋಣೆಗಳಿರಬೇಕು, ಸಿಹಿನೀರಿನ ಬಾವಿಯೂ ಇರಬೇಕು. ವೇದಜ್ಞರಿಗಾಗಿ—ವೇದವನ್ನೋದಲೂ ಬರೆಯಲೂ ವೇದದ ಉಪ್ಪರಿಗೆ ಬೇಕು. ಸರಿ, ಬಿಡಾರವೇನೋ ಸಿಕ್ಕಿತು, ಆದರೆ ಅಲಂಕಾರವಿಲ್ಲ. ಮಕ್ಕಳಿಗೆ ಥಾಳಿಲ್ಲ, ಮಕ್ಕಳಿಗೆ ಆಡಲಿಕ್ಕೆ ಗಿಳಿಗಳಿಲ್ಲ—ಇತ್ಯಾದಿಯಾಗಿ ದೂರು ಕೂಡ !

ದಿಬ್ಬಣಿಗರಿಗೆ ಯೋಗ್ಯವಾದ ಬಿಡಾರ ಮನೆ ದೊರೆಯುತ್ತದೆ. ಇನ್ನೀಗ ಮದುವೆಯ ಕ್ರಿಯಾಭಾಗ ಪ್ರಾರಂಭ.

36–41. ವರನೆಂದರೆ ಸಾಕ್ಷಾತ್ ಶಂಕರ ಇಲ್ಲವೇ ಶ್ರೀಮನ್ನಾರಾಯಣನು. ವಧು ಪಾರ್ವತಿ ಅಥವಾ ಮಹಾಲಕ್ಷ್ಮಿ. ಮಗಳನ್ನು ವರಿಸಲು ಬಂದ ವರ (ಅಳಿಯ)ನ ಪಾದ ತೊಳೆಯುವಲ್ಲಿಂದ ವಿವಾಹವಿಧಿ ಪ್ರಾರಂಭವಾಗುತ್ತದೆ. ದಿಬ್ಬಣದಲ್ಲಿ ಬಂದ ಪರಮೇಶ್ವರನ ಪಾದವನ್ನು ಪರ್ವತರಾಯನು ತೊಳೆಯುತ್ತಾನೆ. ಮಡದಿ ಮೇನಕೆ ಚಿನ್ನದ ಗಿಂಡಿಯಲ್ಲಿ ನೀರನ್ನೆರೆಯುತ್ತಾಳೆ. ಅವನ ಪಾದವನ್ನು ತೊಳೆಯಲೆಂದೇ ಗಂಗೆ ಹರಿದು ಬಂದಿರುತ್ತಾಳೆ. ಆ ಮೇಲೆ ಕನ್ಯಾಪಿತನು ವರನನ್ನು ಕೈಹಿಡಿದು ಒಳಗೆ ಬರುತ್ತಾನೆ. ಸಭೆಗೆ ಕರೆಯುವುದು, ಉಪಚರಿಸುವುದು ನಡೆಯುತ್ತದೆ. ಉಪಚರಿಸಿದ್ದಕ್ಕೆ ಕೃತಜ್ಞತೆಯ ಉತ್ತರ ದಿಬ್ಬಣಿಗರ ಹಾಡಿನಲ್ಲಿ ಬರುತ್ತದೆ. ಸಭೆಗೆ ಎಲೆಯಡಕೆ ಸಮರ್ಪಿಸಿದ (ಹಚ್ಚಿದ) ವೇಳೆ, ಆ ವಿಷಯವಾಗಿಯೂ ಶೋಭಾನೆ ಹಾಡಲಾಗುತ್ತದೆ.

## ಮಂತ್ರಬಿನ್ನಹ

42. 'ಮಂತ್ರಬಿನ್ನಹ' ಎಂಬುದೊಂದು ಅರಿಸಮಾಸದ ಶಬ್ದದಂತೆ ಕಂಡು ಬಂದರೂ ಇದರಲ್ಲಿ ಬರುವ 'ಬಿನ್ನಹ' ಎಂಬುದು ಸಂಸ್ಕೃತದಂತೆಯೇ ವ್ಯವಹೃತವಾಗಿದೆ. ಮಂತ್ರಬಿನ್ನಹವು ಹವಿಕರಲ್ಲಿ ಹೆಚ್ಚು ಪ್ರಚಲಿತವಿರುವ ವೈದಿಕ ವಿಧಾನದ ಪ್ರಾಸ್ತಾವಿಕ ಭಾಷಣದಂತಿದೆ. ಮನೆಯ ಯಜಮಾನನ ಪರವಾಗಿ ಪುರೋಹಿತನು ಅದರದೇ ಆದ ಸ್ವರಯುಕ್ತವಾಗಿ ಮಂತ್ರಬಿನ್ನಹವನ್ನು ಅರ್ಥ ಸಮೇತವಾಗಿ ಹೇಳುತ್ತಾನೆ. ಹದಿನೇಳು ಅಕ್ಷರಗಳೇ ಪಾದವಾಗಿರುವ 'ಅತ್ಯಷ್ಟಿ' ಎಂಬ ಛಂದಸ್ಸಿನ ಕೆಲವು 'ಶಿಖರಿಣೀವೃತ್ತ' ರೂಪದಲ್ಲಿ ಈ ಬಿನ್ನಹವಿದೆ. ಅದರ ಪ್ರಾರಂಭದ ವೃತ್ತವನ್ನು ಮಾತ್ರ ಉಚ್ಚಾರಿತ ಅರ್ಥನಿರೂಪಣೆಯೊಂದಿಗೆ ಇಲ್ಲಿ ಉದಾಹರಿಸಲಾಗಿದೆ—ಓಂಕಾರ ಉಚ್ಚಾರಣೆಯಿಂದ ಇದನ್ನು ಪ್ರಾರಂಭಿಸುತ್ತಾರೆ—

ಭವಂತಃ ಸರ್ವಜ್ಞಾಃ ಸಕಲ ಭುವನೇ ರೂಢಯಶಸೋ
ವಯಂ ತಾವದ್ಬಾಲಾಃ ಸರಸವಚನೇ ನೈವ ನಿಪುಣಾಃ
ತಥಾಪೀಯಂ ವಾಣೀ ವಿಶತು ಭವತಾಂ ಕರ್ಣಕುಹರಂ
ಕಿಶೋರಸ್ಯಾಲಾಪಃ ಖಲು ಭವತಿ ಪಿತ್ರೋರತಿಮುದೇ ॥

ಭವಂತಃ ಸರ್ವಜ್ಞಾಃ—ನೀವೆಲ್ಲರೂ ಸರ್ವಜ್ಞರಾದಂಥವರುಗಳೂ, ಸಕಲ ಭುವನೇ ರೂಢಯಶಸಃ—ಸಮಸ್ತಲೋಕದಲ್ಲಿಯೂ ಪ್ರಖ್ಯಾತವಾದ ಕೀರ್ತಿ

ಯುಳ್ಳಂಥವರುಗಳೂ, ವಯಂ ತಾವದ್ಬಾಲಾಃ—ನಾವಾದರೋ ಬಾಲಕರೂ. ಸರಸ ವಚನೇ ನೈವ ನಿಪುಣಾಃ — ರಸಭರಿತವಾಗಿ ಮಾತನಾಡುವುದರಲ್ಲಿ ನಿಪುಣರಲ್ಲ. ತಥಾಪೀಯಂ ವಾಣೀ—ಹಾಗಾದರೂ ಈ ವಾಕ್ಯವೂ. ವಿಶತು ಭವತಾಂ ಕರ್ಣಕುಹರಂ —ನಿಮ್ಮ ಕರ್ಣರಂಧ್ರವನ್ನು ಪ್ರವೇಶಿಸಲೀ. ಕಿಶೋರಸ್ಯಾಲಾಪಃ—ಬಾಲಕನ ತೊದಲು ನುಡಿಯೂ. ಖಲು ಭವತಿ ಪಿತ್ರೋರತಿಮುದೇ—ಯಾವ ರೀತಿ ತಂದೆ ತಾಯಿಗಳಿಗೆ ಸಂತೋಷಪ್ರದವಾಗುತ್ತದೆಯೋ ಅದೇ ರೀತಿಯಲ್ಲಿ ನೀವೆಲ್ಲರು ಸಂತೋಷಪಡಬೇಕೂ.

ಹೀಗೆಯೇ ತುಂಬ ಸೊಗಸಾದ ಅರ್ಥವಾಹಿಯಾಗಿ ಈ ಮಂತ್ರಬಿನ್ನಹ ಮುಂದು ವರಿಯುತ್ತದೆ. ಮಂತ್ರಬಿನ್ನಹವನ್ನು ಹೇಳುವುದರೊಂದಿಗೆ ಶಾಸ್ತ್ರಸಮ್ಮತವಾದ ಮಂಗಳಾಶೀರ್ವಾದಕ್ರಮ, ಮಂತ್ರಬಿನ್ನಹದ ಸಂದರ್ಭ ನಿರೂಪಣೆ, ಇದರಲ್ಲಿ ಮತ ಭೇದ ವಿಚಾರ—ಮುಂತಾದವು ನಿರೂಪಿತವಾಗುತ್ತವೆ. ಇದು ಕೊನೆಗೊಳ್ಳುವ ಹೊತ್ತಿಗೆ ಸುವಾಸಿನಿಯರು, ಮುಖ್ಯವಾಗಿ ಕನ್ಯೆಯ ಅಕ್ಕ ಅಥವಾ ಸೋದರತ್ತೆ (ಮುತ್ತೈದೆಯಾದವಳು) ಕನ್ಯೆಯ ತಂಗಿಯೊಂದಿಗೆ ಅಥವಾ ಚಿಕ್ಕ ಹುಡುಗಿಯೊಂದಿಗೆ ಶೋಭಾನೆ ಹಾಡುತ್ತ ಆರತಿ ಹಿಡಿದುಕೊಂಡು ಬಂದು, ವರನಿಗೆ ಆರತಿ ಬೆಳಗುತ್ತಾಳೆ. ಮಂಗಳ ವಾದ್ಯಘೋಷ ಇನ್ನೊಂದೆಡೆ ಕೇಳಿಸುತ್ತಲೇ ಇರುತ್ತದೆ.

43–47. 'ಸಭಾಲಂಕಾರ' ಎಂಬುದೊಂದು ವರ್ಣನಾತ್ಮಕವಾದ ಹಾಡು. 'ಸಭಾಪೂಜೆ' ಬ್ರಹ್ಮಸಭೆಗೆ ನೀಡುವ ಗೌರವ. ಒಳಗಿಂದ ಅತ್ತೆಗೆ (ಕನ್ಯೆಯ ತಾಯಿಗೆ) ಅಳಿಯನನ್ನು ದೂರದಿಂದ ತೋರಿಸಲಾಗುತ್ತದೆ. ಆಕೆ ಅಳಿಯನನ್ನು ನೋಡುವುದು ಇದೇ ಮೊದಲು. ಇನ್ನೊಂದೆಡೆ ಮನೆಯ ಹೆಂಗುಸರು ದಿಬ್ಬಣದವರಿಗೆಲ್ಲ ಹೂ ಹಚ್ಚುವರು. ಅದಕ್ಕಾಗಿಯೇ ಬಗೆಬಗೆಯ ಪರಿಮಳದ ಹೂಗಳನ್ನು ಮೊದಲೇ ತಂದಿರುತ್ತಾರೆ. ತುಂಬ ಸೊಗಸಾದ ಧಾಟಿಯೂ ಅರ್ಥವೂ ಉಳ್ಳ ಹಾಡುಗಳು ಇವಾಗಿವೆ. 48. ವರನಿಗೆ ಆರತಿಯಾದನಂತರ ಅವನನ್ನು ಒಳಗೆ ಕರೆದುಕೊಂಡು ಹೋಗಲಾಗುತ್ತದೆ.

## ಮಧುಪರ್ಕ—ನಿಶ್ಚಯ ತಾಂಬೂಲ

49. 'ಮಧುಪರ್ಕ' ಎಂಬುದು ಅಭ್ಯಾಗತರಿಗೆ ಕುಡಿಯಲು ಕೊಡತಕ್ಕ ವಿಶಿಷ್ಟವಾದ ಪಾನೀಯ. ವೈದಿಕ ರೀತಿಯ ಸತ್ಕಾರದಲ್ಲಿ ಅದೊಂದು. ಅದರಲ್ಲಿ ಐದು ಅಂಶಗಳಿರುತ್ತವೆ—

ದಧಿ ಸರ್ಪಿರ್ಜಲಂ ಕ್ಷೌದ್ರಂ ಸಿತಾಶ್ಚೈತೈಶ್ಚ ಪಂಚಭಿಃ
ಪ್ರೋಚ್ಯತೇ ಮಧುಪರ್ಕಸ್ತು ಯಾಜ್ಞಿಕೈಸ್ಸೋಽಭಿಧೀಯತೇ

ಅಂದರೆ—ಮೊಸರು, ತುಪ್ಪ, ನೀರು, ಜೇನು, ಕಲ್ಲುಸಕ್ಕರೆ—ಈ ಐದಂಶಗಳ ಬೆರಕೆ ಮಧುಪರ್ಕವೆನಿಸುತ್ತದೆ. ಮನೆಗೆ ಬಂದ ಅತಿಥಿಗೂ ವಿವಾಹಕಾಲದಲ್ಲಿ ವರನಿಗೂ ಮಧುಪರ್ಕವನ್ನು ಕೊಟ್ಟು ಪೂಜಿಸಬೇಕೆಂಬುದು ನಿಯಮ. ವರನನ್ನು ಮೇಲ್ಹಾಸಿನಲ್ಲಿ ಕುಳ್ಳಿರಿಸಿ, ಪಾದತೊಳೆದು, ಆಚಮನ ಮಾಡಿಸಿ, ಈ ಮಧುಪರ್ಕವನ್ನು ಬೇರೆ ಉಪಾಹಾರದ್ರವ್ಯಗಳೊಡನೆ ವರನಿಗೆ ಕೊಟ್ಟು ಉಪಚರಿಸುವುದು 'ಮಧುಪರ್ಕೋಪಚಾರ'ವೆನಿಸುತ್ತದೆ. ಮಧುಪರ್ಕವನ್ನು ವರನ ಶಾಖಾಸೂತ್ರಗಳಿಗೆ ಅನುಗುಣವಾಗಿಯೇ ನಡೆಸಬೇಕೆಂದೂ ಇತರ ಕಾರ್ಯಕ್ರಮಗಳನ್ನು ವಧುವಿನ ಕುಲದ ಸೂತ್ರಾನುಸಾರ ನಡೆಸಬೇಕೆಂದೂ ನಿಯಮವಿದೆ. ಷೋಡಶೋಪಚಾರಗಳಲ್ಲಿಯೂ ಮಧುಪರ್ಕ ಒಂದಾಗುತ್ತದೆ. ರಾಜ, ಋತ್ವಿಜ, ಸ್ನಾತಕ, ಗುರು, ಅಳಿಯ, ಮಾವ (ಹೆಣ್ಣು ಕೊಟ್ಟವ), ಮತ್ತು ಸೋದರ ಮಾವ—ಇವರು ಯಾರಾದರೂ ಒಂದು ವರ್ಷ ಕಳೆದು ಬಂದಾಗ ಮಧುಪರ್ಕದಿಂದ ಸತ್ಕರಿಸಬೇಕು—ಎಂಬುದಾಗಿ ಮನುವಚನವಿದೆ (3.119).

50. ಮಧುಪರ್ಕದೊಂದಿಗೆ ನಿಶ್ಚಯ ತಾಂಬೂಲ (ವಾಗ್ದಾನ) ಕಾರ್ಯಕ್ರಮವಿದೆ. ಒಂದೆಯೇ ನಿಶ್ಚಯ ತಾಂಬೂಲದ ಕಾರ್ಯಕ್ರಮವಾಗಿದ್ದರೂ ಇಲ್ಲಿ ಇನ್ನೊಮ್ಮೆ ಶಾಸ್ತ್ರೀಯವಾಗಿ ಆ ಕಾರ್ಯಕ್ರಮ ನಡೆಯುತ್ತದೆ. ಹಾಡಿನಲ್ಲಿ ವರನ ರೂಪ, ಮನೆ, ಆಸ್ತಿಗಳ ಸಮೃದ್ಧಿ, ಸಂಪತ್ತುಗಳ ವರ್ಣನೆಯಿದೆ. ಇದೇ ಸಂದರ್ಭದಲ್ಲಿ ಮದುಮಗಳಿಗೆ ವರನು ಧಾರೆ ಸೀರೆ, ತಾಲಿ, ಆಭರಣಾದಿಗಳನ್ನು ಹರಿವಾಣದಲ್ಲಿಟ್ಟು ಕೊಡುವುದಿರುತ್ತದೆ. ಹೆಣ್ಣಿನವರು ಮಂಗಲ ಕೇಳಿದರೆನ್ನುವ ಹಾಡು (52) ಇಲ್ಲಿದೆ. ಧಾರೆ ಸೀರೆಗೆ 'ಉಂಗಿಲುಡಿಕೆ' ಎಂಬ ಹೆಸರು ಉತ್ತರ ಕನ್ನಡ, ಶಿವಮೊಗ್ಗ ಜಿಲ್ಲೆಗಳಲ್ಲಿ ಪ್ರಚುರವಾಗಿದೆ (53). 'ಉಂಗಿಲುಡಿಕೆ ತಂದದ್ದು' ಎಂಬ ಹಾಡಿನಲ್ಲಿ ವರನು ತಂದ ಒಡವೆಗಳ ವಿವರವಿದೆ. 'ಉಂಗಿಲು' ಹವಿಕರ ಭಾಷೆಯಲ್ಲಿ ಉಂಗುರವಾಗಿದ್ದು ಆಭರಣಗಳ ದ್ಯೋತಕ. 'ಉಡಿಕೆ' ಎಂಬುದು ಸೀರೆ ರವಕೆ ಮುಂತಾದ ಉಡಿಗೆಗಳ ಅರ್ಥವುಳ್ಳದಾಗಿ ಕಂಡುಬರುತ್ತದೆ. ರತ್ನಾಕರವರ್ಣಿಯ ಭರತೇಶ ವೈಭವ ಕಾವ್ಯದಲ್ಲಿ (ಸಂಧಿ 38) 'ಉಂಗುರುಡಿಕೆ' ಎಂಬೊಂದು ಸಂಧಿಯೇ ಇದೆ. (54) ಮದುಮಗಳಿಗಾಗಿ ಬಗೆಬಗೆಯ ಭೂಷಣಗಳನ್ನು ಇಟ್ಟಿರುವ ವರ್ಣನೆ ಇನ್ನೊಂದು ಶೋಭಾನೆಯಲ್ಲಿದೆ. ಈ ಕಾಲದವರಿಗೆ ಪರಿಚಯವೇ ಇರಲಾರದ ಹಲವಾರು ಆಭರಣಗಳ ಹೆಸರುಗಳು ಇಲ್ಲಿವೆ.

55–60. ಮದುಮಗಳನ್ನು ಶೃಂಗಾರಗೊಳಿಸುವ ಹಲವು ಹಾಡುಗಳಿವೆ. ತಿಲಕವಿಡುವುದು, ಮಂಗಲಸೀರೆ ಉಡಿಸುವುದು, ಆಭರಣ ತೊಡಿಸುವುದು, ಹಲೆ ಬಾಚುವುದು, ಮುಡಿ ಕಟ್ಟುವುದು, ಹೂ ಮುಡಿಸುವುದು—ಇವೆಲ್ಲವೂ ಮದುಮಗಳನ್ನು ಸಿಂಗರಿಸುವ ಶೋಭಾನೆಗಳಾಗಿವೆ.

61–65. ಮಂಗಳಾಲಂಕೃತಳಾಗಿ ಸಿದ್ಧಳಾದ ವಿವಾಹಕನ್ಯೆ ಮುಹೂರ್ತಕ್ಕೆ ಸರಿಯಾಗಿ ವಿವಾಹ ಮಂಟಪಕ್ಕೆ ಬರುತ್ತಾಳೆ. ಆಕೆಯ ಸೋದರಮಾವನು ಕರೆತರು

ತ್ತಾನೆ. ಮಂಗಲಸೀರೆಯುಟ್ಟು, ಮುಂದಲೆಯಲ್ಲಿ ತೊಂಡಿಲ ಗೊಂಚಲು ತೂಗಾಡು ತ್ತಿರಲು, ಕೈಯಲ್ಲಿ ವರಣಮಾಲಿಕೆಯನ್ನು ಹಿಡಿದುಕೊಂಡು ಆಕೆ ಮಂಟಪಕ್ಕೆ ಬಂದ ಳೆಂದು ಹಾಡು ತಿಳಿಸುತ್ತದೆ. ಆದರೆ ವಾಸ್ತವಿಕವಾಗಿ ವಿವಾಹ ಮಂಟಪದಲ್ಲಿ ಅವಳ ಕೈಗೆ ವರಣ ಮಾಲಿಕೆಯನ್ನು ಕೊಡುವುದು ವಾಡಿಕೆಯಾಗಿದೆ. ಮಂಟಪಕ್ಕೆ ಬಂದು ಕನ್ಯೆಯು ಪೂರ್ವಾಮುಖವಾಗಿ ಪೆಟ್ಟಕ್ಕಿಯ ಮೇಲೆ ನಿಂತಿರುತ್ತಾಳೆ. ಪಶ್ಚಿಮ ಮುಖ ವಾಗಿ ವರನು ವರಣ ಮಾಲಿಕೆ ಹಿಡಿದು ಮಟ್ಟಕ್ಕಿಯ ಮೇಲೆ ನಿಂತಿರುತ್ತಾನೆ. ಅವರಿಬ್ಬರ ನಡುವೆ ಉತ್ತರ ದಕ್ಷಿಣವಾಗಿ ತೆರೆ (ಪರದೆ) ಯಿರುತ್ತದೆ. ತೆರೆಯಲ್ಲಿ ಸ್ವಸ್ತಿಕ ಚಿಹ್ನೆ ಇರಬೇಕೆಂದು ಹೇಳಲಾಗಿದೆ. ಮದುಮಗನು ಮೊದಲೇ ನಿಂತಿದ್ದು, ತೆರೆ ಹಿಡಿದಾಗ ಅಲ್ಲಿಗೆ ಮದುಮಗಳು ಬರುತ್ತಾಳೆ. ಎರಡೂ ಕಡೆಯ ಪುರೋಹಿತರು ಮಂಗಲಾಷ್ಟಕವನ್ನು ಪಠಿಸುತ್ತಾರೆ. ತೆರೆ ಸರಿದೊಡನೆ, ಮೊದಲು ಕನ್ಯೆ ವರಣ ಮಾಲಿಕೆಯನ್ನು ವರನ ಕೊರಳಿಗೆ ಹಾಕುತ್ತಾಳೆ. (ಆಗ ಕನ್ಯೆಯನ್ನು ಆಕೆಯ ಸೋದರ ಮಾವನು ಎತ್ತಿದ ಎತ್ತುವುದು ಬಾಲ್ಯ ವಿವಾಹದಲ್ಲಿ ರೂಢಿಯಲ್ಲಿತ್ತು). ಒಡನೆ ವರನು ಮಾಲೆ ಹಾಕುತ್ತಾನೆ. ಜೀರಿಗೆ–ಬೆಲ್ಲ, ಅಕ್ಕಿ ಕಾಳುಗಳನ್ನು ಪರಸ್ಪರವಾಗಿ ಎಸೆದುಕೊಳ್ಳುತ್ತಾರೆ. ಪುರೋಹಿತರ ಸೂಚನೆಯಂತೆ ಆಗ 'ಸಮೀಕ್ಷೆ' ಎಂಬ ಕಾರ್ಯ ಕ್ರಮವಿದೆ. ಅದರಂತೆ, ವಧೂವರರು ಇಬ್ಬರೂ ಪರಸ್ಪರವಾಗಿ ನೋಡಿಕೊಳ್ಳು ತ್ತಾರೆ. ಲಕ್ಷ್ಮಿಯು ಮಹಾ ವಿಷ್ಣುವಿನ ಕೊರಳಿಗೆ ಮಾಲೆ ಹಾಕಿದುದಾಗಿ ಹಾಡಿನಲ್ಲಿ ವರ್ಣನೆಯಿದೆ.

ಮಹಾಲಕ್ಷ್ಮಿಯ ಮುಂದೆ ಬ್ರಹ್ಮನು ಕಾಣಿಸಿದನು. ಇವನು ಮುದುಕನು ಎಂದು ಲಕ್ಷ್ಮಿಯು ಬ್ರಹ್ಮನನ್ನು ತೊರೆದಳಂತೆ. ಕುಬೇರನು ಧನವಂತನಾದರೂ ಬಹು ಗರ್ವಿ ಯೆಂದು, ಚಂದ್ರನು ಸೊಬಗುಳ್ಳವನಾದರೂ ವೃದ್ಧಿ ಕ್ಷಯವುಳ್ಳವನೆಂದು, ವಾಯು ದೇವನು ಚಂಚಲನೆಂದು, ಈಶ್ವರನು ದಿಗಂಬರನೆಂದು ಮತ್ತು ಸಂಹಾರಕನೆಂದು, ಹೀಗೆ ಒಬ್ಬೊಬ್ಬರಲ್ಲಿ ದೊಡ್ಡ ದೊಡ್ಡ ದೋಷಗಳನ್ನು ಕಂಡ ಮಹಾಲಕ್ಷ್ಮಿ ಆ ಮೇಲೆ, ರಾಕ್ಷಸರ ದಿಕ್ಕಿನತ್ತ ನೋಡದೆ, ರಾಕ್ಷಸಾಂತಕನೂ ಚಕ್ರಪಾಣಿಯೂ ಚರಾಚರ ಭರಿತನೂ ಆದ ಶ್ರೀಮನ್ನಾರಾಯಣನನ್ನು ಮನದಲ್ಲಿಯೇ ಒಪ್ಪಿ, ಅವನ ಕೊರಳಿಗೆ ಮಾಲೆ ಹಾಕಿದಳೆಂದು ಹಾಡಿನಲ್ಲಿ ವಿವರಿಸಲಾಗಿದೆ. ಮುಂದೆ ಗೃಹಪ್ರವೇಶದಲ್ಲಿ ಹೆಣ್ಣೊಪ್ಪಿಸುವ ಸಂದರ್ಭದಲ್ಲಿ ಪುರೋಹಿತರು ಸಂಸ್ಕೃತವಾಣಿಯಿಂದ ಅರ್ಥಸಹಿತವಾಗಿ 'ಲಕ್ಷ್ಮಿಯು ಶ್ರೀಮನ್ನಾರಾಯಣ'ನಿಗೊಲಿದುದನ್ನು ರಸವತ್ತಾಗಿ ನಿರೂಪಣೆ ಮಾಡು ತ್ತಾರೆ. ಹಾಡಿನಲ್ಲಾದರೋ ಅದು ಮಾಲೆ ಹಾಕುವ ಸಂದರ್ಭದಲ್ಲಿಯೇ ಬಂದಿದೆ.

65. ವಧೂವರರು ಪರಸ್ಪರವಾಗಿ ಮಾಲೆಗಳನ್ನು ಹಾಕಿದ ಮೇಲೆ ಅವರನ್ನು ಕುಳಿತುಗೊಳಿಸುತ್ತಾರೆ. ವರನನ್ನು ಈಗ ಪೂರ್ವಾಮುಖವಾಗಿಯೂ ಕನ್ಯೆಯನ್ನು ಪಶ್ಚಿಮ ಮುಖವಾಗಿಯೂ ಕುಳ್ಳಿರಿಸಿ, ನಡುವೆ ಇಟ್ಟ ಉರುಳಿಯ ಮೇಲುಗಡೆಯಾಗಿ

ಅವರಿಬ್ಬರ ಬೊಗಸೆಗಳಲ್ಲಿ ಅಕ್ಷತೆಯನ್ನು ತುಂಬಿ ಸುವರ್ಣ ಎಲೆಯಡಕೆಗಳನ್ನಿಟ್ಟು, ಕನ್ಯಾದಾತೃವು ಸಪತ್ನೀಕನಾಗಿ ಬಲಗಡೆ ಕುಳಿತು, ಪುರೋಹಿತರು ಸಂಕಲ್ಪ ಮಾಡಿಸಿ ಮಂತ್ರ ಹೇಳುತ್ತಿದ್ದಂತೆ ಧಾರೆಯೆರೆಯುವನು. 'ತುಭ್ಯಮಹಂ ಸಂಪ್ರದದೇ ಶ್ರಿಯೈ' —ನಿನಗೆ ನಾನು ಸಂಪತ್ತಿಗಾಗಿ ದಾನ ಮಾಡುತ್ತೇನೆ— ಎಂದು ದಾತೃವು ಹೇಳಿದುದಕ್ಕೆ ಉತ್ತರವಾಗಿ ವರನು 'ಧರ್ಮಪ್ರಜಾಸಿಧ್ಯರ್ಥಂ ಪ್ರತಿಗೃಹ್ಣಾಮಿ'—ಧರ್ಮಪ್ರಜೆಯನ್ನು (ಧರ್ಮನಿಷ್ಠವಾದ ಸಂತಾನವನ್ನು) ಪಡೆಯುವುದಕ್ಕಾಗಿ ಸ್ವೀಕರಿಸುತ್ತೇನೆ—ಎಂದು ಹೇಳುತ್ತಾನೆ. 'ನನ್ನ ಕುಲದಲ್ಲಿ ಜನಿಸಿದ ಇವಳನ್ನು ಎಂಟು ವರ್ಷ (ಅನೇಕ ವರ್ಷ) ಸಾಕಿರುತ್ತೇನೆ. ಪುತ್ರಪೌತ್ರ ವರ್ಧಿನಿಯಾದ ಈಕೆಯನ್ನೀಗ ನಿನಗೆ ಕೊಟ್ಟಿದ್ದೇನೆ. ಧರ್ಮ ಅರ್ಥ ಕಾಮಗಳಲ್ಲಿ ಮೀರಿ ವರ್ತಿಸಬಾರದು' ಎಂದು ದಾತೃ ಹೇಳಿದಾಗ ವರನು 'ನಾತಿಚರಾಮಿ'—ನಾನು ಮೀರಿ ವರ್ತಿಸೆನು ಎನ್ನುವನು. ಕನ್ಯಾದಾನದಲ್ಲಿ ದಾತೃವು ಬೇರೆ ದಾನಗಳಲ್ಲಿಯಂತೆ 'ನ ಮಮ'—ಇದು ನನ್ನದಲ್ಲ ಎಂದು ಉಚ್ಚಾರಣೆ ಮಾಡು ವುದಿಲ್ಲ. ತನ್ನ ಮಗಳನ್ನು ಬೇರೆ ಕುಲಕ್ಕೆ ಕೊಟ್ಟ ಮೇಲೆಯೂ ಆಕೆಯ ಮೇಲೆ ಅಧಿಕಾರದ ಅಂಶ ಉಳಿದಿರುತ್ತದೆ—ಎಂಬ ಅರ್ಥದ ಸೂಚಕವಿದು. ಶಾಸ್ತ್ರೋಕ್ತವಾಗಿ ವರದಕ್ಷಿಣೆ ಮತ್ತು ಬಳುವಳಿ ಕೊಡುವ ಕ್ರಿಯಾಸೂಚನೆ ಇಲ್ಲಿದೆ. ವಧೂವರರು ಆಯುರ್ವೃದ್ಧಿಗಾಗಿ 'ಅಕ್ಷತಾರೋಪಣ' (ಅಕ್ಷತೆಯನ್ನು ತಲೆಯ ಮೇಲೆ ಸುರಿಯುವ) ಕ್ರಿಯೆಯೂ ಇಲ್ಲಿಯೇ ನಡೆಯುತ್ತದೆ. ಇದು ವಧೂವರರ ದಾಂಪತ್ಯಜೀವನದಲ್ಲಿ ಸುಖ, ಸಮೃದ್ಧಿ, ಕೀರ್ತಿಗಳಾಗುವ ಸಂಕೇತವೆಂದು ತಿಳಿಯಲಾಗಿದೆ. ಅನಂತರ 'ಮಂಗಲ ಸೂತ್ರ' ಕಟ್ಟುವಕಾರ್ಯಕ್ರಮ ನಡೆಯುತ್ತದೆ. ಇದು 69ನೇ ಹಾಡಿನಲ್ಲಿ ಬಂದಿದೆ.

## ಸಪ್ತಪದಿ

66, 67. ಮದುವೆಯಲ್ಲಿ ಅತಿ ಮುಖ್ಯವಾದ 'ಸಪ್ತಪದಿ' ಕಾರ್ಯಕ್ರಮವು ವಿವಾಹ ಮಂಟಪದಲ್ಲಿ ನಡೆಯುತ್ತದೆ. ಇದರ ವಿವರವನ್ನು ನಾವಿಲ್ಲಿ ಎರಡು ಹಾಡು ಗಳಲ್ಲಿ ಕಾಣುತ್ತೇವೆ. 'ಸಪ್ತಪದಿ' ಎಂದರೆ ವಧುವು ಅಕ್ಕಿಯ ಮೇಲೆ ಏಳು ಹೆಜ್ಜೆ ಗಳನ್ನಿಟ್ಟು ಚಿರಂತನ ಸಖ್ಯವನ್ನುಂಟು ಮಾಡುವ ವೈದಿಕ ವಿಧಿ. ಈ ಏಳು ಹೆಜ್ಜೆಗಳು ತಾತ್ವಿಕವಾಗಿ ಯೋಗಮಾರ್ಗದ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಗತ, ವಿಶುದ್ಧಿ, ಆಜ್ಞಾ ಮತ್ತು ಸಹಸ್ರಾರ ಎಂಬ ಏಳು ಸ್ಥಾನಗಳಲ್ಲಿ ಮುಂದು ವರಿದು ಪರಮೋತ್ಕರ್ಷದ ಏಕತೆಯನ್ನು ಪಡೆಯುವ ಸಂಕೇತವಾಗಿದೆ. ಸಪ್ತಪದಿ ಕಾರ್ಯಕ್ರಮದ ಅಂಗವಾಗಿ ವರನು ವಧುವನ್ನು ಏಳು ಹೆಜ್ಜೆಯಿಡಿಸುತ್ತ ಒಂದೊಂದಾಗಿ ಹೆಜ್ಜೆಗಳಿಗೆ ಈ ಅರ್ಥದ ಮಂತ್ರಗಳನ್ನು ಹೇಳುತ್ತಾನೆ—ಪ್ರತಿಯೊಂದು ಹೆಜ್ಜೆಗೂ ಇದರಲ್ಲಿ ನನ್ನನ್ನು ಅನುಸರಿಸು— (ಮಾಂ ಅನುವ್ರತಾ ಭವ) ಎನ್ನುತ್ತಾನೆ.

ಅನ್ನಕ್ಕಾಗಿ ಮೊದಲ ಹೆಜ್ಜೆಯಿಡು, ಬಲದ ಅಭಿವೃದ್ಧಿಗಾಗಿ ಎರಡನೆಯ ಹೆಜ್ಜೆಯಿಡು, ಧನಾಭಿವೃದ್ಧಿಗಾಗಿ ಮೂರನೆಯ ಹೆಜ್ಜೆಯಿಡು, ಮಮತೆಯ ಅಭಿವೃದ್ಧಿಗಾಗಿ ನಾಲ್ಕನೆಯ ಹೆಜ್ಜೆಯನ್ನಿಡು, ಸಂತಾನ ಲಾಭಕ್ಕಾಗಿ ಐದನೆಯ ಹೆಜ್ಜೆಯಿಡು, ಅನುಕೂಲವಾದ ಋತುಕಾಲಗಳಿಗಾಗಿ ಆರನೆ ಹೆಜ್ಜೆಯಿಡು ನಮ್ಮೊಳಗಿನ ಸ್ನೇಹಕ್ಕಾಗಿ ಏಳನೆ ಹೆಜ್ಜೆಯಿಡು—ಎಂದು ವರನು ಹೇಳುತ್ತಾನೆ. ಮುಂದಿನ ಮಂತ್ರಾರ್ಥ ಹೀಗಿದೆ—"ಒಟ್ಟಿಗೆ ಏಳು ಹೆಜ್ಜೆ ಇಟ್ಟು ನಾವು ಗೆಳೆಯರಾಗಿದ್ದೇವೆ. ನಿನ್ನ ಸಖ್ಯವನ್ನು ನಾನು ಉಳಿಸಿಕೊಳ್ಳುತ್ತೇನೆ. ನನ್ನ ಸಖ್ಯವನ್ನು ನೀನು ಬಿಡದವಳಾಗು. ಒಂದಾಗಿ ಸೇರೋಣ, ಒಂದಾಗಿ ಸಂಕಲ್ಪಿಸೋಣ, ಒಬ್ಬರನ್ನೊಬ್ಬರು ಪ್ರೀತಿಸಿ, ಒಬ್ಬರಲ್ಲಿ ಒಬ್ಬರು ರುಚಿ ಪಡೆದು, ಒಬ್ಬರಿಗೊಬ್ಬರು ಹಿತವನ್ನು ಬಯಸೋಣ. ಸುಖಸಂತೋಷಗಳನ್ನು ಒಟ್ಟಿಗೆ ಅನುಭವಿಸಿ ನಮ್ಮ ಆಕಾಂಕ್ಷೆಗಳನ್ನೂ ವ್ರತಗಳನ್ನೂ ಮನಸ್ಸುಗಳನ್ನೂ ಎರಡಿಲ್ಲದಂತೆ ಒಂದುಮಾಡಿ ಜೀವಿಸೋಣ. ಮಾವ, ಅತ್ತೆ, ನಾದಿನಿ, ಮೈದುನರಿಗೆ ನೀನು ಸಂರಾಜ್ಞಿ (ಸಂತೋಷಕಾರಕಳು) ಆಗು."" ಸಪ್ತಪದಿಯಲ್ಲಿ ವಧುವು ಒಂದೊಂದು ಹೆಜ್ಜೆಗೂ ಹೇಳಬೇಕಾದುದನ್ನು ಧರ್ಮಶಾಸ್ತ್ರ ಗ್ರಂಥಗಳಲ್ಲಿ ಹೀಗೆ ಏಳು ಶ್ಲೋಕಗಳಲ್ಲಿ ತಿಳಿಸಿದೆ—"

ಸುಖದುಃಖಾನಿ ಸರ್ವಾಣಿ ತ್ವಯಾ ಸಹ ವಿಭಜ್ಯತೇ
ಯತ್ರ ತ್ವಂ ತದಹಂ ತತ್ರ ಪ್ರಥಮೇ ಸಾಬ್ರವೀದಿದಂ ೧

ಕುಟುಂಬಂ ರಕ್ಷಯಿಷ್ಯಾಮಿ ಆ ವೃದ್ಧ ಬಾಲಕಾದಿಕಂ
ಅಸ್ತಿ ನಾಸ್ತಿ ಚ ಸಂತುಷ್ಟಾ ದ್ವಿತೀಯೇ ಸಾಬ್ರವೀದಿದಂ ೨

ಭರ್ತೃಭಕ್ತಿರತಾ ನಿತ್ಯಂ ಸದೈವ ಪ್ರಿಯಭಾಷಿಣೀ
ಭವಿಷ್ಯಾಮಿ ಸದೇ ಚೈವ ತೃತೀಯೇ ಸಾಬ್ರವೀದಿದಂ ೩

ಆರ್ತೇ ಚಾರ್ತಾ ಭವಿಷ್ಯಾಮಿ ಸುಖದುಃಖ ವಿಭಾಗಿನೀ
ತವಾಜ್ಞಾಂ ಪಾಲಯಿಷ್ಯಾಮಿ ಕನ್ಯಾ ತುರ್ಯಾ ಪದೇಽಬ್ರವೀತ್ ೪

ಋತುಕಾಲೇ ಶುಚಿಸ್ನಾತಾ ಕ್ರೀಡಿಷ್ಯಾಮಿ ತ್ವಯಾ ಸಹ
ನಾಹಂ ಪರತರಂ ಯಾಯಾಂ ಕನ್ಯಾ ಪಂಚಪದೇಽಬ್ರವೀತ್ ೫

ಇಹಾಥ ಸಾಕ್ಷಿಣೋ ದೇವಾಃ ನ ಚ ತೇ ವಂಚಿತಾಸ್ಮ್ಯಹಂ
ಉಭಯೋಃ ಪ್ರೀತಿರತ್ಯಂತಾ ಕನ್ಯಾ ಷಷ್ಠಪದೇಽಬ್ರವೀತ್ ೬

ಹೋಮ ಯಜ್ಞಾದಿ ಕಾರ್ಯೇಷು ಭವಾಮಿ ಚ ಸಹಾಯಿನೀ
ಧರ್ಮಾರ್ಥ ಕಾಮ ಕಾರ್ಯೇಷು ಕನ್ಯಾ ಸಪ್ತಪದೇಽಬ್ರವೀತ್ ೭

68–70. ವಿವಾಹ ನಡೆಯುವುದು ಮುಹೂರ್ತಕ್ಕೆ ಸರಿಯಾಗಿ. ಆ ಸಂದರ್ಭದಲ್ಲಿ ಸಭೆಯಲ್ಲಿರತಕ್ಕ ಮರ್ಯಾದೆವಂತರು, ವಿದ್ವಾಂಸರು—ಮುಂತಾದವರಿಗೆಲ್ಲ ದಕ್ಷಿಣೆ ಕೊಡಬೇಕಾಗುತ್ತದೆ. ಇದನ್ನು ಗಂಡಿನ ಕಡೆಯ ಮತ್ತು ಹೆಣ್ಣಿನ ಕಡೆಯವರು ಒಟ್ಟೊಟ್ಟಿಗೆ ಕೊಡಬೇಕು, ಆದುದರಿಂದ ಇದಕ್ಕೆ 'ಉಭಯ ದಕ್ಷಿಣೆ' ಎಂದೂ ಕರೆಯುತ್ತಾರೆ. ಇದನ್ನು ಪರಿಮಿತ ಜನರಿಗೆ ಮಾತ್ರ ಕೊಡುವುದೂ ಉಂಟು. ಎಲ್ಲರಿಗೆ ಕೊಡುವುದೂ ಉಂಟು. ಮುಂದೆ ಊಟದ ದಕ್ಷಿಣೆಯನ್ನು ಮಾತ್ರ ಯಾರೊಬ್ಬರಿಗೂ ಬಿಡದೆ ಎಲ್ಲರಿಗೂ ಕೊಡುವುದು ಕ್ರಮ. ಆದುದರಿಂದ ಆ ದಕ್ಷಿಣೆಗೆ 'ಸರ್ವಾಣಿ' ಎಂದು ಹೆಸರು. 71. ಮದುವೆ ಕಾರ್ಯಕ್ರಮ ಹೆಚ್ಚು ಹೊತ್ತು ನಡೆಯುವುದರಿಂದ ಉದ್ದುದ್ದದ ಹಾಡುಗಳೂ ಬೇಕು. ಕಲ್ಯಾಣದ ಹಾಡುಗಳು ಈ ಸಂದರ್ಭದವು. ಗಿರಿಜಾ ಕಲ್ಯಾಣದ ಹಾಡನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಕಾಳಿದಾಸನ ಕುಮಾರಸಂಭವ ಕಾವ್ಯವಸ್ತುವನ್ನಿದು ಹೆಚ್ಚಿನ ಮಟ್ಟಿಗೂ ಅನುಸರಿಸಿದ್ದು ಒಂದು ರಸವತ್ತಾದ ಲಘುಕಾವ್ಯದಂತೆಯೆ ಇದೆ. 72, 73, 74. ಸಭೆಯಲ್ಲಿ ಮಂತ್ರಾಕ್ಷತೆಯಾಗುತ್ತದೆ. ಗುರುಹಿರಿಯರು ಒಬ್ಬೊಬ್ಬರಾಗಿ ವಧೂವರರಿಗೆ ಮಂತ್ರಾಕ್ಷತೆ ತಳಿಯುತ್ತಾರೆ. ವಧುವರರಿಬ್ಬರಿಗೂ ಆರತಿಯಾಗುತ್ತದೆ. ಅಲ್ಲಿಗೆ ವಿವಾಹದ ಸಭಾಕಾರ್ಯಕ್ರಮ ಮುಗಿದು, ವಧೂವರರನ್ನು ಕನ್ಯಾಪಿತನು ಒಳಗೆ ದೇವರ ಸನ್ನಿಧಿಗೆ ಕರೆದುಕೊಂಡು ಹೋಗುತ್ತಾನೆ. ಆಗ, ವರನ ಉತ್ತರೀಯದ ಕೊನೆಯನ್ನು ವಧು ಹಿಡಿದಿರುತ್ತಾಳೆ.

75–78. ಅರಳಿಕ್ಕುವುದು—ಅಂದರೆ ಲಾಜಹೋಮ. 'ಅರಳು' ಎಂಬುದಕ್ಕೆ 'ಹೊದಳು' ಎಂದು ಹವಿಕರ ಭಾಷೆಯ ಶಬ್ದ. 'ಪೊದಳ್' ಎಂದರೆ ವ್ಯಾಪಿಸು ಎಂದರ್ಥವಾಗಿದ್ದು 'ಅರಳ್' ಎಂಬುದಕ್ಕೆ ಸಮಾನಾರ್ಥಕವಾಗಿದೆ. ದಾಂಪತ್ಯ ಜೀವನವು ಅರಳಬೇಕೆಂಬುದು ಈ ಹೋಮದ ಸಂಕೇತಾರ್ಥ. ಈ ಹೋಮ ಒಳಗೆ ನಡೆಯುತ್ತದೆ. ಅದಾದ ಮೇಲೆ ಅಥವಾ ಅದು ಒಂದೆಡೆ ನಡೆಯುತ್ತಿರುವಾಗಲೇ ಭೋಜನ ವ್ಯವಸ್ಥೆ ನಡೆಯುತ್ತದೆ. ಊಟಕ್ಕೆ ಕರೆದದ್ದು ಮತ್ತೆ ಎಡೆಮಾಡುವದು—ಎಂಬೆರಡು ಹಾಡುಗಳು ಇಲ್ಲಿ ವೈಶಿಷ್ಟ್ಯಪೂರ್ಣವಾಗಿವೆ. ಇವುಗಳಲ್ಲಿ ಅಡಿಗೆಯ ಶಾಕಪಾಕಗಳ ವಿವರವಿದೆಯಲ್ಲದೆ ಬ್ರಾಹ್ಮಭೋಜನ ವಿಧಾನವೂ ನಿರೂಪಿತವಾಗಿದೆ. ಹದಿನಾರು ಬಗೆಯ ಪಲ್ಯಗಳಿದ್ದುದಾಗಿ ಹೇಳಿದೆ. ಶುಭಕಾರ್ಯಗಳಲ್ಲಿ ಭೋಜನಕ್ಕೆ ಸಮಸಂಖ್ಯೆಯ ಪಲ್ಯಗಳೂ ಅಶುಭ ಕಾರ್ಯಗಳಿಗೆ ವಿಷಮ ಸಂಖ್ಯೆಯ ಪಲ್ಯಗಳೂ ಇರಬೇಕೆಂಬುದು ನಿಯಮ. ವರಪೂಜೆಯಲ್ಲಿ ವರನ ಪಾದ ತೊಳೆಯುವ ಸಂಗತಿಯೂ ಬರುತ್ತದೆ.

ವಿವಾಹ ಮುಹೂರ್ತವು ಹಗಲಿನಲ್ಲಿರುವುದುಂಟು, ರಾತ್ರಿಯಲ್ಲಿರುವುದೂ ಉಂಟು. ರಾತ್ರಿ ವಿವಾಹವಾದರೆ, ಕಾರ್ಯಕ್ರಮಗಳೆಲ್ಲ ಮುಗಿದ ಮೇಲೆ ಒಂದೆಡೆ ಶೋಭಾನೆಗಳನ್ನು ಹಾಡುತ್ತಲೇ ಇರುತ್ತಾರೆ. ಬೇರೆ ಬೇರೆ ಕಲ್ಯಾಣ ಕಥೆಗಳ

ಹಾಡನ್ನು ಮುತ್ತೈದೆಯರು ಎಡೆಬಿಡದೆ ಹಾಡುತ್ತಾರೆ. ಇನ್ನೇನು ಬೆಳಗಾಗುತ್ತ ಬಂತೆಂದರೆ ಉದಯಕಾಲದ ಶೋಭಾನೆಯನ್ನು ಹಾಡುತ್ತಾರೆ. 79. ಈ ಹಾಡಿನಲ್ಲಿ ಮಹಾವಿಷ್ಣುವಿನ ದಶಾವತಾರ ಲೀಲೆಗಳೂ ಶ್ರೀಕೃಷ್ಣ ಚರಿತೆಯೂ ಅಡಕವಾಗಿವೆ. ಹಾಡಿನ ಕೊನೆಗೆ ಕಣ್ವೇಶನ ಅಂಕಿತವಿದೆ. 'ಕಣ್ವಪುರ' ಎಂದು ಕಾಸರಗೋಡು ತಾಲೂಕಿಗೆ ಸೇರಿದ ಕುಂಬಳೆಗೆ ಪ್ರಾಚೀನದ ಹೆಸರು. 'ಗೋಪಾಲಕೃಷ್ಣ' ಅಲ್ಲಿಯ ದೇವರು.

80-83. ಇನ್ನೀಗ ದಿಬ್ಬಣಿಗರು ಹಿಂದೆರಳುವ ಸಂದರ್ಭ. ಹೋಗಲು ಅನುಮತಿಯನ್ನು ಕೇಳುತ್ತಾರೆ. ಆದರೆ 'ಹೋಗಬೇಡಿ, ನಿಲ್ಲಿ ; ನಿಮಗೆ ಸರಿಯಾಗಿ ಉಪಚಾರ ಮಾಡಲು ಸಾಧ್ಯವಾಗಲಿಲ್ಲ'—ಎಂದು ಕನ್ಯೆಯ ಕಡೆಯವರು ವಿನಯವನ್ನು ಹೇಳಿಕೊಳ್ಳುತ್ತಾರೆ. ಹೇಗೂ ದಿಬ್ಬಣಿಗರು ನಿಲ್ಲುವಂತಿಲ್ಲ, ಆದುದರಿಂದ ಅವರನ್ನು ಚತುರ್ಥಿಯ ಸಮಾರಂಭಕ್ಕೆ ಬರುವಂತೆ ಕರೆ ಕೊಡಲಾಗುತ್ತದೆ. ಮಗನ ಮದುವೆಗೆ ತಾಯಿ ಬರುವ ಸಂಪ್ರದಾಯವಿಲ್ಲ. ಆಕೆ ಚತುರ್ಥ ದಿವಸ ದಿಬ್ಬಣದ ಒಡತಿಯಾಗಿ ಮಗನನ್ನೂ ಸೊಸೆಯನ್ನೂ ಒಟ್ಟಿಗೆ ಕಾಣಲು ಬರುತ್ತಾಳೆ. ಹಾಗೆ ಬರುವಾಗ ಸೊಸೆಗೆ ಕಾಲುಂಗುರವನ್ನು ಮಾಡಿಸಿ ತರುತ್ತಾಳೆ. ಅದನ್ನು ಸೊಸೆಗೆ ತೊಡಿಸುವುದು ಈ ಅತ್ತೆಯ (ಗಂಡನ ತಾಯಿಯ) ಗೌರವಾನ್ವಿತ ಕರ್ತವ್ಯವಿರುತ್ತದೆ. ಆದುದರಿಂದಲೇ ಚತುರ್ಥಿಗೆ ಹೇಳಿಕೆ ಕೊಡುವಾಗ 'ಅತ್ತೆ ಸಹಿತ' ಬರುವಂತೆ ಹಾಡಿನಲ್ಲಿ ನಿರೂಪಣೆಯಿದೆ. ಅಷ್ಟೇ ಅಲ್ಲ, ಮದುಮಗನಿಗೆ ಪಾಸಡಿಗಾಗಿ (ಅಂದರೆ, ಜೊತೆಗಾಗಿ) ಮದುಮಗನ ತಮ್ಮ ಅಥವಾ ಇನ್ನು ಯಾರಾದರೊಬ್ಬನು, ಚಿಕ್ಕವನು ನಿಲ್ಲುವುದು ಕೂಡ ವಾಡಿಕೆ. ಈ ವಿಷಯ ಇದೇ (82) ಹಾಡಿನಲ್ಲಿ ಬರುತ್ತದೆ. ಮದುಮಗನಿಗೆ ತಕ್ಕ ನೀತಿಬೋಧೆ ಮಾಡಿ, ದಿಬ್ಬಣಿಗರು ತೆರಳುತ್ತಾರೆ.

**ಅರುಂಧತೀ ದರ್ಶನ**

84. 'ಅರುಂಧತಿ' ಎಂಬಾಕೆ ವಸಿಷ್ಠ ಋಷಿಯ ಪತ್ನಿ, ಮಹಾ ಪತಿವ್ರತೆಯೆಂದು ಹೆಸರಾದವಳು. ಆಕೆಯ ಹೆಸರಿನ ನಕ್ಷತ್ರವನ್ನು ವಿವಾಹದ ರಾತ್ರಿ ನೂತನ ದಂಪತಿಗಳಿಗೆ ತೋರಿಸುವುದು ವಾಡಿಕೆ. ಈ ನಕ್ಷತ್ರವನ್ನು ನೋಡುವುದರಿಂದ ದೀರ್ಘ ಸೌಮಂಗಲ್ಯ ಪ್ರಾಪ್ತವಾಗುವುದೆಂದು ತಿಳಿಯಲಾಗಿದೆ. 'ಅರುಂಧತೀ ದರ್ಶನ' ಎಂಬೊಂದು ನ್ಯಾಯವಿದೆ. ಆಕಾಶದಲ್ಲಿ ಲಕ್ಷಾಂತರ ನಕ್ಷತ್ರಗಳು—ಕೆಲವು ಸ್ಪಷ್ಟವಾಗಿ, ಕೆಲವು ಅಸ್ಪಷ್ಟವಾಗಿ ಮಿನುಗುತ್ತಿರುವಾಗ ನಿರ್ದಿಷ್ಟವಾಗಿ ಇಂತಹುದೇ ಅರುಂಧತೀ ನಕ್ಷತ್ರ ಎಂದು ಬೆರಳು ಮಾಡಿ ತೋರಿಸುವುದು ಶಕ್ಯವಿಲ್ಲ—ಎಂದು ಈ ನ್ಯಾಯದ ಅಂತರಾರ್ಥ. ವಾಸ್ತವಿಕವಾಗಿ, ಸಪ್ತರ್ಷಿಮಂಡಲ ಉದಯವಾದಾಗ ವಸಿಷ್ಠ ನಕ್ಷತ್ರದ

68–70. ವಿವಾಹ ನಡೆಯುವುದು ಮುಹೂರ್ತಕ್ಕೆ ಸರಿಯಾಗಿ. ಆ ಸಂದರ್ಭದಲ್ಲಿ ಸಭೆಯಲ್ಲಿರತಕ್ಕ ಮರ್ಯಾದೆವಂತರು, ವಿದ್ವಾಂಸರು—ಮುಂತಾದವರಿಗೆಲ್ಲ ದಕ್ಷಿಣೆ ಕೊಡಬೇಕಾಗುತ್ತದೆ. ಇದನ್ನು ಗಂಡಿನ ಕಡೆಯ ಮತ್ತು ಹೆಣ್ಣಿನ ಕಡೆಯವರು ಒಟ್ಟೊಟ್ಟಿಗೆ ಕೊಡಬೇಕು, ಆದುದರಿಂದ ಇದಕ್ಕೆ 'ಉಭಯ ದಕ್ಷಿಣೆ' ಎಂದೂ ಕರೆಯುತ್ತಾರೆ. ಇದನ್ನು ಪರಿಮಿತ ಜನರಿಗೆ ಮಾತ್ರ ಕೊಡುವುದೂ ಉಂಟು. ಎಲ್ಲರಿಗೆ ಕೊಡುವುದೂ ಉಂಟು. ಹೀಗೆ ಊಟದ ದಕ್ಷಿಣೆಯನ್ನು ಮಾತ್ರ ಯಾರೊಬ್ಬರಿಗೂ ಬಿಡದೆ ಎಲ್ಲರಿಗೂ ಕೊಡುವುದು ಕ್ರಮ. ಆದುದರಿಂದ ಆ ದಕ್ಷಿಣೆಗೆ 'ಸರ್ವಾಣಿ' ಎಂದು ಹೆಸರು. 71. ಮದುವೆ ಕಾರ್ಯಕ್ರಮ ಹೆಚ್ಚು ಹೊತ್ತು ನಡೆಯುವುದರಿಂದ ಉದ್ದುದ್ದದ ಹಾಡುಗಳೂ ಬೇಕು. ಕಲ್ಯಾಣದ ಹಾಡುಗಳು ಈ ಸಂದರ್ಭದವು. ಗಿರಿಜಾ ಕಲ್ಯಾಣದ ಹಾಡನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಕಾಳಿದಾಸನ ಕುಮಾರ ಸಂಭವ ಕಾವ್ಯವಸ್ತುವನ್ನಿದು ಎಷ್ಟರ ಮಟ್ಟಿಗೂ ಅನುಸರಿಸಿದ್ದು ಒಂದು ರಸವತ್ತಾದ ಲಘುಕಾವ್ಯದಂತೆಯೆ ಇದೆ. 72, 73, 74. ಸಭೆಯಲ್ಲಿ ಮಂತ್ರಾಕ್ಷತೆಯಾಗುತ್ತದೆ. ಗುರುಹಿರಿಯರು ಒಬ್ಬೊಬ್ಬರಾಗಿ ವಧೂವರರಿಗೆ ಮಂತ್ರಾಕ್ಷತೆ ತಳಿಯುತ್ತಾರೆ. ವಧುವರರಿಬ್ಬರಿಗೂ ಆರತಿಯಾಗುತ್ತದೆ. ಅಲ್ಲಿಗೆ ವಿವಾಹದ ಸಭಾಕಾರ್ಯಕ್ರಮ ಮುಗಿದು, ವಧೂವರರನ್ನು ಕನ್ಯಾಪಿತನು ಒಳಗೆ ದೇವರ ಸನ್ನಿಧಿಗೆ ಕರೆದುಕೊಂಡು ಹೋಗುತ್ತಾನೆ. ಆಗ, ವರನ ಉತ್ತರೀಯದ ಕೊನೆಯನ್ನು ವಧು ಹಿಡಿದಿರುತ್ತಾಳೆ.

75–78. ಅರಳಿಕ್ಕುವುದು—ಅಂದರೆ ಲಾಜಹೋಮ. 'ಅರಳು' ಎಂಬುದಕ್ಕೆ 'ಹೊದಳು' ಎಂದು ಹವಿಕರ ಭಾಷೆಯ ಶಬ್ದ. 'ಹೊದಳ್' ಎಂದರೆ ವ್ಯಾಪಿಸು ಎಂದರ್ಥವಾಗಿದ್ದು 'ಅರಳ್' ಎಂಬುದಕ್ಕೆ ಸಮಾನಾರ್ಥಕವಾಗಿದೆ. ದಾಂಪತ್ಯ ಜೀವನವು ಅರಳಬೇಕೆಂಬುದು ಈ ಹೋಮದ ಸಂಕೇತಾರ್ಥ. ಈ ಹೋಮ ಒಳಗೆ ನಡೆಯುತ್ತದೆ. ಅದಾದ ಮೇಲೆ ಅಥವಾ ಅದು ಒಂದೆಡೆ ನಡೆಯುತ್ತಿರುವಾಗಲೇ ಭೋಜನ ವ್ಯವಸ್ಥೆ ನಡೆಯುತ್ತದೆ. ಊಟಕ್ಕೆ ಕರೆದದ್ದು ಮತ್ತೆ ಪದೆಮಾಡುವದು—ಎಂಬೆರಡು ಹಾಡುಗಳು ಇಲ್ಲಿ ವೈಶಿಷ್ಟ್ಯಪೂರ್ಣವಾಗಿವೆ. ಇವುಗಳಲ್ಲಿ ಅಡಿಗೆಯ ಶಾಕಪಾಕಗಳ ವಿವರ ವಿದೆಯಲ್ಲದೆ ಬ್ರಾಹ್ಮಭೋಜನ ವಿಧಾನವೂ ನಿರೂಪಿತವಾಗಿದೆ. ಹದಿನಾರು ಬಗೆಯ ಪಲ್ಯಗಳಿದ್ದುದಾಗಿ ಹೇಳಿದೆ. ಶುಭಕಾರ್ಯಗಳಲ್ಲಿ ಭೋಜನಕ್ಕೆ ಸಮಸಂಖ್ಯೆಯ ಪಲ್ಯಗಳೂ ಅಶುಭ ಕಾರ್ಯಗಳಿಗೆ ವಿಷಮ ಸಂಖ್ಯೆಯ ಪಲ್ಯಗಳೂ ಇರಬೇಕೆಂಬುದು ನಿಯಮ. ವರಪೂಜೆಯಲ್ಲಿ ವರನ ಪಾದ ತೊಳೆಯುವ ಸಂಗತಿಯೂ ಬರುತ್ತದೆ.

ವಿವಾಹ ಮುಹೂರ್ತವು ಹಗಲಿನಲ್ಲಿರುವುದುಂಟು, ರಾತ್ರಿಯಲ್ಲಿರುವುದೂ ಉಂಟು. ರಾತ್ರಿ ವಿವಾಹವಾದರೆ, ಕಾರ್ಯಕ್ರಮಗಳೆಲ್ಲ ಮುಗಿದ ಮೇಲೆ ಒಂದೆಡೆ ಶೋಭಾನೆಗಳನ್ನು ಹಾಡುತ್ತಲೇ ಇರುತ್ತಾರೆ. ಬೇರೆ ಬೇರೆ ಕಲ್ಯಾಣ ಕಥೆಗಳ

ಪಾಡನ್ನು ಮುತ್ತೈದೆಯರು ಎಡೆಬಿಡದೆ ಹಾಡುತ್ತಾರೆ. ಇನ್ನೇನು ಬೆಳಗಾಗುತ್ತ ಬಂತೆಂದರೆ ಉದಯಕಾಲದ ಶೋಭಾನೆಯನ್ನು ಹಾಡುತ್ತಾರೆ. 79. ಈ ಹಾಡಿನಲ್ಲಿ ಮಹಾವಿಷ್ಣುವಿನ ದಶಾವತಾರ ಲೀಲೆಗಳೂ ಶ್ರೀಕೃಷ್ಣ ಚರಿತೆಯೂ ಅಡಕವಾಗಿವೆ. ಹಾಡಿನ ಕೊನೆಗೆ ಕಣ್ವೇಶನ ಅಂಕಿತವಿದೆ. 'ಕಣ್ವಪುರ' ಎಂದು ಕಾಸರಗೋಡು ತಾಲೂಕಿಗೆ ಸೇರಿದ ಕುಂಬಳೆಗೆ ಪ್ರಾಚೀನದ ಹೆಸರು. 'ಗೋಪಾಲಕೃಷ್ಣ' ಅಲ್ಲಿಯ ದೇವರು.

80-83. ಇನ್ನೀಗ ದಿಬ್ಬಣಿಗರು ಹಿಂದೆರಳುವ ಸಂದರ್ಭ. ಹೋಗಲು ಅನುಮತಿಯನ್ನು ಕೇಳುತ್ತಾರೆ. ಆದರೆ 'ಹೋಗಬೇಡಿ, ನಿಲ್ಲಿ ; ನಿಮಗೆ ಸರಿಯಾಗಿ ಉಪಚಾರ ಮಾಡಲು ಸಾಧ್ಯವಾಗಲಿಲ್ಲ'—ಎಂದು ಕನ್ಯೆಯ ಕಡೆಯವರು ವಿನಯವನ್ನು ಹೇಳಿಕೊಳ್ಳುತ್ತಾರೆ. ಹೇಗೂ ದಿಬ್ಬಣಿಗರು ನಿಲ್ಲುವಂತಿಲ್ಲ, ಆದುದರಿಂದ ಅವರನ್ನು ಚತುರ್ಥಿಯ ಸಮಾರಂಭಕ್ಕೆ ಬರುವಂತೆ ಕರೆ ಕೊಡಲಾಗುತ್ತದೆ. ಮಗನ ಮದುವೆಗೆ ತಾಯಿ ಬರುವ ಸಂಪ್ರದಾಯವಿಲ್ಲ. ಆಕೆ ಚತುರ್ಥಿ ದಿವಸ ದಿಬ್ಬಣದ ಒಡತಿಯಾಗಿ ಮಗನನ್ನೂ ಸೊಸೆಯನ್ನೂ ಒಟ್ಟಿಗೆ ಕಾಣಲು ಬರುತ್ತಾಳೆ. ಹಾಗೆ ಬರುವಾಗ ಸೊಸೆಗೆ ಕಾಲುಂಗುರವನ್ನು ಮಾಡಿಸಿ ತರುತ್ತಾಳೆ. ಅದನ್ನು ಸೊಸೆಗೆ ತೊಡಿಸುವುದು ಈ ಅತ್ತೆಯ (ಗಂಡನ ತಾಯಿಯ) ಗೌರವಾನ್ವಿತ ಕರ್ತವ್ಯವಿರುತ್ತದೆ. ಆದುದರಿಂದಲೇ ಚತುರ್ಥಿಗೆ ಹೇಳಿಕೆ ಕೊಡುವಾಗ 'ಅತ್ತೆ ಸಹಿತ' ಬರುವಂತೆ ಹಾಡಿನಲ್ಲಿ ನಿರೂಪಣೆಯಿದೆ. ಅಷ್ಟೇ ಅಲ್ಲ, ಮದುಮಗನಿಗೆ ಪಾಸಡಿಗಾಗಿ (ಅಂದರೆ, ಜೊತೆಗಾಗಿ) ಮದುಮಗನ ತಮ್ಮ ಅಥವಾ ಇನ್ನು ಯಾರಾದರೊಬ್ಬನು, ಚಿಕ್ಕವನು ನಿಲ್ಲುವುದು ಕೂಡ ವಾಡಿಕೆ. ಈ ವಿಷಯ ಇದೇ (82) ಹಾಡಿನಲ್ಲಿ ಬರುತ್ತದೆ. ಮದುಮಗನಿಗೆ ತಕ್ಕ ನೀತಿಬೋಧೆ ಮಾಡಿ, ದಿಬ್ಬಣಿಗರು ತೆರಳುತ್ತಾರೆ.

### ಅರುಂಧತೀ ದರ್ಶನ

84. 'ಅರುಂಧತಿ' ಎಂಬಾಕೆ ವಸಿಷ್ಠ ಋಷಿಯ ಪತ್ನಿ, ಮಹಾ ಪತಿವ್ರತೆಯೆಂದು ಹೆಸರಾದವಳು. ಆಕೆಯ ಹೆಸರಿನ ನಕ್ಷತ್ರವನ್ನು ವಿವಾಹದ ರಾತ್ರಿ ನೂತನ ದಂಪತಿಗಳಿಗೆ ತೋರಿಸುವುದು ವಾಡಿಕೆ. ಈ ನಕ್ಷತ್ರವನ್ನು ನೋಡುವುದರಿಂದ ದೀರ್ಘ ಸೌಮಂಗಲ್ಯ ಪ್ರಾಪ್ತವಾಗುವುದೆಂದು ತಿಳಿಯಲಾಗಿದೆ. 'ಅರುಂಧತೀ ದರ್ಶನ' ಎಂಬೊಂದು ನ್ಯಾಯವಿದೆ. ಆಕಾಶದಲ್ಲಿ ಲಕ್ಷಾಂತರ ನಕ್ಷತ್ರಗಳು—ಕೆಲವು ಸ್ಪಷ್ಟವಾಗಿ, ಕೆಲವು ಅಸ್ಪಷ್ಟವಾಗಿ ಮಿನುಗುತ್ತಿರುವಾಗ ನಿರ್ದಿಷ್ಟವಾಗಿ ಇಂತಹದೇ ಅರುಂಧತೀ ನಕ್ಷತ್ರ ಎಂದು ಬೆರಳು ಮಾಡಿ ತೋರಿಸುವುದು ಶಕ್ಯವಿಲ್ಲ—ಎಂದು ಈ ನ್ಯಾಯದ ಅಂತರಾರ್ಥ. ವಾಸ್ತವಿಕವಾಗಿ, ಸಪ್ತರ್ಷಿಮಂಡಲ ಉದಯವಾದಾಗ ವಸಿಷ್ಠ ನಕ್ಷತ್ರದ

ಸಮೀಪ ಅರುಂಧತೀ ನಕ್ಷತ್ರವಿರುವುದು ಗೋಚರವಾಗುತ್ತದೆ—ಎಂದು ಪುರೋಹಿತರು ಹೇಳುತ್ತಾರೆ. ಅದನ್ನು ನವದಂಪತಿಗಳಿಗೆ ತೋರಿಸುವುದು ಶಾಸ್ತ್ರೋಕ್ತವಾಗಿದೆ.

85–93. ಗಂಡನ ಪಾದ ತೊಳೆಯುವುದು, ಗಂಧ ಹಚ್ಚುವುದು—ಇವು ಪೂಜ್ಯಭಾವನೆ ಸಂಕೇತಗಳು. ವಿವಾಹದ ದಿನದಿಂದಲೇ ತೊಡಗಿಕೊಂಡು ಚತುರ್ಥಿಯ ವರೆಗೆ ವೈದಿಕಕ್ರಿಯಾಭಾಗ ವಿಶೇಷವೇನೂ ಇಲ್ಲ. ಆದರೆ ನೂತನ ದಂಪತಿಗಳಿಗೆ ಪರಸ್ಪರ ಪ್ರೇಮವನ್ನು ವೃದ್ಧಿಗೊಳಿಸುವ ಹಲವಾರು ಲೌಕಿಕ ಕ್ರಿಯೆಗಳ ಶಾಸ್ತ್ರ ಇದ್ದೇ ಇರುತ್ತದೆ. ಪ್ರತಿದಿನವೂ ಇಬ್ಬರೊಟ್ಟಿಗೆ (ವರನ ಉತ್ತರೀಯದ ಕೊನೆಯನ್ನು ವಧು ಹಿಡಿದುಕೊಂಡು) ಹಂದರ ಮಂಟಪಕ್ಕೆ ಪ್ರದಕ್ಷಿಣೆ ಬರುವರು. ವರನು ಕ್ಲಿಪ್ತ ಕಾಲದಲ್ಲಿ ಔಪಾಸನ, ವೈಶ್ವದೇವಗಳನ್ನು ಆಚರಿಸುವುದು, ಹಂದರ ಮಂಟಪದಲ್ಲಿ ಉರುಟಣೆ ವಿನೋದ (ಪರಸ್ಪರವಾಗಿ ಅರಿಸಿನ ಹಚ್ಚುವುದು: ಅರಿಸಿನೆಣ್ಣೆ ಹಚ್ಚುವುದು), ಗಂಡನಿಗೆ ವೀಳ್ಯ ಕೊಡುವುದು, ಮಾಲೆ ಹಾಕಿಕೊಳ್ಳುವುದು, ಚೆಂಡಾಟ, ಲೆತ್ತ (ನೆತ್ತ) ಆಟ—ಇವೆಲ್ಲವೂ ಲಲಿತ ಶೃಂಗಾರದ ಮನೋಜ್ಞ ಸನ್ನಿವೇಶಗಳು. ಈ ಸನ್ನಿವೇಶಗಳಲ್ಲಿ ಹಾಡುವ ಶೋಭಾನೆಗಳಿಂದ ಇದು ವಿದಿತವಾಗುವುದು.

## ಚತುರ್ಥಿಯ ಹಾಡುಗಳು

94–99. ಚತುರ್ಥಿಯ ದಿಬ್ಬಣ ಮದುವೆಯ ದಿಬ್ಬಣದಷ್ಟು ಆಡಂಬರವುಳ್ಳದಲ್ಲ. ಆದರೂ, ಕಳೆಯಬಾರದ (ಅತ್ಯವಶ್ಯ) ನೆಂಟರಿಷ್ಟರಾದ ಸ್ತ್ರೀಪುರುಷರು ಕೂಡಿಕೊಂಡು ಬರುವ ದಿಬ್ಬಣವದು. ಈ ದಿಬ್ಬಣಕ್ಕೆ ಮುಖ್ಯವಾಗಿ ಇರುವುದು ಕೊಂಬು ಮಾತ್ರ. ಇದಕ್ಕೆ **ಅತ್ತೆಯ ದಿಬ್ಬಣವೆಂದೇ** ಹೆಸರು. ಸಂಜೆಗೆ ಬಂದು ತಲುಪಿದೊಡನೆ ತಮ್ಮ ಹುಡುಗನನ್ನು (ವರನನ್ನು) ಕಾಣುವ ಕುತೂಹಲ ಅವರಿಗೆ. ಹದಿನೈದು ಸಾಲುಗಳ ಸೊಲ್ಲುಗಳುಳ್ಳ ಹಾಡನ್ನು ಇಲ್ಲಿ ಕೊಟ್ಟಿದೆ. ನಡುನಡುವೆ ಬಂದ ಪ್ರಾಸಗಳಿಂದ ವಿಶಿಷ್ಟ ಧಾಟಿಯಿಂದ ಈ ಹಾಡು ಮನೋಜ್ಞವಾಗಿದೆ. ಮದುಮಗ ಕೃಷ್ಣನೆಲ್ಲಿದ್ದಾನೆ ? ತೋರಿಸಿ !—ಎಂದು ಅವರು ಕೇಳಿಕೊಳ್ಳುತ್ತಾರೆ. ಮನೆಯವರು ಅದಕ್ಕೆ ಸರಿಯಾದ ಉತ್ತರವನ್ನು ಹಾಡಿನ ರೂಪದಲ್ಲಿ ಕೊಡುತ್ತಾರೆ. 'ಇದೋ ಕೃಷ್ಣನು ನಿಜರಮಣಿ ಸಹಿತ ಬರುತ್ತಾನೆ'—ಎನ್ನುತ್ತಾರೆ. ಇನ್ನೀಗ ಅತ್ತೆಗೆ (ವರನ ತಾಯಿಗೆ) ಸೊಸೆಯನ್ನು ಬಣ್ಣಿಸಿ ತೋರಿಸಲಾಗುತ್ತದೆ. ಅದಕ್ಕೆ ಸರಿಯಾದ ಉತ್ತರವಾಗಿ 'ಸೊಸೆಯ ಹೊಗಳಿಕೆ ನಮಗೆ ಬೇಕಿಲ್ಲ. ಆಕೆಯ ಗುಣವೇ ನಮಗೆ ಗ್ರಾಹ್ಯವಾದುದು' ಎಂದು ಸಮರ್ಪಕವಾಗಿ ಹಾಡಿನಲ್ಲೇ ಉತ್ತರ ಬರುತ್ತದೆ. ಸ್ತ್ರೀಯ ಆದರ್ಶವೇನು ? ಎಂಬುದು (97ನೆಯ) ಹಾಡಿನಲ್ಲಿ ಬಂದುದನ್ನು ಕಾಣಬಹುದು. ಅನಂತರ, ವರನ ತಾಯಿ ತನ್ನ ಕಂದನ ರಾಣಿಗೆ ಚೆಂದದ ಕಾಲುಂಗುರವನ್ನು ತೊಡಿಸಿ,

ತನ್ನ ಮಡಿಲಲ್ಲಿ ಕುಳ್ಳಿರಿಸುತ್ತಾಳೆ. ಚತುರ್ಥಿಯ ಅರಿಸಿನೆಣ್ಣೆ ಬಳಿಯುವ ಕಾರ್ಯಕ್ರಮ ನಡೆಯುತ್ತದೆ. ವಧುವರರನ್ನು ಮಂಟಪದಲ್ಲಿ ಮಣೆಗಳ ಮೇಲೆ ಮೇಲ್ವಸನ ಹಾಕಿ ಕುಳ್ಳಿರಿಸಿ, ಅರಿಸಿನೆಣ್ಣೆಯನ್ನು ಪರಸ್ಪರವಾಗಿ ತಿಮಿರಿಸುತ್ತಾರೆ.

## ಹಸೆಗೆ ಕರೆಯುವುದು

100-102. ವರನನ್ನೂ ವಧುವನ್ನೂ ಕೃಷ್ಣ ರುಕ್ಮಿಣಿಯರಾಗಿ, ಶಿವ ಪಾರ್ವತಿಯರಾಗಿ, ರಾಮ ಜಾನಕಿಯರಾಗಿ ಕಲ್ಪಿಸಿಕೊಂಡು, ಹಸೆಗೆ ಕರೆಯುವ ಹಾಡುಗಳಲ್ಲಿ ಕೆಲವು ಇಲ್ಲಿ ಬಂದಿವೆ. ಅವುಗಳಲ್ಲಿ 'ಸಂವತ್ಸರದ ಹಾಡು' ಒಂದಿದೆ. ಅರುವತ್ತು ಸಂವತ್ಸರಗಳ ಹೆಸರನ್ನೊಳಗೊಂಡಿದೆ ; ಇನ್ನೊಂದೆಡೆ ಶ್ರೀಮನ್ನಾರಾಯಣನ ದಶಾವತಾರಗಳಲ್ಲಿ ಒಂದೊಂದನ್ನೆ ಪ್ರಸ್ತಾಪಿಸುತ್ತ ಹಸೆಗೇಳುವಂತೆ ಆಹ್ವಾನಿಸಲಾಗಿದೆ. ಹೀಗೆ ಇದೊಂದು ಅಪೂರ್ವ ರೀತಿಯ ಶೋಭನಗೀತ ಕವಿತೆಯಾಗಿದೆ. ಮದುಮಗಳನ್ನೂ ಹಸೆಗೆ ಕರೆಯಲಾಗಿದೆ. (103–105) ಶೋಭನ ದಿವಸದ ರಾತ್ರಿ ದಂಪತಿಗಳಲ್ಲಿ ವೀಳ್ಯದೆಲೆ ಪೋಣಿಸುವ ಪಂಥವಿರುತ್ತದೆ. ಅದನ್ನು ಎಲೆ ಹಾಕಿದ್ದು, ಎಲೆ ಬಿಕ್ಕುವುದು— ಎಂಬೆರಡು ಹಾಡುಗಳು ಸೊಗಸಾಗಿ ನಿರೂಪಿಸುತ್ತವೆ. ದಂಪತಿಗಳಿಗೆ ಸ್ವಾದು ಭೋಜನವೇರ್ಪಡುವಲ್ಲಿ ಹಾಲು ತುಪ್ಪ ಬಡಿಸುವುದನ್ನೆ ಒಂದು ಶೋಭಾನೆ ನಿರೂಪಣೆ ಮಾಡುತ್ತದೆ.

106–108. ಇನ್ನೀಗ ವಧೂವರರ ಪ್ರಥಮ ರಾತ್ರಿಯ ಸಂಭ್ರಮ. ಚಾಪೆ ಹಾಕುವುದು, ಆದನಂತರ ಶಯನಕ್ಕೆ ಕರೆಯುವುದು— ಎಂಬ ಹಾಡು. ವರನು ಇಲ್ಲಿ ವಧುವನ್ನು ಒಲಿಸುವ ಬಗೆ ನಿರೂಪಿತವಾಗಿದೆ. ಲಕ್ಷ್ಮೀನಾರಾಯಣರಿಗೆ ಹಾಸಿಗೆ ಹಾಸಿಯಾವರೂ ತಮಗೆ ತಕ್ಕ ಮರ್ಯಾದೆ ಕೊಡದಿದ್ದರೆ, ಹಾಸಿಗೆಯನ್ನು ನಾವು ಬಿಡೆವು —ಎಂದು ಲಕ್ಷ್ಮೀದೇವಿಯ ಅಕ್ಕ ತಂಗಿಯರು ಹಾಸ್ಯ ಮಾಡಿದ್ದು ಇಲ್ಲಿ ಸೊಗಸಾಗಿದೆ. ಲಕ್ಷ್ಮಿಯು ಅವರಿಗೆ ಅಕ್ಷಯ ಸಂಪತ್ತಾಗುವಂತೆ ವರ ಕೊಡುತ್ತಾಳೆ. ಸತಿಪತಿಯರಿಗೆ ಜೊತೆಯಾಗಲು ಆಸ್ಪದ ಮಾಡಿಕೊಡುವುದು ಕೂಡ ಪುಣ್ಯಕಾರ್ಯವೆಂದು ಬಗೆಯಲಾಗಿದೆ. 'ಧರ್ಮಕ್ಕೆ ವಿರುದ್ಧವಲ್ಲದ ಕಾಮವು ನಾನೇ' ಎಂದು ಗೀತೆಯಲ್ಲಿ ಶ್ರೀಕೃಷ್ಣನು ಹೇಳಿರುವನಷ್ಟೆ. ಅಂತಹ ಕೃಷ್ಣನ ಆರಾಧನೆಯ ಒಂದು ರೂಪವೇ ಇದು—ದಂಪತಿಗಳ ಶಯನಕ್ಕೆ ಏರ್ಪಡಿಸುವುದು.

109–112. ಚತುರ್ಥಿಯ ಮರುದಿವಸ ದಿಬ್ಬಣಿಗರು ಹಿಂದಿರುಗುವ ವೇಳೆ ವರನಿಗೆ ಉಪದೇಶದ ಮಾತುಗಳನ್ನಾಡುತ್ತಾರೆ. ಅತ್ತಿಗೆ ನಾದಿನಿಯರೊಡನೆ ಮಾತಾಡುತ್ತ ಗೃಹಪ್ರವೇಶಕ್ಕೆ ಹೇಳಿಕೆ (ಕರೆ) ಕೊಡುತ್ತಾರೆ. ದಿಬ್ಬಣ ತೆಗೆದುಕೊಂಡು

ಸಂಭ್ರಮದಿಂದ ಬರುವಂತೆ ತಿಳಿಸಿ ಹೋಗುತ್ತಾಳೆ. ಗೃಹಪ್ರವೇಶಕ್ಕೆ ಇನ್ನು ಒಂದೆರಡು ದಿನಗಳಿರುತ್ತವೆ. ದಂಪತಿಗಳು ಓಕುಳಿಯಾಡುವ ಮೊದಲು ಕಾಯಿಪಲ್ಲೆ ಹಚ್ಚುತ್ತಾರೆ. ಓಕುಳಿಯಾಟಕ್ಕೆ ಇನ್ನೊಂದು ಹೆಸರು 'ಕೆರೆ ಮೀಯುವುದು' ಎಂದು. ಇದು ಚತುರ್ಥಿಯ ಮರುದಿನ ನಡೆಯುವಂತಹದು. ಸತಿಪತಿಯರು ಕೆರೆಗೆ ಹೋಗಿ ಜಲಕೇಳಿ ಮಾಡುವುದುಂಟು. ಅದು ಇಲ್ಲವಾದಲ್ಲಿ ಒಂದು ದೊಡ್ಡ ಪಾತ್ರೆಯಲ್ಲಿ ಓಕುಳಿಯನ್ನು (ಕುಂಕುಮ ಜಲವನ್ನು) ತುಂಬಿ, ಅದನ್ನು ಪರಸ್ಪರರಾಗಿ ಎರಚಿಕೊಳ್ಳುತ್ತಾರೆ. ಅದಕ್ಕೆ ಕೆರೆ ಮೀಯುವ ಹಾಡು ಜೊತೆಗೂಡುತ್ತದೆ. ಇದೇ ಸಂದರ್ಭದಲ್ಲಿ 'ಮೀನು ಹಿಡಿಯುವುದು' ಎಂಬ ಆಚರಣೆಯೂ ಇದೆ. ಇದು ವಿಷ್ಣುವಿನ ಮತ್ಸ್ಯಾವತಾರವನ್ನು ಸೂಚಿಸುವ ಅರ್ಥವುಳ್ಳದಾಗಿದೆ. ಮತ್ಸ್ಯಾವತಾರದಲ್ಲಿ ವಿಷ್ಣುವು ತಮನನ್ನು ಕೊಂದು ವೇದವನ್ನು ಉದ್ಧರಿಸಿದ್ದನು.

## ಗೃಹಪ್ರವೇಶ (ಸಟ್ಟುಮುಡಿ)

113–117. ಕನ್ಯಾ ಪಾಣಿಗ್ರಹಣವಾದ ಅನಂತರ ಚತುರ್ಥಿ ಕಳೆದು ಸುಮುಹೂರ್ತದಲ್ಲಿ ಕನ್ಯೆಯ ಕಡೆಯವರ ದಿಬ್ಬಣದೊಡನೆ, ದಂಪತಿಗಳು ವರಗೃಹವನ್ನು ಪ್ರವೇಶಿಸುವ ಕಾರ್ಯವೇ ಗೃಹಪ್ರವೇಶ (ವಧೂಪ್ರವೇಶ). ಈ ಸಮಾರಂಭವು ಹವಿಕರಲ್ಲಿ 'ಸಟ್ಟುಮುಡಿ' ಎಂಬ ಹೆಸರಿನಲ್ಲಿದೆ. ವಧು ಮೊತ್ತಮೊದಲನೆಯ ಬಾರಿ ವರಗೃಹವನ್ನು ಪ್ರವೇಶಿಸಿ, ಅಲ್ಲಿ ಮೊದಲ ಬಾರಿಗೆ ಸಟ್ಟುಗವನ್ನು ಪೂಜಿಸುವುದು— ಎಂದು ಈ ಶಬ್ದಕ್ಕೆ ಅರ್ಥ. ಆ ಸಂದರ್ಭದಲ್ಲಿ ಬಡಿಸುವ ಸಟ್ಟುಗಕ್ಕೆ ಹೂ ಮುಡಿಸಿ, ಪೂಜಿಸಿ, ಆಕೆ ವರನಿಗೆ ನಮಸ್ಕರಿಸಿ ಆತನಿಂದ ಸಟ್ಟುಗವನ್ನು ಪಡೆಯುತ್ತಾಳೆ. ಇದನ್ನು ಪ್ರಧಾನವಾಗಿ ಲಕ್ಷ್ಯವಿಟ್ಟು ವಧೂ ಗೃಹಪ್ರವೇಶವನ್ನು 'ಸಟ್ಟುಮುಡಿ' ಎಂದು ಹವಿಕರು ನಾಮಾಂಕಿತಗೊಳಿಸಿರುವುದಾಗಿ ಕಂಡುಬರುತ್ತದೆ. ಮದುಮಗಳ ಜೀವನದಲ್ಲಿ ದೊಡ್ಡದೊಂದು ಮಾರ್ಪಾಡು ಈ ಸಮಾರಂಭದಿಂದ ಆಗುವುದು. ತಾನು ಹುಟ್ಟಿ ಬಳೆದ ತವರನ್ನು ತೊರೆದು, ಪತಿಗೃಹಕ್ಕೆ ಆಕೆ ಬರುತ್ತಾಳೆ; ಗೃಹಿಣಿಯಾಗುತ್ತಾಳೆ. ತಾಯಿ ಮನೆಯಿಂದ ಹೊರಡುವಾಗ ಅಲ್ಲಿಯ ಬಂಧುಗಳಿಗೆಲ್ಲ ಹೇಳಿ ಅಪ್ಪಣೆ ಪಡೆದು ಬರುವಂತೆ ಹಾಡಿನ ಸೊಲ್ಲುಗಳಿವೆ. 'ಹೆಣ್ಣು ಮನೆ ತುಂಬಿದ್ದು' ಎಂಬ ಹಾಡಿನಲ್ಲಿ ತನ್ನ ತಂದೆ ಕೊಟ್ಟ ಬಳಿವಾರಿ (ಬಳುವಳಿ) ಗಳೊಡನೆ ಬಂದುದನ್ನು ಹೇಳಿದೆಯಲ್ಲದೆ, ಆಕೆ ಬಂದುದು ಪತಿಗೃಹಕ್ಕೆ ಹೇಗೆ ಶುಭಲಕ್ಷಣವಾಯಿತೆಂಬುದೂ ವರ್ಣಿತವಾಗಿದೆ. ಓತ್ತಿಲಿನ ಎದುರಿಗಿದ್ದ ಹತ್ತು ತೆಂಗಿನ ಮರಗಳೂ ಗಂಟು ಗಂಟೊಡೆದು ಫಲ ಬಂದು ವಂತೆ! ಶಿವನು ಪಾರ್ವತಿಯನ್ನು ವರಿಸಿ ರಜತಾದ್ರಿಗೆ ಬಂದಾಗ ಮುಂದಾಗಿಯೇ ನಾರದನು ಶಿವದಂಪತಿಗಳನ್ನು ಎದುರುಗೊಳ್ಳುವ ವ್ಯವಸ್ಥೆ ಮಾಡುತ್ತಾನೆ. ಅನಸೂಯೆ

ಮುಂತಾದವರು ಪಾನ (ಕುಂಕುಮಜಲ) ಹಿಡಿದುಕೊಂಡು ಬಂದು ಹರ ಗಿರಿಜೆಯರ ಪಾದವನ್ನು ತೊಳೆಯುವರು.

118. ಕೃಷ್ಣ ರುಕ್ಮಿಣಿಯರು ಮದುವೆಯಾಗಿ ಅರಮನೆಗೆ ಬರುವಾಗ ಸೌಭದ್ರೆ ಅವರಿಬ್ಬರ ಕಾಲು ತೊಳೆದ ಸನ್ನಿವೇಶವನ್ನು ಹಾಡಿನಲ್ಲಿ ಮಾರ್ಮಿಕವಾಗಿ ಚಿತ್ರಿಸಲಾಗಿದೆ. ಕಾಲು ತೊಳೆಯಲು ಸೌಭದ್ರೆಗೆ ಸೂಚನೆ ಬರುತ್ತದೆ. ಆಕೆ ಚಿನ್ನದ ಗಿಂಡಿಯಲ್ಲಿ ಓಕುಳಿಯನ್ನು, ಗಂಗಾಜಲವನ್ನೂ ಹಿಡಿದುಕೊಂಡು ಹೊಂಬಾಳೆಯ ಹಾಗೆ ಬಳುಕುತ್ತ ಬರುತ್ತಾಳೆ. 'ಅಣ್ಣನ ಕಾಲನ್ನು ನಾನು ಹೆಮ್ಮೆಯಿಂದ ತೊಳೆದೇನು. ಅಣ್ಣನ ಹೆಂಡತಿ ರುಕ್ಮಿಣಿಯ ಕಾಲನ್ನು ತೊಳೆಯಬೇಕಾದರೆ, ಆಕೆ ಮುಂದೆ ತನ್ನ ಮಗಳನ್ನು ತನ್ನ ಮಗನಿಗೆ ಕೊಡುವೆನೆಂದು ವಾಗ್ದಾನ ಮಾಡಬೇಕು' ಎನ್ನುತ್ತಾಳೆ. ಕೃಷ್ಣನು ಕೊಡುವೆನೆಂದು ಹೇಳಿದ ಇತರ ಬೆಲೆ ಬಾಳುವ ಒಡವೆಗಳಲ್ಲಿ ಆಕೆಗೆ ಮನಸ್ಸಿಲ್ಲ. ಎಪ್ಪತ್ತು ವರಹದ ಪಟ್ಟೆ ಸೀರೆ ಕೊಡುವುದಾದರೂ ಒಲ್ಲಳು. ಮಗನಿಗಾಗಿ ಒಂದು ಕುದುರೆಯನ್ನು ಕೊಡುವುದಾದರೂ ಒಲ್ಲಳು. ಕೊನೆಗೆ ಸೌಭದ್ರೆಯ ಶರ್ತಕ್ಕೆ ಕೃಷ್ಣ ರುಕ್ಮಿಣಿಯರು ಒಪ್ಪಲೇ ಬೇಕಾಗುತ್ತದೆ. ಹಾಗೆ ಒಪ್ಪಿ, ಕೃಷ್ಣನು ಸೌಭದ್ರೆಗೆ ವೀಳ್ಯ ಕೊಡಿಸಿದ ಮೇಲೆ, ಆಕೆ ತನ್ನ ಅಣ್ಣ ಅತ್ತಿಗೆಯರ ಪಾದವನ್ನು ತೊಳೆಯುತ್ತಾಳೆ. ಸೌಭದ್ರೆಗೆ ಕೃಷ್ಣನು ಉಡುಗೊರೆ ಕೊಡುತ್ತಾನೆ. ದಕ್ಷಿಣ ಕನ್ನಡ ಜಿಲ್ಲೆಯ ಹವಿಕರ ಶೋಭಾನೆಗಳಲ್ಲಿ ಹೀಗೆ ಪಾದ ತೊಳೆಯುವ ಸಂದರ್ಭದಲ್ಲಿ ಈ ಬಗೆಯ ವಿನೋದದ ಮಾತುಕತೆಯ ಹಾಡುಗಳು ದೊರಕಿಲ್ಲ.

119-121. ಮದುವೆಯಲ್ಲಿ ವರನ ದಿಬ್ಬಣದವರನ್ನು ಹೇಗೋ ಹಾಗೆಯೇ ಪಟ್ಟುಮುಡಿಯಲ್ಲಿ ಕನ್ಯಾಪಿತನಲ್ಲಿಂದ ಬಂದ, ವಧೂವರರಿಬ್ಬರೂ ಇರುವ, ದಿಬ್ಬಣಿಗರನ್ನು ಉಪಚರಿಸುವುದು ಕ್ರಮದಂತೆ ನಡೆಯುತ್ತದೆ. ಶೋಭಾನೆಗಳು ಅದನ್ನೇ ವಿವರಿಸುತ್ತವೆ. ಸಭಿಕರಿಗೆ ಪನ್ನೀರು ತಳಿಯುವ ಹಾಡು ಇಲ್ಲಿದೆ. 'ಚಟ್ಟು ಹೊಯ್ಯುವುದು' ಎಂಬುದು ಗೃಹಪ್ರವೇಶದಲ್ಲಿ ಒಂದು ಬಗೆಯ ಮಂಗಳಕರ ಕ್ರಿಯೆ. ಬೇರೆ ಬೇರೆ ದೇವತಾಸ್ತ್ರೀಯರು ಹಾಗೂ ಋಷಿಪತ್ನಿಯರು ದ್ರೌಪದಿಯಿಂದ ಚಟ್ಟು ಹೊಯಿಸಿದ ವಿವರವು ಹಾಡಿನಲ್ಲಿ ಬಂದಿದೆ. 'ಚಟ್ಟು' ಎಂದರೆ ಅಂಗೈ (ತಟ್ಟು) ಎಂದು ಅರ್ಥ. ಮದುಮಗಳು ಅರಿಸಿನ ನೀರನ್ನು ತನ್ನ ಎರಡೂ ಕೈಗಳಲ್ಲಿ ಅದ್ದಿ ಗೋಡೆಯ ಮೇಲೆ ಗೋಪುರಾಕಾರದಲ್ಲಿ ಹಸ್ತಮುದ್ರೆಗಳನ್ನೊತ್ತುವಳು. ಇದನ್ನು ದೇವರ ಕೋಣೆಯ ಒಳಗೆ ಅಥವಾ ಮನೆಯ ಜಗಲಿಯ ಗೋಡೆಗೆ ಒತ್ತುವುದು ಕ್ರಮ. ಇದು ಅಮಂಗಲಪರಿಹಾರಕವೂ ಕರ್ಮಯೋಗ ದ್ಯೋತಕವೂ ಆಗಿರುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೀಗೆ ಚಟ್ಟು ಹೊಯ್ಯುವ ಸಂಪ್ರದಾಯ ಹಿಂದಿನ ಕಾಲದಲ್ಲಿ ಇತ್ತೋ ಏನೋ! ಈ ಕಾಲದಲ್ಲಂತೂ ಇಲ್ಲ. ಆದುದರಿಂದ ಚಟ್ಟು ಹೊಯ್ಯುವ ಶೋಭಾನೆ ಕೂಡ ದಕ್ಷಿಣ ಕನ್ನಡ ಜಿಲ್ಲೆಯ ಹವಿಕರಲ್ಲಿ ಉಪಲಬ್ಧವಿಲ್ಲ.

## ಔಪಾಸನ

122. ಔಪಾಸನ ಎಂಬುದು ವಿವಾಹದ ಸಂದರ್ಭದಲ್ಲಿ ಕೈಗೊಳ್ಳುವ ಒಂದು ವ್ರತ ಹೋಮ. ವಿವಾಹಾಗ್ನಿಯನ್ನು ಪ್ರಜ್ವಲಿಸಿ ಪ್ರಾಣಾಯಾಮ ಮಾಡಿ ದೇಶ ಕಾಲಗಳನ್ನು ಉಚ್ಚರಿಸಿ, ಯಾವಜ್ಜೀವವೂ ಉಪಾಸನವನ್ನು ಮಾಡುವೆನೆಂದು ಸಂಕಲ್ಪ ಹೇಳಿಸಿ, ಈ ಹೋಮವನ್ನು ಆಚರಿಸಲಾಗುತ್ತದೆ. ಈ ಹೋಮವಾಗಿ ಚತುರ್ಥಿಯ ವರೆಗೆ ದಂಪತಿಗಳು ಬ್ರಹ್ಮಚರ್ಯದಲ್ಲಿ ಇರತಕ್ಕದು. ಈ ಹೋಮದ ವೇಳೆಗೆ ಮದುವಣಗಿತಿ ಔಪಾಸನ ಮಂತ್ರಪವಿತ್ರವಾದ ದರ್ಭೆಯ ಕಟ್ಟನ್ನು ಪಡೆಯುತ್ತಾಳೆ. ಅದನ್ನು ಓಟೆಯ ಅಂಡೆಯಲ್ಲಿ ಜೋಪಾನಪಡಲಾಗುತ್ತದೆ. ಆಕೆಗೆ ಮುಂದಿನ ಶುಭ ಕಾರ್ಯಗಳಿಗೆಲ್ಲ ಅದು ಬೇಕು. ಅದಕ್ಕೆ 'ಔಪಾಸನ' ಎಂತಲೇ ಹೆಸರು. ಆಕೆ ಅದನ್ನು ಹಿಡಿದುಕೊಂಡೇ ವರಗೃಹಕ್ಕೆ ಬರುತ್ತಾಳೆ. ಗೃಹಪ್ರವೇಶದಲ್ಲಿ (ಆಕೆ) ವರನ ಹಿರಿಯರಿಗೆಲ್ಲ (ಅತ್ತೆ, ಅತ್ತಿಗೆಯಂದಿರಿಗೆ) ಔಪಾಸನವನ್ನು ಕೊಟ್ಟು ನಮಸ್ಕರಿಸುತ್ತಾಳೆ. ಇದು ಆಕೆಯ ಮುತ್ತೈದೆತನಕ್ಕೆ ಪೋಷಕವೆಂದು ಬಗೆಯಲಾಗಿದೆ. ಕಟ್ಟುಮುಡಿಯಲ್ಲಿ ಹೊಸ್ತಿಲ ಪೂಜೆಯೆಂಬುದೊಂದು ಪ್ರಮುಖ ಕ್ರಿಯೆ. (123–125) ವಧೂವರರಿಬ್ಬರೂ ಪುರೋಹಿತರ ಮಂತ್ರೋಚ್ಚಾರಣದೊಂದಿಗೆ ಹೊಸ್ತಿಲನ್ನು ಪೂಜಿಸುತ್ತಾರೆ. ಹೊಸ್ತಿಲಲ್ಲಿ ಸಿದ್ದೆಯನ್ನಿಡಲಾಗುತ್ತದೆ. ವಧು ಹೊಸ್ತಿಲನ್ನು ದಾಟಿ ಒಳಗೆ ಬರುವಾಗ ಬಲದ ಕಾಲನ್ನು ಮುಂದಿಟ್ಟು, ಸಿದ್ದೆಯನ್ನು ಎಡಹಿಕೊಂಡು ಮನೆಯೊಳಗೆ ಪ್ರವೇಶಿಸುವುದು ಪದ್ಧತಿ. ಇದರಿಂದ, ವಧೂ ಪ್ರವೇಶವಾದ ಆ ಗೃಹವು ಸಂಪದ್ಭರಿತವಾಗುವುದೆಂದು ತಿಳಿಯಲಾಗಿದೆ.

126–128. ವಧು ವರನ ಗೃಹದಲ್ಲಿ ಮೊತ್ತಮೊದಲು ಉಣಬಡಿಸುವ ಶಾಸ್ತ್ರ ಇದೀಗ ನಡೆಯುತ್ತದೆ. ಆಕೆಗೆ ಮೇದಿಲ ಉಡಿಸಲಾಗುತ್ತದೆ. ಆಕೆ ತನ್ನ ಗಂಡನಿಗೆ ಮತ್ತು ಇತರರಿಗೆ ಉಣಬಡಿಸುತ್ತಾಳೆ, ಬ್ರಹ್ಮಸಭೆಗೆ ಊಟ ಬಡಿಸಿದ ವಿವರ ಒಂದು ಶೋಭಾನೆಯಲ್ಲಿ ವಿವೃತವಾಗಿದೆ. ಮನೆಯ ಯಜಮಾನನು ಎರಡು ತಂಬಿಗೆಗಳಲ್ಲಿ ನೀರನ್ನು ಸಭೆಯ ಮುಂದಿಟ್ಟು ನಮಸ್ಕರಿಸಿ "ಬ್ರಹ್ಮಸಭೆ ಸಮಸ್ತರೂ ಪಾದಕಮಲಗಳನ್ನು ತೊಳೆದು ಮಡಿ ಹಚ್ಚಿ" ಎಂದು ಪ್ರಾರ್ಥಿಸುತ್ತಾನೆ. ಬಾಡಿಸಿದ ಕುಡಿಬಾಳೆಯೆಲೆಗಳನ್ನು ಪಂಕ್ತಿಯಲ್ಲಿ ಕುಳಿತವರಿಗೆಲ್ಲ ಕೊಡಲಾಗುತ್ತದೆ. ತೊಳೆದ ಬಾಳೆಲೆಗೆ 'ಅಭಿಘಾರ' ಮಾಡಲಾಗುತ್ತದೆ. 'ಅನ್ನಶುದ್ಧಿ' ಎಂದು ಪ್ರಸಿದ್ಧವಾಗಿರುವ ಶುದ್ಧವಾದ ಗೋಘೃತವನ್ನು ಎಲ್ಲ ಬಾಳೆಯೆಲೆಗೂ ಮುಟ್ಟಿಸಲಾಗುತ್ತದೆ. ಈ ಕಾರ್ಯಕ್ಕೆ, ಅಂದರೆ—ದೇವರಿಗಾಗಲಿ, ಯಜ್ಞೇಶ್ವರನಿಗಾಗಲಿ, ಬ್ರಹ್ಮಸಭೆಯವರಿಗಾಗಲಿ ಅರ್ಪಿತವಾಗುವ ನೈವೇದ್ಯಕ್ಕೆ (ಅನ್ನಕ್ಕೆ) ಹಸುವಿನ ತುಪ್ಪವನ್ನು ಮುಟ್ಟಿಸುವುದು 'ಅಭಿಘಾರ' ಎಂದೆನಿಸುತ್ತದೆ. ಶುಭಕಾರ್ಯವಾದುದರಿಂದ ಹನ್ನೆರಡು (ಸಮಸಂಖ್ಯೆಯ) ಹಾಳ್ಯ (ಪಲ್ಯ) ಗಳನ್ನು ಬಡಿಸುವುದಾಗಿ ಈ ಹಾಡಿನಲ್ಲಿ ಹೇಳಿದೆ. ಪ್ರಾರಂಭದಲ್ಲಿ

ಬಡಿಸತಕ್ಕ ಪ್ರಿಯವನ್ನೂ ಬಡಿಸಿದನಂತರ, ಹಸ್ತೋದಕಪಿತ್ತು, ಬ್ರಹ್ಮಾರ್ಪಣಮಾಡಿ, ಕೃಷ್ಣಾರ್ಪಣ (ಇದೇ ಈಶ್ವರಾರ್ಪಣ) ಹೇಳುವುದು—ಇದು ವಿವರಿಸಲ್ಪಟ್ಟಿದೆ. ಬಡಿಸಿದ ವಿವಿಧ ಶಾಕ ಪಾಕಗಳ ವಿವರವೂ ಹಾಡಿನಲ್ಲಿದೆ.

129–131. ಗೃಹಪ್ರವೇಶದ (ಸಟ್ಟುಮುಡಿ) ಸಮಾರಂಭದಲ್ಲಿ ಊಟವೆಲ್ಲ ಮುಗಿದ ಮೇಲೆ ಒಸಗೆಯ ಕಾರ್ಯಕ್ರಮವಿರುತ್ತದೆ. ಆಗ ವಧೂವರರನ್ನು ಮಂಟಪಕ್ಕೆ ಕರೆತಂದು ಕುಳ್ಳಿರಿಸಿ, ವೇದೋಕ್ತ ಆಶೀರ್ವಾದ ಮಾಡುವುದು, ಸೇಸೆ (ಮಂತ್ರಾಕ್ಷತೆ) ಇಕ್ಕುವುದು, ಉಡುಗೊರೆ ಕಾಣಿಕೆಗಳನ್ನು ಮಾಡುವುದು—ಇವೆಲ್ಲ ನಡೆಯುತ್ತದೆ. ಮಂತ್ರಾಕ್ಷತೆ ಸಹಿತ ವಧೂವರರ ತಟ್ಟೆಗೆ ಹಣವನ್ನು ಹಾಕುವುದಕ್ಕೆ 'ಒಸಗೆ ಮಾಡುವುದು' ಎಂತಲೇ ಹೆಸರಾಗಿದೆ. ಉಡುಗೊರೆ ಕೊಟ್ಟವರ ಹಾಗೂ ಒಸಗೆ ಹಣ ಕೊಟ್ಟವರ ಹೆಸರನ್ನು ಹೇಳಿ, ಇಂಥವರಿಂದ ಇಂತಹದು ಉಡುಗೊರೆ—ಎಂದು ಪುರೋಹಿತರು ಉದ್ಘೋಷಣೆ ಮಾಡುವ ಸಂಪ್ರದಾಯ ಹವ್ಯಕೇತರ ಬ್ರಾಹ್ಮಣ ವರ್ಗದಲ್ಲಿ ಪ್ರಚಲಿತವಾಗಿದೆ. ಹವ್ಯಕೇತರರಲ್ಲಿ ವಧುವಿಗಾಗಲಿ, ವರನಿಗಾಗಲಿ ನೇರವಾಗಿ ಉಡುಗೊರೆ ಬಹುಮಾನಗಳನ್ನು ಸಭೆಯಲ್ಲಿ ಕೊಡುವ ಕ್ರಮ ಕಂಡು ಬರುವುದಿಲ್ಲ. ಅಂತಹದನ್ನು ಪುರೋಹಿತರ ಕೈಗೆ ಕೊಡುತ್ತಾರೆ ; ಪುರೋಹಿತರು ಅದನ್ನು ವಧುವಿಗೋ, ವರನಿಗೋ ಉಭಯತರಿಗೋ ದಾತೃವಿನ ಅಪೇಕ್ಷೆಯಂತೆ ಕೊಟ್ಟು ಓದಿಸುತ್ತಾರೆ. ಹವ್ಯಕರಲ್ಲಿ ಮಾತ್ರ ಉಡುಗೊರೆಯನ್ನು ಅಥವಾ ಒಸಗೆಯನ್ನು ಅವರವರೇ ನೇರವಾಗಿ ಮಂಟಪಕ್ಕೆ ಬಂದು, ವಧೂವರರಿಗೆ ಕೊಟ್ಟು ಸೇಸೆಯಿಕ್ಕಿ ಆಶೀರ್ವಾದ ಮಾಡುತ್ತಾರೆ. ಆಗ ಮನೆಯ ಯಜಮಾನನ ಪರವಾಗಿ ಪುರೋಹಿತರು ಉಪಚಾರ ಹೇಳುತ್ತಾರೆ—ಓಯೀ ಶಂಕರ ಭಟ್ಟರೆ, ನೀವೆಲ್ಲರೂ ಬಂದು ಈ ಸಮಾರಂಭವನ್ನು ಚಂದಗಾಣಿಸಿದ್ದಲ್ಲದೆ ವಿಶೇಷವಾದ ಉಡುಗೊರೆ ಭಾರವೇನೆಂಬುದಾಗಿ (ಮನೆಯ ಯಜಮಾನ) ಕೇಳುತ್ತಾನೆ". ಹೀಗೆಂದೊಡನೆಯೇ ಆ ಒಸಗೆ ಮಾಡಿದವರಿಗೆ ಎಲೆಯಡಕೆ ಹರಿವಾಣವನ್ನು ಒಡ್ಡಲಾಗುತ್ತದೆ.

134–137. ಅನಂತರ, 'ಹೆಣ್ಣೊಪ್ಪಿಸುವುದು' ಎಂಬ ರಸವತ್ತಾದ ಕಾರ್ಯಕ್ರಮವಿರುತ್ತದೆ. ಧಾರೆ, ಕನ್ಯಾದಾನ, ಸಪ್ತಪದಿ—ಮುಂತಾದುವೆಲ್ಲ ಕನ್ಯಾಪಿತೃವಿನ ಮನೆಯಲ್ಲಿ ಈ ಮೊದಲೇ ನಡೆದಿದ್ದು, ವರನ ವಶದಲ್ಲಿ ವಧುವನ್ನು ಕೊಟ್ಟುದಾಗಿದ್ದರೂ ಸಟ್ಟುಮುಡಿಯಲ್ಲಿ ಒಸಗೆಯ ವೇಳೆಗೆ ಹೆಣ್ಣೊಪ್ಪಿಸುವ ಕಾರ್ಯಭಾಗ ಇದ್ದೇ ಇರುತ್ತದೆ. ಅದಕ್ಕೆ ಸಂಬಂಧಿಸಿದ ಹಾಡುಗಳಲ್ಲಿ ವಧುವಿಗೆ, ವರನಿಗೆ, ವರನ ತಂದೆ ತಾಯಿಗಳಿಗೆ ನೀತಿಬೋಧೆಗಳು ಪ್ರಾರ್ಥನೆಗಳು ಇರುತ್ತವೆ. ಬಾಲ್ಯದಲ್ಲಿ ತಂದೆಯಿಂದ ರಕ್ಷಿತಳಾದ ಹೆಣ್ಣುಮಗು ಇದೀಗ ಪತಿಯಿಂದ ರಕ್ಷಿತಳಾಗುವವಳು. ಈ ಸಂದರ್ಭದಲ್ಲಿ ಒಂದು ಕುಲದಿಂದ ಇನ್ನೊಂದು ಕುಲಕ್ಕೆ ಬಿಟ್ಟುಕೊಡುವ ಸನ್ನಿವೇಶ ಹೃದಯಸ್ಪರ್ಶಿಯಾಗಿದೆ. ಈ ವೇಳೆ, ಕನ್ಯೆಯ ತಾಯಿ ಹಾಗೂ ಅಕ್ಕ ತಂಗಿಯರು

ಕಣ್ಣೀರ್ಗರೆಯುವುದು ಕಂಡುಬರುವ ಸಂಗತಿ. ವರನು ಆಕೆಯನ್ನು ಕುಂದಿಲ್ಲದಂತೆ ರಕ್ಷಿಸುವ ಭರವಸೆಯೂ ಹಾಡಿನಲ್ಲಿ ಬರುತ್ತದೆ. ಪುರೋಹಿತರ ವ್ರತ್ತಮಂತ್ರದಲ್ಲಿ ಕಂಡುಬರುವಂತೆ, ಹಿಂದೆ ಕ್ಷೀರಸಾಗರನು ತನ್ನ ಮಗಳಾದ ಲಕ್ಷ್ಮೀದೇವಿಯನ್ನು ಶ್ರೀಮನ್ನಾರಾಯಣನಿಗೆ ಒಪ್ಪಿಸುವ ವರ್ಣನೆ ಈ ಪ್ರಕರಣಕ್ಕೆ ಸರಿಯಾಗಿ ಒಪ್ಪುತ್ತದೆ. ಪುರೋಹಿತರು ಆ ಸಂದರ್ಭದಲ್ಲಿ, ಹೇಳುತ್ತ ಅನ್ವಯಾರ್ಥ ವಿವರಣೆ ಮಾಡುವ ಒಂದು ಸ್ರಗ್ಧರಾವೃತ್ತದ ಸಂಸ್ಕೃತ ಪದ್ಯ ಹೀಗಿದೆ—

ಏಷ ಬ್ರಹ್ಮಾತಿವೃದ್ಧ ಸ್ತ್ರಿದಶಪತಿರಸೌ ಗರ್ವಿತಃ ಕ್ಷೀಯತೇಽಬ್ಜೋ
ದಿಗ್ವಾಸಾಃ ನೀಲಕಂಠಸ್ತಪತಿ ದಿನಕರಶ್ಚಂಚಲೋ ಮಾತರಿಶ್ವಾ
ಇತ್ಥಂ ಸಂಚಿಂತ್ಯ ಲಕ್ಷ್ಮ್ಯಾ ಭ್ರಮರಕಲಕಲಾರಾವ ಗೀತ ಪ್ರಫುಲ್ಲಾ
ಮಾಲಾ ದತ್ತಾ ಮುರಾರೇಃ ಸುರತರುಕುಸುಮಾಲಂಕೃತಾ ಪಾತು ಯುಷ್ಮಾನ್

ತುಂಬಿಗಳ ಕಲಕಲರವ ಗೀತದಿಂದ ಕೂಡಿದ, ಅರಳಿದ, ಕಲ್ಪವೃಕ್ಷದ ಹೂಗಳಿಂದ ಅಲಂಕೃತವಾದ ಮಾಲೆಯನ್ನು ಲಕ್ಷ್ಮಿಯು ಕೈಯಲ್ಲಿ ಹಿಡಿದಿದ್ದಳು. ಅವಳ ಎದುರಿನಲ್ಲಿ ಕಾಣಿಸಿದ ಬ್ರಹ್ಮನು ಸರಸ್ವತೀ ವಲ್ಲಭನಾಗಿ ವೇದಜ್ಞಾನಿಯಾದರೂ ವೃದ್ಧನಾಗಿ ತೋರುತ್ತಿದ್ದನು. ಇಂದ್ರನು ದೇವವರ್ಗಗಳಿಗೆ ಒಡೆಯನಾದರೂ ಗರ್ವಿ! ಚಂದ್ರನು ಕ್ಷಯಗುಣವುಳ್ಳವನು. ಶಿವನು ದಿಗಂಬರನು. ಸೂರ್ಯನು ಸುಡತಕ್ಕವನು. ವಾಯು ಚಂಚಲನು—ಹೀಗೆಂದು ಅವರವರ ಅನರ್ಹತೆಯನ್ನು ಯೋಚಿಸಿದ ಲಕ್ಷ್ಮಿಯು ವರಣ ಮಾಲಿಕೆಯನ್ನು ಮುರಾರಿಯ ಕೊರಳಿಗೆ ಹಾಕಿದಳಂತೆ. ಅಂತಹ ವರಣಮಾಲೆ ನಿಮ್ಮಿಬ್ಬರನ್ನು ಕಾಪಾಡಲಿ!—ಎಂದಿಲ್ಲಿ ಮಾಡುವ ಅರ್ಥವಿವರಣೆ ಮನಸ್ಪರ್ಶಿಯಾಗಿದೆ. ಕನ್ಯಾಪಿತನು 'ಬಳುವಳಿ ಕೊಟ್ಟದ್ದು' ಈ ಸಂದರ್ಭದ ಹಾಡಿನಲ್ಲಿ ಅತಿ ರಂಜಿತವಾಗಿ ಬಂದಿದೆ. ಇನ್ನೀಗ ವಧೂವರರಿಗೆ ಆರತಿಯಾಗುತ್ತದೆ. (132, 133) ಇನ್ನೀಗ ಒಸಗೆಯಾಗಿ ಒಳಗೆ ಹೋಗುವ ಕಾರ್ಯ ನಡೆಯುತ್ತದೆ. (136, 137). ಈ ಸಂದರ್ಭದಲ್ಲಿ 'ಬಾಗಿಲು ತಡೆಯುವುದು' ಇರುತ್ತದೆ. ಕೃಷ್ಣನು ರುಕ್ಮಿಣಿಯನ್ನು ವರಿಸಿ, ಗೃಹಪ್ರವೇಶಿಸಲು ಬಂದಾಗ ಸೌಭದ್ರೆ ಬಾಗಿಲು ತಡೆದದ್ದು, ಒಪ್ಪಂದದ ಮೇರೆಗೆ ಕದ ಬಿಟ್ಟದ್ದು, ಹಾಡಿನ ಸರಸ ಘಟನೆಯಾಗಿದೆ.

138–141. ಪ್ರಸ್ತಕ್ಕೆ ನೇರವಾಗಿ ಸಂಬಂಧಪಡದ ಹಾಡುಗಳಲ್ಲಿ ಸೊಸೆ ನಿಮಗೆ ಮೆಚ್ಚಿಕೆಯಾಯಿತೆ?—ಎಂದು ವರನ ತಾಯಿಯೊಡನೆ ಕೇಳುವುದು, ಮಗಳನ್ನು ಮದುವೆ ಮಾಡಿಕೊಟ್ಟು ನೆಮ್ಮದಿಯಾಯಿತೆ?—ಎಂದು ಕನ್ಯಾಪಿತನೊಡನೆ ಕೇಳುವುದು ಹಾಡುಗಳಲ್ಲಿ ಕಂಡುಬರುತ್ತದೆ. ವಿವಾಹದಲ್ಲಿ ಮದುಮಗಳಿಗೆ ಮಂಗಲ ಸೀರೆ (ಉಂಗುರುಡಿಗೆ) ಕೊಟ್ಟ ಮೇಲೆ, ಮದುವೆ ಗೃಹಪ್ರವೇಶಾದಿಗಳು ಎಲ್ಲವೂ ಮುಗಿದ ಮೇಲೆ 'ಮರುಮಂಗಲ'ವನ್ನು ಅಂದರೆ ಮದುಮಗಳಿಗೆ ಗಂಡನ ಮನೆಯಲ್ಲಿ ನಿತ್ಯಕ್ಕೆ

ಉಡುವುದಕ್ಕಾಗಿ ಸೀರೆ ರವಕೆಗಳನ್ನು ತೆಗೆದುಕೊಡಲಾಗುತ್ತದೆ. 'ವರಗಾಯಿ ಒಡೆಯುವುದು' ಎಂಬ ಶಾಸ್ತ್ರವನ್ನು ಉತ್ತರಕನ್ನಡ ಜಿಲ್ಲೆಯಲ್ಲಿ ಹವಿಕರ ಮದುಮಗನು ನೆರವೇರಿಸುವ ರೂಢಿಯಿದೆ.

142–149. ಮದುವೆಯ ಹಾಡುಗಳಲ್ಲಿ ಶೃಂಗಾರರಸದ ಉಕ್ಕಂದವಿರುವಂತೆಯೇ ವಿನೋದದ ಉತ್ಕರ್ಷವೂ ಉಂಟು. ವಿನೋದದ ಹಾಡುಗಳಲ್ಲಿ ಕನ್ಯೆಯ ಕಡೆಯವರು ಮತ್ತು ವರನ ಕಡೆಯವರು, ಹಾಡುಗಳ ಮೂಲಕ ಪರಸ್ಪರ ಹಳಿದಾಡುವುದು ಒಂದು ವರ್ಗ. ಒಂದುಕಡೆಯಿಂದ ದೂರಿದಾಗ ಇನ್ನೊಂದು ಕಡೆಯವರು ಹಾಡಿನ ಮೂಲಕ ಅಷ್ಟೇ ತೀವ್ರವಾಗಿ ಖಂಡಿಸುತ್ತಾರೆ.

150–154. ಕನ್ಯೆಯಾಗಿದ್ದವಳು ಮದುವೆಯಾಗಿ ವರನ ಗೃಹವನ್ನು ಸೇರಿ ಅಲ್ಲಿ ಮನೆಯೊಡತಿಯಾಗುತ್ತಾಳೆ ; ಗೃಹಿಣಿಯೆನಿಸುತ್ತಾಳೆ. 'ಗೃಹಿಣೀ ಗೃಹಮುಚ್ಯತೇ' ಗೃಹಿಣಿಯೇ ಗೃಹ—ಗೃಹಿಣಿಯಿದ್ದರೆ ಮಾತ್ರವೇ ಅದು ಗೃಹ—ಎಂಬ ವಾಕ್ಯ ಗೃಹಿಣಿಯ ಹಿರಿಮೆಯನ್ನು ಸಾರುತ್ತದೆ. ಕಾಳಿದಾಸನು ತನ್ನ 'ಅಭಿಜ್ಞಾನ ಶಾಕುಂತಲಂ' ನಾಟಕದಲ್ಲಿ ಶಕುಂತಳೆಗೆ ಕಣ್ವರು ಬುದ್ಧಿ ಹೇಳುವ ಮೂಲಕ ಆದರ್ಶ ಗೃಹಿಣೀ ಲಕ್ಷಣವನ್ನು ನಿರೂಪಿಸಿದ್ದಾನೆ. ಗಂಡನ ಮನೆಯಲ್ಲಿ ಹಿರಿಯರ ಸೇವೆ, ಸವತಿಯರಲ್ಲಿ ಸ್ನೇಹ, ಗಂಡನಿಗೆ ಅನುಕೂಲೆಯಾಗಿ ವರ್ತನೆ, ಪರಿಜನರನ್ನು ಪಾಲಿಸುವುದು, ಸಂಪತ್ತು ಇದ್ದಾಗ ವಿನಯ—ಇವು ಗರತಿಯ ಲಕ್ಷಣವೆಂದು ಅದರಲ್ಲಿ ನಿರೂಪಣೆಯಿದೆ. ಇಂತಹ ಗುಣಗಳಿಲ್ಲದ ಸ್ತ್ರೀಯರು ಕುಲಕ್ಕೆ ಕಳಂಕ ಎಂತಲೂ ಹೇಳಿದೆ. ಈ, ಆದರ್ಶ ನಿರೂಪಣೆಯನ್ನು ನಾವು ಶೋಭಾನೆಗಳಲ್ಲಿಯೂ ಕಾಣುತ್ತೇವೆ. 'ಗೃಹಿಣಿಯ ದಿನಚರಿ'ಯಾಗಿ ಹೂ ಕೊಯ್ಯುವ ಹಾಡು ಸೌಭದ್ರೆಯನ್ನು ಆದರ್ಶ ಗೃಹಿಣಿಯಾಗಿ ಚಿತ್ರಿಸುತ್ತದೆ. 'ಮಹಾಲಕ್ಷ್ಮಿಯ ಮನೆವಾರ್ತೆ'ಯಲ್ಲಿ ಆಕೆ ಓರ್ವ ಮಧ್ಯಮವರ್ಗದ ಕುಟುಂಬದ ಆದರ್ಶ ಮಹಿಳೆಯಾಗಿ ಕಾಣುತ್ತಾಳೆ. ದ್ರೌಪದಿ ಅಡಿಗೆ ಮಾಡಿದ್ದು, ಹೋಳಿಗೆ ಮಾಡಿದ್ದು—ಇವು ಕೂಡ ಹೆಣ್ಣಿನ ಜೀವನಚಿತ್ರವನ್ನು ನಮ್ಮ ಕಣ್ಣಿಗೆ ಕಟ್ಟುವಂತೆ ಕಾವ್ಯಮಯವಾಗಿ ತಿಳಿಸುತ್ತದೆ. ನವೀನ ದಾಂಪತ್ಯದ ರಸಿಕ ಜೀವನವನ್ನು ಚಿತ್ರಿಸುವ ಹಾಡುಗಳಲ್ಲಿ 'ಕೃಷ್ಣ ಸತ್ಯಭಾಮೆ ಸಂವಾದ' ಎಂಬುದೊಂದು.

## ದಿಂಡು (ಗರ್ಭಾಧಾನ)

**ಹೆಣ್ಣಿನ ಜೀವನ ದೈಹಿಕವಾಗಿಯೂ ಸಾಮಾಜಿಕವಾಗಿಯೂ ಹೆಚ್ಚು ಪರಿವರ್ತನಶೀಲವಾದುದು. ಆಕೆ ಎಂಟು ವರ್ಷದವಳಾದರೆ 'ಗೌರಿ' ಎನಿಸುವಳು. ಒಂಬತ್ತು**

ವರ್ಷದವಳು 'ರೋಹಿಣಿ'. ಹತ್ತು ವರ್ಷದವಳು 'ಕನ್ಯೆ'. ಅನಂತರ ರಜಸ್ವಲೆ—ಅಂದರೆ ಋತುಮತಿಯರ ವರ್ಗದವಳು ಎಂದು ಸಂಸ್ಕೃತ ಶಬ್ದಕೋಶಗಳಲ್ಲಿ ಹೇಳಿದೆ—

ಅಷ್ಟವರ್ಷಾ ಭವೇದ್ಗೌರೀ ನವವರ್ಷಾ ಚ ರೋಹಿಣೀ
ದಶಮೇ ಕನ್ಯಕಾ ಪ್ರೋಕ್ತಾ ಅತ ಊರ್ಧ್ವಂ ರಜಸ್ವಲಾ

'ಬ್ರಹ್ಮಚಾರಿ' ಎಂದರೆ ವಾಸ್ತವಿಕವಾಗಿ ಅಸ್ಖಲಿತ ವೀರ್ಯನು, ಬ್ರಹ್ಮಜ್ಞಾನ ಸಾಧಕನು—ಎಂದಾಗಿದ್ದರೂ ಇನ್ನೂ ಮದುವೆಯಾಗದ (ಗೃಹಸ್ಥಾಶ್ರಮಿಯಾಗದ) ಪುರುಷನನ್ನು 'ಬ್ರಹ್ಮಚಾರಿ' ಎನ್ನುವಂತೆ, ವಾಸ್ತವಿಕವಾಗಿ ಋತುವಾಗದವಳು ಕನ್ಯೆಯೆನಿಸುವವಳಾದರೂ ಇನ್ನೂ ಮದುವೆಯಾಗದವಳನ್ನು 'ಕನ್ಯೆ' ಎನ್ನುವುದು ರೂಢಿಯಾಗಿದೆ. ಅವಿವಾಹಿತಳಾಗಿ ನಲ್ವತ್ತು ವರ್ಷ ಪ್ರಾಯದವಳಾದರೂ ಆಕೆಯನ್ನು ವಿವಾಹ ಮಾಡಿಕೊಡುವುದು 'ಕನ್ಯಾದಾನ' ವೆನಿಸುತ್ತದೆ. ವಿವಾಹವಾದ ಅನಂತರ ಪ್ರಥಮ ಋತುವಾದ ಹೆಣ್ಣಿಗೆ ಮಾಡತಕ್ಕ ಶುಭಸಂಸ್ಕಾರಕ್ಕೆ 'ದಿಂಡು' ಎಂದು ಹವಿಕರಲ್ಲಿ ರೂಢವಾದ ಹೆಸರು. ಸಂಸ್ಕೃತದಲ್ಲಿ ಇದಕ್ಕೆ 'ಗರ್ಭಾಧಾನ' ಎಂದೂ 'ನಿಷೇಕ' ಎಂದೂ ಹೆಸರು. ಪ್ರಥಮ ಋತುವಾಗುವುದನ್ನು 'ನೆರೆಯುವುದು' ಅಥವಾ 'ಮೈ ನೆರೆಯುವುದು' ಎನ್ನುತ್ತಾರೆ. 'ನೆರೆದಳು' ಎಂದರೆ, ಗರ್ಭಧಾರಣೆಗೆ ದೈಹಿಕವಾಗಿ ಪರಿಪೂರ್ಣತೆಯನ್ನು, ಸಮಗ್ರತೆಯನ್ನು ಹೊಂದಿದಳೆಂದು ಅರ್ಥ. ಅನಂತರ ಮಾಸಿಕ ರಜೋದರ್ಶನವಾದಾಗ ಆಕೆ 'ಮುಟ್ಟಾದಳು' ಎನ್ನುತ್ತಾರೆ. ನಾಲ್ಕು ದಿನಗಳವರೆಗೆ ಆಕೆ ಮುಟ್ಟಾಗಿ—ಅಸ್ಪೃಶ್ಯೆಯಾಗಿ, ಉಳಿಯುತ್ತಾಳೆ.

155–160. ಮದುವೆಯಾಗಿ ಪ್ರಥಮ ಋತುವಾದವಳಿಗೆ ಒಡನೆಯೆ ಮಾಡತಕ್ಕ ಶಾಸ್ತ್ರವಿಧಿ ವಿವರವನ್ನು ಹಾಡಿನಲ್ಲಿಯೆ ಕಾಣಬಹುದು. ಆಕೆ ಗಂಡನ ಮನೆಯಲ್ಲಿ ಋತುವಾದರೆ, ಆಕೆಯ ತವರು ಮನೆಗೆ 'ಹೂವಿನ ಕೊಟ್ಟೆ' ಕಳುಹಿಸಬೇಕು. ತವರಿನಲ್ಲಿ ಋತುವಾದರೆ, ಅಲ್ಲಿಂದ ಗಂಡನ ಮನೆಗೆ 'ಹೂವಿನ ಕೊಟ್ಟೆ' ಕಳುಹಿಸಬೇಕು. ಈ 'ಹೂವಿನ ಕೊಟ್ಟೆ' ಗೆ 'ಮಂಗಲಮೂಡೆ' ಎಂದೂ ಹೆಸರು. ಹೂ ಕೊಟ್ಟೆಯ ವಿವರವೂ ಹಾಡಿನಲ್ಲಿ ಬಂದಿದೆ. ಪ್ರಥಮ ಋತುವಾದವಳನ್ನು ಕುಳಿತುಗೊಳಿಸಲೂ ಶಾಸ್ತ್ರಾಚಾರವಿದೆ. ಕೊಂಡುಹೋದ ಹೂವಿನ ಕೊಟ್ಟೆಯನ್ನು ತವರು ಮನೆಯವರು (ಗಂಡನ ಮನೆಯವರು) ಸ್ವೀಕರಿಸಿ, ಒಳಗೆ ದೇವರ ಮುಂದಿಡುವರು. ನಾಲ್ಕನೆ ದಿನದಲ್ಲಿ ದಿಂಡಿಗೆ ದಿಬ್ಬಣ ಸಹಿತವಾಗಿ ಬರುವರು. ಋತುವಾದ ಹೆಂಗುಸಿನ ಬಟ್ಟೆಬರೆ, ಚಾಪೆ ಹಚ್ಚಡಗಳು ಎಲ್ಲಿಯೋ ಒಂದು ಮೂಲೆಯಲ್ಲಿ—ಯಾರೂ ಬಂದು ಮುಟ್ಟದಿರುವ ಕಡೆ ಇರುತ್ತದೆ. ಅವೆಲ್ಲವನ್ನೂ ಒಟ್ಟಿಗೆ 'ಹಕ್ಕೆ' ಎಂದು ಕರೆಯುತ್ತಾರೆ. ಋತುವಾದವಳು ಮೂರು ದಿನ ಸ್ನಾನ ಮಾಡುವಂತಿಲ್ಲ. ನಾಲ್ಕನೆ ದಿನ ಅಭ್ಯಂಗ ಸ್ನಾನಕ್ಕೆ

ತೆರಳುವ ಮುನ್ನ, ಆಕೆ ತನ್ನ ಮುಟ್ಟು ಬಟ್ಟೆಗಳನ್ನೆಲ್ಲ ಹೊರಗೆ ಒಯ್ದು ಹಕ್ಕಿಯ ನೆಲವನ್ನು ಗೋಮಯದಿಂದ ಪರಿಶುದ್ಧಗೊಳಿಸುವುದು ನಡೆದು ಬಂದ ಕ್ರಮ. 'ಹಕ್ಕಿ ಸಾರಿಸುವುದು' ಎಂದು ಇದಕ್ಕೆ ಹೆಸರು. ಇದಕ್ಕೊಂದು ಶೋಭಾನೆ ಕೂಡ ಈ ಗ್ರಂಥದಲ್ಲಿದೆ.

ಶೋಭಾನೆಗಳಲ್ಲಿ ವ್ಯಕ್ತವಾಗುವ ಆಚಾರ, ಧರ್ಮಶಾಸ್ತ್ರಗಳಲ್ಲಿ ಬರುವ ಉಲ್ಲೇಖಕ್ಕೆ ಸಮವಾಗಿದೆ. 'ಧರ್ಮಸಿಂಧು' ಗ್ರಂಥದಲ್ಲಿ ಹೀಗಿದೆ—'ಪ್ರಥಮ ಋತುವಿನಲ್ಲಿ ಅಕ್ಷತೆಗಳಿಂದ ಆಸನವನ್ನು ಮಾಡಿ, ಅದರಲ್ಲಿ ಋತುಮತಿಯನ್ನು ಕುಳ್ಳಿರಿಸಿ, ಪತಿ ಪುತ್ರರುಳ್ಳ ಸ್ತ್ರೀಯರು ಅರಿಸಿನ, ಕುಂಕುಮ, ಗಂಧ, ಪುಷ್ಪ, ಮಾಲೆ ತಾಂಬೂಲಾದಿಗಳನ್ನು ಕೊಟ್ಟು, ಆರತಿ ಬೆಳಗಿ ದೀಪವಿರುವ ಮನೆಯಲ್ಲಿ ಅವಳನ್ನು ಇರಿಸುವುದು. ಸುವಾಸಿನಿಯರಿಗೆ ಗಂಧ, ಉಪ್ಪು, ಪಚ್ಚೆಹೆಸರು, ಇವನ್ನು ಕೊಡತಕ್ಕದು. ಇನ್ನು ದ್ವಿತೀಯಾದಿ ಎಲ್ಲ ಋತುಮತಿಯರಾದಾಗ ಸಾಮಾನ್ಯ ನಿಯಮಗಳು—ಮೂರು ರಾತ್ರಿ ಅಸ್ಪೃಶ್ಯಳಾಗಿದ್ದು ಅಭ್ಯಂಗ, ಅಂಜನ, ಸ್ನಾನ, ದಿವಾನಿದ್ರೆ, ಅಗ್ನಿಸ್ಪರ್ಶ, ಸೂರ್ಯದರ್ಶನ—ಇತ್ಯಾದಿಯನ್ನು ಬಿಡತಕ್ಕದು. ಪ್ರವಾಸವನ್ನು ಮಾಡಬಾರದು—ಇನ್ನೂ ಕೆಲವು ವಿಚಾರಗಳನ್ನು ಈ ಗ್ರಂಥದಲ್ಲಿ[10] ಹೇಳಿದೆ. ಅವೆಲ್ಲ ನಿರರ್ಥಕವಲ್ಲದಿದ್ದರೂ ಆಚರಣೆಯಲ್ಲಿ ಇಂದು ಕಂಡುಬರುವುದಿಲ್ಲ.

161–166. 'ದಿಂಡು' ಎಂಬುದು ಗರ್ಭಾಧಾನ ಸಂಸ್ಕಾರಕ್ಕೆ ಹೆಸರಾಗಿರುವುದು ಕುತೂಹಲಕರ. ಈ ಶಬ್ದಕ್ಕಿರುವ ಹಲವು ಅರ್ಥಗಳಲ್ಲಿ ಮರದ ಕಾಂಡ, ನಡುವಣ ಭಾಗ, ತಿರುಳು—ಎಂಬ ಅರ್ಥವನ್ನು ಇಟ್ಟುಕೊಳ್ಳಬಹುದು. ಎಲ್ಲ ಸಂಸ್ಕಾರಗಳಿಗೂ ತಿರುಳಾದುದು, ಮಗುವಿನ ಜನನಕ್ಕೂ ಮೂಲವಾದುದು ಗರ್ಭಾಧಾನ. ಇದರಿಂದ ಜೀವನ ವೃಕ್ಷದ ಕಾಂಡ(ನಡುವಣ ಭಾಗ)ವೇ ದಿಂಡು. ಈ ಶಬ್ದದ ಸಂಶೋಧನೆಯನ್ನು ಬೇರೆ ಯಾರೂ ಮಾಡಿದ್ದು ಕಂಡುಬಂದಿಲ್ಲವಾದುದರಿಂದ ಪ್ರಕೃತ ಈ ವಿವರಣೆಯನ್ನೇ ಗ್ರಾಹ್ಯವಾಗಿಟ್ಟುಕೊಳ್ಳಬಹುದು. ದಿಂಡಿನಲ್ಲಿ ಹೋಮ ಮುಖ್ಯವಾಗಿದೆ. ಮುತ್ತೈದೆಯರಿಗೆ 'ಬಾಗಿನ' (ಬಾಯಿನ—ಎಂತಲೂ ಪ್ರಯೋಗವಿದೆ) ಕೊಡುವುದು, ದಿಂಡಿನ ಮದುಮಗಳ ಉಡಿಲು ತುಂಬುವುದು, ಮಡಿಲಿಳುಹುವುದು—ಮುಂತಾದ ಶಾಸ್ತ್ರಗಳು ಇದೇ ವೇಳೆಗೆ ನಡೆಯುತ್ತವೆ.

ಮದುವೆಯಾದ ಮೇಲೆ ಹೊಸ ದೀಪಾವಳಿ ಬಂತೆಂದರೆ, ಕನ್ಯಾಪಿತೃಗೃಹದಲ್ಲಿ ಮಗಳಿಗೂ ಅಳಿಯನಿಗೂ ಸನ್ಮಾನವಾಗಬೇಕು. ಅವರಿಗೆ ಹಬ್ಬದೂಟ ಮಾತ್ರವಲ್ಲ ; ವಿಶೇಷದ ಉಡುಗೊರೆ ಬಹುಮಾನಗಳನ್ನು ಸಲ್ಲಿಸುವುದು ಸಂಪ್ರದಾಯ. ಆ ಹಬ್ಬಕ್ಕೆ ಬರುವ ಅಳಿಯನು ತೆಂಗಿನ ಕಾಯಿಗಳನ್ನು ತರಬೇಕು ಮತ್ತು ಅವನ್ನು ದೇವರ ಮುಂದೆ ಇಡಬೇಕು. ಈ ರೂಢಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಿಂದಿನ ಕಾಲದಲ್ಲಿ ಇದ್ದಿರಬಹುದು;

ಈಗ ಪ್ರಚಲಿತವಾಗಿಲ್ಲ. ಆದರೆ ಉತ್ತರ ಕನ್ನಡ ಶಿವಮೊಗ್ಗ ಜಿಲ್ಲೆಗಳಲ್ಲಿ ಇದು ಚಾಲನೆಯಲ್ಲಿರುವುದಾಗಿ ಕಂಡುಬರುತ್ತದೆ. ಶ್ರೀರಾಮನು ಜನಕರಾಜನಲ್ಲಿ ಹೊಸ ದೀಪಾವಳಿಯಲ್ಲಿ ದೇವರ ಮುಂದೆ ಕಾಯಿಸುವುದಕ್ಕಾಗಿ ಹತ್ತು ಸಾವಿರ ತೆಂಗಿನ ಕಾಯಿಗಳನ್ನು ತಂದನೆಂದು ಹಾಡಿನ'' ಹೇಳಿದೆ.

**ಕೋಡಿ** (ಸೀಮಂತ)

ಹೆಣ್ಣಿಗೆ ವಿವಾಹಪೂರ್ವದ ಸಂಸ್ಕಾರಗಳನ್ನು ಬಿಟ್ಟರೆ, ಮುಖ್ಯವಾದುವು— ಮದುವೆ, ದಿಂಡು, ಕೋಡಿ ಎಂಬೀ ಮೂರು. ಇವುಗಳಲ್ಲಿ ಮರದ ದಿಂಡಿನಂತೆ ದಿಂಡು ನಡುವಣದು. ಅಷ್ಟೇ ಮಹತ್ತ್ವಪೂರ್ಣವಾದುದೆಂದು ಇದೀಗ ತಿಳಿಸಲಾಯಿತು. ಸ್ತ್ರೀಗೆ ಸಂಬಂಧಿಸುವ ಸಂಸ್ಕಾರಗಳಲ್ಲಿ ಕೊನೆಯದು ಕೋಡಿ. 'ಕೋಡಿ' ಎಂಬೀ ಶಬ್ದ ಸಂಸ್ಕೃತದ 'ಕೋಟಿ' ಎಂಬುದರ ತದ್ಭವವಾಗಿ 'ಕೊನೆ' ಎಂಬರ್ಥವುಳ್ಳುದಾಗಿದೆ. ಸ್ತ್ರೀಗೆ ಸಂಬಂಧಿಸಿದ ಸಂಸ್ಕಾರಗಳಲ್ಲಿ ಇದು ಕೊನೆಯದು. ಈ ಸಂಸ್ಕಾರದಲ್ಲಿ ಪುಂಸವನ ಮತ್ತು ಸೀಮಂತ ಎಂಬಿವೆರಡೂ ಸೇರಿವೆ. ಧರ್ಮಶಾಸ್ತ್ರದ ಆಧಾರ ದಂತೆ ಪುಂಸವನವನ್ನು ಗರ್ಭವಿಷ್ಟೆ ತೋರಿದಾಗ—ಅಂದರೆ ಗರ್ಭಕ್ಕೆ ತಿಂಗಳು ಎರಡು, ನಾಲ್ಕು, ಆರು, ಎಂಟು ಆದಾಗ ನೆರವೇರಿಸಬಹುದು—ಸೀಮಂತದ ಜೊತೆಯಲ್ಲಿಯೂ ನಡೆಸಬಹುದು. ಸೀಮಂತವನ್ನು ನಾಲ್ಕನೆ, ಆರನೆ, ಇಲ್ಲವೆ ಎಂಟನೆ ತಿಂಗಳಲ್ಲಿ ಮಾಡ ಬಹುದೆಂದು ಹೇಳಲಾಗಿದೆ.[11] 'ಕೋಡಿ' ಎಂಬೀ ಸಂಸ್ಕಾರ ಒಂದು ಬಾರಿ ಮಾತ್ರ ಅಂದರೆ, ಪ್ರಥಮ ಗರ್ಭದಲ್ಲಿ ಮಾಡುವಂತಹದು ; ಅಂದರೆ ಮುಂದಿನ ಗರ್ಭೋತ್ಪತ್ತಿ ಗಳಲ್ಲಿ ಈ ಸಂಸ್ಕಾರ ವಿಧಿಯಿಲ್ಲ.

167–172. 'ಪುಂಸವನ' ಎಂಬುದು ಗಂಡುಮಗುವಿನ ಪ್ರಸವಕ್ಕಾಗಿ ಹಾಗೂ ಗರ್ಭಿಣಿ ಸ್ತ್ರೀಯ ಸಂತೋಷಾರ್ಥವಾಗಿ ಮಾಡುವ ಹೋಮಕಾರ್ಯ. 'ಸೀಮಂತ' ಎಂದರೆ ಬೈತಲೆ ಎಂದು ಅರ್ಥವಿದೆ. ಗರ್ಭಿಣಿ ಸ್ತ್ರೀಯ ಬೈತಲೆ ಬಿಡಿಸುವುದು ಎಂಬ ಅರ್ಥದಲ್ಲಿ 'ಸೀಮಂತೋನ್ನಯನ' ಎಂತಲೂ ಈ ಸಂಸ್ಕಾರಕ್ಕೆ ಹೆಸರಾಗಿದೆ. ಇದು ವರನ ಗೃಹದಲ್ಲಿ ನಡೆಸುವಂತಹದು. ಈ ಸಮಾರಂಭಕ್ಕೆ ಗರ್ಭಿಣಿಯ ತವರು ಮನೆ ಯವರು ಅರಳ ಮೂಟೆಗಳನ್ನು ದಿಬ್ಬಣದಲ್ಲಿ ತರುವುದು ವಾಡಿಕೆ. ಹೊರಿ (ಅರಳು ; ಲಾಜೆ) ಕೊಂಡು ಹೋಗುವ ಶೋಭಾನೆಯಿದೆ. ಬಯಕೆ ಹಾಡು ಇದೇ ಸಂದರ್ಭಕ್ಕೆ ಒಪ್ಪುವಂತಹದು. ಗರ್ಭಿಣಿಯ ವಾಂಛಿತಕ್ಕೆ ಸಂಸ್ಕೃತದಲ್ಲಿ 'ದೋಹದ' ಎಂದೂ ಕನ್ನಡದಲ್ಲಿ 'ಬಯಕೆ' ಎಂದೂ ಹೆಸರು. ಬಸುರಿಯ ಬಯಕೆ ಯನ್ನು ಈಡೇರಿಸುವುದು ಗರ್ಭಿಣೀ ಪತಿಯ ಧರ್ಮ ಎಂದು ಧರ್ಮಶಾಸ್ತ್ರ ಹೇಳುತ್ತದೆ—

ಗರ್ಭಿಣೀ ವಾಂಛಿತಂ ದ್ರವ್ಯಂ ತಸ್ಯೈ ದದ್ಯಾದ್ಯಥೋಚಿತಂ
ಸೂತೇ ಚಿರಾಯುಷಂ ಪುತ್ರಂ ಅನ್ಯಥಾ ದೋಷಮರ್ಹತಿ
ದೋಹದಸ್ಯಾಪ್ರದಾನೇನ ಗರ್ಭೋ ದೋಷಮವಾಪ್ನುಯಾತ್
ವೈರೂಪ್ಯಂ ಮರಣಂ ವಾಪಿ ತಸ್ಮಾತ್ ಕಾರ್ಯಂ ಪ್ರಿಯಂ ಸ್ತ್ರಿಯಾಃ 12

—ಬಸುರಿಯ ಬಯಕೆಯನ್ನು ಸಾಧ್ಯವಾದ ಮಟ್ಟಿಗೆ ಸಲ್ಲಿಸತಕ್ಕದ್ದು. ಇದರಿಂದ ಆಕೆ ಚಿರಾಯು ಪುತ್ರನನ್ನು ಪಡೆಯುವಳು. ಇಲ್ಲವಾದರೆ ಕೇಡುಂಟಾಗುವುದು. ವಿರೂಪ ಅಥವಾ ಸಾವು ಉಂಟಾಗುವುದು. ಆದುದರಿಂದ ಬಸುರಿಯ ಬಯಕೆಯನ್ನು ಈಡೇರಿಸುವುದು ಕರ್ತವ್ಯ.

ಗರ್ಭಿಣಿ ಯಾವ ಯಾವ ಕೆಲಸಗಳನ್ನು ಮಾಡಬಹುದು ?—ಎಂಬುದನ್ನು ವೈದ್ಯರು ಸೂಕ್ತವಾಗಿ ಹೇಳಬಲ್ಲರು. ಧರ್ಮಶಾಸ್ತ್ರಗಳೂ ಅವನ್ನು ಹೇಳುತ್ತವೆ. ಪ್ರಕೃತ ಉದಾಹೃತವಾದ ಬಯಕೆ ಹಾಡಿನಲ್ಲಿಯೂ ಕೆಲಮಟ್ಟಿಗೆ ಅದನ್ನು ಹೇಳಲಾಗಿದೆ. ಗರ್ಭಿಣಿಗೆ ಉಡುಗೊರೆಗಳನ್ನು ಕೊಡುವುದು, ಆರತಿ ಮಾಡುವುದು ಕೂಡ, ಆಕೆಯ ಸಂತೋಷಕ್ಕಾಗಿ ಮತ್ತು ಗರ್ಭಸ್ಥ ಶಿಶುವಿನ ಹಿತಕ್ಕಾಗಿ.

173–183. ಕೋಡಿ ಪ್ರಸ್ತುತ ಕಾರ್ಯಕ್ರಮಗಳ ಅನಂತರ, ಜನ್ಮೋತ್ಸವವೆ ಸಂಸ್ಕಾರವಿಧಿಯಾಗಿದ್ದು, ಇದು ಹುಟ್ಟಿದ ಶಿಶುವಿಗೆ ಸಂಬಂಧಿಸುತ್ತದೆ. ಮಗು ಹುಟ್ಟಿದ ಮೇಲೆ ಜೋಯಿಸರನ್ನು ಕರೆಯಿಸಿ ಜಾತಕವನ್ನು (ಜನ್ಮಪತ್ರಿಕೆಯನ್ನು) ಬರೆಯಿಸಲಾಗುತ್ತದೆ. ಹನ್ನೊಂದನೆ ದಿನದಲ್ಲಿ ಪುಣ್ಯಾಹವಾಚನದ ಕಾರ್ಯಕ್ರಮದಿಂದ ಶಿಶುವಿನ ತಾಯಿಗೂ ಕುಟುಂಬದವರಿಗೂ ಶುದ್ಧಿಯ ಕ್ರಿಯೆ ನಡೆಯುತ್ತದೆ. ಬಾಳಂತಿಗೆ ಆರತಿ, ಆಕೆಗೆ ಉಡಲು ತುಂಬುವುದು, ಮಗುವಿಗೆ ಸಿಹಿ ನೆಕ್ಕಿಸುವುದು, ನಾಮಕರಣ ವಿಧಿಗಳು ಜರಗುತ್ತವೆ. ನಾಮಕರಣವನ್ನು ಹನ್ನೆರಡನೆ ದಿನ ಮಾಡಬಹುದೆಂದು ಶಾಸ್ತ್ರವಿಧಿಯಿದೆ. ಮಗುವನ್ನು ತೊಟ್ಟಿಲಿಗೆ ಹಾಕುವ ಮೊದಲು ಒಂದು ಕಲ್ಲಿನ ಗುಂಡನ್ನಿಟ್ಟು 'ಗುಂಡಪ್ಪನ ಜೋಗುಳ'ವನ್ನು ಹಾಡಿ, ತೂಗುವುದು ಸಂಪ್ರದಾಯ. ಶಿಶುವು ಅಂತಹ ಕಲ್ಲಿನ ಗುಂಡಿನಂತೆ ರೋಗರಹಿತನೂ ಶಕ್ತಿವಂತನೂ ಚಿರಂಜೀವಿಯೂ ಆಗಬೇಕೆಂಬುದೇ ಗುಂಡನ್ನು ತೂಗುವ ರಹಸ್ಯವಾಗಿರುತ್ತದೆ. ಉದಾಹೃತವಾದ ಮದಾಲಸೆ ಜೋಗುಳದಲ್ಲಿ ಶ್ರೇಷ್ಠವಾದ ತತ್ತ್ವಾರ್ಥ ಅಡಕವಾಗಿದೆಯಲ್ಲದೆ ಈ ಹಾಡು ಪರಮ ಪುಣ್ಯಕರವೆಂದು ಸೂಚಿಸಲಾಗಿದೆ. ಎಲ್ಲ ಹಾಡುಗಳಲ್ಲಿಯೂ ದೇವತ್ವದ ಕಲ್ಪನೆಯನ್ನು ತಂದಿರುವುದು ಈ ಹಾಡುಗಳ ಮಹತ್ತ್ವವಾಗಿದೆ. 'ಕರ್ಣವೇಧ' ಅಂದರೆ ಕಿವಿ ಚುಚ್ಚುವುದು. ಕುಂಡಲ, ಮುರ, ಒಂಟಿಗಳಲ್ಲಿ ಯಾವುದಾದರೂ ಆಭರಣ ತೊಡಿಸುವುದು ಈ ಸಂಸ್ಕಾರದಲ್ಲಿ ನಡೆಯುವ ವಿಷಯ. ಚಿನ್ನವು ಲೋಹಗಳಲ್ಲಿ ಅತಿ ಶ್ರೇಷ್ಠ. ಅಂತಹ ಚಿನ್ನದ ಯಾವುದೇ ಆಭರಣವನ್ನು ಧರಿಸಿದ ಶಿಶು ಚಿನ್ನದಂತೆ ಶ್ರೇಷ್ಠನಾಗುವುದು—ಎಂದು

ನಂಬಿಕೆಯಿದೆ. ಆದುದರಿಂದ ಚಿನ್ನದ ಉರುಕನ್ನು (ತಾಯಿತವನ್ನು) ಆದರೂ ಮಾಡಿಸಿ, ಉಡಿದಾರದಲ್ಲಿ ಕಟ್ಟುವರು. ಕಿವಿ ತೂತು ಮಾಡಿ ಚಿನ್ನದ ಕುಂಡಲಗಳನ್ನಿಡುವರು. ಕರ್ಣವೇಧ ಸಂಸ್ಕಾರದಿಂದ ಹರ್ನಿಯಾ ಎಂಬ ಭಯಂಕರ ರೋಗ ಬಾರದಿರುವುದೆಂದು ಹೇಳಲಾಗಿದೆ. ಸುಶ್ರುತ ಸಂಹಿತೆಯಲ್ಲಿ ಈ ಸಂಸ್ಕಾರದ ಮಹತ್ತ್ವವನ್ನು ಹೇಳಿದೆ. ಈ ಸಂಸ್ಕಾರದಲ್ಲಿ ಕೊನೆಗೆ ಆರತಿಯೆತ್ತುವುದು ಬರುತ್ತದೆ. ಇವುಗಳಿಗೂ ಶೋಭಾನೆಗಳಿರುವುದನ್ನು ಪರಿಶೀಲಿಸಬಹುದು.

184. ಗಂಡುಮಗುವಿಗೆ ಅನ್ನಪ್ರಾಶನವನ್ನು ಆರನೆಯ ತಿಂಗಳಲ್ಲಿ ಇಲ್ಲವೆ ಎಂಟನೆಯ, ಹತ್ತನೆಯ ಅಥವಾ ಹನ್ನೆರಡನೆಯ ತಿಂಗಳಲ್ಲಿ ಮಾಡಬಹುದೆಂದು 'ಧರ್ಮಸಿಂಧು' ಗ್ರಂಥದಲ್ಲಿ ಹೇಳಿದೆ. ಮಗುವಿಗೆ ಹಲ್ಲು ಮೂಡಲು ಪ್ರಾರಂಭವಾದಾಗ ಈ ಸಂಸ್ಕಾರವನ್ನು ಮಾಡಿ, ಅದು ಅನ್ನವನ್ನುಣ್ಣಲು ಪ್ರಾರಂಭ ಮಾಡುತ್ತಾರೆ. ಹವ್ಯಕರಲ್ಲಿ ಈ ಅನ್ನಪ್ರಾಶನ ಸಂಸ್ಕಾರಕ್ಕೆ 'ಬಾರ್ಸ' ಎಂದು ಹೆಸರಿದೆ. ಬಾರ್ಸ ಎಂಬುದು 'ವರ್ಷ' ಎಂಬುದರ ಅಪಭ್ರಂಶ ರೂಪ. ಒಂದನೆಯ ವರ್ಷದಲ್ಲಿ ಮಾಡುವ ಕಾರ್ಯಕ್ರಮವಾದುದರಿಂದ ಇದಕ್ಕೆ 'ಬಾರ್ಸ' ಎಂಬ ಹೆಸರಾಗಿರಬೇಕು. ಬಾರ್ಸದಲ್ಲಿ ಮಗುವನ್ನು ತಾಯಿಯ ತೊಡೆಯಲ್ಲಿ ಕುಳ್ಳಿರಿಸಿ, ಮೊಸರು, ಜೇನುತುಪ್ಪಗಳಿಂದ ಯುಕ್ತವಾದ ಪಾಯಸವನ್ನು ಬಂಗಾರದ ಉಂಗುರದಲ್ಲಿ ಮುಳುಗಿಸಿಕೊಂಡು ಪ್ರಾಶನ (ಉಣಸುವಿಕೆ) ಮಾಡತಕ್ಕದ್ದೆಂದು ಹೇಳಲಾಗಿದೆ.

### ಉಪನಯನ (ಚವಲದಿಂದ ಪ್ರಾರಂಭ)

185, 186. ಗಂಡು ಮಕ್ಕಳ ಸಾಮಾಜಿಕ ಸಂಸ್ಕಾರಗಳಲ್ಲಿ ಮುಖ್ಯವಾಗಿರುವ ಉಪನಯನಕ್ಕೆ ಮೊದಲು 'ಚವಲ' ಎಂಬ ಸಂಸ್ಕಾರವಿರುತ್ತದೆ. ಈಗೀಗ ಇದನ್ನು (ಇದನ್ನು ಮಾತ್ರವೆ ಅಲ್ಲ—ನಾಮಕರಣ, ಕರ್ಣವೇಧ ಮುಂತಾದ ಹಿಂದಿನ ಸಂಸ್ಕಾರಗಳನ್ನು ಕೂಡ) ಉಪನಯನದೊಂದಿಗೆ ಆಚರಿಸುವುದುಂಟು. ಚವಲ ಸಕಾಲದಲ್ಲಿ ಆಚರಿಸುವುದಾದರೆ, ಗರ್ಭದಿಂದ ಅಥವಾ ಜನ್ಮದಿಂದ ಒಂದು ವರ್ಷದಲ್ಲಿ ಇಲ್ಲವೆ ಐದನೆಯ ವರ್ಷದೊಳಗೆ ಆಚರಿಸಬೇಕೆಂದು ಶಾಸ್ತ್ರ ನಿರೂಪಣೆಯಿದೆ. 'ಚವಲ' ಎಂಬುದು ಹುಡುಗನಿಗೆ ಮೊತ್ತಮೊದಲ ಕ್ಷೌರದ ವಿಧಿ. ಇದನ್ನು ಚೂಡಾಕರ್ಮ, ಚೂಡಾಕರಣ (ಜುಟ್ಟು ಬಿಡಿಸುವುದು) ಎಂತಲೂ ಹೇಳುತ್ತಾರೆ. 'ಚೂಡ' ಸಂಬದ್ಧವಾದುದು 'ಚೌಡ'. "ಯಮಕ ಶ್ಲೇಷ ಚಿತ್ರೇಷು ವಬಯೋರ್ಡಲಯೋರ್ನ ಭಿದಾ" ಅಂದರೆ—ಯಮಕದಲ್ಲಿ, ಶ್ಲೇಷದಲ್ಲಿ, ಚಿತ್ರಕವಿತೆಯಲ್ಲಿ ವಕಾರ ಬಕಾರಗಳಿಗೂ ಡಕಾರ ಲಕಾರಗಳಿಗೂ ಭೇದವಿಲ್ಲ. ಅದರಂತೆ 'ಚೌಡ' ಎಂಬುದು 'ಚೌಲ' ಎಂದಾಗಿದೆ. ಇದನ್ನೆ 'ಚವಲ' ಎನ್ನುವುದು ಪ್ರಚಲಿತವಾಗಿದೆ. 'ಚೌಲ' ಎಂಬ ಅರ್ಥದಲ್ಲಿಯೇ

ಇವುಗಳಲ್ಲಿ 'ಸಂಸ್ಕಾರ' ವೆಂಬುದು ಉಪನಯನವನ್ನು ನಿರ್ದೇಶಿಸುತ್ತದೆ. "ಉಪನಯನದ ದಿನ ಹೋಮಕರ್ಮ ನಡೆಯುತ್ತಿರುವಾಗ ಅಲ್ಲಿ ಉಪನಯನ ಮಾಡಿದವನು—ಎಂದರೆ ತಂದೆ ಮೊದಲಾದ ಕರ್ತೃವು ವಟುವನ್ನು ಕೈಹಿಡಿದು ಮೊದಲು ದೇವತೆಗಳ ಅಧೀನಕ್ಕೆ ಅರ್ಪಿಸುತ್ತಾನೆ. ಅನಂತರ, ಆ ದೇವತೆಗಳ ಕೈಯಿಂದ ತನ್ನ ಸಮೀಪಕ್ಕೆ—ತನ್ನ ಅಧೀನಕ್ಕೆ ಹೊಂದಿಸುತ್ತಾನೆ. ತಂದೆಯು ತನ್ನ ತೊಡೆಯಲ್ಲಿ ಕುಳ್ಳಿಸುತ್ತಾನೆ. ಹೀಗೆ ಇದು 'ಉಪನಯನ' ಶಬ್ದದ ಅರ್ಥವೆಂದು ವಿವರಿಸಲಾಗಿದೆ.[15] 'ಉಪ'—ಇನ್ನೊಂದು, 'ನಯನ'—ಕಣ್ಣು. ಇನ್ನೊಂದಾಗಿರುವ ಜ್ಞಾನದ ಕಣ್ಣನ್ನು ಕೊಡಿಸುವ ಸಂಸ್ಕಾರ ಎಂದೂ ಅರ್ಥ ಹೇಳುತ್ತಾರೆ.

ಉಪನಯನವಾಗಿದೆ ಎಂದರೆ ಯಜ್ಞೋಪವೀತ ಹಾಕಿದೆ—ಎಂದಿಷ್ಟೇ ಅರ್ಥವಲ್ಲದೆ, ಹುಡುಗನನ್ನು ಗುರುಕುಲಕ್ಕೆ ಕಳುಹಿಸಿದ ಎಂದು ಅರ್ಥವಾಗುವುದಿಲ್ಲ. ಆದುದರಿಂದ ಉಪನಯನವೆಂದರೆ ಮೊತ್ತಮೊದಲ ಯಜ್ಞೋಪವೀತ ಧಾರಣೆಯ ಸಂಸ್ಕಾರ. ಉಪನಯನಕ್ಕೆ ಇನ್ನೊಂದು ಹೆಸರು 'ಬ್ರಹ್ಮ ಪ್ರತಿಷ್ಠೆ' ಎಂದು. ಯಜ್ಞೋಪವೀತಕ್ಕೆ ಉಪವೀತ, ಬ್ರಹ್ಮಸೂತ್ರ, ಬ್ರಹ್ಮತಂತು—ಎಂದೂ ಹೆಸರುಗಳಿವೆ. ಜನಿವಾರ (ಜನ್ನದಾರ) ಎಂದು ಕನ್ನಡದ ಹೆಸರು. 'ಬ್ರಹ್ಮ ಪ್ರತಿಷ್ಠೆ' ಎಂಬಲ್ಲಿ 'ಬ್ರಹ್ಮ' ಎಂದರೆ ಯಜ್ಞೋಪವೀತ—ಅದರ 'ಪ್ರತಿಷ್ಠೆ' ಎಂದರೆ ಪ್ರಥಮವಾಗಿ ಧರಿಸುವುದು, ಅದನ್ನು ಧರಿಸುವ ಸಂಸ್ಕಾರ ಎಂದರ್ಥವಾಗುವುದು. ಇದಲ್ಲದೆ ಬ್ರಹ್ಮಚರ್ಯ ಪಾಲನೆಯನ್ನು ಪ್ರತಿಜ್ಞಾಬದ್ಧವಾಗಿ ನಡೆಸಲು ಪ್ರಾರಂಭಿಸುವುದೂ ಈ ಸಂಸ್ಕಾರದ ಉದ್ದೇಶ.

ಯಜ್ಞೋಪವೀತವು ಪ್ರಜಾಪತಿಯ (ಬ್ರಹ್ಮನ) ಒಡನೆಯೇ ಹುಟ್ಟಿದುದು—ಎಂದು ಪ್ರತೀತಿ. ಯಜ್ಞೋಪವೀತವನ್ನು ಧರಿಸುವಾಗ 'ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ ಸಹಜಂ ಪುರಸ್ತಾತ್' ಎಂಬ ಹೇಳಿಕೆ ಇದನ್ನು ದೃಢಪಡಿಸುತ್ತದೆ. 'ಉಪವೀತ' ಎಂಬುದರ ಅವಯವಾರ್ಥವನ್ನೂ ಹೀಗೆ ಮಾಡುತ್ತಾರೆ:—ಉಪ—ಆರಂಭದಲ್ಲಿ (ಮೊತ್ತಮೊದಲಾಗಿ ಬ್ರಹ್ಮನಿಂದ) ವೀತ—ಹಾಕಲ್ಪಟ್ಟುದು. ಬೋಧಾಯನರು ಹೇಳಿರುವಂತೆ 'ಯಜ್ಞೋಪವೀತ' ಎಂಬುದಕ್ಕೆ ಅರ್ಥ ಹೀಗಿದೆ :—'ಯಜ್ಞ—ಬಲಗೈಯ, ಉಪ—ಸಮೀಪ, ವೀತ—ನೇತಾಡುವಂತೆ ಹಾಕಿದುದು'. ಇನ್ನೊಂದು ಬಗೆಯ ಅರ್ಥ ಹೀಗೆ—'ಯಜ್ಞೇನ ಉಪವೀತಂ' ಅಂದರೆ (ಯಜ್ಞೇನ) ಬ್ರಹ್ಮನಿಂದ, (ಯಜ್ಞಾಯ) ಯಜ್ಞಕ್ಕಾಗಿ, ಅಂದರೆ ವೇದೋಕ್ತ ಕರ್ಮಾನುಷ್ಠಾನಕ್ಕಾಗಿ (ಉಪ) ಆರಂಭದಲ್ಲಿ ಅಥವಾ ಆದಿಯಲ್ಲಿ (ವೀತಂ) ಕೊಡಲ್ಪಟ್ಟದ್ದು, ಹಾಕಲ್ಪಟ್ಟದ್ದು. 'ಉಪವೀತ' ಎಂಬುದಕ್ಕೆ ಎಡಹೆಗಲ ಮೇಲಾಗಿ, ಬಲಗೈಯ ಅಡಿಯಲ್ಲಿ ನೇತಾಡುವಂತೆ ಹಾಕಿದ್ದು—ಎಂದೂ ಅರ್ಥ ಹೇಳುತ್ತಾರೆ. 'ಉಪವೀತಿ'

ಎಂದರೆ ಈ ಕ್ರಮದಲ್ಲಿ ಜನಿವಾರವನ್ನು ಧರಿಸಿದವನು—ಎಂದರ್ಥ. [illegible] ಅಪರಕ್ರಿಯೆಗಳಲ್ಲಿ 'ಪ್ರಾಚೀನಾವೀತಿ' ಆಗಬೇಕಾಗುತ್ತದೆ. ಬಲದ ಹೆಗಲ [illegible] ಎಡಗೈಯ ಕೆಳಗೆ ನೇತಾಡುವಂತೆಯೂ ಉಪವೀತವನ್ನು ಧರಿಸಿದವನು [illegible] ಕುತ್ತಿಗೆಯಲ್ಲಿ ಮಾಲೆಯಂತೆ ಧರಿಸಿದ ಜನಿವಾರಕ್ಕೆ ನಿವೀತ [illegible]—ಎಂದು ಹೆಸರು. ದೈವಕ್ರಿಯೆಗಳಲ್ಲಿ ಯಜ್ಞೋಪವೀತವು [illegible] ಪಿತೃಕ್ರಿಯೆಗಳಲ್ಲಿ ಪ್ರಾಚೀನಾವೀತವಿರಬೇಕು. ಕೇವಲ ಮನುಷ್ಯ [illegible] ಕ್ರಿಯೆಗಳಲ್ಲಿ ಮತ್ತು ಅಶುದ್ಧ ಕ್ರಿಯೆಗಳಲ್ಲಿ (ಮಲಮೂತ್ರ ವಿಸರ್ಜನೆ, ಕೃ[illegible], [illegible] ಹೊರುವುದು, ಸ್ತ್ರೀಸಂಗ ಇತ್ಯಾದಿ) ನಿವೀತವಾಗಿ ಧರಿಸಬೇಕು. [illegible] ಹಚ್ಚುವುದು—ಮುಂತಾದ ಸಂದರ್ಭದಲ್ಲಿ ಜನಿವಾರವನ್ನು [illegible] ಬೇಕೆಂದು ಹೇಳುತ್ತಾರೆ. ಇದಕ್ಕೆ 'ಅಧೋವೀತ' ಎಂದು ಹೆಸರು. [illegible] ಧರ್ಮಸೂತ್ರದಲ್ಲಿ ಈ ನಾಲ್ಕನೆಯದನ್ನೂ ಹೇಳಿದೆ. ಯಜ್ಞೋ[illegible] ಗಂಟು ಬ್ರಹ್ಮಗ್ರಂಥಿ, ರುದ್ರಗ್ರಂಥಿ, ವಿಷ್ಣುಗ್ರಂಥಿ—ಎಂಬ [illegible] ಎಳೆಗಳು ಮೂರಾಗಿದ್ದು ಅವು ತ್ರಿಮೂರ್ತಿ ದ್ಯೋತಕವೆಂದೂ [illegible] ವೆಂದೂ ದೇವಋಣ, ಋಷಿಋಣ, ಪಿತೃಋಣ—ಎಂಬ [illegible] ದಲ್ಲಿ ತೀರಿಸಬೇಕೆಂಬ ಸಂಕೇತವೆಂದೂ ತಿಳಿಸಲಾಗಿದೆ. ಬ್ರಹ್ಮಚಾರಿಗೆ ಯಜ್ಞೋಪವೀತವಿರಬೇಕಾದ್ದು ಒಂದು. ಸ್ನಾತಕನಿಗೆ ಹಾಗೂ ಗೃಹಸ್ಥನಿಗೆ ಎರಡು.

187–190. ಉಪನಯನವು ನಾಂದಿಯಿಂದಲೇ ಮೊದಲಾಗಿ [illegible] ಗಣಪತಿ ಮಂಡಲ ಹಾಕಿ, ಕಲಶಗಳನ್ನಿಟ್ಟು, ನಿರ್ವಿಘ್ನತೆಗಾಗಿ ಗಣೇಶನನ್ನು [illegible] ನಾಂದಿ ಕ್ರಿಯೆಗಳನ್ನು ನಡೆಸಲಾಗುತ್ತದೆ. ಅಕ್ಷತೆ ಕಲಸುವುದು [illegible] ನಯನವಾಗಲಿರುವ ಹುಡುಗನಿಗೆ ಎಣ್ಣೆ ಹನಿಸುವುದು, ತಾಯಿ ಮಗ [illegible] ನಡೆಯುತ್ತದೆ. ವಟುವಿಗೆ ಕಟ್ಟಿದ ಹವಳಸರ, ಉಪನಯನ ದೀಕ್ಷೆಯ ಸಂಕೇತವಾಗಿದೆ. ಹವಳಸರವಿಲ್ಲದಿದ್ದಲ್ಲಿ ಚಿನ್ನದ ಸರವನ್ನು ಕಟ್ಟುವುದೂ ಉಂಟು.

ಚಿನ್ನದ ರನ್ನದ ಆಭರಣಗಳನ್ನು ಧರಿಸುವುದು ಕೇವಲ [illegible] ಸ್ತ್ರೀಯರಿಗೆ ಅವು ಮಾಂಗಲ್ಯ ಚಿಹ್ನೆಗಳು. ಆಭರಣ ಧರಿಸುವುದರಿಂದ ಆಗುವ ಪ್ರಯೋಜನದ ವಿಷಯವಾಗಿ (ಕನ್ನಡಪ್ರಭ ಪತ್ರಿಕೆಯ 1–9–1984ರ [illegible] ಯಲ್ಲಿ 'ಮಗು ಬೇಕೇ ? ಹವಳ ಧರಿಸಿ' ಎಂಬ ಲೇಖನ ಬಂದಿದೆ) ಅಖಿಲ ಭಾರತ ರತ್ನಚಿಕಿತ್ಸಾ ಸಂಘದ ಅಧ್ಯಕ್ಷ ಡಾ॥ ಎಸ್. ಜೆ. ರೈಚೂರಿ ಎಂಬವರು ಮಾಡಿರುವ ಸಂಶೋಧನೆಯಂತೆ ಹವಳದ ಸರವನ್ನು ಧರಿಸಿದುದರಿಂದ 779 [illegible] ಗಳಲ್ಲಿ 763 ಮಂದಿಗೆ ಸಂತಾನ ಪ್ರಾಪ್ತಿಯಾಗಿದೆ. ಹವಳದ ಮಣಿಯಲ್ಲಿರುವ [illegible] ಕಾರ್ಬೋನೇಟ್ ದೇಹಕ್ಕೆ ರಾಸಾಯನಿಕವಾಗಿ ವರ್ತಿಸಿ ಕಾಲ್ಸಿಯಂ [illegible]ಟನ್ನೂ ಫೆರ್ರಿಕ್ ಸಲ್ಫೇಟನ್ನೂ ಉತ್ಪಾದಿಸುತ್ತದೆ. ಇವು ದೈಹಿಕ ಆರೋಗ್ಯವನ್ನು [illegible]

ಶಕ್ತಿಯನ್ನೂ ಲೈಂಗಿಕ ವಿಶುದ್ಧತೆಯನ್ನೂ ನೀಡುತ್ತವೆ. ಉಪನಯನವು ವಟುವಿಗೆ ಮನಶ್ಶುದ್ಧಿಯನ್ನೂ ದೇಹಾರೋಗ್ಯವನ್ನೂ ಉಂಟುಮಾಡುವುದರಿಂದ ಅದರಿಂದ ಸಹ ಹೆಚ್ಚಿನ ಗುಣಕಾರಿಯೆಂದು ವಿದಿತವಾಗುತ್ತದೆ. ಆದರೆ, ಈ ಅಗ್ನಿಯನ್ನು ಎಷ್ಟೋ ಮಂದಿ ತಿಳಿಯದೆ, ನಾಡಿಕೆಯಂತೆ ವಟುವಿಗೆ ಯಜ್ಞದ ನೆರವನ್ನು ಕಲ್ಪಿಸುತ್ತಾರೆ. ವೈಜ್ಞಾನಿಕವಾಗಿ ಉಪಯೋಗ ತಿಳಿಯದಿರಲಿ, ತಿಳಿಯುವಿರಲಿ ಇದರಿಂದ ಪ್ರಯೋಜನ ಇದ್ದೇ ಇರುತ್ತದೆ. ಇದರ ಇನ್ನೂ ಅನೇಕರು ಗುರುತಿಸಿರಲಿಕ್ಕಿಲ್ಲ. ವೈಜ್ಞಾನಿಕವಾದ ರಹಸ್ಯಗಳು ಇಂತಹವನ್ನು ಕಂಡುಹಿಡಿಯಬೇಕಾಗಿದೆ.

191-205. ಕಲಶಮೇಯುವುದು—ಎಂಬ ಈ ಹಾಡು ಸಾಹಿತ್ಯಮೌಲ್ಯ, ಸಂಸ್ಕೃತಿಮೌಲ್ಯಗಳಿಂದ ಕೂಡಿದೆ. ಉಪನಯನದ ವಟುವಿಗೆ ಹೇಗೆ ಗೋದಾನಾದಿ ವಸ್ತುಗಳನ್ನು ಕೊಡುವುದು ವಾಡಿಕೆ. 'ಮುಹೂರ್ತಮಾಣಿ' ಎಂಬುದು ಹವ್ಯಕದ ಹಾಡನ್ನೆಂದು ಹೇಳಬಹುದು. ಉಪನಯನದ ಮುಹೂರ್ತ ಬಂದಾಗ ಪುರೋಹಿತರ ಸೂಚನೆಯಂತೆ ವಟುವಿನ ತಂದೆ ಬ್ರಾಹ್ಮಸಭೆಯ ಮುಂದೆ ಬಂದು 'ಮಾಣಿಯನ್ನು ಉಪನಯನಕ್ಕೆ ತರುತ್ತೇನೆ' ಎಂದು ಹೇಳಿ ಅನುಮತಿ ಪಡೆದು ದೇವರಿಗೆ ನಮಿಸಿ (ದೇವರ ಕೋಣೆಯಿಂದ) ಹುಡುಗನನ್ನು ಸಭೆಗೆ ಕೈಹಿಡಿದು ಕರೆತಂದು, ಎರಡು ಬದಿಗೆ ಸಭೆ ಸೇರಿರುವ ಚಪ್ಪರದಡಿಯಲ್ಲಿರುವ ಅಂಗಳದ ನಡುವೆ ಅಕ್ಕಿಯ ರಾಶಿಯ ಮೇಲೆ ಕುಳ್ಳಿರಿಸುತ್ತಾನೆ. ಮಂಗಲ ವಾದ್ಯಗಳೊಂದಿಗೆ, ಶೋಭಾನೆ ಹಾಡುಗಳೊಂದಿಗೆ, ಇದರೊಡನೆ ವೇದ ಮಂತ್ರಘೋಷವೂ ಸೇರಿರುತ್ತದೆ. ಉಪನಯನ ವಿಧಿಗಳು ಜರುಗುತ್ತವೆ. ಮುಹೂರ್ತ ದಕ್ಷಿಣೆಯನ್ನು ಅರ್ಹರಾದವರಿಗೆ ಕೊಟ್ಟು, ವಟುವಿಗೆ ಆಚಮನ ಮಾಡಿಸಿ, ತಂದೆಯು ಮಗನಿಗೆ ಓಂಕಾರಯುಕ್ತವಾಗಿ ಗಾಯತ್ರೀ ಮಂತ್ರವನ್ನು ಉಪದೇಶಿಸುತ್ತಾನೆ. ಕೊನೆಗೆ ಮಂತ್ರಾಕ್ಷತೆಯಿರುತ್ತದೆ. ಅನಂತರ ಉಪನಯನದ ಹೋಮ, ಭಿಕ್ಷೆ ಕೊಡುವುದು, ಸರ್ವರಿಗೂ ಭೋಜನವಾದ ಮೇಲೆ ಪುನಃ ವಟುವನ್ನು ಸಭೆಗೆ ಕರೆತಂದು ಒಸಗೆಯ ಕಾರ್ಯಕ್ರಮವನ್ನು ಮಾಡುತ್ತಾರೆ. 'ಒಸಗೆ' ಎಂದರೆ ಉಪನಯನದ ಮದುಮಗನನ್ನು ಪುನಃ ಸಭೆಗೆ ಕರೆತಂದು ಮಂತ್ರಾಕ್ಷತೆ ಮಾಡಿ ಹರಸುವುದು, ಉಡುಗೊರೆಗಳನ್ನು ಅಥವಾ ಧನವನ್ನು ಕೊಡುವುದು, ಸೇಸೆ ತಳಿಯುವುದು, ಪುರೋಹಿತರಿಂದ ಬ್ರಹ್ಮಚರ್ಯ ವ್ರತದ ಉಪದೇಶ—ಮುಂತಾದ ಕಾರ್ಯಕ್ರಮಗಳು. ವಟುವಿಗೆ ಆರತಿ ಬೆಳಗಿದನಂತರ ಮಂಗಲವಾದ್ಯ ಸನಾದುಸುತ್ತಿರಲು, ವಟುವನ್ನು ಒಳಗೆ ಕರೆದುಕೊಂಡು ಹೋಗಲಾಗುವುದು. 206. 'ವಿದ್ಯೆ ಕಲಿತದ್ದು' ಎಂಬ ಹಾಡಿನಲ್ಲಿ ವಸುದೇವನು ಕೃಷ್ಣ ಬಲರಾಮರನ್ನು ಸಾಂದೀಪನನಲ್ಲಿಗೆ ವಿದ್ಯಾಭ್ಯಾಸಕ್ಕಾಗಿ ಕಳುಹಿದ ವಿವರವಿದೆ ಮತ್ತು ಗುರುಕುಲದ ಜೀವನ ಕ್ರಮದ ವಿವರಣೆಯಿದೆ. ಗುರುವಿಗೆ ಗುರುದಕ್ಷಿಣೆಯಾಗಿ ಆತನ ಇಷ್ಟವನ್ನು ನಡೆಸಿಕೊಡುವ ವಿವರಣೆಯನ್ನು ಕಾಣುತ್ತೇವೆ.

ಉಪನಯನ ಸಂಸ್ಕಾರವಾಗಿ, ಸ್ವಧರ್ಮನಿರತನಾದ ಗೃಹಸ್ಥಾಶ್ರಮಿ ಆಚರಿಸತಕ್ಕ ಕರ್ಮಗಳು ನಿತ್ಯ, ನೈಮಿತ್ತಿಕ, ಕಾಮ್ಯ—ಎಂದು ಮೂರು ಬಗೆಯವು. ಅವುಗಳಲ್ಲಿ ನಿತ್ಯಕರ್ಮಗಳು ಆರು. ಇವನ್ನು 'ಷಟ್ಕರ್ಮಗಳು' ಎನ್ನುತ್ತಾರೆ—

ಸ್ನಾನಂ ಸಂಧ್ಯಾ* ಜಪೋ ಹೋಮೋ ದೇವತಾನಾಂ ಚ ಪೂಜನಂ
ಆತಿಥ್ಯಂ ವೈಶ್ವದೇವಂ ಚ ಷಟ್ಕರ್ಮಾಣಿ ದಿನೇ ದಿನೇ ॥

ಇವು ಪ್ರತಿದಿನವೂ (ನಿತ್ಯವೂ) ಆಚರಿಸಬೇಕಾದವು. ನೈಮಿತ್ತಿಕಗಳೆಂದರೆ, ಏನಾದರೂ ನಿಮಿತ್ತದಿಂದ ಮಾಡುವಂಥವು—ನವರಾತ್ರಿಯಲ್ಲಿ ದುರ್ಗಾಪೂಜೆ, ದೀಪಾವಳಿಯಲ್ಲಿ ಲಕ್ಷ್ಮೀಪೂಜೆ, ಪರ್ವ ಸಮಯದಲ್ಲಿ ಪವಿತ್ರ ನದಿಗಳಲ್ಲಿ ಸ್ನಾನ—ಮುಂತಾಗಿ ಪುಣ್ಯಾರ್ಜನೆಗಾಗಿ ಮಾಡುವಂಥವು. ಸತ್ಯನಾರಾಯಣ ಪೂಜೆ, ಶಿವಪೂಜೆಗಳೂ ಇದೇ ಬಗೆಯವು. ವಿಶೇಷವಾದ ಶುಭಕಾಮನೆಯಿಂದ ಇಷ್ಟಪ್ರಾಪ್ತಿಗಾಗಿ ಮಾಡುವ ಕರ್ಮಗಳು ಕಾಮ್ಯಕರ್ಮಗಳಾಗಿವೆ. ಆಯುಷ್ಯದ ವೃದ್ಧಿಗೂ ರೋಗನಾಶಕ್ಕೂ ಮಾಡುವ ಮೃತ್ಯುಂಜಯ ಹೋಮ ಅಥವಾ ಜಪ, ದುರ್ಗಾಸಪ್ತಶತೀ ಪಾರಾಯಣ, ಮಳೆ ಬರಲಿಯೆಂದು ರುದ್ರಾಭಿಷೇಕ, ಪರ್ಜನ್ಯ ಜಪ—ಇವೆಲ್ಲ ಕಾಮ್ಯಕರ್ಮಗಳು. ನೈಮಿತ್ತಿಕ ಹಾಗೂ ಕಾಮ್ಯ ಕರ್ಮಗಳೆರಡೂ ಸಾಮಾನ್ಯ ಒಂದೇ ಬಗೆಯವಾಗಿದ್ದು ಐಚ್ಛಿಕಗಳೆಂದು ಇಲ್ಲಿ ವರ್ಗೀಕರಿಸಲಾಗಿದೆ.

## ಐಚ್ಛಿಕ ಶುಭಕಾರ್ಯಗಳು (ವ್ರತ—ಹಬ್ಬ—ಪೂಜೆ—ಹೋಮ)

### ಸತ್ಯನಾರಾಯಣ ವ್ರತ—ಪೂಜೆ

207–213. ಮೊದಲೇ ಮನಃಸಂಕಲ್ಪ ಮಾಡಿ, ನಿಯಮಬದ್ಧವಾಗಿ ನಡೆದುಕೊಂಡು, ಶುದ್ಧ ಮನೋಭಾವದಿಂದ ಉಪವಾಸವನ್ನೂ ಕೈಗೊಂಡು, ಪೂಜಾಕಾರ್ಯವನ್ನೂ ಒಳಗೊಂಡು ವರ್ತಿಸುವುದು ವ್ರತವೆನಿಸುತ್ತದೆ. ವ್ರತದ ಉದ್ದೇಶ ಇಷ್ಟಸಿದ್ಧಿಯಲ್ಲದೆ ಬೇರೇನೂ ಅಲ್ಲ. ಅಂತಹ ವ್ರತಗಳಲ್ಲಿ ಸತ್ಯನಾರಾಯಣ ವ್ರತವೆಂಬುದೊಂದು. ಈ ವ್ರತವನ್ನು ಕೈಗೊಳ್ಳುವವರು ಶುಭದಿನದಂದು ಬೆಳಗ್ಗೆ ಎದ್ದು ಸ್ನಾನ ಮಾಡಿ ಶುಚಿರ್ಭೂತರಾಗಿ ಕಲಶ ಜಲವನ್ನು ತುಂಬಿಡುವರು. ಸಂಜೆ ತನಕ ಆಹಾರ

* ಸಂಧ್ಯಾ—ಹಗಲು ರಾತ್ರಿಗಳ ಸಂಧಿಕಾಲ. (ಸಮ್ಯಕ್ ಏಕಾಗ್ರತಾಂ ಯಾತಿ ಧಿಯಃ ಯಸ್ಯಾಂ ಸಾ ಸಂಧ್ಯಾ—ಎಂದರೆ ಧ್ಯಾನಾಸಕ್ತರ ಚಿತ್ತವೃತ್ತಿಗಳನ್ನು ಏಕಾಗ್ರತೆಯಲ್ಲಿ ನಿಯೋಜಿಸುವ ಸಾಮರ್ಥ್ಯವಿರುವ ಕಾಲ) ಈ ಶ್ಲೋಕದಲ್ಲಿರುವ 'ಸಂಧ್ಯಾ' ಎಂಬುದಕ್ಕೆ 'ಸಂಧ್ಯಾನುಷ್ಠಾನ' ಎಂದರ್ಥ.

[illegible] ಸಂಜೆ ಸತ್ಯನಾರಾಯಣ ಪೂಜೆಯನ್ನು ವಿಧಿಬದ್ಧವಾಗಿ ಆಚರಿಸುವರು. ಸತ್ಯನಾರಾಯಣನಿಗೆ ಸಪಾದ ಭಕ್ಷ್ಯವನ್ನು ಸಮರ್ಪಿಸುವುದು, [illegible], ಸತ್ಯನಾರಾಯಣ ಕಥಾಶ್ರವಣ ಮಾಡಿ, ಪ್ರಸಾದ ಸ್ವೀಕರಿಸಿ, [illegible] ಭೋಜನ ಮಾಡಿ, ರಾತ್ರಿ ಜಾಗರಣೆಯನ್ನು ಮಾಡಿ, ವ್ರತ [illegible] ಫಲವನ್ನು ಪಡೆದೆವೆಂದು ತೃಪ್ತಿಯನ್ನು ತಾಳುವರು. ಈ ಪೂಜೆಗೆ [illegible] ಅನಿವಾರ್ಯವಾಗಿದೆ. [illegible] ಕೂಡಿರಬೇಕಾಗಿದೆ. [illegible], [illegible], [illegible] ಕೂಡುವ [illegible] [illegible] ಪ್ರಾಮುಖ್ಯವಾಗಿದ್ದು.

### ಶಿವಪೂಜೆ–ಶಿವರಾತ್ರಿ–ಪ್ರದೋಷವ್ರತ

214–221. ಇಲ್ಲಿಯ ಹಾಡುಗಳಲ್ಲಿ ವಸ್ತುಸ್ತವ, ರೂಪಸ್ತವ, ಗುಣಸ್ತವಗಳು ಬಂದಿವೆ. 'ಮಹಾಬಲ ದರ್ಶನ'ವು ಗೋಕರ್ಣದ ಮಹಾಬಲೇಶ್ವರನನ್ನು ಪ್ರತ್ಯಕ್ಷ ಕಂಡಂತೆ ಚಿತ್ರಿಸಲಾಗಿದೆ. ಮಾಘ ಬಹುಳ ಚತುರ್ದಶಿ ದಿವಸ ಮಹಾಶಿವರಾತ್ರಿಯಾಗಿದ್ದು, ಸಾವಿರಾರು ಭಕ್ತರು ಶಿವರಾತ್ರಿ ವ್ರತವನ್ನು ಕೈಗೊಂಡು ಪೂಜೆಯನ್ನು ಮಾಡುವರು. ಪ್ರದೋಷ ಪೂಜೆ ಎಂಬುದೂ ಶಿವ ಸಂಬಂಧವಾದ ವ್ರತ ಮತ್ತು ಪೂಜೆ. 'ಪ್ರದೋಷ' ಎಂದರೆ ರಾತ್ರಿಯ ಪ್ರಾರಂಭದ ಭಾಗ. ಆ ಹೊತ್ತಿನಲ್ಲಿ ನಡೆಯುವ ಪೂಜೆಯಾದುದರಿಂದ ಇದು ಪ್ರದೋಷ ಪೂಜೆಯೆನಿಸಿದೆ.

222, 223. ಚೈತ್ರಮಾಸದ ಶುಕ್ಲ ನವಮಿ ದಿನವನ್ನು 'ಶ್ರೀರಾಮ ನವಮಿ' ಎಂದು ಕರೆಯುತ್ತಾರೆ. ಅದು ಶ್ರೀರಾಮನ ಜನ್ಮದಿನವಾಗಿರುತ್ತದೆ. ರಾಮೋತ್ಸವವನ್ನು ನವಮಿಯ [illegible] ದಿನಗಳ ವರೆಗೂ ಆಚರಿಸುತ್ತಾರೆ. ಆ ಸಂಬಂಧದ ಪೂಜೆ—ಆರತಿ ಹಾಡುಗಳು ಇಲ್ಲಿವೆ. ಮುಂದೆ ಶ್ರಾವಣ ಮಾಸದ ಬಹುಳ ಅಷ್ಟಮಿ 'ಶ್ರೀಕೃಷ್ಣಾಷ್ಟಮಿ'ಯೆನಿಸುತ್ತದೆ. ಶ್ರೀಕೃಷ್ಣನು ಜನಿಸಿದ ದಿನವದು. ಅಷ್ಟಮಿಯ ಕೃಷ್ಣನಿಗೆ ಆರತಿ ಬೆಳಗುವ ಹಾಡಿನಲ್ಲಿ ಶ್ರೀಕೃಷ್ಣನ ಮಹಿಮೆ ಪ್ರತಿಪಾದಿತವಾಗಿದೆ.

224–227. ಶ್ರಾವಣ ಮಾಸದ ಪೌರ್ಣಿಮೆಯ ಹಿಂದಿನ ಶುಕ್ರವಾರ ಆಚರಿಸುವಂಥದು ಮಹಾಲಕ್ಷ್ಮೀ ವ್ರತ. ದಾರಿದ್ರ್ಯ ನಿವಾರಣೆ, ಐಶ್ವರ್ಯಪ್ರಾಪ್ತಿ, ಕೈವಲ್ಯ ಸುಖಗಳಿಗಾಗಿ ಇದನ್ನು ಆಚರಿಸುವರು. ಪೂಜೆಯ ಹಾಡು—ಆರತಿ ಹಾಡುಗಳನ್ನಿಲ್ಲಿ ಕೊಡಲಾಗಿದೆ. ಅನಂತರ ಬರುವಂಥವು ಗೌರೀ ಗಣೇಶ ಪೂಜೆಯ ಹಾಡುಗಳು.

228–242. ಭಾದ್ರಪದ ಮಾಸದ ಬಹುಳ ತದಿಗೆಗೆ 'ಗೌರೀತದಿಗೆ' ಎಂತಲೇ ಹೆಸರು. ಅಂದು ಗೌರೀಪೂಜೆ ನಡೆಯುತ್ತದೆ. (ಸ್ವರ್ಣಗೌರೀ ವ್ರತದ ಕಥೆ, ಸ್ಕಂದ

ಪುರಾಣದಲ್ಲಿ ವರ್ಣಿತವಾಗಿದೆ). ಅದರ ಮರುದಿನ 'ಗಣೇಶ [illegible]'. ಈ ಗೌರೀ ಗಣೇಶ, ಇಬ್ಬರಿಗೂ ವಿಶೇಷ ಪೂಜೆ ಉತ್ಸವಗಳು ಎಲ್ಲ ಕಡೆ [illegible]. 'ಗೌರಮ್ಮ ತವರಿಗೆ ಬಂದದ್ದು' ಎಂಬ ಹಾಡು ಪತಿಗೃಹದಲ್ಲಿ [illegible] ಮನೆಯ ಮೇಲಣ ಮಮತೆಯನ್ನು ಚಿತ್ರಿಸುತ್ತದೆ. ತಾನು ಹೋಗಿ ಮೂರೇ [illegible] ಬರುವೆನೆಂದು ಗೌರಿ ತನ್ನ ಪತಿಗೆ ತಿಳಿಸುತ್ತಾಳೆ. ಗೌರೀ ಪ್ರತಿಮೆಯನ್ನು [illegible], ವ್ರತ-ಪೂಜೆಗಳು ನಡೆದನಂತರ ಬಿಂಬ ವಿಸರ್ಜನೆಯಿರುತ್ತದೆ. ಆ ಸಂ[illegible] ಗೌರಿಯನ್ನು ಕಳುಹಿಸಿಕೊಡುವ ಹಾಡು ಉಪಯೋಗಕ್ಕೆ ಬರುತ್ತದೆ. [illegible] ವರ್ಣನೆಯೂ ಈ [illegible]ದಿನಲ್ಲಿದೆ. ಗಣೇಶನ ಪೂಜೆಯ ಹಾಡುಗಳಲ್ಲಿ [illegible] ಪುರಾಣದ ಕಥಾಸಾರ ಅಡಕವಾಗಿದೆ.

243-252. ಹಬ್ಬಗಳಲ್ಲಿ ನವರಾತ್ರಿಯ ಹಬ್ಬ ವೈಶಿಷ್ಟ್ಯಪೂರ್ಣವಾಗಿದೆ. ಈ ಒಂಬತ್ತು ದಿನಗಳಲ್ಲಿ ಮೊದಲ ಮೂರು ದಿನ ದುರ್ಗಾಪೂಜೆಯಿರುತ್ತದೆ. ಶಕ್ತಿಯ ಅಧಿದೇವತೆಯಾದ ದುರ್ಗೆಯ ಪೂಜಾನಂತರ ಮೂರು ದಿನ ಲಕ್ಷ್ಮೀಪೂಜೆ, ಆ ಮೇಲೆ ಮೂರು ದಿನ ಸರಸ್ವತೀ ಪೂಜೆಯನ್ನು (ಪುಸ್ತಕ ಪೂಜೆಯನ್ನು) ಆಚರಿಸಿ [illegible] ಆಯುಧ ಪೂಜೆಯಾಗಿ ಹತ್ತನೆಯ ದಿನ ದಸರಾ ಮಹೋತ್ಸವ ನಡೆಯುತ್ತದೆ. ದುರ್ಗಾಪೂಜೆಯ ಒಂದು ಹಾಡಿನಲ್ಲಿ ಷೋಡಶೋಪಚಾರಗಳ (ಅಂದರೆ ಹದಿನಾರು ಬಗೆಯ ಸೇವೆಗಳ) ವಿವರವಿದೆ. ಶಕ್ತಿರೂಪಿಣಿಯಾದ ಆಕೆ ರಕ್ಕಸರನ್ನು ಸಂಹರಿಸಿದ ಪುರಾಣಕಥೆಯ ಪ್ರಸ್ತಾಪ ಹಾಡಿನಲ್ಲಿದೆ. ಲಕ್ಷ್ಮೀಪೂಜೆ ಎಂಬುದು ಇಲ್ಲಿ ಧಾನ್ಯಲಕ್ಷ್ಮೀ ಪೂಜೆ. ಗದ್ದೆಯಲ್ಲಿ ಬೆಳೆದು ಏರಿದ ಕದಿರನ್ನು ತರುವುದು ಒಂದು ವಿಶೇಷ ಸಂಪ್ರದಾಯದ ಹಬ್ಬವೇ ಸರಿ. 'ಹೊಸ್ತು' ಅಂದರೆ ಹೊಸ ಅಕ್ಕಿಯ ಅನ್ನವನ್ನು [illegible] ಉಣ್ಣುವ ಸಂದರ್ಭದ ಪೂಜಾದಿ ಕಾರ್ಯಕ್ರಮಗಳ ಆಚರಣೆ. ಶಾರದಾಪೂಜೆ, ಶಾರದಾ ಮೂರ್ತಿ ವಿಸರ್ಜನೆಯೂ ಉಂಟು. ನವರಾತ್ರಿಗಳ ಪೂಜೆಗಳಾದ ಹತ್ತನೆಯ ದಿನ ವಿಜಯದಶಮಿ ಅಥವಾ ವಿದ್ಯಾದಶಮಿ. ಮೂರು ದಿನಗಳ ಹಿಂದೆ ಪೂಜೆಗೆ ಇಟ್ಟ ಪುಸ್ತಕಗಳಿಗೆ ಪುನಃ ಪೂಜೆ-ಆರತಿಗಳಾಗಿ ಇದೀಗ ಉದ್ಯಾಪನೆಯಾಗುವ ದಿನ. ವಿದ್ಯಾರಂಭಕ್ಕೆ ಇದೇ ಶುಭದಿನ. ಆದುದರಿಂದ ವಿದ್ಯಾದಶಮಿಯೆನಿಸಿದೆ. ಹಿಂದಿನ ಕಾಲದಲ್ಲಿ ಮಹಾರಾಜರು ಧರ್ಮ ರಕ್ಷಣೆಗಾಗಿ ಬಲಸಮೇತ ದಿಗ್ವಿಜಯಕ್ಕೆ ಹೊರಡುತ್ತಿದ್ದ ಶುಭದಿವಸವಾದ್ದರಿಂದ 'ವಿಜಯ ದಶಮಿ' ಎನಿಸಿತು. ಹಿಂದೆ ಶ್ರೀರಾಮನು ರಾವಣ ವಧೆಗೆಯ್ದು ಜಯ ಸಂಪಾದಿಸಿದ ದಶಮಿ ದಿನವದು. ಪಾಂಡವರು ಅಜ್ಞಾತವಾಸ ವನ್ನು ಮುಗಿಸಿ, ವಿಜಯದ (ವಿಜಯವನ್ನು ಕೊಡತಕ್ಕ) ಶಮೀವೃಕ್ಷದಿಂದ ತಮ್ಮ ಆಯುಧಗಳನ್ನು ಪಡೆದು, ಜಯಿಸಲು ಹೊರಟ ದಿನವದು. ಶಮೀವೃಕ್ಷವನ್ನು ವಿಜಯದ ಸಂಕೇತವೆಂದು ತಿಳಿಯಲಾಗಿದೆ. ಶಮೀವೃಕ್ಷದ ಪೂಜೆಯೂ ಈ ಹಬ್ಬದ

ಒಂದು ಅಂಶ. ವಿಜಯ ದಶಮಿಯ ಅನಂತರ ಬರುವ ಪ್ರಮುಖವಾದ ಹಬ್ಬ ದೀಪಾವಳಿ.

253–261. ದೀಪಾವಳಿಯಲ್ಲಿ ಬಲೀಂದ್ರಪೂಜೆ–ಗೋಪೂಜೆಗಳು ಮುಖ್ಯವಾಗಿವೆ. ಭೂಲೋಕದಲ್ಲಿ ಜನರಿಗೆ ಸುಖ, ಸಮೃದ್ಧಿ, ಸಂಪತ್ತುಗಳನ್ನುಂಟುಮಾಡಿಕೊಂಡು ಆಳುತ್ತಿದ್ದ ಬಲಿ ಚಕ್ರವರ್ತಿ ಇಂದ್ರನ ಪದಪಿಗೆ ಮಾರಕವಾದುದರಿಂದ ಅಧೋಗತಿ ಹೊಂದಿದನು. ಮಹಾವಿಷ್ಣು ವಾಮನನಾಗಿ ಒಂದು ಮೂರಡಿ ನೆಲವನ್ನು ಬೇಡಿ, ಬಲಿಯನ್ನು ಪಾತಾಳಕ್ಕಿಳಿಸಿದನು. ಆದರೆ ಬಲಿಯು ತನ್ನ ಭಕ್ತನಾದುದರಿಂದ ಅವನ ಇಚ್ಛೆಯಂತೆ ಬಾಗಿಲನ್ನು ಕಾಯಲು ಒಪ್ಪಿದನು. ಬಲಿಯು ವರ್ಷಕ್ಕೊಮ್ಮೆ ಭೂಲೋಕಕ್ಕೆ ಬರುವನೆಂದು ಪ್ರತೀತಿ. ಹಾಗೆ ಅವನು ಬರುವಾಗ ಭೂಲೋಕವು ಸಮೃದ್ಧಿಯಿಂದ ಕೂಡಿ ಮೆರೆಯುತ್ತಿದೆಯೆಂಬುದನ್ನು ತೋರಿಸುವಂತೆ ಹಬ್ಬವನ್ನು ಆಚರಿಸುತ್ತಾರೆ. ಬಲಿಪೂಜೆಯನ್ನು ಮಾಡುತ್ತಾರೆ. ಕಾರ್ತಿಕಮಾಸದ ಮೊದಲು ನರಕಚತುರ್ದಶಿ. ಅದರ ಮರುದಿನದ ಅಮಾವಾಸ್ಯೆಯೇ ದೀಪಾವಳಿಯ ದಿನ. ಅದರ ಮರುದಿನ ಬಲಿಪಾಡ್ಯಮಿ. ಆ ದಿನವೇ ಗೋಪೂಜೆ—ಅಂಗಡಿ ಪೂಜೆಗಳನ್ನು ಆಚರಿಸುತ್ತಾರೆ. ಈ ಆಚರಣೆಗಳೆಲ್ಲವೂ ಅಲ್ಲಲ್ಲಿಗೊಪ್ಪುವಂತೆ ಹಾಡುವ ಶೋಭಾನೆಗಳಿಂದ ಅರ್ಥವತ್ತಾಗುತ್ತವೆ ಮತ್ತು ಕಳೆಗೂಡುತ್ತವೆ. ಗೋಪೂಜೆಯ ಸಂಭ್ರಮ 257ನೆಯ ಹಾಡಿನಲ್ಲಿ ಬಂದಿದೆ. ಗೋವಿನ ಹಬ್ಬದ ಸುದ್ದಿ ಕೇಳಿದ ಅಪ್ಪಯ್ಯನಿಗೆ ಕೈಯ ಉಂಗುರ ಉದುರಿ ಬಿದ್ದುದೇ ಗೊತ್ತಾಗಲಿಲ್ಲವಂತೆ! ಮಾವಯ್ಯನಿಗೆ ನೇವಳ (ಸೊಂಟದ ಬೆಳ್ಳಿಯುಡಿದಾರ) ಬಿದ್ದುದೇ ಅರಿಯಲಿಲ್ಲವಂತೆ! ಗೋವುಗಳನ್ನು ಅಲಂಕಾರ ಮಾಡುವುದು, ಗೋಗ್ರಾಸ ನೀಡುವುದು, ಆರತಿ ಬೆಳಗುವುದು, ಗೋವುಗಳಿಗಾದ ದೃಷ್ಟಿಯನ್ನು ತೆಗೆಯುವುದು ಇವಕ್ಕೆಲ್ಲ ಹಾಡುಗಳಿವೆ. 'ಕೊಳಚಿನ ಪೂಜೆ' ಎಂಬುದು ಉತ್ತರ ಕನ್ನಡ ಜಿಲ್ಲೆಯ ಹವಿಕರಲ್ಲಿ ಪ್ರಚಲಿತವಿರುವ ಗೋವಿನ ಹಬ್ಬದ ಪೂಜೆಯ ಒಂದು ಭಾಗ. ಇದರ ಆಚರಣೆಯಾಗಿ ಮನೆ ಜಗಲಿಯಲ್ಲಿ ಗೋವುಗಳ ಗೊರಸಿನ ಮಂಡಲಗಳನ್ನು ಹಾಕಿ, ನೇಗಿಲು ಕತ್ತಿ ಮುಂತಾದ ಕೃಷ್ಯುಪಕರಣಗಳನ್ನಿಟ್ಟು ಪೂಜಿಸುತ್ತಾರೆ. ಇದುವೇ "ಕೊಳಚಿನ ಪೂಜೆ". 'ಕೊಳಚು' ಎಂದರೆ ಸೀಳುಗೊರಸು. 'ಗಡಿಮಟ್ಟು' ಎಂದೂ ಹೇಳುತ್ತಾರೆ.

262–268. ಕಾರ್ತಿಕ ಮಾಸದಲ್ಲಿ 'ಉತ್ಥಾನ ದ್ವಾದಶಿ' ಒಂದು ಶುಭದಿನ. ಅಂದು ತುಲಸೀ ಪೂಜೆಯಿರುತ್ತದೆ. ಸುಪ್ತಾವಸ್ಥೆಯಲ್ಲಿರುವ ವಿಷ್ಣು, ತುಲಸಿ ಇಬ್ಬರನ್ನೂ ಜಾಗೃತಾವಸ್ಥೆಗೆ ತರುವ ಸಂಕೇತವಾಗಿ ಈ ಉಭಯರ ಪೂಜೆಯನ್ನು ಒಟ್ಟಿಗೆ ಮಾಡಲಾಗುತ್ತದೆ. ಅವರಿಬ್ಬರೂ ಜಾಗೃತರಾದರೆ (ಉತ್ಥಾನಗೊಂಡರೆ) ಲೋಕವೇ ಸಮೃದ್ಧವಾಗಿ ಮಂಗಳದ ಮನೆಯಾಗುವುದು, ಸಂಪದ್ಭರಿತವಾಗುವುದು-

ಈ ದೇವೋತ್ಥಾನ ದಿನದ ಸಂಜೆ ತುಲಸೀ–ವಿಷ್ಣು ವಿವಾಹ ಕಾರ್ಯವನ್ನೂ ಹಲವೆಡೆ ಆಚರಿಸುವರು.[17]

ತುಲಸೀ ಪೂಜೆಯೊಂದಿಗೆ ಗಾನ, ನೃತ್ಯ, ಪ್ರದಕ್ಷಿಣೆಯೂ ಪ್ರಚಲಿತವಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಂತಹ ವೇಳೆ ತುಲಸಿ ಹಾಡನ್ನು ಹಾಡುತ್ತಾರೆ. ಬ್ರಾಹ್ಮಣೇತರರಾದ ಕನ್ನಡಿಗರಾದ ಪೂಜಾರಿಗಳು ತುಲಸಿಪೂಜೆ ಮಾಡಿದ ಮೇಲೆ, ಕುಣಿಯುತ್ತ ಹಾಡುವ ಹಾಡು ಪ್ರಚಲಿತವಿದೆ (ನೋಡಿ : ಹಾಡಿನ ಚಿಂತಾಮಣಿ, ಸಂ.: ಟಿ. ಕೇಶವ ಭಟ್ಟ, ಪುಟ 81). ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಿಂದೆ, ಹವಿಕರು ತುಲಸಿ ಪೂಜೆಯ ಸಂದರ್ಭದಲ್ಲಿ 'ನತ್ತಮೆಟ್ಟುವ ಹಾಡು' ಎಂಬುದನ್ನು ಹಾಡಿಕೊಂಡು ಕುಣಿಯುತ್ತಿದ್ದುದಾಗಿ ತಿಳಿದುಬರುತ್ತದೆ. ಈ ಹಾಡನ್ನು ಸಂಪಾದಿಸಿರುವ ಮುಳಿಯ ತಿಮ್ಮಪ್ಪಯ್ಯನವರ ಮಾತುಗಳಿವು—

"ಕಾರ್ತಿಕ ಮಾಸದೊಳಗಿನ ವಿಶಿಷ್ಟ ದಿವಸದ ಪ್ರದೋಷ ಕಾಲದಲ್ಲಿ ತುಲಸೀ ಪೂಜೋತ್ಸವ ನಡೆಯುವುದು ಪದ್ಧತಿ. ಆಗ ಶ್ರುತಿ, ತಾಳ, ಮೃದಂಗಾದಿ ಮೇಳದೊಡನೆ ಆ ವಿಷಯದಲ್ಲಿ ಪಳಗಿದ ಇಬ್ಬರು ಈ ಪದವನ್ನು (ಅಂದರೆ, ನತ್ತ ಮೆಟ್ಟುವ ಹಾಡನ್ನು) ಹಾಡಿಕೊಂಡು ಕುಣಿಯುವುದು ವಾಡಿಕೆ. (ಇದರಲ್ಲಿ) ಪ್ರತಿಯೊಂದು ಹಾಡಿನ (ಅಂದರೆ ಹಾಡಿನ ಸೊಲ್ಲಿನ) ಪೂರ್ವಾರ್ಧವು ರಾಮನು ಶಿವನ ಲೀಲೆಯನ್ನು ಬಣ್ಣಿಸುವುದಾಗಿ ಶಿವಾಧಿಕ್ಯವನ್ನು ಸೂಚಿಸುತ್ತಿದೆ. ಅದರಂತೆ ಉತ್ತರಾರ್ಧವು ವಿಷ್ಣುವಿನ ವೈಶಿಷ್ಟ್ಯವನ್ನು ಬೆಳಗಿಸುತ್ತದೆ. ಕ್ರಮವಾಗಿ ರಾಮ–ಶಿವರ ವೇಷವನ್ನು ಧರಿಸಿದವರು ತುಲಸೀ ದೇವಿಯ ಇದಿರಿನಲ್ಲಿ ಸಿದ್ಧವಾದ ರಂಗಮಂಟಪಕ್ಕೆ ಇಳಿಯುವರು. ಅಲ್ಲಿ ನತ್ತಮೆಟ್ಟುವರು (ನೃತ್ಯ ಮಾಡುವರು). ಈ ಪದ್ಧತಿ ನಮ್ಮ ಹವ್ಯಕ ಬ್ರಾಹ್ಮಣ ಸಮಾಜದೊಳಗೆ ಹಿಂದಿನ ಕಾಲದಲ್ಲಿ ಮನೆ ದಪ್ಪದ ಬಳಕೆಯಲ್ಲಿತ್ತಂತೆ. ನನ್ನ ಬಾಲ್ಯದಲ್ಲಿಯೂ (ಜೀವನಾವಧಿ : 3–3–1988 — 16–1–1950) ಇದರ ಅವಶೇಷ ಅಲ್ಲಲ್ಲಿ ತೋರುತ್ತಿದ್ದರೆ ಈಗ (1943) ಇದು ನಾಮಾವಶೇಷವಾಗಿಬಿಟ್ಟಿದೆ."[18]

ಹವಿಕರು ಮಾಡತಕ್ಕ ಪೂಜೆಗಳು ಹಲವಾರು ದೇವತೆಗಳಿಗೆ ಸಂಬಂಧಿಸುವುದರಿಂದ ವೆಂಕಟೇಶ್ವರ, ಸುಬ್ರಹ್ಮಣ್ಯ, ಸೂರ್ಯನಾರಾಯಣ, ಶೇಷ (ನಾಗರಾಜ) ಮುಂತಾದವರ ಪೂಜೆಯ ಹಾಡುಗಳಿಗೆ ಈ ಗ್ರಂಥದಲ್ಲಿ ಉದಾಹರಣೆಗಳನ್ನು ಕೊಡಲಾಗಿದೆ.

269–271. ಹೊಸತಾಗಿ ಮನೆ ಕಟ್ಟಿಸಿದ ಮೇಲೆ, ಅದನ್ನು ಪ್ರವೇಶಿಸಲು ವೈದಿಕ ಕ್ರಿಯೆಗಳುಂಟು. ಅಂತಹ ಸಂದರ್ಭಕ್ಕೂ ಶೋಭಾನೆಗಳು ಇವೆ. ಹೊಸ ಮನೆಯ 'ಹೊಸ್ತಿಲ ಪೂಜೆ' ಹಾಡು ಈ ಪೂಜೆಯ ವಿಧಿವಿಧಾನಗಳನ್ನು ಒಳಗೊಂಡಿದೆ. ಹೊಸಮನೆ ಒಕ್ಕಲಿನಲ್ಲಿ 'ಹಾಲುಕ್ಕಿಸುವುದು' ಎಂಬ ಕಾರ್ಯವಿದೆ. ಈ ಹಾಡಿನಲ್ಲಿ ಹಾಲಿನ ಹಿರಿಮೆ ವರ್ಣಿತವಾಗಿದೆ.

272–274. ಶುಭಕಾರ್ಯಗಳಲ್ಲಿ ಹೋಮವೂ ಒಂದು. ಉಪನೀತನಾದ ವಟು ಹಾಗೂ ... ಗೃಹಸ್ಥಾಶ್ರಮಿ ಪ್ರತಿನಿತ್ಯವೂ ಆಚರಿಸತಕ್ಕ 'ವೈಶ್ವದೇವ' ಎಂಬುದೂ ... ಬಗೆಯ ಹೋಮವೇ ಸರಿ. ಇದರಲ್ಲಿ ಅಗ್ನಿಯನ್ನು ಕುರಿತು ತನಗೆ ಶ್ರದ್ಧಾ, ಮೇಧಾ, ಪ್ರಜ್ಞಾ, ವಿದ್ಯಾ, ಬುದ್ಧಿ, ಶ್ರೀ, ಬಲ, ಆಯುಷ್ಯ, ತೇಜಸ್ಸು, ಆರೋಗ್ಯ — ಈ ಹತ್ತನ್ನು ಕೊಡುವಂತೆ ಪ್ರಾರ್ಥಿಸಲಾಗುತ್ತದೆ. ಶುಭ ಸಂಸ್ಕಾರಗಳು ಎಲ್ಲವೂ ಅವುಗಳ ಅಂಗವಾಗಿ ಹೋಮವಿರುತ್ತದೆ. ಇದಲ್ಲದೆ, ಗ್ರಹಶಾಂತಿಗಾಗಿ, ಅರಿಷ್ಟಪರಿಹಾರಕ್ಕಾಗಿ ನಡೆಸುವ ನೈಮಿತ್ತಿಕ ಹೋಮಗಳಿರುತ್ತವೆ. ಹೋಮವು ಬಹು ವಿಸ್ತೃತವಾದಾಗ ಯಜ್ಞ ಅಥವಾ 'ಯಾಗ' ಎಂಬ ಹೆಸರನ್ನು ತಾಳುತ್ತದೆ. ಅಂತಹ ಯಾಗ ಅನೇಕ ದಿನ ನಡೆದಾಗ 'ಸತ್ರ' ಎನಿಸುತ್ತದೆ. 'ಯಜ್ಞಾದ್ಭವತಿ ಪರ್ಜನ್ಯಃ' ಅಂದರೆ ಯಜ್ಞ ಮಾಡುವುದರಿಂದ ಮಳೆಯಾಗುತ್ತದೆ—ಎಂಬುದು ಗೀತೋಕ್ತಿ. ಯಜ್ಞದಿಂದ ಮಳೆಯಾಗುವುದು ಹೇಗೆ ? ಯಜ್ಞದಿಂದ ರೋಗ ಪರಿಹಾರ ಕಷ್ಟನಿವಾರಣೆ ಆಗುವುದು ಹೇಗೆ ? ಎಂಬ ವಿಚಾರವಾಗಿ ಚರ್ಚೆಗಳು ಪೂರ್ವಕಾಲದಿಂದಲೂ ನಡೆಯುತ್ತ ಬಂದಿವೆ. ಸ್ವಾಮಿ ದಯಾನಂದ ಸರಸ್ವತಿಯವರು 'ಸತ್ಯಾರ್ಥ ಪ್ರಕಾಶ' ಎಂಬ ತಮ್ಮ ಗ್ರಂಥದಲ್ಲಿ ಇದನ್ನು ವೈಜ್ಞಾನಿಕವಾಗಿ ವಿಶದಪಡಿಸಿರುತ್ತಾರೆ. ಆಯಾ ಯಜ್ಞಕ್ಕೆ ನಿಶ್ಚಿತವಾದ ದ್ರವ್ಯವನ್ನು ಅರ್ಪಿಸುವುದರಿಂದ ಉಂಟಾದ ಹೋಮಗಂಧವು ದಿಕ್ಕುಗಳಿಗೆ ಹರಡಿ, ಅದೆಷ್ಟೋ ರೋಗಾಣುಗಳು ನಾಶವಾಗುವವು. ಯಜ್ಞದಿಂದ ವಾಯುಮಂಡಲ ಬಿಸಿಯೇರುವುದು. ಆಗ ಅಲ್ಲಿಗೆ ಬೇರೆ ಕಡೆಯಿಂದ ತಂಗಾಳಿ ಬೀಸುವುದು. ಅದು ಸಮುದ್ರದ ಮೇಲಿಂದ ಬರುವಾಗ ಮೋಡಗಳನ್ನು ಹೊತ್ತು ತರುವುದು. ಇದರಿಂದ ಮಳೆಯಾಗುವುದು—ಎಂಬುದನ್ನು ಅವರು ವಿವರಿಸಿದ್ದಾರೆ. ಯಜ್ಞದ ಹವಿಸ್ಸಿನಿಂದ ತೃಪ್ತರಾದ ದೇವತೆಗಳು ಮಳೆ ಸುರಿಸುವರು— ಎಂಬುದು ಪೌರಾಣಿಕ ಕಲ್ಪನೆಯಾದರೂ ಅದು ವಿಜ್ಞಾನದ ಸೂತ್ರಕ್ಕೂ ಅನುಗುಣವಾಗಿರುವುದು ಕಂಡುಬರುತ್ತದೆ.

275-280. ಐದನೆಯ ಅಧ್ಯಾಯದಲ್ಲಿ ಆರು ಕಥೆಹಾಡುಗಳಿವೆ. ಇವು ವ್ಯಾಕಥೆಯ ಹಾಡುಗಳು. ಲಘುಕಾವ್ಯದಂತಿವೆ. ಬೇಕಾದಾಗ ಓದಿ, ಹಾಡಿ, ನೀತಿ ತತ್ತ್ವಗಳನ್ನು ಸುಲಭವಾಗಿ ತಿಳಿಯಲು ತಕ್ಕವಾಗಿವೆ. ಗೇಯತೆ ಸಾಹಿತ್ಯಗುಣಗಳಿರುವುದರಿಂದಲೂ ಕೂಡಿ ಕಿವಿಗಳಿಗೂ ಮನಗಳಿಗೂ ಇಂಪನ್ನೂ ತಂಪನ್ನೂ ಪ್ರಬೋಧವನ್ನೂ ನೀಡುವಂಥಾಗಿವೆ.

## ಕೆಲವು ಅನುಕ್ತ ವಿವರಣೆಗಳು

ಶೋಭಾನೆಗಳು ಶುಭಕಾರ್ಯಗಳಿಗೆ ಹೇಗೆ ವ್ಯಾಖ್ಯಾತ್ಮಕವಾಗಿವೆ ಎಂಬುದನ್ನು ದಿಗ್ದರ್ಶಿಸಲಾಯಿತು. ಶುಭಕಾರ್ಯಗಳಿಗೆ ಅಲ್ಲಲ್ಲಿ ಕೆಲವು ಮಟ್ಟಿಗೆ ವಿವರಣೆಯನ್ನು

ನೀಡಲಾಯಿತು. ಹೀಗಿದ್ದರೂ ವಿವರಣೆ ಸಾಲದೆ ಉಳಿದ ಅಂಶಗಳೇ ಹೆಚ್ಚು. ಅಂಥವು ಗಳಲ್ಲಿ ಕೆಲವು ವಿಷಯಗಳಿಗೆ ಉಪಯುಕ್ತವೆನಿಸಬಹುದಾದ ಇನ್ನೂ ಕೆಲವು ವಿವರಣೆ ಗಳನ್ನು ಇಲ್ಲಿ ನೀಡಲಾಗುವುದು—

## 1. ಪುರೋಹಿತ

ವೈದಿಕ ಕ್ರಿಯೆಗಳನ್ನು ಮಂತ್ರಯುಕ್ತವಾಗಿ ಸಾಂಗೋಪಾಂಗವಾಗಿ ನಡೆಸಿ, ಮುಂದಿನ ಹಿತವನ್ನು (ಪುರಸ್—ಹಿತ) ಮಾಡುವವನೇ ಪುರೋಹಿತನು. ಮಹಾ ಭಾರತದಲ್ಲಿ ಪುರೋಹಿತನ ಗುಣ ಲಕ್ಷಣವನ್ನು ಹೀಗೆ ಹೇಳಿದೆ—

ಅದ್ರೋಹೋಽನಭಿಮಾನಶ್ಚ ಹ್ರೀಸ್ತಿತಿಕ್ಷಾ ದಮಃ ಶಮಃ
ಯಸ್ಮಿನ್ನೇತಾನಿ ದೃಶ್ಯಂತೇ ಸ ಪುರೋಹಿತ ಉಚ್ಯತೇ[19]

ಅಂದರೆ—ಯಾರಿಗೂ ದ್ರೋಹ ಮಾಡದವನು, ಮಾನಗರ್ವವಿಲ್ಲದವನು, ಹೇಯ ಕಾರ್ಯಕ್ಕೆ ನಾಚುವವನು, ಸಹನೆಯುಳ್ಳವನು, ಇಂದ್ರಿಯನಿಗ್ರಹ ಮನೋ ನಿಗ್ರಹವುಳ್ಳ ವನು ಪುರೋಹಿತನು—ಎಂದು ಅಭಿಪ್ರಾಯ.

## 2. ಅತಿಥಿ

ತಾನು ಬರುವುದಕ್ಕೆ ಪೂರ್ವನಿಶ್ಚಿತವಾದ ತಿಥಿ(ದಿನ, ವಾರ) ಸೂಚನೆಯೇನೂ ಇಲ್ಲದೆ ಆಗಮಿಸುವ ಮಹಾತ್ಮ, ಬ್ರಹ್ಮಜ್ಞಾನಿಯೇ 'ಅತಿಥಿ' ಎಂದು ಮನುವಿನ ಹೇಳಿಕೆ. ಅವನು ಬಂದರೆ, ಹೆಚ್ಚೆಂದರೆ ಒಂದು ರಾತ್ರಿ ಮಾತ್ರ ನಿಂತಾನು—

ಏಕರಾತ್ರಂ ಹಿ ನಿವಸನ್ ಬ್ರಾಹ್ಮಣೋ ಹ್ಯತಿಥಿಃ ಸ್ಮೃತಃ
ಅನಿತ್ಯಂ ಹಿ ಸ್ಥಿತೋ ಯಸ್ಮಾತ್ ತಸ್ಮಾದತಿಥಿರುಚ್ಯತೇ

ಅತಿಥಿಯಲ್ಲದವನು, ಅಂದರೆ ಕರೆದುದರಿಂದ ಬಂದವನು 'ಅಭ್ಯಾಗತ'ನು. ಅತಿಥಿ ಯನ್ನು ದೇವರೆಂದು ಕಾಣುವುದು ನಮ್ಮ ಧರ್ಮದ ಶಿಷ್ಟಸಂಪ್ರದಾಯ. ಭಾಗವತದಲ್ಲಿ ಹೀಗೆ ಹೇಳಿದೆ—

ಗೃಹೇಷು ಯೇಷ್ವತಿಥಯೋ ನಾರ್ಚಿತಾಃ ಸಲಿಲೈರಪಿ
ಯದಿ ನಿರ್ಯಾಂತಿ ತೇ ನೂನಂ ಫೇರುರಾಜ ಗೃಹೋಪಮಾಃ[20]

ಅಂದರೆ—ಯಾವ ಮನೆಗಳಲ್ಲಿ ಅತಿಥಿಗಳಿಗೆ ಒಂದಿಷ್ಟು ಕುಡಿಯುವ ನೀರನ್ನಾದರೂ ಕೊಟ್ಟು ಗೌರವಿಸುವುದಿಲ್ಲವೋ ಅತಿಥಿಗಳು ಬಂದ ಹಾಗೆಯೇ ಹಿಂದೆರಳುವರೋ

ಅಂತಹ ಮನೆಗಳು ಬಾವಲಿಗಳೊಡೆಯುವ ಮನೆಗಳಷ್ಟು ಹೋಲುತ್ತವೆ—ಎಂದಿಲ್ಲಿ ಅಭಿಪ್ರಾಯ.

## 3. ಆರ್ಯ

'ಆರ್ಯ' ಎಂಬುದು ಯಾವುದೋ ಒಂದು ಮಾನವ ವರ್ಗವನ್ನೀದರ ಸೂಚಕವಲ್ಲ. ಸುಭಾಷಿತದಲ್ಲಿ ಬಂದಿರುವ ಆರ್ಯ-ಲಕ್ಷಣವಿದು—

ಶಾಂತಃ ತಿತಿಕ್ಷುಃ ದಾಂತಶ್ಚ ಸತ್ಯವಾದೀ ಜಿತೇಂದ್ರಿಯಃ
ದಾತಾ ದಯಾಲುಃ ನಮ್ರಶ್ಚ ಆರ್ಯಃ ಸ್ಯಾದಷ್ಟಭಿರ್ಗುಣೈಃ

ಅಂದರೆ—ಶಾಂತ ಸ್ವಭಾವದವನು, ಸಹನಶೀಲನು, ಮನಸ್ಸಂಯಮಿ, ಸತ್ಯ ಹೇಳುವವನು, ಜಿತೇಂದ್ರಿಯನು, ದಾನಶೀಲನು, ಕರುಣಾಳು, ವಿನಯವಂತನು—ಹೀಗೆ ಎಂಟು ಬಗೆಯ ಸದ್ಗುಣವುಳ್ಳವನು ಆರ್ಯನು. ಮಹಾಭಾರತದಲ್ಲಿ ಆರ್ಯನ ಲಕ್ಷಣ ಹೀಗಿದೆ—

ಕರ್ತವ್ಯಮಾಚರನ್ ಕಾರ್ಯಮಕರ್ತವ್ಯಮನಾಚರನ್
ತಿಷ್ಠತಿ ಪ್ರಕೃತಾಚಾರೇ ಸ ಆರ್ಯ ಇತಿ ವೈ ಸ್ಮೃತಃ
(ಭೀಷ್ಮಪರ್ವ, ಸಂ. 12, ಪುಟ. 191)

ಮಾಡಬೇಕಾದುದನ್ನು ಮಾಡುವವನು, ಮಾಡಬಾರದುದನ್ನು ಮಾಡದವನು, ತನಗೆ ಪ್ರಕೃತವಾದ ಆಚರಣೆಯಲ್ಲಿ ಪ್ರವರ್ತಿಸುವವನು ಆರ್ಯನು.

## 4. ಪುತ್ರ

ಪುತ್ರ ಎಂದರೆ 'ಮಗ' ಎಂದು ಸುಲಭದಲ್ಲಿ ಅರ್ಥ ಹೇಳುತ್ತೇವೆ. ಪುತ್ ಎಂಬ ನರಕದಿಂದ ತಂದೆಯನ್ನು ಉದ್ಧರಿಸುವವನೇ ಪುತ್ರನು ಎಂದೂ ಶಬ್ದದ ವ್ಯುತ್ಪತ್ತಿಯನ್ನು ಹೇಳಲಾಗಿದೆ. ಸುಭಾಷಿತವೊಂದು ಪುತ್ರನ ಲಕ್ಷಣವನ್ನು ಹೀಗೆ ಹೇಳಿದೆ—

ಧರ್ಮಶಾಸ್ತ್ರಾರ್ಥ ತತ್ತ್ವಜ್ಞೋ ನೀತಿಜ್ಞೋಽಖಿಲ ತೋಷಕೃತ್
ಪಿತೄನುದ್ಧರತೇ ಯಸ್ತು ಪುತ್ರವಾನ್ ಪುತ್ರ ಉಚ್ಯತೇ

—ಧರ್ಮಶಾಸ್ತ್ರಗಳ ಅರ್ಥವನ್ನೂ ತತ್ತ್ವವನ್ನೂ ತಿಳಿದವನು, ನೀತಿಯನ್ನರಿತವನು, ಎಲ್ಲರಿಗೂ ಸಂತೋಷವುಂಟು ಮಾಡುವವನು, ತಂದೆಯನ್ನು, ಪಿತೃಗಳನ್ನು ಉದ್ಧಾರ ಮಾಡುವವನು ಮಾತ್ರವಲ್ಲದೆ ಪುತ್ರಸಂಪತ್ತುಳ್ಳವನು ಪುತ್ರನು.

## 5. ವಿವಾಹಯೋಗ್ಯ ಕನ್ಯೆ

ಮೃದ್ವಂಗೀ ಗೂಢಗುಲ್ಫಾ ಸಮಕುಚನಯನಾ ವೃತ್ತನಾಭ್ಯೂರುವಕ್ತ್ರಾ
ಕೃಷ್ಣಭ್ರೂ ನೇತ್ರಕೇಶಾ ಸ್ಥಿರತರ ಸುರದಾ ದೀರ್ಘನೇತ್ರಾ ವಿಲೋಮಾ
ಮೃದ್ವಾಣೀ ಸ್ವಲ್ಪಭಾಲಾ ಲಘುಲಲಿತಗಮಾ ಪಾಣಿಪಾದೋಷ್ಠ ರಕ್ತಾ
ಸಾ ಕನ್ಯೋದ್ವಾಹಿತಾ ಚೇತ್ ಸುತ ಧನ ವಿಪುಲಾನ್ನಾಯುರಾರೋಗ್ಯದಾ ಸ್ಯಾತ್
(ಪ್ರಯೋಗ ಪಾರಿಜಾತ)

ಮೆದುವಾದ ಮೈಯುಳ್ಳವಳು, ಕಾಲಹರಡುಗಂಟು ಕಾಣದಂತಿರುವವಳು, ಕುಚ ನಯನಗಳು ಸೆಟ್ಟಗಿರುವವಳು, ದುಂಡಗಿನ ಹೊಕ್ಕಳು ತೊಡೆ ಮೊಗಗಳುಳ್ಳವಳು, ಕಪ್ಪಾದ ಹುಬ್ಬುಗಳಿಂದಲೂ, ಕಣ್ಣೆವೆನವಿರುಗಳಿಂದಲೂ ಕೂಡಿದವಳು, ಅಲುಗದ ಮತ್ತು ಇಂಪಾದ ದನಿಯುಳ್ಳವಳು, ನೀಳವಾದ ಕಣ್ಣುಳ್ಳವಳು, ಕಾಣಿಸುವಷ್ಟು ರೋಮವಿಲ್ಲದವಳು, ಮೃದುವಾಗಿ ಮಾತಾಡುವವಳು, ಚಿಕ್ಕ ಹಣೆಯುಳ್ಳವಳು, ಹಗುರವಾಗಿ ಚೆಲುವಾಗಿ ನಡೆಯುವವಳು, ಕೈ–ಅಡಿ–ತುಟಿಗಳು ಕೆಂಪಾಗಿರುವವಳು— ಅದಂತಹ ಕನ್ಯೆಯನ್ನು ಮದುವೆಯಾದರೆ ಆಕೆ, ಸಂತಾನವನ್ನೂ ಧನವನ್ನೂ ಅತಿಶಯವಾದ ಅನ್ನ ಆಯುಷ್ಯ ಆರೋಗ್ಯಗಳನ್ನೂ ಕೊಡುವಂಥವಳಾಗುತ್ತಾಳೆ. ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ಹೀಗೆ ಹೇಳಿದೆ—

ಅವಿಪ್ಲುತ ಬ್ರಹ್ಮಚರ್ಯೋ ಲಕ್ಷಣ್ಯಾಂ ಸ್ತ್ರಿಯಮುದ್ವಹೇತ್
ಅನನ್ಯಪೂರ್ವಿಕಾಂ ಕಾಂತಾಮಸಪಿಂಡಾಂ ಯವೀಯಸೀಂ (ಪುಟ 15)

ಅಸ್ಖಲಿತ ಬ್ರಹ್ಮಚರ್ಯವುಳ್ಳ ವರನು ಬಾಹ್ಯಾಂತರಗಳಲ್ಲಿ ಲಕ್ಷಣವುಳ್ಳವಳನ್ನು ವರಿಸಬೇಕು. ಆಕೆ ಪೂರ್ವದಲ್ಲಿ ಬೇರೆಯವನ ಪತ್ನಿಯಾಗಿ ಇದ್ದಿರಬಾರದು; ತನಗೆ ಮನೋಹರೆಯಾಗಿ ಮನೋಜ್ಞೆಯಾಗಿ ಕಾಣಿಸಿರಬೇಕು. ಸಪಿಂಡ (ಸಗೋತ್ರ) ದವಳಾಗಿರಬಾರದು. ವಯಸ್ಸು ದೇಹಪ್ರಮಾಣಗಳೆರಡರಲ್ಲಿಯೂ ಚಿಕ್ಕವಳಾಗಿರಬೇಕು. ಇಂಥವಳನ್ನು ಗೃಹ್ಯಸೂತ್ರದಲ್ಲಿ ಹೇಳಿದ ರೀತಿಯಲ್ಲಿ ಮದುವೆಯಾಗಬೇಕೆಂದು ಸ್ಮೃತಿಯಲ್ಲಿ ಹೇಳಿದೆ.

## 6. ಯೋಗ್ಯನಾದ ವರ

ಯೋಗ್ಯಳಾದ ಕನ್ಯೆಗೆ ವರಾನ್ವೇಷಣೆಯಲ್ಲಿ ಲಕ್ಷಿಸತಕ್ಕ ಅಂಶಗಳನ್ನು ಸುಭಾಷಿತದಲ್ಲಿ ಹೀಗೆ ಹೇಳಿದೆ—

ಕುಲಂ ಚ ಶೀಲಂ ಚ ವಯಶ್ಚ ರೂಪಂ
ವಿದ್ಯಾಂ ಚ ವಿತ್ತಂ ಚ ಸನಾಥತಾಂ ಚ
ಏತಾನ್ ಗುಣಾನ್ ಸಪ್ತ ಪರೀಕ್ಷ್ಯ ದೇಯಾ
ಕನ್ಯಾ ಬುಧೈಃ ಶೇಷಮಚಿಂತನೀಯಂ

ಅಂದರೆ, ಕನ್ಯೆಯನ್ನು ಮದುವೆ ಮಾಡಿಕೊಡುವಾಗ ವರನ ಕುಲ, ಶೀಲ, ವಯಸ್ಸು, ರೂಪ, ವಿದ್ಯೆ, ಹಣ, ಗಂಡನಾಗುವ ಅರ್ಹತೆ (ಬಂಧುಗಳುಳ್ಳವನಾಗಿರುವುದು)—ಈ ಏಳು ವಿಷಯಗಳನ್ನು ಪರೀಕ್ಷಿಸಿಯೇ ಕೊಡತಕ್ಕದ್ದು. ಉಳಿದುದನ್ನು ಯೋಚಿಸಬಾರದು—ಎಂದು ಹೇಳಿದೆ.

## 7. ಹೆಂಡತಿಯಲ್ಲಿರಬೇಕಾದ ಗುಣ ವಿಚಾರ

ಕಾರ್ಯೇಷು ಮಂತ್ರೀ ಕರಣೇಷು ದಾಸೀ
ಭೋಜ್ಯೇಷು ಮಾತಾ ಶಯನೇಷು ರಂಭಾ
ಧರ್ಮೇsನುಕೂಲಾ ಕ್ಷಮಯಾ ಧರಿತ್ರೀ
ಭಾರ್ಯಾಚ ಷಾಡ್ಗುಣ್ಯವತೀಹ ದುರ್ಲಭಾ

ಅಂದರೆ ಮಾಡತಕ್ಕದನ್ನು ಯೋಚಿಸುವ ವಿಷಯದಲ್ಲಿ (ಮಂತ್ರಾಲೋಚನೆಯ ಕಾರ್ಯದಲ್ಲಿ) ಮಂತ್ರಿಯಂತೆ, ಕೆಲಸ ಮಾಡುವುದರಲ್ಲಿ ಸೇವಕಿಯಂತೆ, ಭೋಜನದ ವ್ಯವಸ್ಥೆಯಲ್ಲಿ ತಾಯಿಯಂತೆ, ಮಲಗುವ ಏರ್ಪಾಡಿನಲ್ಲಿ ರಂಭೆಯಂತೆ, ಧರ್ಮಾಚರಣೆಗೆ ಅನುಕೂಲೆಯಾಗಿ, ಕ್ಷಮಾ (ಸಹನಾ) ಗುಣದಲ್ಲಿ ಭೂದೇವಿಯಂತೆ—ಈ ಆರು ಬಗೆಯ ಗುಣಗಳಿಂದೊಪ್ಪುವ ಹೆಂಡತಿ ದೊರೆಯುವುದು ತೀರಾ ವಿರಳ—ಎಂದು ಅಭಿಪ್ರಾಯ. ಇನ್ನೊಂದು ಸುಭಾಷಿತ ಹೀಗಿದೆ—

ಯಸ್ಯ ಭಾರ್ಯಾ ಶುಚಿರ್ದಕ್ಷಾ ಭರ್ತಾರಮನುಗಾಮಿನೀ
ನಿತ್ಯಂ ಮಧುರವಕ್ತ್ರೀ ಚ ಸಾ ರಮಾ ನ ರಮಾ ರಮಾ

ಅಂದರೆ ಯಾವನ ಹೆಂಡತಿ ಶುಚಿಯೂ ಸಮರ್ಥಳೂ ಗಂಡನನ್ನು ಅನುಸರಿಸುವವಳೂ ನಿತ್ಯವೂ ಇನಿದಾಗಿ ಮಾತಾಡುವವಳೂ ಆಗಿರುವಳೋ ಆಕೆಯೇ ಆ ಮನೆಗೆ ಲಕ್ಷ್ಮಿ. ಹೊರತು, ಲಕ್ಷ್ಮಿಯು ಲಕ್ಷ್ಮಿಯೇ ಅಲ್ಲ.

## 8. ಸ್ನಾನ ವಿಚಾರ

ನಿತ್ಯನೈಮಿತ್ತಿಕಾದಿ ಯಾವ ವೈದಿಕ ಕಾರ್ಯಕ್ಕೂ ಮೊದಲಿನದು ಸ್ನಾನ. ನಿತ್ಯಸ್ನಾನ ಎಲ್ಲರೂ ಆಚರಿಸಬೇಕಾದುದು. ಸ್ನಾನದಿಂದಾಗುವ ಹತ್ತು ಪ್ರಯೋಜನಗಳನ್ನು ಯಾಜ್ಞವಲ್ಕ್ಯಸ್ಮೃತಿಯಲ್ಲಿ ಹೀಗೆ ಹೇಳಿದೆ—

ಗುಣಾ ದಶ ಸ್ನಾನಪರಸ್ಯ ಸಾಧೋಃ
ರೂಪಂ ಚ ತೇಜಶ್ಚ ಬಲಂ ಚ ಶೌಚಂ
ಆಯುಷ್ಯಮಾರೋಗ್ಯಮಲೋಲುಪತ್ವಂ
ದುಃಸ್ವಪ್ನನಾಶಶ್ಚ ತಪಶ್ಚ ಮೇಧಾ

ಅಂದರೆ, ಸತ್ಪುರುಷನಿಗೆ ಸ್ನಾನದಿಂದ ಒಳ್ಳೆಯ ರೂಪ, ತೇಜಸ್ಸು, ಬಲ, ಆಯುಸ್ಸು, ಶುಚಿತ್ವ, ಆರೋಗ್ಯ, ಸ್ವಾಸ್ಥ್ಯಮತಿ, ಕೆಟ್ಟ ಕನಸಾಗದಿರುವಿಕೆ, ತಪಶ್ಶಕ್ತಿ, ಬುದ್ಧಿಶಕ್ತಿ ಗಳಾಗುವುವು. ಸ್ನಾನವು ಮಾನಸಿಕ, ಬಾಹ್ಯ—ಎಂದು ಎರಡು ವಿಧ. ಮಾನಸಿಕ ಸ್ನಾನ ವೆಂಬುದು ಧ್ಯಾನಮಯ (ಭಗವಚ್ಚಿಂತನ, ವೇದಾಂತ ಶ್ರವಣ, ಸದ್ಗ್ರಂಥ ಪಠನ— ಇತ್ಯಾದಿ), ಬೋಧಮಯ (ಶ್ರವಣ, ಮನನ, ವ್ರತೋಪವಾಸಾದಿ), ಯೋಗಮಯ (ಯೋಗಕ್ರಿಯೆಗಳಿಂದ ಶುಚಿಯಾಗುವುದು), ತಪೋಮಯ (ಗಾಯತ್ರ್ಯಾದಿ ಮಂತ್ರೋಪಾಸನೆ), ವೈರಾಗ್ಯಮಯ (ಭೋಗಲಾಲಸೆಯಿಂದ ದೂರವಿರುವುದು)— ಹೀಗೆ ಐದು ವಿಧ. ಬಾಹ್ಯಸ್ನಾನವೂ ಐದು ವಿಧ—ಗೋಧೂಳಿಕ, ಮಂತ್ರ, ವಾರುಣ, ಅಮೃತ, ವಿಭೂತಿ ಎಂದು.

ಅಸ್ನಾತಸ್ತು ಪುಮಾನ್ ನಾರ್ಹೋ ಜಪಾಗ್ನಿಹವನಾದಿಷು
ಪ್ರಾತಃ ಸ್ನಾನಂ ತದರ್ಥಂತು ನಿತ್ಯಸ್ನಾನಂ ಪ್ರಕೀರ್ತಿತಂ

ಶರೀರಕ್ಕೆ ಸ್ನಾನ ಮಾಡದೆ ಜಪ ಹೋಮಾದಿಗಳನ್ನು ಮಾಡಬಾರದು. ಆದುದರಿಂದ ಆ ತರಹ ಕ್ರಿಯೆಗಳಿಗೆ ಅರ್ಹತೆಯನ್ನುಂಟುಮಾಡುವ ಪ್ರಾತಃಸ್ನಾನವು ನಿತ್ಯಸ್ನಾನ ವೆನಿಸುತ್ತದೆ. ಅಶುಚಿ ವಸ್ತುವನ್ನು ಅಥವಾ ವ್ಯಕ್ತಿಯನ್ನು ಮುಟ್ಟಿದ್ದರಿಂದ ಆದ ಮಾಲಿನ್ಯ ಪರಿಹಾರಕ್ಕಾಗಿ ಮಾಡುವ ಸ್ನಾನವು ನೈಮಿತ್ತಿಕವಾಗಿರುತ್ತದೆ. ಎಣ್ಣೆ ಹಚ್ಚಿ ಮಾಡುವ ಸ್ನಾನ 'ಅಭ್ಯಂಗಸ್ನಾನ'. ಇದನ್ನು 'ಮಲಾಪಕರ್ಷಣ ಸ್ನಾನ'ವೆಂದೂ ಹೇಳುವರು. ಸರೋವರ, ನದಿ, ತೀರ್ಥಜಲಗಳಲ್ಲಿ ಮಾಡುವ ಸ್ನಾನವನ್ನು 'ಕ್ರಿಯಾ ಸ್ನಾನ'ವೆನ್ನುವರು. ಪುಣ್ಯತಿಥಿಗಳಲ್ಲಿ ಜೋಯಿಸರ ನಿರ್ದೇಶದಂತೆ ನಡೆಸುವಂತಹದು 'ಕಾಮ್ಯಸ್ನಾನ'ವಾಗಿರುತ್ತದೆ. ಸ್ನಾನ ಪ್ರಾರಂಭದಲ್ಲಿ ತೀರ್ಥ ಪ್ರಾರ್ಥನೆಯಿರುತ್ತದೆ. ಪುಷ್ಕರಾದಿ ತೀರ್ಥಗಳೂ ಗಂಗಾದಿ ಪವಿತ್ರ ನದಿಗಳೂ ನನ್ನ ಈ ಸ್ನಾನ ಜಲದಲ್ಲಿ ಸೇರಿರಲಿ—ಎಂದು ಪ್ರಾರ್ಥಿಸತಕ್ಕದು.

## ಸ್ನಾನ ಮಾಡಬಾರದ ಸಂದರ್ಭಗಳಿವು

ನ ಸ್ನಾನಮಾಚರೇತ್ ಭುಕ್ತ್ವಾ ನಾತುರೋ ನ ಮಹಾನಿಶಿ
ನ ವಾಸೋಭಿಸ್ಸಹಾಜಸ್ರಂ ನಾ ವಿಜ್ಞಾತೇ ಜಲಾಶಯೇ

ಉಂಟಾದ ಮೇಲೆ, ರೋಗಿಯಾದಾಗ, ಕಗ್ಗತ್ತಲೆಯಲ್ಲಿ, ಹೆಚ್ಚು ಬಟ್ಟೆ ಬರೆ ಧರಿಸಿಕೊಂಡಿದ್ದಾಗ, ಗೊತ್ತಿಲ್ಲದ ಜಲಾಶಯದಲ್ಲಿ—ಸ್ನಾನ ಮಾಡಬಾರದೆಂದು ಹೇಳಲಾಗಿದೆ.

## ಗೌಣ (ಅಮುಖ್ಯ) ಸ್ನಾನಗಳು ಏಳುವಿಧವೆಂದು ಹೇಳಲಾಗಿದೆ

ಮಾಂತ್ರಂ ಭೌಮಂ ತಥಾಗ್ನೇಯಂ ವಾಯವ್ಯಂ ದಿವ್ಯಮೇವ ಚ
ಕಾಪಿಲಂ ಮಾನಸಂ ಚೈವ ಸಪ್ತಸ್ನಾನಾನ್ಯನುಕ್ರಮಾತ್ (ಸತ್ಕರ್ಮ ಪ್ರಕಾಶ)

ಅಸ್ವಾಸ್ಥ್ಯದಿಂದ, ದೇಶಕಾಲ ಪರಿಸ್ಥಿತಿಯಿಂದ ಮುಖ್ಯಸ್ನಾನ ಅಸಾಧ್ಯವಾದಾಗ ಗೌಣ ಸ್ನಾನಗಳನ್ನಾಚರಿಸಬಹುದು.

(ಮಾಂತ್ರಂ—'ಆಪೋಹಿಷ್ಠಾ' ಇತ್ಯಾದಿ ಮಂತ್ರದಿಂದ ತಲೆಗೆ ನೀರು ತಳಿಯುವುದು. ಭೌಮ—ಮೃತ್ತಿಕಾ ಸ್ನಾನ. ಆಗ್ನೇಯ—ಭಸ್ಮಲೇಪನ. ವಾಯವ್ಯ—ಗಾಳಿಗೆ ಮೈಯೊಡ್ಡುವುದು. ದಿವ್ಯ—ಆತಪಸ್ನಾನ. ಕಾಪಿಲ—ಬಟ್ಟೆಯನ್ನು ಒದ್ದೆಮಾಡಿ ಮೈಯನ್ನೊರಸುವುದು. ಮಾನಸ—ತತ್ವಚಿಂತನೆ).

## 9. ಆಚಮನ

ಆಚಮನವೆಂದರೆ (ಆಚಮ್ಯತೇ ಅಂಭಃ ಅತ್ರ) ಬಲದ ಅಂಗೈಯ ಗುಳಿಗೆ ಸಕ್ಕಣ (ಉದ್ಧರಣೆ) ದಿಂದ ನೀರೆರೆದು ಅದನ್ನು ಶಬ್ದ ಮಾಡದೆ ಕೆಳದುಟಿಯಿಂದ ಹೀರುವುದು. ಹೀಗೆ ಮಾಡಿದರೆ ಒಂದು ಆಚಮನವಾಯಿತು. ಮೂರು ಬಾರಿ ಸ್ಮೃತಿ ಗ್ರಂಥಗಳಲ್ಲಿ ಹೇಳಿರುವಂತೆ, ಬಲ ಅಂಗೈಯ ಮಧ್ಯಭಾಗದಿಂದ ಹೆಬ್ಬೆರಳಿನ ತುದಿಯನ್ನು ನಡುಬೆರಲ ಒಂಬದಿಯಲ್ಲಿ ನಡುಗಂಟಿಗೆ ಸೇರಿಸಿ ಗುಳಿ ಮಾಡಿದಾಗ ಅದು ಗೋಕರ್ಣಾಕೃತಿಯ ಹಸ್ತವಾಗುವುದು. ಇದರಲ್ಲಿ ಉದ್ದಿನ ಕಾಳು ಮುಳುಗುವ ಪ್ರಮಾಣದ ಶುದ್ಧ ಜಲವನ್ನು ಆಚಮನ ಮಾಡಬೇಕು—ಎಂದು ಶಾಸ್ತ್ರವಿಧಿಯಿದೆ. ಆಚಮನ ಮಾಡುವವನ ಮುಖ ಪೂರ್ವಕ್ಕೆ, ಇಲ್ಲವೇ ಉತ್ತರಕ್ಕಿರಬೇಕು. ಬ್ರಹ್ಮತೀರ್ಥದಿಂದ ಆಚಮನ ಮಾಡಬೇಕು. ಬ್ರಹ್ಮತೀರ್ಥವೆಂದರೆ, ಬಲಗೈಯ ಹೆಬ್ಬೆರಲು ತೋರುಬೆರಲುಗಳ ಮೂಲ.

ಆಚಮನ ಜಲವು ಶುದ್ಧ ಜಲವಾಗಿರಬೇಕಲ್ಲದೆ, ಸುಗಂಧಯುಕ್ತವಾಗಿರಬಾರದು. ಬಿಸಿ ನೀರಾಗಿರಬಾರದು, ಇತರರು ಆಚಮನ ಮಾಡಿದ ನೀರಾಗಿಯೂ ಇರಬಾರದೆಂಬುದು ನಿಯಮ. ಆಚಮನದ ನಿಯಮವಿದು—

ಭೋಜನೇ ಹವನೇ ದಾನೇ ಉಪಹಾರೇ ಪರಿಗ್ರಹೇ
ಸಂಧ್ಯಾತ್ರಯೇ ಚ ದಾನೇ ಚ ಪೂರ್ವಂ ಪಶ್ಚಾತ್ ದ್ವಿರಾಚಮೇತ್[21]

ಅಂದರೆ—ಊಟ, ಹೋಮ, ದಾನ, ಉಪಾಹಾರ, ದಾನಸ್ವೀಕಾರ, ತ್ರಿಕಾಲ ಸಂಧ್ಯಾವಂದನೆ, ಶುದ್ಧೀಕರಣ—ಇವನ್ನು ಮಾಡುವ ಮೊದಲು ಮತ್ತೆಯೂ ಆಚಮನ ಮಾಡಬೇಕು. ಈ ದೇಹದಲ್ಲಿರುವ ವಾತ, ಪಿತ್ಥ, ಶ್ಲೇಷ್ಮ ಎಂಬಿವು ಸಮಧಾತು ಸ್ಥಿತಿಯನ್ನು ಗಳಿಸಲಿ—ಎಂಬ ಭಾವನೆ ಈ ಆಚಮನದಲ್ಲಿ ಅಡಗಿದೆ. ಆಚಮನ ಮಾಡೊಡನೆ ಅಂಗಸ್ಪರ್ಶವೂ ಆಚಮನಕ್ರಿಯೆಯ ಅಂಗವಾಗಿರುತ್ತದೆ.

## 10. ಪ್ರಾಣಾಯಾಮ

ಸಂಧ್ಯಾವಂದನೆಯಲ್ಲಿಯೂ ಇತರ ವೈದಿಕ ಕ್ರಿಯೆಗಳ ಸಂಕಲ್ಪದಲ್ಲಿಯೂ ಪ್ರಾಣಾಯಾಮ ಕ್ರಿಯೆಯಿರುತ್ತದೆ. ಮನುಷ್ಯನ ಜೀವನಾಧಾರವಾಗಿರುವ ಉಸಿರಾಟದ ವೇಗವನ್ನು ಪ್ರಯತ್ನದಿಂದ ನಿಯಮಿಸುವ ಕ್ರಿಯೆ ಪ್ರಾಣಾಯಾಮವೆನಿಸುವುದು. ಇದರಲ್ಲಿ ನಾಲ್ಕು ಭಾಗಗಳಿವೆ—ಉಸಿರನ್ನು ಮೂಗಿನ ಮೂಲಕ ಒಳಗೆ ತುಂಬುವುದು 'ಪೂರಕ'. ಅದನ್ನು ಸ್ವಲ್ಪ ಹೊತ್ತು ಅಲ್ಲಿಯೇ ತಡೆದುಕೊಳ್ಳುವುದು 'ಅಂತಃ ಕುಂಭಕ'. ಅನಂತರ ಅದನ್ನು ಕ್ರಮದಲ್ಲಿ ಹೊರಕ್ಕೆ ಬಿಡುವುದು 'ರೇಚಕ'. ಮತ್ತೆ ಅದನ್ನು ಸ್ವಲ್ಪ ಹೊತ್ತು ಹೊರಗೆಯೇ ನಿಲ್ಲಿಸುವುದು 'ಬಹಿಃ ಕುಂಭಕ'. ಪ್ರಾಣಾಯಾಮದ ಕ್ರಮ ವಿವರವು ಯೋಗಶಾಸ್ತ್ರಕ್ಕೆ ಸಂಬಂಧಿಸಿದುದು. ಪ್ರಾಣಾಯಾಮ ವಿಧಾನವನ್ನು ಯಾಜ್ಞವಲ್ಕ್ಯಸ್ಮೃತಿ ಹೀಗೆ ಸ್ಪಷ್ಟಪಡಿಸಿದೆ—

ಗಾಯತ್ರೀಂ ಶಿರಸಾ ಸಾರ್ಧಂ ಜಪೇದ್ ವ್ಯಾಹೃತಿ ಪೂರ್ವಕಾಂ
ಪ್ರತಿ ಪ್ರಣವ ಸಂಯುಕ್ತಾಂ ತ್ರಿತಯಂ ಪ್ರಾಣಸಂಯಮಃ[22]

## 11. ಸಂಕಲ್ಪ

ಯಾವ ಕಾರ್ಯವಾಗಬೇಕಾದರೂ ಸಂಕಲ್ಪವೇ ಮೊದಲು. ವೈದಿಕ ಕಾರ್ಯಕ್ಕೆ ಸಂಕಲ್ಪ ಅನಿವಾರ್ಯ. ಕೈಗೊಂಡ ಕಾರ್ಯವನ್ನು ಸಾಂಗವಾಗಿ ಪೂರ್ಣಗೊಳಿಸುವ ನಿಶ್ಚಯದ ಸೂಚಕವದು. ಸಂಕಲ್ಪದೊಂದಿಗೆ ಕಲ್ಪ, ಮನ್ವಂತರ, ಯುಗ, ಕ್ಷೇತ್ರ ನಿರ್ದೇಶನಗಳಿರುತ್ತವೆ. ಸಂವತ್ಸರ, ಮಾಸ, ತಿಥಿ, ವಾರಗಳನ್ನು ಹೇಳಿ, ಇಂತಿಂತಹ ಕಾರ್ಯವನ್ನು ಇಂತಿಂತಹ ಉದ್ದೇಶದಿಂದ ಮಾಡುತ್ತೇನೆ—ಎಂಬುದಾಗಿ ಹೇಳುವ ಕಾರ್ಯ ನಿರ್ಧಾರವೇ ಸಂಕಲ್ಪ. ಸಂಕಲ್ಪವಿಲ್ಲದ ಪುಣ್ಯಕಾರ್ಯ ಫಲಕಾರಿಯಲ್ಲವೆಂದು ಹೇಳಲಾಗಿದೆ—

## 12. ಜಪ

ಜಪಿಸುವುದು ಅರ್ಥಾತ್ ಮಂತ್ರಾಕ್ಷರಗಳನ್ನು ಮತ್ತೆ ಮತ್ತೆ ಉಚ್ಚಾರಣೆ ಮಾಡುವುದು 'ಜಪ' ವೆನಿಸುವುದು. ನಿತ್ಯಸಂಧ್ಯೆಯಲ್ಲಿ ಗಾಯತ್ರಿ, ಅಷ್ಟಾಕ್ಷರಿ ಪಂಚಾಕ್ಷರಿ ಮಂತ್ರಜಪಗಳಿರುತ್ತವೆ. ಬೇರೆ ಸಂದರ್ಭಗಳಲ್ಲಿ ನಾಮಜಪಗಳೂ ಇರುತ್ತವೆ. ಉದಾಹರಣೆ—ರಾಮನಾಮ ಜಪ: ಜಪವು 'ಮಾನಸ' (ಮನಸ್ಸಿನೊಳಗೆ ಮಾಡುವಂಥದು), 'ಉಪಾಂಶು' (ನಿಶ್ಶಬ್ದವಾಗಿ ಮಂತ್ರವನ್ನು ಉಚ್ಚರಿಸುವುದು) ಮತ್ತು 'ವಾಚಿಕ' (ಸ್ಪಷ್ಟೋಚ್ಚಾರಣೆಯ ಧ್ವನಿಯಿಂದ ಕೂಡಿದುದು)—ಎಂದು ಮೂರು ವಿಧ. ಜಪದಿಂದ ಅನೇಕ ಸೂಕ್ಷ್ಮ ನಾಡಿಗಳಿಗೆ ಚಾಲನೆ ದೊರೆತು, ಅದರಿಂದ ಅನೇಕ ಸುಪ್ತಶಕ್ತಿಗಳು ಜಾಗೃತವಾಗಿ ಸತ್ಫಲವುಂಟಾಗುವುದು. ಜಪಸಂಖ್ಯೆಯನ್ನು ಎಣಿಸಲು ಜಪಮಾಲೆಯನ್ನು (ಅಕ್ಷಮಾಲೆಯನ್ನು) ಉಪಯೋಗಿಸುವುದುಂಟು. ಬಲಗೈ ಬೆರಲುಗಳಿಂದ ಎಣಿಸುವ ಪ್ರಶಸ್ತ ವಿಧಾನವಿದೆ. 'ಕರಮಾಲೆ' ಎಂದು ಈ ಎಣಿಕೆಯ ಸಾಧನಕ್ಕೆ ಹೆಸರು. ಕರಮಾಲೆ ಎಣಿಸುವ ವಿಧಾನವಿದು—

ಆರಭ್ಯಾನಾಮಿಕಾ ಮಧ್ಯೇ ಪರ್ವಾಣ್ಯುಕ್ತಾನ್ಯನುಕ್ರಮಾತ್
ತರ್ಜನೀಮೂಲ ಪರ್ಯಂತಂ ಜಪೇದ್ದಶಸು ಪರ್ವಸು[24]

ಬಲಗೈಯ ಹೆಬ್ಬೆರಳ ತುದಿಯಿಂದ ಬಲಗೈಯ ಹತ್ತು ಬೆರಳು ಗಂಟುಗಳನ್ನು ಒಂದೊಂದು ಮಂತ್ರಕ್ಕೊಮ್ಮೆ ಮುಟ್ಟುತ್ತ ಎಣಿಸಬೇಕು. ಪವಿತ್ರ (ಅನಾಮಿಕ) ಬೆರಲಿನ ನಡುಗಂಟಿನಿಂದ ಆರಂಭಿಸಿ, ಅದರ ಕೆಳಗಂಟನ್ನು ಮುಟ್ಟಿ, ಮುಂದೆ ಕಿರು ಬೆರಲಿನ ಕೆಳಗಂಟಿಂದ ಪ್ರದಕ್ಷಿಣಾಕಾರದಲ್ಲಿ ಮುಂದುವರಿದು ತೋರ್ಬೆರಲ ಗಂಟುಗಳಲ್ಲಿ ಕೆಳಗಿಳಿದಾಗ ಹತ್ತರ ಸಂಖ್ಯೆಯಾಗುವುದು. ಈ ಅನುಕ್ರಮದಲ್ಲಿ ನಡುಬೆಟ್ಟಿನ ನಡುವಣ ಮತ್ತು ಅದರ ಕೆಳಗಿನ ಗಿಣ್ಣಿನ ಭಾಗವನ್ನು ಮೇರುವೆಂದು ಕರೆಯಲಾಗಿದೆ. ಆ ಭಾಗವನ್ನು ಸ್ಪರ್ಶಿಸಬಾರದು. ಆದುದರಿಂದ ಈ ಎಣಿಕೆಯಲ್ಲಿ ಮೇರುಪ್ರದಕ್ಷಿಣೆಯ ತತ್ತ್ವವೂ ಉಂಟು. ಬೆರಲುಗಳನ್ನು ಒಂದೊಂದಾಗಿ ಮಡಚುತ್ತ ಜಪದೆಣಿಕೆ ಮಾಡಿದರೆ ಅದು 'ರಾಕ್ಷಸಜಪ'ವಾಗುವುದೆಂದು ಹೇಳಲಾಗಿದೆ. ಗಾಯತ್ರೀ ಜಪದ ಎಣಿಕೆಗೆ ಈ ಕರಮಾಲೆಯೇ ಶ್ಲಾಘ್ಯವೆಂದು ಹೇಳಲಾಗಿದೆ.

## 13. ಅಭಿವಾದನ—ನಮಸ್ಕಾರ

"ಕರ್ತೃನಾಮೋಚ್ಚಾರಣ ಪೂರ್ವಕ ನಮಸ್ಕಾರಃ ಅಭಿವಾದನಂ" ಎನ್ನಲಾಗಿದೆ. ತಾನು ಅನುಸರಿಸಿಕೊಂಡು ಬಂದಿರುವ ವೇದಶಾಖೆ, ಸೂತ್ರ, ಗೋತ್ರ, ಪ್ರವರ ಮತ್ತು ತನ್ನ ಹೆಸರು—ಇವನ್ನು ಕ್ರಮವಾಗಿ ಹೇಳಿ ಕೊನೆಗೆ 'ಭೋ' ಎಂಬ ಶಬ್ದದೊಂದಿಗೆ

ಅಭಿವಂದಿಸುವುದು 'ಅಭಿವಾದನ'ವೆನಿಸುತ್ತದೆ. ಹೀಗೆ ಇದೊಂದು ಆರ್ಯಪದ್ಧತಿಯಲ್ಲಿ ಪರಿಚಯಾತ್ಮಕವಾದ ನಮಸ್ಕಾರ ವಿಧಾನ. ಅಭಿವಾದನಶೀಲನಾಗಿ ನಿತ್ಯವೂ ಹಿರಿಯರನ್ನು ಗೌರವಿಸುವವನಿಗೆ ಆಯುಷ್ಯ, ವಿದ್ಯೆ, ಯಶಸ್ಸು, ಬಲ—ಎಂಬೀ ನಾಲ್ಕೂ ಅಭಿವೃದ್ಧಿಯಾಗುವುದೆಂದು ಮನುವಿನ ಹೇಳಿಕೆಯಿದೆ (ಅ. 2–121). ಅಭಿವಾದನದಲ್ಲಿ ಎರಡು ಕೈಗಳನ್ನು ಕತ್ತರಿಯಂತೆ ನೀಡಿ, ಹಿರಿಯರ ಬಲಪಾದವನ್ನು ಬಲಗೈಯಿಂದಲೂ ಎಡಗಾಲ ಪಾದವನ್ನು ಎಡಗೈಯಿಂದಲೂ ಮುಟ್ಟಿ ತನ್ನ ಕಿವಿಗಳಿಗೆ (ಬಲಗೈಯಿಂದ ಬಲಕಿವಿಗೆ, ಎಡಗೈಯಿಂದ ಎಡಕಿವಿಗೆ) ಮುಟ್ಟಿಕೊಳ್ಳುವುದು ಕ್ರಮ. ಕಿವಿಗಳು ಶ್ರವಣ ಸಾಧನಗಳಾಗಿದ್ದು ಹಿರಿಯರ (ಗುರುಗಳ) ಉಪದೇಶಗಳು ಗ್ರಾಹ್ಯವೆಂಬ ಸೂಚನೆಯ ಸಂಕೇತವಿದು.

ಅಭಿವಾದನ ಮಾಡಿದವನಿಗೆ ಆಶೀರ್ವಾದ ಮಾಡಲೇಬೇಕೆಂಬ ನಿಯಮವಿದೆ. (ಅದಕ್ಕೆ ಪ್ರತ್ಯಭಿವಾದನವೆಂದು ಹೆಸರು). ಪ್ರತ್ಯಭಿವಾದನವಾಗಿ 'ಆಯುಷ್ಮಾನ್ ಭವ ಸೌಮ್ಯ' ಎನ್ನಬೇಕೆಂದೂ ಇಂತಹ ಸಂದರ್ಭದಲ್ಲಿ ವ್ಯಕ್ತಿನಾಮದ ಅಂತ್ಯಾಕ್ಷರ ಪ್ಲುತಸ್ವರವನ್ನು ಹೇಳಬೇಕೆಂದೂ ಸ್ಮೃತಿ ನಿರ್ದೇಶವಿದೆ. ಹೆಸರನ್ನು ಹೇಳಿ ಗೋತ್ರಾಭಿವಾದನ ಮಾಡಿದಾಗ 'ಆಯುಷ್ಮಾನ್ ಭವ' ಎಂದು ಹೇಳದೆ ಇದ್ದಲ್ಲಿ 'ಸ್ವಸ್ತಿ' ಎಂದೂ ಆಶೀರ್ವದಿಸಬಹುದು. 'ಸ್ವಸ್ತಿ' ಎಂಬುದರಲ್ಲಿ ಅಡಕವಾದ ಅರ್ಥವನ್ನು ಹೀಗೆ ವಿವರಿಸಲಾಗಿದೆ—

ಯತ್ಸುಖಂ ತ್ರಿಷು ಲೋಕೇಷು ವ್ಯಾಧಿವ್ಯಸನ ವರ್ಜಿತಂ
ಯಸ್ಮಿನ್ ಸರ್ವೇ ಸ್ಥಿತಾಃ ಕಾಮಾಃ ಸಾ ಸ್ವಸ್ತೀತ್ಯಭಿಸಂಜ್ಞಿತಾ

ಅಂದರೆ—ಮೂರು ಲೋಕಗಳಲ್ಲಿಯೂ ವ್ಯಾಧಿ ದುರ್ವ್ಯಸನಗಳಿಲ್ಲದ ಯಾವುದೊಂದು ಸುಖವಿದೆಯೋ ಅಂತಹ ಯಾವ ಸುಖದಲ್ಲಿ ಎಲ್ಲ ಸತ್ಕಾಮನೆಗಳು ಇವೆಯೋ ಅದು ಸ್ವಸ್ತಿ ಎನಿಸುತ್ತದೆ. ಅಭಿವಾದನಕ್ಕೆ ಶಿಷ್ಟಾಚಾರದ ಮಹತ್ವವಲ್ಲದೆ, ವೈಜ್ಞಾನಿಕ ಮೌಲ್ಯವೂ ಇದೆ. ಗುರುಹಿರಿಯರಲ್ಲಿ ಶ್ರದ್ಧಾ ಭಕ್ತಿಯುಳ್ಳವನಿಗೆ, ಅಂಥವರು ಎದುರಿನಲ್ಲಿ ಕಾಣಿಸಿದಾಗ ಉಸಿರಾಟದ ವೇಗ ಹೆಚ್ಚಾಗುವುದು ಸಹಜ. ಅವರಿಗೆ ಇದಿರಾಗಿ ಏಳುವುದರಿಂದ ಮತ್ತು ಅಭಿವಾದನ ಮಾಡುವುದರಿಂದ ಅದನ್ನು ನಿಯಂತ್ರಿಸಲು ಸಹಾಯಕವಾಗುವುದೆಂದು ಮನುವಿನ ಹೇಳಿಕೆ—

ಊರ್ಧ್ವಂ ಪ್ರಾಣಾಹ್ಯುತ್ಕ್ರಾಮಂತಿ ಯೂನಃ ಸ್ಥವಿರ ಆಗತೇ
ಪ್ರತ್ಯುತ್ಥಾನಾಭಿವಾದಾಭ್ಯಾಂ ಪುನಸ್ತಾನ್ ಪ್ರತಿಪದ್ಯತೇ (ಅ. 2–120)

ಏಕಹಸ್ತದಿಂದ ಅಭಿವಾದನ ಮಾಡಬಾರದೆಂದು ವಿಷ್ಣುಸ್ಮೃತಿಯಲ್ಲಿ ಹೇಳಿದೆ. ನಿರ್ದಿಷ್ಟವಾದೆಡೆಗಳಲ್ಲಿ ಅಭಿವಾದನ, ಇನ್ನುಳಿದೆಡೆಗಳಲ್ಲಿ ನಮಸ್ಕಾರ ಕಾರ್ಯ. ಸಭೆಗಳಲ್ಲಿ,

ಯಜ್ಞದಲ್ಲಿ, ಅರಮನೆಗಳಲ್ಲಿ, ಅಭಿವಾದನ ಮಾಡಬಾರದು, ನಮಸ್ಕಾರ ಮಾಡ ಬಹುದು. ದ್ವಿಜನು ಅಭಿವಾದ್ಯನೇ ಆದರೂ ಅತನು ಕೈಯಲ್ಲಿ ಸಮಿಧೆ, ಪುಷ್ಪ, ದರ್ಭೆ, ಅಗ್ನಿ, ಜಲ, ಮೃತ್ತಿಕೆ, ಅಕ್ಷತೆ, ಹಿಡಿದುಕೊಂಡಿದ್ದರೆ, ಜಪವನ್ನೋ ಹೋಮವನ್ನೋ ಮಾಡುತ್ತಿದ್ದರೆ ಅಭಿವಾದ್ಯನಲ್ಲವೆಂದು ಹೇಳಿದೆ. ಇದಲ್ಲದೆ, ವೇದನಿಂದಕ, ವ್ರತಭ್ರಷ್ಟ, ಮಹಾಪಾತಕಿ, ಶಠ, ನಾಸ್ತಿಕ, ಕೃತಘ್ನ—ಇಂಥವರನ್ನು ನಮಸ್ಕರಿಸಬಾರದೆಂದು ಹೇಳಿದೆ. ಇದೂ ಅಲ್ಲದೆ

ದೂರಸ್ಥಂ ಜಲಮಧ್ಯಸ್ಥಂ ಧಾವಂತಂ ಧನಗರ್ವಿತಂ
ಕ್ರೋಧವಂತಂ ಮದೋನ್ಮತ್ತಂ ನಮಸ್ಕಾರೇಣ ವರ್ಜಯೇತ್

ಅಂದರೆ—ದೂರದಲ್ಲಿರುವವನನ್ನು, ನೀರ ನಡುವೆ ಇರುವವನನ್ನು, ಓಡುತ್ತಿರುವವನನ್ನು, ಹಣದ ಸೊಕ್ಕಿನಿಂದ ಕೂಡಿದವನನ್ನು, ಸಿಟ್ಟುಗೊಂಡವನನ್ನು, ಮದವೇರಿ ಹುಚ್ಚಾದವ ನನ್ನು ನಮಸ್ಕರಿಸಬಾರದು.

ನಮಸ್ಕಾರಗಳಲ್ಲಿ ಕೆಲವು ವಿಧಗಳಿವೆ. ಎರಡು ಕೈಗಳನ್ನು ಮುಗಿಯುವುದು —ಬದ್ಧಾಂಜಲಿಯಾಗಿ ಮಾಡುವುದು 'ಬ್ರಹ್ಮಾಂಜಲಿ' ಎನಿಸುವುದೆಂದು ಮನುವಿನ ಹೇಳಿಕೆ. ತುಂಬಿದ ಭಕ್ತಿಯ ಪ್ರತೀಕವಾಗಿ ಸಾಷ್ಟಾಂಗ ನಮಸ್ಕಾರವಿದೆ—

ಉರಸಾ ಶಿರಸಾ ಚೈವ ಮನಸಾ ವಚಸಾ ದೃಶಾ
ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಉಚ್ಯತೇ

ಅಂದರೆ—ಎದೆ, ತಲೆ, ಮನಸ್ಸು, ಮಾತು, ದೃಷ್ಟಿ, ಪಾದಗಳು, ಕೈಗಳು, ಮಂಡಿಗಳು —ಈ ಎಂಟರಿಂದ ಮಾಡುವಂತಹದು ಸಾಷ್ಟಾಂಗ ನಮಸ್ಕಾರ. ಇದನ್ನೇ 'ದಂಡ ನಮಸ್ಕಾರ', 'ಉದ್ದಂಡ ನಮಸ್ಕಾರ' ಎಂತಲೂ ಹೇಳುವರು. ಸ್ತ್ರೀಯರಿಗೆ ಪಂಚಾಂಗ ಪ್ರಣಾಮವನ್ನು ಮಾನ್ಯ ಮಾಡಲಾಗಿದೆ—

ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಮೂರ್ಧ್ನಾ ಚ ಮನಸಾ ಸಹ
ಪಂಚಾಂಗ್ಯಃ ಕಥಿತಃ ಸ್ತ್ರೀಣಾಂ ಪ್ರಣಾಮಃ ಪಾಪಹಿಂಸಕಃ

ಅಂದರೆ—ಪಾದಗಳು, ಕೈಗಳು, ಮಂಡಿಗಳು, ತಲೆ, ಮನಸ್ಸು—ಈ ಐದು ಅಂಗಗಳಿಂದ ಕೂಡಿದುದು ಪಂಚಾಂಗ ಪ್ರಣಾಮವೆನಿಸುವುದು. ಅನುಶಾಸನ ಬದ್ಧರಾದ ಯೋಧರು, ಸ್ವಯಂಸೇವಕರು—ತಮ್ಮ ಕವಾಯತುಗಳಲ್ಲಿ ಪ್ರಚಲಿತ ಪದ್ಧತಿಯಂತೆ ಏಕಹಸ್ತ ನಮಸ್ಕಾರವನ್ನು ಮಾಡಬಹುದು.

